# ಗೌರೀಶ ಕಾಯ್ಕಿಣಿ

# ಸಮಗ್ರ ಸಾಹಿತ್ಯ

**ಸಂಪುಟ - ೮**

(ಪತ್ರಿಕಾ ಲೇಖನಗಳು)

# ಸಮಗ್ರ ಸಾಹಿತ್ಯ

## ೮

ಗೌರೀಶ ಕಾಯ್ಕಿಣಿ

ಸಂಪಾದಕ

ವಿಷ್ಣು ನಾಯ್ಕ




೧೯೯೯

**'SAMAGRA SAHITYA'** - by Gourish Kaikini Gokarna. Edited by Vishnu Naik Ankola and published by Shri Raghavendra Prakashana, Ambarkodla, Ankola-581314 (Karnataka)

First Impression: July, 1999 Copies : 1000

Pages : 386+4+4 = 394. Price : Rs.180.00

**ಬೆಲೆ : ೧೮೦ ರೂಪಾಯಿಗಳು**



ಸಂಪಾದಕ ಸಲಹಾ ಸಮಿತಿ

ಯಶವಂತ ಚಿತ್ತಾಲ (ಅಧ್ಯಕ್ಷರು), ಅರವಿಂದ ನಾಡಕರ್ಣಿ, ಅಮ್ಮೆಂಬಳ ಆನಂದ, ವಿ.ಜೆ. ನಾಯಕ, ವಿ.ಎ. ಜೋಶಿ, ಜಯಂತ ಕಾಯ್ಕಿಣಿ, ರಮಜಾನ ದರ್ಗಾ, ಎಸ್. ಆರ್. ನಾರಾಯಣರಾವ್, ವಿ.ಎನ್. ಹೆಗಡೆ, ಶಾಂತಾರಾಮ ನಾಯಕ ಹಿಚಕಡ, ಆರ್. ವಿ. ಭಂಡಾರಿ, ಜಿ.ಎಸ್. ಅವಧಾನಿ, ಮೊಹನ ಹೆಗಡೆ, ಶ್ಯಾಮ ಹುದ್ದಾರ, ಮೋಹನ ಹಬ್ಬು, ಎಂ. ಜಿ. ಹೆಗಡೆ, ಚೇತನಕುಮಾರ ನಾಯ್ಕ, ಗಂಗಾಧರ ಹಿರೇಗುತ್ತಿ (ಸದಸ್ಯರು), ರಾಮಾ ನಾಯ್ಕ (ಕಾರ್ಯದರ್ಶಿ)

ಛಾಯಾಮುದ್ರಣ (ಡಿ.ಟಿ.ಪಿ.) : ಟೈಪ್‌ಶಾಪ್, ಮಿಶನ್ ರೋಡ, ಬೆಂಗಳೂರು-೨೭.

ಮುದ್ರಣ : **ಬೃಂದಾವನ ಪ್ರಿಂಟರ್ಸ್ ಎಂಡ್ ಪಬ್ಲಿಷರ್ಸ್ ಪ್ರೈ. ಲಿ.**
ಲಾಲಬಾಗ ಫೋರ್ಟ್‌ರೋಡ್, ಬೆಂಗಳೂರು-೪

# ಸಂಪಾದಕರ ನುಡಿ

ನಮ್ಮ ನಡುವಿನ ಹಿರಿಯ ವಿಚಾರವಾದಿ ಸಾಹಿತ್ಯ ವಿದ್ವಾಂಸರಲ್ಲಿ ಒಬ್ಬರಾದ ಗೌರೀಶ ಕಾಯ್ಕಿಣಿಯವರ 'ಸಮಗ್ರ ಸಾಹಿತ್ಯ' ದ ಎಂಟನೆಯ ಸಂಪುಟವನ್ನು ಸಹೃದಯ ಓದುಗರ ಕೈಗೆ ಒಪ್ಪಿಸುತ್ತಿದ್ದೇವೆ. ಹರಿದು ಹಂಚಿಹೋಗಿರುವ ಗೌರೀಶರ ಸಾಹಿತ್ಯವನ್ನು ಹತ್ತು ಸಂಪುಟಗಳಲ್ಲಿ ಪ್ರಕಟಿಸಬೇಕೆಂಬ ಸಂಕಲ್ಪದೊಂದಿಗೆ ಕಾರ್ಯಾರಂಭ ಮಾಡಿದೆವು. ಐದು ವರ್ಷದೊಳಗೆ ಈ ಯೋಜನೆ ಮುಗಿಯಬೇಕೆಂಬುದು ನಮ್ಮ ಸಂಕಲ್ಪವಾಗಿತ್ತು. ಆದರೆ ಐದು ವರ್ಷಗಳಲ್ಲಿ ಎಂಟು ಸಂಪುಟಗಳನ್ನು ಮಾತ್ರ ಹೊರತರಲು ಸಾಧ್ಯವಾಗಿದೆ. ಹಿಂದಿನ ಸಂಪುಟಗಳಿಗೆ ನಾವು ತೊಡಗಿಸಿದ ಹಣವು ನಿರೀಕ್ಷಿಸಿದ ಅವಧಿಯೊಳಗಾಗಿ ಮರಳಿ ಬರದೇ ಇದ್ದುದೇ ಈ ವಿಳಂಬಕ್ಕೆ ಕಾರಣವಾಗಿದೆ.

ಈ ಸಂಪುಟದ ಕುರಿತು ಮಾತನಾಡುವ ಮೊದಲು ಹಿಂದಿನ ಏಳು ಸಂಪುಟಗಳ ಸಂಕ್ಷಿಪ್ತ ಪರಿಚಯ ಮಾಡಿಕೊಡುವುದು ಉಚಿತವೆಂದು ಭಾವಿಸಿದ್ದೇನೆ.

ಸಂಪುಟ ೧ ರಲ್ಲಿ ಡಾ. ಕಾಯ್ಕಿಣಿಯವರು ಬರೆದ 'ವಿಚಾರವಾದ', 'ವಿಚಾರವಾದ ಮತ್ತು ನಿರಾಶಾವಾದ', 'ವಿಚಾರವಾದ-ಉತ್ತರಾರ್ಧ', 'ಮಾರ್ಕ್ಸವಾದ', 'ನವ ಮಾನವತಾವಾದ' ಹಾಗೂ 'ನಾಸ್ತಿಕನು ಮತ್ತು ದೇವರು' ಕೃತಿಗಳು ಸೇರಿಕೊಂಡಿವೆ.

೨ನೆಯ ಸಂಪುಟವೂ ವಿಚಾರ ಸಾಹಿತ್ಯಕ್ಕೇ ಮೀಸಲಾಗಿದೆ. ಅದರಲ್ಲಿ 'ಗಂಡು-ಹೆಣ್ಣು', 'ಪ್ರೀತಿ', 'ಜೀವನ ವಿಜ್ಞಾನ' (ಬಾಳಿನ ಗುಟ್ಟು), 'ಮನೋವಿಜ್ಞಾನದ ರೂಪರೇಷೆಗಳು' ಹಾಗೂ 'ಗ್ರೀಕ್ ದಾರ್ಶನಿಕರು' ಕೃತಿಗಳು ಸೇರ್ಪಡೆಯಾಗಿವೆ.

೩ನೇ ಸಂಪುಟವು ಪಶ್ಚಿಮ ಜಗತ್ತಿನ ಅಸಾಧಾರಣ ಪ್ರತಿಭೆಗಳ ಬದುಕು ಮತ್ತು ಸಾಧನೆಗಳನ್ನು ಪರಿಚಯಿಸುತ್ತದೆ. ತತ್ವಜ್ಞಾನಿಗಳಾದ ಸೊಕ್ರೆಟಿಸ್, ಅರಿಸ್ಟೊಟಲ್ ಮತ್ತು ನಿಕೊಲೊ ಮ್ಯಾಕಿಯಾವೆಲ್ಲಿ; ಕಲಾಕೋವಿದರಾದ ಡೆಮೊಸ್ಥೆನೀಜ, ಲಿಯೋನಾರ್ಡೋ ಡಾವಿನ್ಸಿ ಹಾಗೂ ಮೈಕೆಲ್; ಗಾನಪ್ರತಿಭೆಗಳಾದ ಲುಡ್ವಿಗವ್ಹಾನ್, ಬಿದೊವಿನ್, ವೋಲ್‌ಗ್ಯಾಂಗ್, ಅಮೇಡಿಯಸ್, ಮೊಝರ್ಟ ಹಾಗೂ ವಿಲ್‌ಹೆಲ್ಮ ರಿಚರ್ಡವಾಗ್ನರ್; ಕ್ರಾಂತಿಪುರುಷರಾದ ರೂಸ್ಸೋ, ವಾಲ್ಟಾಯರ್ ಮತ್ತು ಚಾರ್ಲಸ್ ಡಾರ್ವಿನ್; ಸಾಹಿತ್ಯ ಪ್ರಪಂಚದ ಮಿನುಗುತಾರೆಗಳಾದ ಡಾ. ಜಾನ್ಸನ್, ಷೆಲ್ಲಿ, ಬಾಯರನ್, ಕೀಟ್ಸ್, ಎಝ್ರಾಪೌಂಡ್, ಯೇಟ್ಸ್, ಟಿ.ಎಸ್. ಇಲಿಯಟ್ ಹಾಗೂ ಒಡೆನ್; ಮಹಾನ್ ವಿಜ್ಞಾನಿಗಳಾದ ಸರ್ ಐಸಾಕ್ ನ್ಯೂಟನ್, ಲೂಯಿಪಾಶ್ಚರ, ಥೊಮಸ್ ಎಡಿಸನ್; ಮಹಾನ್ ಸಾಹಸಿಗಳಾದ ಕ್ಯಾಪ್ಟನ್ ಕುಕ್, ಕ್ಯಾಪ್ಟನ್ ಸ್ಕಾಟ್ ಹಾಗೂ ಅವ್ಹಿಂಗಸ್ಟನ್; ಅಂತೆಯೇ, ರಾಜಕೀಯ ಧ್ರುವತಾರೆಗಳಾದ ಅಬ್ರಾಹಾಮ್ ಲಿಂಕನ್, ಗ್ಯಾರಿಬಾಲ್ಡ್ ಮತ್ತು ಬಿಸ್ಮಾರ್ಕರ ಸಾಧನೆಯ ಮನೋಜ್ಞ ಚಿತ್ರಗಳು ಈ ಸಂಪುಟದಲ್ಲಿವೆ.

೪ನೆಯ ಸಂಪುಟವು ಕನ್ನಡದ ಕೆಲವು ಆಧುನಿಕ ಕವಿಪುಂಗವರು ಬರೆದ ಕೃತಿಗಳ ಸಮೀಕ್ಷಾ ಪ್ರಬಂಧಗಳಿಂದ ಕೂಡಿದ್ದಾಗಿದೆ. ವರಕವಿ ಬೇಂದ್ರೆ, ದಿನಕರ ದೇಸಾಯಿ, ವಿ.ಜಿ. ಭಟ್ಟ, ಚೆನ್ನವೀರ ಕಣವಿ ಹಾಗೂ ಗಂಗಾಧರ ಚಿತ್ತಾಲರು ಇಲ್ಲಿ ಅಧ್ಯಯನಕ್ಕೆ ಸಿಗುತ್ತಾರೆ.

೫ನೆಯ ಸಂಪುಟದಲ್ಲಿ ಮೂರು ಮುಖ್ಯ ಅಧ್ಯಾಯಗಳನ್ನು ಮಾಡಲಾಗಿದೆ. 'ಕಾವ್ಯವೆಂದರೇನು?' ಎಂಬ ಪ್ರಶ್ನೆಯೊಂದಿಗೆ ಪ್ರಾರಂಭವಾಗುವ ಮೊದಲನೆಯ ಅಧ್ಯಾಯವು, 'ಹೊಸ ಕಾವ್ಯದ ಹಾದಿ'ಯ ಕುರಿತು ಮಾತನಾಡುತ್ತ, 'ರಸನಿಷ್ಪತ್ತಿ' ಯ ಬಗೆಗೆ ಚರ್ಚಿಸಿ, ವಿಮರ್ಶೆಯ ಕುರಿತೇ ವಿಮರ್ಶಿಸುತ್ತ 'ಅನುಭವ ಮತ್ತು ಅಭಿವ್ಯಕ್ತಿ', 'ಪರಕೀಯ ಪ್ರಜ್ಞೆ', 'ಅಥೆಂಟಿಕ್ ಮತ್ತು ಜೆನ್ವಿನ್' ಬಗೆಗೆಲ್ಲ ಚರ್ಚಿಸುತ್ತ ಬೆಳೆದು, 'ಸಾಹಿತ್ಯದಲ್ಲಿ ಶೂದ್ರ ಬ್ರಾಹ್ಮಣ ಸಂದರ್ಭ', 'ಎಡ-ಬಲ', 'ದಲಿತ ಪ್ರಜ್ಞೆ' ಗಳ ವಿಶ್ಲೇಷಣೆಯೊಂದಿಗೆ ಮುಗಿಯುತ್ತದೆ. ಮಾಸ್ತಿಯವರ 'ಸುಬ್ಬಣ್ಣ' ನ ಬಗೆಗೆ ಪುನರ್ ವಿಚಾರ ಹಾಗೂ 'ಭೈರಪ್ಪನವರ ಕಾದಂಬರಿಗಳಲ್ಲಿ ಧರ್ಮ'-ಇವು ಈ ಸಂಪುಟದ ಎರಡನೆಯ ಅಧ್ಯಾಯದಲ್ಲಿ ವಿವರವಾದ ಚರ್ಚೆಗೆ ಒಳಪಟ್ಟಿವೆ. ಕಾರಂತರ 'ಗೀತ ನಾಟಕಗಳು' ಅ.ನ.ಕೃ. ಅವರ 'ರಸಾರ್ದ್ರ ವಿಮರ್ಶಕ', 'ರಸಿಕರಂಗರ ಭಾವಗೀತೆಗಳು', 'ಕಡೆಂಗೋಡ್ಲು ಮತ್ತು ಒಲಿವರ್ ಗೋಲ್ಡಸ್ಮಿತ್‌ರ ಬರವಣಿಗೆಯ ತುಲನಾತ್ಮಕ ಸಮೀಕ್ಷೆಗೆ ಮೀಸಲಾದ ಲೇಖನಗಳೂ ಈ ಅಧ್ಯಾಯದಲ್ಲಿವೆ. ಮೂರನೆಯ ಅಧ್ಯಾಯದಲ್ಲಿ ಡಾ: ಕಾಯ್ಕಿಣಿಯವರು ಬರೆದ 'ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ ಹಾಗೂ ಡಾ: ಶಂ.ಬಾ. ಜೋಶಿಯವರ 'ಸಾಮಾಜಿಕ ತತ್ವ ವಿಚಾರಗಳು' ಸೇರಿಕೊಂಡಿವೆ.

ಆರನೆಯ ಸಂಪುಟದಲ್ಲಿ ಆರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯವು ಡಾ: ಶಂ.ಬಾ. ಜೋಶಿಯವರ 'ಹಾಲುಮತ ದರ್ಶನ' ಹಾಗೂ 'ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ' ಗಳ ಕುರಿತಾದುದು. ಎರಡನೆಯ ಅಧ್ಯಾಯದಲ್ಲಿ ಕವಿ ಡಾ: ಎಂ. ಅಕಬರ ಅಲಿಯವರ 'ಗಂಧಕೇಶರ' ಮತ್ತು 'ಕಸಿ ಗುಲಾಬಿಯ ಕಥನ' ಕವನ ಸಂಕಲನಗಳ ಹಾಗೂ ಸರ್ವಜ್ಞಕವಿಯ ಕುರಿತ ಅಲಿಯವರ ಮಹಾಪ್ರಬಂಧದ ಬಗೆಗಿನ ಸಮೀಕ್ಷಾ ಲೇಖನಗಳಿವೆ. ಮೂರನೆಯ ಅಧ್ಯಾಯವು ಕವಿ ಬಿ.ಎ. ಸನದಿಯವರ 'ಕಾವ್ಯಾವಲೋಕನ' ಕ್ಕೆ ಸಂಬಂಧಿಸಿದ್ದು. 'ಉತ್ತರಣ' ಎಂಬ ನಾಲ್ಕನೆಯ ಅಧ್ಯಾಯವು ಗೌರೀಶರು ವಿಷ್ಣು ನಾಯ್ಕರ ಕಾವ್ಯದ (ಆರು ಸಂಕಲನಗಳ) ಕುರಿತು ಬರೆದ ರಸವಿಮರ್ಶೆಯನ್ನೊಳಗೊಂಡಿದೆ. ಐದನೆಯ ಅಧ್ಯಾಯದಲ್ಲಿ ಕೆಲವು ಮಹತ್ವದ ಗ್ರಂಥಗಳ ಬಗ್ಗೆ ಗೌರೀಶರು ಬರೆದ ವಿಮರ್ಶೆ ಹಾಗೂ ಬೇರೆ ಕೆಲವು ವೈಚಾರಿಕ ಬಿಡಿಬರಹಗಳು ಸಿಗುತ್ತವೆ. ಕೊನೆಯ ಅಧ್ಯಾಯವು 'ಶೈಲಿ' ಯ ಕುರಿತು ಡಾ: ಕಾಯ್ಕಿಣಿಯವರು ಕೆಲವರ್ಷಗಳಾಚೆ ಬರೆದ ಅಪ್ರಕಟಿತ ದೀರ್ಘ ಲೇಖನವೊಂದನ್ನು ಒಳಗೊಂಡಿದೆ.

೭ನೆಯ ಸಂಪುಟದಲ್ಲಿ ಡಾ: ಕಾಯ್ಕಿಣಿಯವರ ಒಟ್ಟಿಗೆ ೨೩ ರೂಪಕಗಳು ಮತ್ತು

ನಾಟಕಗಳು ಸೇರಿವೆ. ಇವು ಕಳೆದ ಆರು ದಶಕಗಳ ಕಾಲಾವಧಿಯಲ್ಲಿ ಬರೆದವುಗಳು. ಇವುಗಳಲ್ಲಿ ಹೆಚ್ಚಿನವು ಬಾನುಲಿ ಪ್ರಸಾರಕ್ಕಾಗಿಯೇ ಬರೆದವುಗಳಾಗಿವೆ. ಆಯಾ ಆಕಾಶವಾಣಿ ಕೇಂದ್ರಗಳು ಬೇರೆ ಬೇರೆ ಸಂದರ್ಭಗಳ ಅಗತ್ಯಗಳಿಗನುಸಾರವಾಗಿ ಕೇಳಿ ಪಡೆದವುಗಳು. ಈ ಮೊದಲು ಪುಸ್ತಕ ರೂಪದಲ್ಲಿ ಪ್ರಕಟವಾದ 'ಒಲುಮೆಯ ಒಗಟು', 'ಕ್ರೌಂಚಧ್ವನಿ', 'ಕರ್ಣಾಮೃತ' ಹಾಗೂ 'ಆಕಾಶ ನಾಟಕಗಳು' ಎಂಬ ನಾಲ್ಕು ಸಂಕಲನಗಳಲ್ಲಿಯ ಎಲ್ಲ ಕೃತಿಗಳು ಈ ಸಂಪುಟದಲ್ಲಿವೆ. ಅವುಗಳ ಹೊರತಾಗಿ ಅಪ್ರಕಟಿತ ರೂಪಕಗಳಾದ 'ನರಕ ಚತುರ್ದಶಿ', 'ಮಕರ ಸಂಕ್ರಮಣ', 'ದೀಪಾವಳಿ', 'ಮೀರಾ ಕೆ ಪ್ರಭು', 'ಅಂಬೆ'; ಅಪ್ರಕಟಿತ ನಾಟಕಗಳಾದ 'ಅತ್ತೆಗೆ ಲತ್ತೆ' ಹಾಗೂ 'ಚಿದಂಬರ ಸ್ವಾರಸ್ಯ' ಗಳನ್ನೂ ಸೇರಿಸಿದ್ದೇನೆ.

ಪ್ರಸ್ತುತ ಈ ೮ನೆಯ ಸಂಪುಟದಲ್ಲಿ ಗೌರೀಶರ ೭೫ ಪತ್ರಿಕಾ ಲೇಖನಗಳಿವೆ. ಕಾಯ್ಕಿಣಿಯವರು ಸತತ ೬೦ ವರ್ಷಗಳ ಕಾಲ ನಾಡಿನ ಬೇರೆಬೇರೆ ಪತ್ರಿಕೆಗಳಲ್ಲಿ ವೈವಿಧ್ಯಪೂರ್ಣ ಲೇಖನಗಳನ್ನು ಪ್ರಕಟಿಸಿದ್ದಾರೆ. ದಿನಕರ ದೇಸಾಯಿಯವರ ಸುಪ್ರಸಿದ್ಧ 'ಜನಸೇವಕ' ಸಾಪ್ತಾಹಿಕವೊಂದರಲ್ಲೇ ಅವರ ಒಂದುಸಾವಿರಕ್ಕಿಂತ ಹೆಚ್ಚು ಲೇಖನಗಳು ಪ್ರಕಟವಾಗಿವೆ. ಒಂದು ಅಂದಾಜಿನಂತೆ ಅವರ ಪತ್ರಿಕಾ ಲೇಖನಗಳದ್ದೇ ಸುಮಾರು ೧೦ ಸಂಪುಟಗಳಾಗ ಬಹುದು. ಗೌರೀಶರು ಈ ತಮ್ಮ ೮೭ರ ಇಳಿವಯಸ್ಸಿನಲ್ಲೂ ಬರೆಯುತ್ತಲೇ ಇದ್ದಾರೆ. ಹೀಗಾಗಿ ಅವರ ಪತ್ರಿಕಾ ಲೇಖನಗಳ ಸಮಗ್ರ ಸಂಪುಟಗಳ ವಿಚಾರವನ್ನು ಬಿಟ್ಟುಕೊಟ್ಟು ಮಾದರಿಗಾಗಿ ಆಯ್ದುಕೊಂಡ ಲೇಖನಗಳನ್ನು ಎರಡು ಸಂಪುಟಗಳಲ್ಲಿ (೮ ಮತ್ತು ೯ನೆಯ ಸಂಪುಟಗಳಲ್ಲಿ) ಅಳವಡಿಸಿ ಓದುಗರಿಗೆ ಒದಗಿಸುವ ಮಟ್ಟಿಗೆ ನನಗೆ ನಾನೇ ಒಂದು ಮಿತಿಯನ್ನು ಹಾಕಿಕೊಂಡಿದ್ದೇನೆ.

ಈ ಸಂಪುಟದಲ್ಲಿ ಅಡಕವಾದ ಬರಹಗಳೇ ಅವರ ಲೇಖನಿಯ ವಸ್ತುವೈವಿಧ್ಯಗಳಿಗೆ ನಿದರ್ಶನವಾಗಿವೆ. 'ಭಾರತೀಯ ಸಂಸ್ಕೃತಿ, ನಮ್ಮ ರಾಷ್ಟ್ರಗೀತ, ಯಕ್ಷಗಾನ ಬಯಲಾಟ, ಗಾಂಧಿ ಸ್ಮರಣೆ, ರಸಸಿದ್ಧಾಂತ, ಅರ್ಥಶಾಸ್ತ್ರ, ಪ್ರಜೆ-ಪ್ರಭು, ಪಕ್ಷರಾಜಕಾರಣ, ಹಿಂದುತ್ವದ ಪರಿಕಲ್ಪನೆ, ಶಿಕ್ಷಣದ ಆಡಳಿತದಲ್ಲಿ ವಿದ್ಯಾರ್ಥಿಗಳ ಪಾತ್ರ, ರಾಜ್ಯಗಳ ಸ್ವಾಯತ್ತತೆ, ಸಮಾಜವಾದಿಗಳ ಧೋರಣೆ, ನಮ್ಮ ಹಿಂದುಳಿಯುವಿಕೆ, ಚುನಾವಣಾ ವೆಚ್ಚ, ಒಲಿಂಪಿಕ್ ಸ್ಪರ್ಧೆ, ದಲಿತವರ್ಗದ ವಿಮೋಚನೆ, ಯುವಶಕ್ತಿಯ ಸಮಸ್ಯೆ, ಸೇವಾನಿವೃತ್ತರ ಸಂಧ್ಯಾರಾಗ, ನಮ್ಮ ನಾಟ್ಯದ ಅವಿಚ್ಛಿನ್ನ ಪರಂಪರೆ, ಕುಮಾರವ್ಯಾಸ ಮತ್ತು ಭಗವದ್ಗೀತೆ, ಸಂಸ್ಕೃತದ ಸಂಕಟ, ಆತ್ಮಹತ್ಯೆ, ಮತಾಂತರ, ಮೆಕ್‌ಮೋಹನ್ ರೇಖೆ, ಕೊಂಕಣಿ ಭಾಷೆಯ ಮೇಲೆ ಕನ್ನಡದ ಪ್ರಭಾವ, ರಾಷ್ಟ್ರಪತಿಗಳ ಅಧಿಕಾರ, ಪೋಲೀಸ್ ಇಲಾಖೆ, ದ್ರೌಪದಿ ವಸ್ತ್ರಾಪಹರಣ, ರಾಮಜನ್ಮಭೂಮಿ, ಆರ್ಕೆಸ್ಟ್ರಾ ಮತ್ತು ತಂಬೂರಿ, ಯಕ್ಷಗಾನ ಮತ್ತು ರಂಗಭೂಮಿ, 'ಎಕಚ್ ಪ್ಯಾಲಾ, ನಟ ಸಾಮ್ರಾಟ ಬಾಲಗಂಧರ್ವ, ಜನತೆ ಮತ್ತು ಸೇವೆ, ಪತ್ರಿಕಾ ವ್ಯವಸಾಯವನ್ನು ಬಾಧಿಸುವ ಭೂತಗಳು, ಕಪ್ಪು ಸಮುದ್ರಕ್ಕೆ ಬೇಲಿ - ಇವೆಲ್ಲ

ಕಾಯ್ಕಿಣಿಯವರ ಮೆದುಳು ಎಲ್ಲೆಲ್ಲ ಸುತ್ತಾಡಿ ಬರುತ್ತದೆ,- ಅವರ ವಿಚಿಕಿತ್ಸಕ ಬುದ್ಧಿಗೆ ಎಂತೆಂಥ ವಿಷಯಗಳೆಲ್ಲ ಆಹಾರವಾಗಬಲ್ಲವು ಎಂಬುದನ್ನು ತಿಳಿಸುವುದಕ್ಕಾಗಿ ಕೊಟ್ಟಿ ಪಟ್ಟಿ, ಅಷ್ಟೇ. ವಿಷಯವನ್ನು ವಿವೇಚಿಸುವ ರೀತಿ, ಅದರ ಎಡ-ಬಲ ಮಗ್ಗಲನ್ನು ತೂಗಳಿಯುವ ಕ್ರಮ ಹಾಗೂ ಅವರ ಅಸಾಮಾನ್ಯ ನೆನಪಿನ ಶಕ್ತಿಗಳನ್ನೆಲ್ಲ ಸರಿಯಾಗಿ ತಿಳಿಯಬೇಕೆನ್ನುವವರಿಗೆ ಈ ಸಂಪುಟದ ಲೇಖನಗಳು ಸಾಕಷ್ಟು ಸಾಮಗ್ರಿಯನ್ನು ಒದಗಿಸಬಲ್ಲವು.

ಈ ಸಂಪುಟದ ಲೇಖನಗಳ ಸಂಪಾದನೆಯ ಕೆಲಸದಲ್ಲಿ ನನಗೆ ವಿಶೇಷ ಸಹಕಾರ ನೀಡಿದ ಕವಿಮಿತ್ರ ಜಯಂತ ಕಾಯ್ಕಿಣಿ ಹಾಗೂ ಶ್ಯಾಮ ಹುದ್ದಾರ ಅವರಿಗೆ ನಾನು ಆಭಾರಿಯಾಗಿದ್ದೇನೆ.

ಗೌರೀಶರ ಸಮಗ್ರ ಸಾಹಿತ್ಯದ ೭ನೆಯ ಸಂಪುಟವನ್ನು ಅವರ ಮನೆಯಲ್ಲಿ ಬಿಡುಗಡೆ ಮಾಡಿದ ಸಂದರ್ಭ. ಅಲ್ಲಿ ನೆರೆದವರಲ್ಲಿ ಹೆಚ್ಚಿನವರು ಗೌರೀಶರ ವಿದ್ಯಾರ್ಥಿಗಳೇ ಆಗಿದ್ದರು. ಸಮಯಸ್ಫೂರ್ತಿಯಿಂದಾಗಿ ಒಂದು ಮನವಿಯನ್ನು ಮುಂದಿಟ್ಟೆ. ಗೋಕರ್ಣದಲ್ಲಿರುವ ಗೌರೀಶರ ವಿದ್ಯಾರ್ಥಿಗಳು ಮತ್ತು ಅಭಿಮಾನಿಗಳು ರಾಘವೇಂದ್ರ ಪ್ರಕಾಶನದ, "೧,೦೦೦ರೂ.ಗೆ ೨,೦೦೦ರೂ. ಮುಖಬೆಲೆಯ ಪುಸ್ತಕ ಪಡೆಯುವ ಯೋಜನೆ"ಯ ಸದಸ್ಯರಾಗುವ ಮೂಲಕ ಒಂದು ಸಂಪುಟಕ್ಕೆ ಬೇಕಾಗುವಷ್ಟು ಹಣವನ್ನು ಕೂಡಿಸಿ ಕೊಡಬೇಕೆಂಬುದೇ ಆ ಮನವಿಯಾಗಿತ್ತು. ಸಭೆ ಅಂದು ಆ ನನ್ನ ಕೋರಿಕೆಗೆ ಸಂಪೂರ್ಣ ಸಹಮತ ವ್ಯಕ್ತಪಡಿಸಿತ್ತು ಕೂಡ. ಈ ನಡುವೆ ಸಂಪೂರ್ಣ ಅಲ್ಲದಿದ್ದರೂ,-೨೨ ಜನ ಈ ಉದ್ದೇಶಕ್ಕಾಗಿಯೇ ಸದಸ್ಯರಾಗಿ ನನ್ನ ಕೈ ಬಲಪಡಿಸಿದ್ದಾರೆ. ಅವರ ಉಪಕಾರವನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ಸ್ಮರಿಸುತ್ತೇನೆ.

**ವಿಷ್ಣು ನಾಯ್ಕ**
ಸಂಪಾದಕ

'ಪರಿಮಳ'
ಅಂಬಾರಕೊಡ್ಲ,
ಅಂಕೋಲಾ (ಉ.ಕ.).

# ಪರಿವಿಡಿ

# ಭಾರತೀಯ ಸಂಸ್ಕೃತಿಯು ಆಧ್ಯಾತ್ಮಿಕವೇ?

ಪಾಶ್ಚಾತ್ಯ ರಾಷ್ಟ್ರಗಳ ಅನುಕರಣ ನಮಗೆ ಬೇಡವೆಂಬ ಮಾತಿನಲ್ಲಿ ಎರಡು ಸಂಗತಿಗಳನ್ನು ಒಪ್ಪಿಕೊಂಡಂತಿದೆ. ಮೊದಲನೆಯದೆಂದರೆ, ಅವರು ಅನುಭವಿಸಿದಂತಹ ಪರಿವರ್ತನ - ಸ್ಥಿತ್ಯಂತರಗಳು ಇಲ್ಲಿಯೂ ಒದಗಿದರೆ, ಭಾರತೀಯರೂ ಅವರಂತೆಯೇ-ಪಾಶ್ಚಾತ್ಯರಂತೆಯೇ - ವಿಚಾರಿಸಬಹುದು, ಆಚರಿಸಬಹುದು ಎಂಬ ಭೀತಿ. ಈ ಒಪ್ಪಿಗೆಯಿಂದ 'ಆಧ್ಯಾತ್ಮಿಕತೆಯು ಭಾರತದ ವಿಶಿಷ್ಟ ಪ್ರತಿಭೆ' ಎಂಬ ಮಾತು ಹುರುಳಿಲ್ಲದಂತಾಗುವುದು. ಯೂರೋಪದಲ್ಲಿ ಒದಗಿದಂತಹ ಆರ್ಥಿಕ ಸಾಮಾಜಿಕ ಸ್ಥಿತ್ಯಂತರಗಳು ಇಲ್ಲಿ ಒದಗಲಿಲ್ಲವಾದುದರಿಂದಲೇ ನಿರುಪಾಯವಾಗಿ ನಮ್ಮ ಭಾರತೀಯರ ಪರಮಾರ್ಥವೂ ಆಧ್ಯಾತ್ಮವೂ ತಡೆದುಕೊಂಡು ಉಳಿದಿದೆಯೆಂಬುದು ಸ್ಪಷ್ಟವಾಗುವುದು. ಭಾರತದ ಪ್ರತಿಭೆಯು ತಾನಾಗಿಯೇ ಆಧ್ಯಾತ್ಮಿಕವಾಗಿದ್ದರೆ ಅದು ಎಂತಹ ಪರಿಸ್ಥಿತಿಯಲ್ಲಿಯೂ ತನ್ನನ್ನು ರಕ್ಷಿಸಿಕೊಳ್ಳುತ್ತಿತ್ತು. ಪರಿಸ್ಥಿತಿ ಬದಲಾದಂತೆ 'ಪಾಶ್ಚಾತ್ಯರ ಅನುಕರಣ ಮಾಡಬಾರದು, ಮಾಡಬೇಡಿರಿ,' ಎಂದು ಸಾರಿ ಹೇಳಿ ಹೆಣಗಾಡಬೇಕಾಗಿದ್ದಿಲ್ಲ. ಆದುದರಿಂದ 'ಭಾರತದ ಆಧ್ಯಾತ್ಮಿಕತೆಯು ಅದರ ಪ್ರಕೃತಿಯಲ್ಲ; ವಿಕೃತಿಯು!' ಎಂದು ಕಂಡುಬರುತ್ತದೆ.

ಇನ್ನು ಎರಡನೆಯ ಮಾತೆಂದರೆ, ಭಾರತದ ಆಧ್ಯಾತ್ಮಿಕತೆಯು ನಿಜವೇ ಆಗಿದ್ದರೆ, ಇಂದಿನ ಭಾರತೀಯ ರಾಷ್ಟ್ರವಾದವೇ ವ್ಯರ್ಥವಾದುದು ಎಂದು ಒಪ್ಪಿಕೊಂಡಂತಾಗುವುದು. ನಮ್ಮ ರಾಷ್ಟ್ರೀಯ ಆಂದೋಲನದ ಬೇರುಗಳೇ ಜನತೆಯ ಅಸಂತೋಷದಲ್ಲಿವೆ. ಜನತೆಯ ಅಸಂತೋಷದ ಕಾರಣವೆಂದರೆ ಅವರ ಹೊಟ್ಟೆಬಟ್ಟೆಗಳ ಗೋಳು. **ಭಾರತೀಯ ಬಡವರ ಒಡಲುರಿಯ ಸುಣ್ಣವೇ ಭಾರತೀಯ ರಾಷ್ಟ್ರಧ್ವಜಕ್ಕೆ ಬಣ್ಣಕೊಟ್ಟದೆ.** ನಾವು ರಾಜಕೀಯ ಸ್ವಾತಂತ್ರ್ಯವನ್ನು ಪಡೆಯಲು ಹೋರಾಡುತ್ತಲಿದ್ದೇವೆ. ಅದೇಕೆ? ನಮ್ಮ ಜನತೆಯ ಐಹಿಕ ಅನವಸ್ಥೆಯನ್ನು - ಬಾಳು ಬದುಕಿನ ದುರವಸ್ಥೆಯನ್ನು ದೂರಮಾಡಲಿಕ್ಕೆ! ಎಂದಮೇಲೆ ನಮ್ಮ ಜನಾಂಗವು ಜಗತ್ತಿನ ಯಾವುದೇ ಜನಾಂಗದಂತೆಯೇ - ಜನಾಂಗದಷ್ಟೆಯೇ - ತಮ್ಮ ಲೌಕಿಕಜೀವನದ ಏಳುಬೀಳುಗಳನ್ನು ಕುರಿತು ಆಸಕ್ತಿಯನ್ನೂ ಆಸೆಬುರುಕತನವನ್ನೂ, ಅವುಗಳನ್ನು ಸರಿಪಡಿಸಿಕೊಳ್ಳಲು ಹೊಂಚು ಹಂಚಿಕೆಗಳನ್ನೂ ತೋರಿಸುವುದೆಂಬುದು ಸ್ಪಷ್ಟವಾಗುವುದು. (ನಿಜವಾಗಿಯೂ ಇದೆಲ್ಲ ಬೆಳಕಿನಷ್ಟು ಸ್ಪಷ್ಟವಿದೆ. ಆದರೆ ಕಾಣಲೊಲ್ಲೆವೆಂಬುವರಷ್ಟು ಕುರುಡರು ಇನ್ನಾರು?) ಎಂದ ಮೇಲೆ 'ಪಾರಲೌಕಿಕ' 'ಪಾರಮಾರ್ಥಿಕ' ಎಂದು ಮೊಳಗುವ ಲಕ್ಷಣವು ಸುಳ್ಳಿರಬೇಕು; ಇಲ್ಲವೇ ಸತ್ತೆ-ಸಂಪತ್ತಿಗಳಿಗಾಗಿ ಹೋರಾಡುವ ನಮ್ಮ ರಾಷ್ಟ್ರೀಯತೆಯು ಮಳ್ಳಿರಬೇಕು!

ನಮ್ಮ ಸ್ವತಃಸಿದ್ಧ ಆಧ್ಯಾತ್ಮಿಕತೆಯನ್ನು ಸಿದ್ಧಮಾಡಲು ಪೇಚಾಡುವವರು ಇತಿಹಾಸ - ಪುರಾಣಗಳ ಉದಾಹರಣೆಗಳನ್ನು ಹುಡುಕುವುದುಂಟು. ಹಿಂದಿನ ದೃಷ್ಟಾಂತಗಳನ್ನು ಕೊಡುವದುಂಟು. ಆದರೆ ಈ ಬಗೆಯು ಇಬ್ಬದಿಗೂ ಧಾರೆಯುಳ್ಳ ಕತ್ತಿಯಂತೆ, ಪಾಶ್ಚಿಮಾತ್ಯರೂ ತಮ್ಮಲ್ಲಿಯ ಯಾಜ್ಞವಲ್ಕ್ಯ - ಜನಕರ ಕಡೆಗೆ ಬೆರಳುತೋರಿಸಬಲ್ಲರು. ಆಧುನಿಕ ಭೌತಿಕ ಸಂಸ್ಕೃತಿಗೆ ಆಧ್ಯಾತ್ಮಿಕತೆಯ ಕಳೆಯನ್ನು ಕೊಡಲು ಇಂತಹ ಸಜ್ಜನರು ಅಲ್ಲಿ ಇಂದಿಗೂ ಹೆಣಗುತ್ತಿರುವವರು ಸತ್ಕಾರ್ಯಗಳಿಗಾಗಿ

ವಿನಿಯೋಗಿಸುವುದರಿಂದಲೂ ದಾನದಿಂದಲೂ ಧನಸಂಪಾದನೆಯು ಶುದ್ಧವಾಗುತ್ತದಾದರೆ, ರೊಕ್‌ಫೆಲರ್‌ನ ಸಂಪತ್ತಿಯು ಅಸುರಿಯೇಕೆ? ಲಕ್ಷಾವಧಿ ಜೀವಗಳನ್ನು ನರಕದಿಂದ ನಾಸ್ತಿಕತೆಯಿಂದ ತಪ್ಪಿಸಿ ತಿದ್ದಲು ಕ್ರೈಸ್ತಧರ್ಮವನ್ನು ದಿಗ್ದೇಶಗಳಲ್ಲಿ ಹಬ್ಬಿಸಲು ಆತನ ಪ್ರಚಂಡ ದಾನಧರ್ಮವು ವೆಚ್ಚವಾಗುತ್ತಿಲ್ಲವೇ? ಕಾರ್ನೆಜಿಯಂತಹ ಕೋಟ್ಯಾದೀಶರು ಜಾಗತಿಕ ಶಾಂತಿಗಾಗಿ ವಿಪುಲ ಧನಸಹಾಯವನ್ನು ಮಾಡಿಲ್ಲವೇ? ದಾನಶೂರತನವೂ ಧರ್ಮವೀರತನವೂ ದೀನಬಂಧುತನವೂ ಭಾರತದಂತೆ ಯೂರೋಪ-ಅಮೇರಿಕೆಯಲ್ಲಿಯೂ ಧಾರಾಳವಾಗಿ ಕಂಡುಬರುತ್ತದೆ ಎಂದ ಮೇಲೆ ಅವರೂ ಆಧ್ಯಾತ್ಮಿಕರೆ ೋ? ನಾವೂ ಜಡವಾದಿಗಳೋ?

ಒಂದು ಮಾತನ್ನು ನಾವು ಮರೆಯಬಾರದು. ಪೃಥ್ವಿಯ ಯಾವುದೇ ಭಾಗದಲ್ಲಿರಲಿ, ಭೂಗೋಲದ ಯಾವುದೇ ಖಂಡದಲ್ಲಿರಲಿ, ಎಲ್ಲ ಜನಾಂಗಗಳೂ ಪ್ರತಿನಿತ್ಯದ ಬದುಕಿನಲ್ಲಿ, ಉದ್ದೇಶ-ಉಪಾಯಗಳಲ್ಲಿ ಒಂದೇ ತರದುವಾಗಿರುತ್ತವೆ. ಒಡೆದುಕಾಣುವ ಭೇದಗಳೆಲ್ಲ ಬರೇ ರೀತಿಯವು. ಉಳಿದ ಖಂಡಗಳಲ್ಲಿಯಂತೆ ಭಾರತದ ಜನರಾದರೂ ಮುಖ್ಯವಾಗಿ ತಮ್ಮ ಬಾಳುವೆಗೆ ಬೇಕಾದ ವಸ್ತು-ವ್ಯವಸಾಯಗಳಲ್ಲಿಯೇ ತೊಡಗಿರುತ್ತಾರೆ. ಜಡಸಾಧನೆಗಳನ್ನು ಅಳವಡಿಸಿಕೊಳ್ಳುವುದರಲ್ಲಿಯೇ ತೊಡಗಿರುತ್ತಾರೆ. ಈ ಜಡವಾದಿತನವು ಉಪಭೋಗದ ಅಭಿರುಚಿಯಲ್ಲ; ಅವರ ಉಪಜೀವಿಕೆಯ ಅವಶ್ಯಕತೆಯು. ಇದು ಇಂದಿನ ಸ್ಥಿತಿಯಲ್ಲ. ಎಂದಿನಿಂದಲೂ ಬಂದು ಎಂದೆಂದಿಗೂ ಇರುವ ಸಂಗತಿಯು. ಒಂದು ಜನಾಂಗದ ಸಂಸ್ಕೃತಿಯನ್ನು ಅವರಲ್ಲಿಯ ಮಹಾತ್ಮರ ಚರಿತ್ರೆಗಳಿಂದ ಅಳೆಯುವುದಲ್ಲ. ಭಾರತದ ಅರವಿಂದರರೂ, ಮಹಾತ್ಮರೂ, ರಮಣಯೋಗಿಗಳೂ ಭಾರತೀಯ ಜೀವನದ ಅಪವಾದಗಳೂ ಆದರ್ಶಗಳೂ ಇರಬಹುದು. ಆದರೆ ಅವರು ನಮ್ಮ ಜೀವನದ ಮಾದರಿಗಳಲ್ಲ. ಜನತೆಯ ಸಂಸ್ಕೃತಿಯನ್ನು ಅಳೆಯುವುದಾದರೆ ಅರಿತುಕೊಳ್ಳುವುದಾದರೆ - ಆ ಜನರ ಬಹುಸಂಖ್ಯಾಕರ ಜೀವನದ ಸ್ಥಾನಮಾನಗಳನ್ನೇ ಪ್ರಮಾಣವಾಗಿಟ್ಟುಕೊಳ್ಳಬೇಕು. ದೇಶದಲ್ಲಿಯ ಕೆಲವೇ ಶ್ರೇಷ್ಠಿಗಳು ಬುದ್ಧಿಮತ್ತೆಯುಳ್ಳ ವರಿಷ್ಠರು-ಉಂಟು ಮಾಡಿಕೊಂಡ ಪ್ರೀತಿಯ ಮತತತ್ವಗಳಾಗಲಿ, ಆಡಂಬರದ ಮಾತುಗಳಾಗಲಿ, ಜನತೆಯ ಬದುಕಿನ ತಾತ್ತ್ವಿಕ ತಳಹದಿಯನ್ನು ಸಾಮಾಜಿಕ ವಿಚಾರ ಭೂಮಿಕೆಯನ್ನು ಪ್ರತಿಬಿಂಬಿಸುವುದಿಲ್ಲ. ಅಷ್ಟೇಕೆ? ಇಂತಹ ಬೌದ್ಧಿಕ ವರಿಷ್ಠರು ಸಮಾಜಶ್ರೇಷ್ಠಿಗಳು ಕೂಡ ತಮ್ಮ ವ್ಯಾವಹಾರಿಕ ಜೀವನದಲ್ಲಿ ವ್ಯವಸಾಯದ ಒತ್ತಡದಲ್ಲಿ ತಮ್ಮ [illegible]ಸುವಷ್ಟು ಎತ್ತರವಾಗಿ ಕಂಗೊಳಿಸುವ ಆದರ್ಶ ಕಲ್ಪನೆಗಳ ಗೋಪುರಗಳಿಂದ ಕೆಳಗಿಳಿದು, ಸಾಮಾನ್ಯ ಜನರ ಪಾತಳಿಯ ಮೇಲೆಯೇ ಬರಬೇಕಾಗುತ್ತದೆ. ನಮ್ಮಲ್ಲಿಯ ಬಹುಸಂಖ್ಯಾಕ ಬುದ್ಧಿವಂತರು, ತಮ್ಮ ವಂಶದ- ಜಾತಿಯ- ಆಧ್ಯಾತ್ಮಿಕ ಶ್ರೇಷ್ಠತೆಯನ್ನು ನಿಶ್ಚಿತವಾಗಿ ನಂಬಿರುತ್ತಾರೆ. ಆರ್ಯರ ಆದರ್ಶಗಳನ್ನು ರಕ್ಷಿಸಿಕೊಳ್ಳುವ ಕುರಿತು ಪ್ರಚಂಡ ಚಪ್ಪಾಳೆಗಳಲ್ಲಿ ತಮ್ಮ ಆವೇಶದ ಮಾತುಗಾರಿಕೆಯನ್ನು ಮುಗಿಸುತ್ತಾರೆ! ಯಾವುದೋ ಒಂದು ಗೂಢವಾದ (ಮೂಢವಾದ?) ವಿಚಿತ್ರ ತರ್ಕಪದ್ಧತಿಯಿಂದ ಅವರು ಒಂದು ನಿರ್ಣಯಕ್ಕೆ ಬಂದಿರುತ್ತಾರೆ! ಆತ್ಮಸಮರ್ಪಣೆ, ಸೇವಾವೃತ್ತಿ, ತ್ಯಾಗ, ಪ್ರಾಮಾಣಿಕತೆ, ಚಿತ್ತಶುದ್ಧಿ ಮುಂತಾದ ಉದಾತ್ತಗುಣಗಳೆಲ್ಲ ಭಾರತದ ಒಡೆತನದುವೂ ಒಡಹುಟ್ಟಿಬಂದ ಲಕ್ಷಣಗಳೂ ಆಗಿರುವುವೆಂದು ಅವರ ಮನವರಿಕೆ. ಮಾನವ

ಜಾತಿಯನ್ನೇ ದುಃಖ- ದುರವಸ್ಥೆಗಳಿಂದ ಉದ್ಧರಿಸಿ ಜಡವಾದಿತನದ ಪಾಪದಿಂದ ಮುಕ್ತಮಾಡಿ ವಿಶ್ವವನ್ನೆ ಆರ್ಯಮಯವಾಗಿ ಮಾಡಬೇಕೆಂಬುದೇ- ನಮ್ಮ ಭಗವಂತನ ಅವತಾರಭೂಮಿಯಾದ- ಭರತಖಂಡದ ಜನ್ಮಸಿದ್ಧ ಕಾರ್ಯವೆಂದು ಅವರು ಕನವರಿಸುತ್ತಿರುತ್ತಾರೆ. ಇದೆಲ್ಲ ಮಾತು ಕಿವಿಗೆ ಬಹಳೇ ಇಂಪಾಗಿದೆ. ತಲೆಗೂ ತಂಪಾಗಿದೆ. ನಂಬಿಗೆ ನಿರ್ಧಾರಗಳ ಆವೇಶದಿಂದ ಸಾರಿಹೇಳಿದರೆ ತುಂಬ ಉತ್ತೇಜಕವಾಗಿವೆ; ಆದರೆ ಇವೆಲ್ಲ ಹೊಂಗನಸುಗಳಿಂದ ಎಚ್ಚೆತ್ತು ನೋಡಿದರೆ, ಹೀಗೆಲ್ಲ ನಂಬುವ ನಮ್ಮ ಭಾರತೀಯ ಬುದ್ಧಿಜೀವಿಗಳು- ಸುಶಿಕ್ಷಿತ, ಸುಸಂಸ್ಕೃತ, ಉಷ್ಣರಕ್ತದ, ಸ್ವಾಭಿಮಾನಿ ತರುಣರು-ಹಿಂಬಾಲಿಸುವ ನಿಜವಾದ ಆದರ್ಶವೇನು? ಎಂಬುದನ್ನು ಮನಗಾಣಬೇಕು. ಕೆಲಮಟ್ಟಿಗೆ ಶಿಕ್ಷಣದ ಸೋಂಕು ಪಡೆಯಬೇಕು. (ಅದೂ ಶಿಕ್ಷಣದಿಂದ ಬರುವ ಸಂಸ್ಕಾರಕ್ಕಾಗಿ ಅಲ್ಲ; ಆದರೆ ಸಂತೆಯ ಬೆಲೆಯನ್ನು ಲೆಕ್ಕಿಸಿ) ಆಮೇಲೆ ಬಡಬಡಿಸುವ ಬಡಕ ಹೆಂಡತಿ ಮತ್ತು ಬ್ಯಾಂಕಿನಲ್ಲಿ ಬಡ್ಡಿಗಿಟ್ಟ ಹಣಕ್ಕೆ ಹುಂಡಿ ಇವೆರಡನ್ನು ಭದ್ರವಾಗಿಟ್ಟುಕೊಳ್ಳಲು (ಇಲ್ಲಿ ಮತ್ತೆ, ಹೆಂಡತಿಯ ರಕ್ಷಣೆಯೂ ಈಗಿತ್ತಲಾಗಿ ಜಾತೀಯ ದೊಂಬೆಗಳಿಂದ ಕಠಿಣವೇ ಆಗಿದೆ;) ಮೈಮುರಿದು ದುಡಿಯುವುದೇ ನಮ್ಮ ಆಧ್ಯಾತ್ಮಿಕ ಸಂಸ್ಕೃತಿಯ ಪ್ರಾತಿನಿಧಿಕ ಚಿತ್ರವು! ಜಡವಾದಿಯಾದ ಪಾಶ್ಚಾತ್ಯ ತರುಣರು ಇದಕ್ಕಿಂತ ಬೇರೆ ಆದರ್ಶವನ್ನು ಹಿಂಬಾಲಿಸುವರೇ? ಜೀವನದ ಬೇಕು-ಬೇಡಿಕೆಗಳನ್ನೂ ಹಸಿವೆ-ಹುಮ್ಮಸಗಳನ್ನೂ ಪೂರೈಸಿಕೊಳ್ಳುವ ಚಿಂತೆ-ಚಟುವಟಿಕೆಗಳು ಜಡವಾದದ ಒಂದು ಕುರುಹಾದರೆ, ನಾವು ಭಾರತೀಯರು ಪಾಶ್ಚಾತ್ಯರಷ್ಟೇ ಜಡವಾದಿಗಳಾಗಿ ಹಿಂದಿನಿಂದಲೂ ಸಾಗಿಬಂದಿದ್ದೇವೆ. ನಮ್ಮ ಮತ್ತು ಅವರಲ್ಲಿರುವ ಭೇದವು ನಿವೃತ್ತಿ-ಪ್ರವೃತ್ತಿಗಳದಲ್ಲ; ಪ್ರವೃತ್ತಿಯೊಳಗಿನ ನಿರ್ಬಲ-ಸಬಲತೆಗಳದು.

## ನಮ್ಮ ಪುರುಷಾರ್ಥಗಳೂ ಜೀವನದ ಧರ್ಮವೂ

ಬದುಕುಳಿಯುವುದೂ, ತನ್ನ ಪೀಳಿಗೆಯನ್ನು ಬೆಳೆಸಿ ಬಾಳುವಂತೆ ಮಾಡುವುದೂ ಇವೆರಡೂ ಪ್ರತಿಯೊಂದು ಜೀವಿಯ ಮೂಲದ ಕರ್ತವ್ಯಗಳು. ಮಾನವಜೀವಿಯು ಸ್ವಾಭಾವಿಕವಾಗಿಯೇ ಇವೆರಡೂ ಕರ್ತವ್ಯಗಳನ್ನು- ಸಹಜಧರ್ಮಗಳನ್ನು-ಆದಷ್ಟು ಅನುಕೂಲ ಪರಿಸ್ಥಿತಿಯಲ್ಲಿ ನೆರವೇರಿಸಲು ಯತ್ನಿಸುತ್ತಾನೆ. ಇಂತಹ ಪರಿಸ್ಥಿತಿಯ ಅನುಕೂಲತೆಗಳನ್ನು ಉಂಟುಮಾಡಿಕೊಳ್ಳಲೂ ಅವುಗಳನ್ನು ನಿರಂತರವಾಗಿ ಸುಧಾರಿಸಿಕೊಳ್ಳಲೂ ಬೇಕಾದ ಸಾಮರ್ಥ್ಯದಿಂದಲೇ ಮನುಷ್ಯನು ಇತರ ಪ್ರಾಣಿಗಳಿಗಿಂತ ಮೇಲಿನವನೆನಿಸಿಕೊಳ್ಳುತ್ತಾನೆ. ಆದ್ದರಿಂದ ಸುಖದ ಹಸಿವೆಯು - ತನ್ನ ಮತ್ತು ತನ್ನವರ ನೆಮ್ಮದಿಯ ಚಿಂತೆಯು-ಒಂದು ಪ್ರಾಣಿಧರ್ಮದ ಪ್ರೇರಣೆಯಾಗಿದೆ. ಅದು ಪುಣ್ಯವೂ ಅಲ್ಲ. ಪಾಪವೂ ಅಲ್ಲ. ಇನ್ನು ಮಾನವಕುಲದ ಹಿತದ ನೋಟದಿಂದ ಅದನ್ನು ಪುಣ್ಯವೆಂತಲೇ ಎಣಿಸಲು ಅಡ್ಡಿಯಿಲ್ಲ. ಆದರೆ ಇದು ಆಧ್ಯಾತ್ಮಿಕತೆಯಲ್ಲ. ಮಡದಿ-ಮಕ್ಕಳು, ಬದುಕು-ಬಳಗ, ಸಂಪತ್ತಿ-ಸಮಾಜ ಇವೆಲ್ಲವುಗಳ ಇಚ್ಛೆಯನ್ನೂ ಏಷಣೆಯನ್ನೂ ತೊರೆದಾಗಲೇ ಆಧ್ಯಾತ್ಮಿಕತೆಯು ಮೈವೆತ್ತುವುದು. ಆದರೆ ಈ ಆಧ್ಯಾತ್ಮಿಕತೆಯು ವಿವೇಕಕ್ಕೆ ಒಪ್ಪುವಂತಹದಲ್ಲ. ಹೆಚ್ಚು ಹೆಚ್ಚು ಸೌಕರ್ಯ-ಸಲಕರಣೆಗಳನ್ನು ಅಳವಡಿಸಿಕೊಳ್ಳಲು ಕುಲ, ಗ್ರಾಮ, ಸಭೆ, ನಗರ ಮತ್ತು ರಾಷ್ಟ್ರಗಳನ್ನು ವಿಕಾಸಗೊಳಿಸಿಕೊಂಡು, ನಿಸರ್ಗದ ಶಕ್ತಿಗಳನ್ನು ಹೂಡಿ ಹದನಮಾಡಿ,

ತನ್ನ ಪರಿಸ್ಥಿತಿಯನ್ನು ಹಸನುಗೊಳಿಸಿ, ಸುಖದ ಪೈರು ಬೆಳೆಸಿಕೊಳ್ಳುವುದೆಂದರೆ ಜಡವಾದಿತನವೆಂದಾದರ, ಕಾಡಾಡಿಯಾಗಿ ಅನಾಯಾಸವಾಗಿ ಸಿಗುವ ಹಣ್ಣು-ಕಾಯಿಗಳನ್ನು ತಿಂದು ಕಾಲಕಳೆಯುವ "ಯದೃಚ್ಛಾ ಲಾಭ ಸಂತುಷ್ಟ" ನಾದ ವಾನರನೇ ಆದರ್ಶನರನೆಂದು ತಿಳಿಯಬೇಕಾದೀತು. ಈ ತಿಳಿವಳಿಕೆ ಮನುಷ್ಯತ್ವದ ಅಪಮಾನವೇ ಸರಿ.

ನಿಜವಾಗಿಯೂ ಆಧ್ಯಾತ್ಮಿಕತೆಯನ್ನು ಪ್ರತಿಪಾದಿಸುವಂತಹರು ಇಂತಹ ಅಪಮಾನವನ್ನು ಮಾಡಲು ಸಹ ಹಿಂಜರಿಯದೆ ಜಡವಾದದ ವಿರೋಧವನ್ನು ಬೆಳೆಸಬೇಕು. ಆದರೆ ಆಧ್ಯಾತ್ಮವಾದಿಗಳು ತಮ್ಮ ಅನುಕೂಲತೆಗಾಗಿ ಅಷ್ಟೊಂದು ದೂರ ತಮ್ಮ ಅರ್ಥವನ್ನು ಎಳೆಯುವುದಿಲ್ಲ. ಭಾರತೀಯ ಸಂಸ್ಕೃತಿಯಲ್ಲಿ ಮೇಲೆ ವಿವೇಚಿಸಿದ ಜಡವಾದಿ ಭೂಮಿಕೆಯು ಒಳಪಟ್ಟಿದೆ. ನಿವೃತ್ತಿಯನ್ನೂ ವೈರಾಗ್ಯದ ಪರಮಭಾಗ್ಯವನ್ನೂ ಅದೆಷ್ಟೇ ಕೊಂಡಾಡಿದರೂ, ಸಂತತಿ, ಸಂಪತ್ತಿ, ಮತ್ತು ಸುಸ್ಥಿತಿಗಳನ್ನು ಬಯಸುವ ಬೆಳೆಸುವ ಜಡವಾದಿಯಾದ ಐಕದೃಷ್ಟಿಯನ್ನು, ತಮ್ಮ ಆಧ್ಯಾತ್ಮಿಕತೆಗೆ ವಿರೋಧಕವೆಂದು ಹಿಂದಿನ ಹಿರಿಯರು ತಿಳಿದಿದ್ದಿಲ್ಲ. (ಆದರೆ ಇಂದಿನ ಆಧ್ಯಾತ್ಮವಾದಿಗಳ ದೃಷ್ಟಿಯಿಂದ, ಐತಿಹಾಸಿಕ ರಾಷ್ಟ್ರಪುರುಷರಾದ ಶಿವಾಜಿ, ಪ್ರತಾಪರಂಥವರು ಹೇಗೆ ದಾರಿತಪ್ಪಿದ ದೇಶಭಕ್ತ (misguided patriots) ರೆಂದೆನಿಸಿಕೊಂಡರೋ, ಹಾಗೆಯೇ ಭಾರತೀಯ ಸಂಸ್ಕೃತಿಯ ಹಿಂದಿನ ಶಾಸ್ತ್ರಕಾರರೂ ದಾರಿ ತಪ್ಪಿದವರೆಂದು ಎಣಿಸಲ್ಪಡಬಹುದು. ಏಕೆಂದರೆ, ಪಾಪ, ಅವರಿಗೆ ತಮ್ಮ ಸಂಸ್ಕೃತಿಯು ಆಧ್ಯಾತ್ಮಿಕವೆಂದು ಗೊತ್ತೇ ಇದ್ದಿರಲಿಕ್ಕಿಲ್ಲ.) ಭಾರತೀಯ ಜೀವನದ ಉದ್ದೇಶಗಳು ನಾಲ್ಕು ಪುರುಷಾರ್ಥವಾಗಿವೆ. ಧರ್ಮ ಮತ್ತು ಮೋಕ್ಷಗಳ ನಡುವೆ ಒಳ್ಳೇ ಭಾವಿಕತನದಿಂದ "ಸಂಪುಟೀಕರಣ" ಮಾಡಿ ಕೂಡ್ರಿಸಿದರೂ, ಅರ್ಥಕಾಮಗಳು ತಮ್ಮ ಅರ್ಥವನ್ನು ಕಳಕೊಳ್ಳುವುದಿಲ್ಲ. ಭಾರತೀಯರ ಸಂಸ್ಕೃತಿಯ ಮಂದಿರವು ಈ ನಾಲ್ಕೂ ಕಂಭಗಳ ಮೇಲೆ ನಿಂತಿದೆ. ಬರೇ ಮೋಕ್ಷದ ಮೇಲೆ ನಿಂತ ಡೇರೆಯಲ್ಲ.

ಇನ್ನು ಈ ನಾಲ್ಕು ಪುರುಷಾರ್ಥಗಳಲ್ಲಿ ನಮ್ಮ ಜನಾಂಗವು ಹೆಚ್ಚಾಗಿ ನಡುವಿನವೆರಡನ್ನೇ ನೋಡಿಕೊಂಡು ಬಂದಂತಿದೆ. ಅರ್ಥ-ಕಾಮಗಳ ಸಂಪಾದನೆಯು ಬಹಳವಾಗಿ ನಡೆಯುತ್ತದೆಂತಲೇ ಸಮಾಜದ ಸ್ಥಿರತೆಗಾಗಿ ಧರ್ಮದ ನಿಯಂತ್ರಣವನ್ನುಂಟುಮಾಡಬೇಕಾಯಿತು. ವ್ಯಾಸಮಹರ್ಷಿಯು ಕಳವಳದಿಂದ ಕೂಗಿ ಸಾರಿದಂತೆ- 'ಧರ್ಮದಿಂದಲೇ ಅರ್ಥಕಾಮಗಳನ್ನು ಪಡೆಯಿರಿ' ಎಂದು ಒತ್ತಿ ಒತ್ತಿ ಹೇಳಬೇಕಾಯಿತು. ಈಗಿನ ಮಾತು ಒತ್ತಟ್ಟಿಗಿರಲಿ, ಮಹಾಭಾರತಕಾಲದಲ್ಲಿ ಧರ್ಮದ ಪ್ರತಿಷ್ಠೆ ಪ್ರೇರಣೆ ಅಷ್ಟೊಂದು ಜೀವಂತವಿರುವಾಗ ಕೂಡ ವ್ಯಾಸರು "ಒದರಿಕೊಂಡರೂ ಯಾರೂ ಕಿವಿಗೊಡಲಿಲ್ಲ" ಎಂದು ಒಪ್ಪಿಕೊಳ್ಳುವರು. ಬುದ್ಧಿಹೀನರೂ ಬಡವರೂ ಅಲ್ಲದೆ, ಬಲ್ಲವರು-ಭೀಷ್ಮ ದ್ರೋಣರಂಥವರು ಕೂಡ-ಧರ್ಮಕ್ಕಿಂತ ಅರ್ಥವನ್ನೇ ಹೆಚ್ಚು ಅಂಟಿಕೊಂಡಿದ್ದರು. 'ಮನುಷ್ಯನು ಅರ್ಥದ ದಾಸನು; ಅರ್ಥವು ಯಾರ ಆಳೂ ಅಲ್ಲ! .. ಎಂದು ತಿಳಿದು, ಅವರು ಬಹುಜನರು ಹೋದ ಹಾದಿಯನ್ನೇ ಹಿಡಿದಿದ್ದರು. ಇಂತಹ ಶ್ರೇಷ್ಠರ ನಡತೆಯನ್ನು ಇತರರು ಪ್ರಮಾಣವಾಗಿಟ್ಟು ಕೊಂಡಿದ್ದರು. ಮೋಕ್ಷದ ಮಾತಂತೂ ಬೇಡ. ಮೋಕ್ಷ ಸಿದ್ಧಿಗಾಗಿ ಸಾವಿರ ಜನರಲ್ಲಿ ಒಬ್ಬಾನೊಬ್ಬನು ಅದರ ಸಾಧನೆ ಮಾಡಿದರೆ ಹೆಚ್ಚು. ಇಂತಹ ಅಪರೂಪ ಸಾಧಕರಲ್ಲೂ ಎಲ್ಲಾದರೊರ್ವನಿಗೆ

ಸಿದ್ಧಿ ಲಭಿಸಿದರೆ ಪುಣ್ಯ! ಅಂದಿನ ಆಧ್ಯಾತ್ಮಿಕತೆಯ ಈ ಸಹಸ್ರಾಂಶದ ಪ್ರಮಾಣವನ್ನು ಪ್ರತ್ಯಕ್ಷ ಭಗವಂತನೇ ಕೊಟ್ಟಿರುವನು. ಇದು ಭಾರತೀಯ ಸಂಸ್ಕೃತಿಯು ಶಿಖರಕ್ಕೆ ತಲ್ಪಿದಂದಿನ ಸುವರ್ಣಯುಗದ ಕತೆ! ಇದು ಭಾರತೀಯ ಸಂಸ್ಕೃತಿಯ ಆಧ್ಯಾತ್ಮಿಕತೆಯ ಚಿತ್ರ! ಇದಕ್ಕಿಂತ ಹೆಚ್ಚು ಆಧ್ಯಾತ್ಮವು ಇಂದು ನಮ್ಮ ಬಡ ಜನತೆಯಲ್ಲಿ ಇದೆಯೇ? ಜನತೆಯೇಕೆ, ಘನತೆಗೇರಿದ ಬಹುಜನ ಬಲ್ಲವರಲ್ಲಿದೆಯೇ?

ಜಡವಾದಿಯಾದ ಪಾಶ್ಚಾತ್ಯ ಸಂಸ್ಕೃತಿಯ ವಿರುದ್ಧ ಯಾವಾಗಲೂ ಒಗೆಯಲ್ಪಡುವ ಆರೋಪವೆಂದರೆ ಅಲ್ಲಿಯ ಕಾಮುಕತೆಯದು. ಈ ಸಂಗತಿಯಲ್ಲಿ ಕೂಡ ಭಾರತೀಯರ ಆತ್ಮ ಸಂಭಾವನೆಗೆ ಇಂದಿನ ವ್ಯವಹಾರದಲ್ಲಾಗಲೀ, ಹಿಂದಿನ ಶಾಸ್ತ್ರಗಳಲ್ಲಾಗಲೀ, ಪ್ರಮಾಣವಿಲ್ಲ. ಸ್ತ್ರೀ ಸೌಂದರ್ಯವನ್ನು ಬಣ್ಣಿಸುವುದರಲ್ಲಿ ಭಾರತೀಯ ಪ್ರತಿಭೆಯು ವೆಚ್ಚ ಮಾಡಿದಷ್ಟು ಕಲ್ಪಕತೆಯನ್ನೂ ರೋಚಕತೆಯನ್ನೂ ಇನ್ನಾವ ರಾಷ್ಟ್ರದ ಪ್ರತಿಭೆಯೂ ಕಾಣಿಸಿರಲಿಕ್ಕಿಲ್ಲ. ಸ್ತ್ರೀಶಬ್ದದ ಪರ್ಯಾಯವಾಗಿ ಬರುವ ನಮ್ಮ ಸಂಸ್ಕೃತ ಶಬ್ದಗಳನ್ನು ನೋಡಿದರೆ, ನಮ್ಮ ಜನರ ರಸಿಕತೆಯ ಆಳವು ಕಂಡು ಬರುವುದು. ವಸ್ತುತಃ ಯಾವುದೇ ಜನಾಂಗದ ಪ್ರಾಚೀನ ಇಲ್ಲವೇ ಮಧ್ಯಯುಗದ ಸಾಹಿತ್ಯವು, ಭಾರತೀಯ ಕಾವ್ಯ-ಪುರಾಣಗಳಲ್ಲಿ ತುಂಬಿತುಳುಕುವಷ್ಟು ಶೃಂಗಾರವನ್ನು ಬಣ್ಣಿಸಿಲ್ಲ. ಶೃಂಗಾರವು ರಸರಾಜನಾಗಿ, ಮೋಕ್ಷ ಪರವಾದ ಭಕ್ತಿಯು ಕೂಡ ಶೃಂಗಾರಿಕ ರೂಪದಲ್ಲಿ ಬಣ್ಣಿಸಿದಷ್ಟು ಮತ್ತಾವ ರೀತಿಯಲ್ಲಿಯೂ ಹಾಡಲ್ಪಟ್ಟಿಲ್ಲ. ಬ್ರಹ್ಮಜ್ಞಾನಪರವಾದ ಬ್ರಹ್ಮಸೂತ್ರಗಳು ಕೂಡ ಕಾಮವಾಸನೆಯು ಶಿಶುವಿನಲ್ಲಿ ಬೀಜರೂಪವಾಗಿರುತ್ತದೆಂತಲೂ ಯೋಗ್ಯ ವಯಸ್ಸು ಬಂದಾಗ ಪೂರ್ಣ ಅಭಿವ್ಯಕ್ತಿಯನ್ನು ಪಡೆಯುವುದೆಂತಲೂ ಸಾರಿದ್ದರಿಂದ, ಅದನ್ನು ಉಪಭೋಗಿಸಬೇಕೆಂದು ಧ್ವನಿಮಾಡಿವೆ. ಜ್ಞಾನ, ಭಕ್ತಿ, ಮತ್ತು ಕರ್ಮ ಇವುಗಳಲ್ಲಿಯ ಭಕ್ತಿಮಾರ್ಗದ ಅತ್ಯಂತ ಲೋಕಪ್ರಿಯತೆಯನ್ನು ಅವಲೋಕಿಸಿದರೆ, ಜನತೆಯು ಕಾಮುಕತೆಯ ಬಗ್ಗೆ ಉದಾಸೀನವಾಗಿತ್ತೆಂದು ಹೇಳಲು ಬಂದೀತೇ? ಜನತೆಗೆ ಎಲ್ಲ ಭಗವದವತಾರಗಳಲ್ಲಿ ಕೃಷ್ಣನು ಹೆಚ್ಚು ಪ್ರಿಯನು. ಕೃಷ್ಣಾವತಾರದಲ್ಲಿಯೂ-ಗೀತೆಯನ್ನು ಸಾರುವ ರಾಜಕಾರ್ಯ ಧುರಂಧರನಾದ - ಯೋಗೀಶ್ವರನಿಗಿಂತಲೂ ಗೋಪಾಲಕೃಷ್ಣನೂ ರಾಧಾಕೃಷ್ಣನೂ ಅತ್ಯಂತ ಪ್ರಿಯರು ಏಕೆಂದು ಬೇರೆ ಹೇಳಬೇಕಾಗಿಲ್ಲ.

ಇದೆಲ್ಲ ವಿವೇಚನೆಯನ್ನು ಮಾಡುವಾಗ, ಆಧ್ಯಾತ್ಮವಾದಿಗಳು ಒಪ್ಪಿಕೊಳ್ಳುವ ಸಾಂಪ್ರದಾಯಿಕ ಗ್ರಂಥ- ಪುರಾಣ ಗ್ರಂಥಗಳನ್ನು ಇದ್ದಂತೆಯೇ ಸತ್ಯವೆಂದು ಗ್ರಹಿಸಿ ಭಾರತೀಯ ಸಂಸ್ಕೃತಿಯ ಸ್ವರೂಪವನ್ನು ಚರ್ಚಿಸಲಾಗಿದೆ. ಭಾರತ ಮುಂತಾದ ಗ್ರಂಥಗಳನ್ನು ಐತಿಹಾಸಿಕ ದೃಷ್ಟಿಯಿಂದ ಸಂಶೋಧಿಸುವುದು ಇಲ್ಲಿ ಅಪ್ರಸ್ತುತ. ಭಾರತೀಯರ ಒಲವು ಹಿಂದಿನಿಂದಲೂ ಬಹುಸಂಖ್ಯಾಕವಾಗಿ ಆಧ್ಯಾತ್ಮ-ಪಾರಮಾರ್ಥಗಳ ಕಡೆಗಿತ್ತೇ? ಎಂಬುದೇ ಮುಖ್ಯ ಪ್ರಶ್ನೆ. ಅದು ಹಾಗಿದ್ದಿಲ್ಲ. ಈಗಲೂ ಹಾಗಿರುವುದಿಲ್ಲವೆಂದು ಸಿದ್ಧಮಾಡಲು ಮಾತ್ರ ಅದೊಂದೇ ದೃಷ್ಟಿಯಿಂದ ಪುರಾಣ ಗ್ರಂಥಗಳನ್ನು ಉದಾಹರಿಸಲಾಗಿದೆ. ಮತ್ತು ಹೀಗೆ ಉದಾಹರಿಸುವುದರಲ್ಲಿ ನಮ್ಮ ಸ್ವಂತ ಅಭಿಪ್ರಾಯದಿಂದ ವಿಧಾನಗಳನ್ನು ಅಲಿಪ್ತವಾಗಿ ಇಡಲು ಆದಷ್ಟು ಯತ್ನಮಾಡಲಾಗಿದೆ. ಕೃಷ್ಣ-ಭೀಷ್ಮರ ಕುರಿತು ಇಲ್ಲಿ ಅನಾದರವಿಲ್ಲ. ಅಂದಿನ ಜನತೆಯ ಆಧ್ಯಾತ್ಮಿಕತೆಯ ಕುರಿತು ಆಕ್ಷೇಪವಿದೆ. ಧರ್ಮವು ಅಂದು

ಆಚಾರ ಪ್ರಭವವಾಗಿತ್ತು. ಸಾಮಾಜಿಕ ನಿಯಮನಿರ್ಬಂಧಗಳ ಸ್ವರೂಪದ್ದಾಗಿತ್ತು. ಸಮಾಜದ ಹಿಂದುಳಿದ ಅವಸ್ಥೆಯಲ್ಲಿ ನಿಯಮ-ನಿರ್ಬಂಧಗಳನ್ನು ಪಾಪಪುಣ್ಯಗಳ ಪರಿಭಾಷೆಯಲ್ಲಿ ವಿವರಿಸಲಾಗುತ್ತದೆ. ಮತ್ತು ಅಂತಹ ನಿಯಮಗಳ ಪ್ರಮಾಣವನ್ನು ಸ್ಥಾಪಿಸಲು ಅವುಗಳಿಗೆ ದೈವೀ ಪ್ರೇರಣೆಯ ಅಧಿಕಾರ ಕೊಡಲಾಗುತ್ತದೆ. ಪ್ರತಿಯೋರ್ವನು ಲೌಕಿಕ ವಸ್ತು ವಿತ್ತಗಳನ್ನು ಗಳಿಸಬೇಕು. ತನ್ನ ಕಾಮನೆಗಳನ್ನು ಪೂರಯಿಸಿಕೊಳ್ಳಬೇಕು ಮತ್ತು ಸಾಮಾನ್ಯವಾಗಿ ಶಾರೀರಿಕ ಜೀವನದ ಭೋಗವನ್ನೂ ಅದರಿಂದೊದಗುವ ಮಾನಸಿಕ ತೃಪ್ತಿಯ ಶಾಂತಿಯನ್ನೂ ಪಡೆಯಬೇಕು. ಆದರೆ ಇದೆಲ್ಲ- ಸ್ಥಾಪಿತವಾದ ತನ್ನ ಸಮಾಜದ ಕಟ್ಟಳೆ-ಕಟ್ಟಡಗಳ ಕೆಳಗೆಯೇ ನಡೆಯಬೇಕು. ಇದೇ ಧರ್ಮ. ಅವ್ಯವಸ್ಥೆ ಅನವಸ್ಥೆಗಳ ಉತ್ಪಾತಗಳ ದೊಡ್ಡ ಭಯದಿಂದ ತಾರಣಮಾಡುವ ಧರ್ಮ. ಇದೆಲ್ಲ ಧೂರ್ತವಾದ ದೂರದರ್ಶಿಯಾದ ವ್ಯಾವಹಾರಿಕ ವಿವೇಕವಹುದು; ಆದರೆ ಇದರಲ್ಲಿ ಆಧ್ಯಾತ್ಮಿಕತೆಯೇನಿದೆ?

●

(ಜಯಂತಿ ೧೯೪೨)

# ನಮ್ಮ ರಾಷ್ಟ್ರಗೀತ

ಹಾಡು ಭಾವದ ಬುಗ್ಗೆ. ಮನದ ಮೊಗ್ಗೆ ಅರಳಿದಾಗ ಇಂಪಿನ ಕಂಪು ಬೀರುವ ಹಿಗ್ಗಿನ ಹೂವು. ಎದೆಯಿಂದ ಎದೆಗೆ ಹೋಗುವ ಮಿಂಚಿನ ಕರೆ. ಹಾಡಿನ ಬಗೆ ಯಾವುದೇ ಇರಲಿ, ಅದರ ಗತ್ತಿನಲ್ಲಿ ಬಾಳಿನ ಜೀವಾಳವನ್ನೇ ಸೋಲಿಸುವ ಗತ್ತುಗಾರಿಕೆಯಿರಬೇಕು; ಕೇಳುವ ಜೀವವನ್ನು ಹಾಡುವ ದನಿಯ ಜೀತದಾಳನ್ನಾಗಿ ಮಾಡುವ ಹೊಂಚುಗಾರಿಕೆಯಿರಬೇಕು; ಕೊರಳು ನುಡಿಸುವ ಪದದಲ್ಲಿ ಕರುಳು ಮಿಡಿಯುವ ಹದವಿರಬೇಕು. ಪ್ರತಿಯೊಂದು ಕಲೆಯೂ ಭಾವನೆಯ ವಿಕಾಸ-ವಿಲಾಸಗಳ ಭಾಷೆ. ಆದರೆ ಈ ಬಗೆಯಲ್ಲಿ ಎಲ್ಲಕ್ಕೂ ಮಿಗಿಲಾದ ಕಲೆಯೆಂದರೆ ಸಂಗೀತ, ಅದೊಂದು ಜೀವಂತ ಸಂದೇಶ. ಕಾವ್ಯದಿಂದ, ಚಿತ್ರದಿಂದ, ಶಿಲ್ಪದಿಂದ ನಮಗೆ ಬರುವ ಆನಂದ, ನಾವು ಪಡೆವ ಆದೇಶ-ಆವೇಶಗಳು ನೇರವಾಗಿ ಬರುವಂತಹವಲ್ಲ. ಅವೆಲ್ಲವುಗಳಲ್ಲಿ ಕಲಾಕೃತಿಯು ಕಲಾವಿದನಿಂದ ಬೇರೆಯಾಗಿ, ಕಲಾವಿದನು ಕಲಾಕೃತಿಯ ಬೆನ್ನಿಗೆ ನಿಂತು ರಸಿಕರ ಕಣ್ಮನಗಳನ್ನು ಉನ್ಮನಗೊಳಿಸುವ ಪರೋಕ್ಷಾನುಭವವಿದೆ; ಆದರೆ ಸಂಗೀತವು ಅಪರೋಕ್ಷಾನುಭವ. ಹಾಡಿನ ಹುರುಳು, ಹಾಡುಗಾರಿಕೆಯ ತಿರುಳು ಹಾಡುವ ಕೊರಳಿನಿಂದಲೇ ಜೀವಂತವಾಗಿ ಕೊನರಿ-ಕಳೆಗೊಂಡು, ಕೇಳುವವರ ಎದೆಯನ್ನು ಅರಳಿಸುವುದು; ಮನವನ್ನು ಮರಳುಗೊಳಿಸುವುದು. ಜ್ಞಾತೃ, ಜ್ಞೇಯ ಮತ್ತು ಜ್ಞಾನ ಈ ಮೂರು ಒಂದಾಗುವುದರಲ್ಲಿಯೇ ಅದ್ವೈತದ ಬ್ರಹ್ಮಾನಂದವಿದೆಯಂತೆ. ಅದು ಹೇಗೋ, ವೇದಾಂತಿಗಳಿಗೇ ಗೊತ್ತು. ನಮ್ಮ ಪಾಲಿಗೆ ಅಂತಹ ಬ್ರಹ್ಮಾನಂದದ ತೀರ ಹತ್ತಿರದ ಅನುಭವವೆಂದರೆ ಸಂಗೀತದ ಆಸ್ವಾದನೆಯೆ! ಗಾಯಕ, ಗಾಯನ ಮತ್ತು ಅದನ್ನು ಗಮನಿಸುವ ರಸಿಕ ಈ ಮೂರು ಸಂಗತಿಗಳೂ ಬೆರೆತು ಎರಕವಾಗಿ, ಸಂಗೀತದ ರಸಾನುಭೂತಿಯು ಅವತರಿಸುತ್ತದೆ.

ಸಂಗೀತದ ಈ ತನ್ಮಯಗೊಳಿಸುವ ಶಕ್ತಿಯಲ್ಲಿಯೆ ವಿಶೇಷವಾದುದೊಂದು ಅದರ ಉಪಯೋಗವನ್ನೂ ಬಲ್ಲವರು ಕಂಡಿದ್ದಾರೆ. ಹಾಡನ್ನು ಕೇಳುವ ಎದೆಯು ಹಾಡುಗಾರನ ಎದೆಯ ಕರೆಗೆ ದನಿಗೊಡುವಂತೆ, ಅದೇ ಹಾಡನ್ನು ಕೇಳುತ್ತಿರುವ ಇನ್ನೊಂದು ಎದೆಯೊಂದಿಗೂ ಎರಕವಾಗಬಹುದು. ಇನ್ನೊಂದು ವಿಶೇಷವೆಂದರೆ, ಹಾಡುವ ಎದೆಯೂ ತನ್ನ ಸಂಗೀತವನ್ನು ತಾನೇ ಸವಿಯುತ್ತ, ಕೇಳುವವರೊಂದಿಗೂ ಇನ್ನೊಬ್ಬ ಹಾಡುವಾತನೊಂದಿಗೂ ಸಮರಸವಾಗಿ ರಮಿಸಬಹುದು. ಒಬ್ಬರ ಸಂಗೀತ ಶ್ರವಣದಲ್ಲಿಯೇ ಇಂತಹ ಅಖಂಡವಾದ ಹೃದಯ ಸಂವಾದವು ನೆಲಸುತ್ತಿರುವಾಗ, ಒಂದೇ ಹಾಡನ್ನು, ಒಂದೇ ಶ್ರುತಿಗೆ, ಒಂದೇ ಭಾವಪರವಶತೆಯಿಂದ ನೂರಾರು ಕಂಠಗಳು ಅಕುಂಠಿತವಾಗಿ ಹಾಡಿದರೆ, ಆಗಿನ ಪ್ರಚಂಡವಾದ ನಾದ ತರಂಗಿಣಿಯ ಅಂತರಂಗದಲ್ಲಿ ಎಂತಹ ಸ್ವಾರಸ್ಯವು- ಎಂತಹ ಸಾಮರಸ್ಯವು- ಉಂಟಾಗಬಹುದು? ಈ ಸ್ವಾರಸ್ಯವನ್ನು ಕಂಡುಕೊಂಡವರೇ, ಸಂಗೀತವನ್ನು ಜನಾಂಗದ ರಾಷ್ಟ್ರೀಯತೆಯ ಸಾಧನೆಯಲ್ಲಿ ಒಂದು ಆಯುಧವನ್ನಾಗಿ ಅಳವಡಿಸಿಕೊಳ್ಳುವ ಜಾಣ್ಮೆ ತೋರಿಸಿದರು; ರಾಷ್ಟ್ರಗೀತವನ್ನು ಹಾಡುವ ರೂಢಿಯನ್ನು ಬೆಳೆಸಿದರು. ರಾಷ್ಟ್ರಕ್ಕೊಂದು ಧ್ವಜವಿರುವಂತೆ, ಅದರ ನೆರಳಲ್ಲಿ ನೆರೆದು ನಲಿದು, ಏಕಮುಖವಾಗಿ ಏಕಕಂಠದಿಂದ ಏಕಾಗ್ರತೆಯಲ್ಲಿ ಸಾವಿರ ಸಾವಿರ ಜನರು ಧ್ವನಿಗೂಡಿಸಿ ಹಾಡುವ ಒಂದು ರಾಷ್ಟ್ರಗೀತವೂ ಪ್ರತಿಯೊಂದು ಜನಾಂಗದಲ್ಲಿ ರೂಢವಾಯಿತು. ರಾಷ್ಟ್ರೀಯತೆಯ ಅಖಂಡ ಐಕ್ಯದ ಭಾವನೆಯು ಪ್ರತ್ಯಕ್ಷವಾಗಿ ಅನುಭವಕ್ಕೆ ಬರುವ ಉತ್ಕಟ ಪ್ರಸಂಗವೆಂದರೆ, ರಾಷ್ಟ್ರಗೀತವನ್ನು

ಹಾಡುವ ಸಂದರ್ಭ! ವ್ಯಕ್ತಿ ವ್ಯಕ್ತಿಗೂ ಒಂದು ಮನಸ್ಸಿರುವಂತೆ ಸಮಾಜಕ್ಕೂ ಜನಾಂಗಕ್ಕೂ ಒಂದು ಸಾಮಯಿಕವಾದ ಮನಸ್ಸಿದೆ, ಎಂಬ ಭಾವನೆಯು ತೀವ್ರವಾಗಿ ಎನಿಸುವ ಸಂದರ್ಭವದು. ಹನಿಗೆ ತಾನು ಹಳ್ಳದ ಅಂಶವೆಂದೂ, ತೆರೆಗೆ ತಾನು ಕಡಲಿನ ಅಂಶವೆಂದೂ ತನ್ಮಯತೆಯಿಂದ ತೋರಿ ಬರುವ ರಸ-ನಿಮಿಷವು ರಾಷ್ಟ್ರಗೀತವನ್ನು ಹಾಡುವಾಗ ತಲೆದೋರುವುದು.

ಇದು ಬರೀ ತಾತ್ತ್ವಿಕ ವಿಚಾರವಲ್ಲ; ನಿತ್ಯ ಆಚಾರದಲ್ಲಿ ಕಂಡು ಬರುವ ಸಂಗತಿಯು. ಇಂದಿನ ಯಾವುದೇ-. ತಲೆಯೆತ್ತಿ ನಿಂತ- ಪ್ರತಾಪಶಾಲಿಯಾದ ರಾಷ್ಟ್ರದ ಜೀವನವನ್ನು ನೋಡಿ ಕೊಂಡರೂ, ರಾಷ್ಟ್ರಗೀತದ ಹಾಡುವಿಕೆಯಲ್ಲಿ ಮೂಡುವ ಈ ಉತ್ಕಟ ಐಕ್ಯಭಾವವು ಹೊಳೆಯದೆ ಇರದು. ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿ ಅವರವರ ರಾಷ್ಟ್ರೀಯ ಅಭಿಮಾನವನ್ನೂ, ಅಭಿಲಾಷೆಗಳನ್ನೂ, ಅಭ್ಯುದಯದ ಕನಸುಗಳನ್ನೂ, ಇತಿಹಾಸದ ನೆನಸುಗಳನ್ನೂ ಕೊಂಡಾಡಿ, ಮೂಡಿಸಿ ಹಾಡುವ ಉಚಿತವಾದ ರಾಷ್ಟ್ರಗೀತಗಳಿವೆ. ಯಾವುದೇ ದೇಶದ ರಾಷ್ಟ್ರಗೀತವನ್ನು ನೋಡಿದರೆ, ಅದರ ರಾಷ್ಟ್ರೀಯ ಜೀವನದ ಸ್ಥಾನ-ಮಾನಗಳನ್ನು ಅರಿತುಕೊಳ್ಳಬಹುದೆಂದು ಧೈರ್ಯದಿಂದ ಧಾರಾಳವಾಗಿ ಹೇಳಬಹುದು. ಇನ್ನು, ಕೆಲವೊಮ್ಮೆ ರಾಷ್ಟ್ರಗೀತವು ಜನಾಂಗವನ್ನು ರಾಷ್ಟ್ರೀಯತೆಯ ಕುರಿತು ಪ್ರೇರಿಸಬಹುದು. ಇನ್ನೂ ಕೆಲವು ಸಲ, ಘನತೆಯ ಶಿಖರವೇರಿದ ರಾಷ್ಟ್ರವೇ ತನ್ನ ಅಧಿಕಾರ-ಐಶ್ವರ್ಯದ ಪ್ರಭೆಯಿಂದ ತನ್ನ ರಾಷ್ಟ್ರಗೀತವನ್ನು ಕಳೆಗೊಳ್ಳುವಂತೆ ಮಾಡಬಹುದು. ರಾಷ್ಟ್ರಗೀತವು ಏಳಲಿರುವ ರಾಷ್ಟ್ರದ ಉದಯರಾಗವಾಗಬಹುದು. ಎದ್ದು ಏಳ್ಗೆ ಹೊಂದಿದ ರಾಷ್ಟ್ರದ ತುಷ್ಟಿ-ಪುಷ್ಟಿಯ ಶಾಂತಿಪಾಠವಾಗಬಹುದು. ಜಗತ್ತಿನ ಎಲ್ಲ ರಾಷ್ಟ್ರಗೀತಗಳಲ್ಲಿ ತೀರ ಸರಳವೂ ಸಾರಹೀನವೂ ಆದುದೆಂದರೆ ಬ್ರಿಟಿಷರ ರಾಷ್ಟ್ರಗೀತ. - ಅದು ನಿಜವಾಗಿಯೂ ರಾಷ್ಟ್ರಗೀತವಲ್ಲ, ರಾಜನಿಷ್ಠೆಯ ನಿತ್ಯಪಾಠ. ಆದರೂ ನೆನಪಿಡುವ ಸಂಗತಿಯೆಂದರೆ, ಅದನ್ನು ಹಾಡುವುದರಲ್ಲಿಯೂ, ಹಾಡಿದುದನ್ನು ಕೇಳುವುದರಲ್ಲಿಯೂ, ಪ್ರತಿಯೋರ್ವ ಬ್ರಿಟನ್ನನೂ ಸಹಜವಾಗಿ ತೋರಿಸುವ ತತ್ಪರತೆ, ತನ್ಮಯತೆ, ಹಾದಿಯಲ್ಲಿರಲಿ, ಹೋಟೆಲಿನಲ್ಲಿರಲಿ, ದುಡಿಯುತ್ತಿರಲಿ, ಕುಡಿಯುತ್ತಿರಲಿ, "God Save our Gracious King" ಎಂಬ ಸೊಲ್ಲನ್ನು ವಾದ್ಯಗಳ ಮೇಲೆ ನುಡಿಸುವ ಸ್ವರಗಳು ಕಿವಿಗೆ ಬಿದ್ದೊಡನೆ, ಪ್ರತಿಯೋರ್ವ ಬ್ರಿಟನನೂ ಇದ್ದಲ್ಲಿ ಎದ್ದು ನಿಂತು ಸದ್ದಿಲ್ಲದೆ ತಲೆಬಾಗುವುದನ್ನು ನೋಡಿದರೆ, ನಾಗರಿಕತೆಗೇ ಧನ್ಯವೆನಿಸೀತು!

ಒಂದು ತೀರ ಸಾಮಾನ್ಯವಾದ ಸಾತ್ತ್ವಿಕ ಸ್ವಸ್ತಿವಾಚನದಂತಿರುವ ಸೊಲ್ಲಿನಲ್ಲಿಯೂ, ಒಂದು ಘನತೆಗೇರಿದ ರಾಷ್ಟ್ರದ ಜನತೆಯು ಇಷ್ಟೊಂದು ಆಸಕ್ತಿಯನ್ನು ಸಕ್ತಿಯಿಲ್ಲದೆ ತೋರಿಸುವಾಗ, ಒಂದು ಬಿದ್ದ ರಾಷ್ಟ್ರದ ಜನತೆಯು, ತಮ್ಮ ತೊತ್ತುಳಿಗೊಂಡ ತೊಳಲಾಟದ ತಲ್ಲಣದೊಳಗಿಂದ ಎಚ್ಚತ್ತು ಎದ್ದು ಎದೆಗಾರಿಕೆಯಿಂದ, ಹೊಸದೊಂದು ರಾಷ್ಟ್ರೀಯತೆಯನ್ನೂ ಸಂಘಟನೆಯ ಶಕ್ತಿಯನ್ನೂ ಶೇಖರಿಸಿಕೊಳ್ಳಲಿಕ್ಕೆ- ಸುಖದ ಶಿಖರವನ್ನು ಏರಲಿಕ್ಕೆ- ಸ್ಫೂರ್ತಿಯನ್ನು ಪಡೆಯಲು - ಅದೆಷ್ಟು ಅಭಿಮಾನದಿಂದ ಅದೆಷ್ಟು ಅಭಿರುಚಿಯಿಂದ ತಮ್ಮ ರಾಷ್ಟ್ರಗೀತವನ್ನು ಹಾಡಬೇಕು?

ಆದರೆ ನಮ್ಮಲ್ಲಿ ಈ ಅಭಿಮಾನ, ಈ ಅಭಿರುಚಿ ತೋರುವುದೇ? ನಮ್ಮ ರಾಷ್ಟ್ರಗೀತವನ್ನು ಹಾಡುವವರೆಷ್ಟು ಜನ? ಸಭೆ, ಸಮ್ಮೇಲನಗಳಲ್ಲಿ, ಉಪಚಾರವೆಂದು ಅರಿಯದ ಹುಡುಗಿಯರಿಂದ ಹಾಡಿಸಿದರೂ ಅದನ್ನು ಕೇಳುವವರೆಷ್ಟು ಜನ? ರಾಷ್ಟ್ರಗೀತವನ್ನು ಹಾಡುವಾಗ ಎದ್ದು ನಿಲ್ಲುವವರೆಷ್ಟು ಜನ? ನಿಲ್ಲುವುದಿರಲಿ, ಅಲ್ಲಿ ಕುಳಿತು ಕೇಳುವವರಾದರೂ ಎಷ್ಟು ಜನ? ಕೆಲವೊಮ್ಮೆ ರಾಷ್ಟ್ರಗೀತವನ್ನು ಮೊದಲೇ ಹಾಡುವ ಪರಿಪಾಠವಿಡಲಾಗುತ್ತಿದೆ. ಇದರಲ್ಲಿ ಯಾವ ಔಚಿತ್ಯವಿದ್ದರೂ, ವ್ಯವಸ್ಥಾಪಕರ

ಘೋರಣೆಯೆ ಒಡೆದುಕಾಣುತ್ತದೆ. ರಾಷ್ಟ್ರಗೀತದ ಉಪಚಾರ ಮುಗಿಯುವ ತನಕ, ಸಭೆಗೆ ಬಂದು ಕೂಡ್ರುವ ಮಂದಿಯ ಗಲಾಟೆಯಾದರೂ ತುಸು ಕಡಿಮೆಯಾಗಲು ಇಂಬು ದೊರಕಿಸಿಕೊಡುವ ವ್ಯಾವಹಾರಿಕ ಧೂರ್ತತೆಯೇ ಈ ಕಾರ್ಯಕ್ರಮದಲ್ಲಿ ಕಂಡುಬರುವುದಿಲ್ಲವೇ?

ಇದು ಅತ್ಯಂತ ಲಾಂಛನದ ಮಾತು! ನಮ್ಮ ನಾಯಕರು ಗಮನಿಸಬೇಕಾದ ಮಾತು! ನಮ್ಮ ಈವರೆಗಿನ ರಾಷ್ಟ್ರೀಯ ಚಳವಳಿಯಲ್ಲಿ ಕಂಡುಬರುವ ಅವ್ಯವಸ್ಥೆ-ಅನವಸ್ಥೆಗಳ ಪ್ರತೀಕವೇ ನಮ್ಮ ರಾಷ್ಟ್ರಗೀತದ ಅವಸ್ಥೆ-ಅನಾಸ್ಥೆಗಳಲ್ಲಿ ಕಣ್ಣುಕಟ್ಟುತ್ತದೆ. ನಮ್ಮ ಧುರೀಣರು ಜನಶಕ್ತಿಯ ಸಂಘಟಿತ ಬಲವನ್ನು ಕಟ್ಟಲು ಹೆಣಗಲೇ ಇಲ್ಲವೆಂಬುದು ನಮ್ಮ ರಾಷ್ಟ್ರಗೀತದ ಸಮಸ್ಯೆಯಲ್ಲಿಯೆ ಕಂಡುಬರುತ್ತದೆ. ನಮ್ಮ ರಾಷ್ಟ್ರದ ಕಾರಣಪುರುಷರಿಗೆ "ಕೀಜೈ!" ಎಂದು ಕಂಠಬಿರಿಯುವಂತೆ ಕೂಗುವ - ಕಿವಿ ಬಿರಿಯುವಂತೆ ಚಪ್ಪಾಳೆ ಬಾರಿಸುವ - ಸಂತೆಯ ಸಂದಣಿಯಂತಹ ಮಂದಿಯ ಮಂದೆಯೇ ಬೇಕಿರಬಹುದು. ಒಂದು ತಾಳಕ್ಕೆ ಹೆಜ್ಜೆಯಿಟ್ಟು, ಒಂದು ರಾಗಕ್ಕೆ ದನಿಗೊಟ್ಟು, ಒಂದು ರಾಷ್ಟ್ರಗೀತವನ್ನು ಒಟ್ಟಾಗಿ ಹಾಡುತ್ತ, ತಲೆಯೆತ್ತಿ ತೋಳ್ನೆಗೆದು ಸಾಲಾಗಿ ಮುಂದುವರೆವ ಬಂಟರ ಬಲವು ಬೇಡವಾಗಿರಬಹುದು. ಮುಂದಾಳುಗಳೇ ಈ ಕುರಿತು ಉದಾಸೀನರಾದ ಮೇಲೆ ಮಿಕ್ಕವರು ಮಾಡುವುದೇನು?

ನಿಜವಾಗಿಯೂ ಸಾಮುದಾಯಿಕ ಸಂಗೀತದ ರೂಢಿಯು ನಮ್ಮವರಿಗೆ ಏನೂ ಹೊಸತಲ್ಲ. ಪಾಶ್ಚಾತ್ಯ ದೇಶಗಳಿಗಿಂತ ಮಿಗಿಲಾಗಿ ನಮ್ಮ ಜನರು ಗಾನಮುಗ್ಧರೂ ನಾದಲುಬ್ಧರೂ ಆಗಿ ಬೆಳೆದಿದ್ದಾರೆ. ಅದರಲ್ಲಿಯೂ ಭಕ್ತಿಸಂಪ್ರದಾಯಗಳ ತವರೂರಾದ ನಮ್ಮಲ್ಲಿ ಭಜನೆಗಳಿಗೆ ಏನೂ ಕೊರತೆಯಿಲ್ಲ. ದಾರಿಯುದ್ದಕ್ಕೂ ತಾಳಗೆಟ್ಟು ತಾಳಹಾಕುತ್ತ, ಬೇತಾಳರಂತೆ ಅಲೆಯುತ್ತ, ಹತ್ತುಮಂದಿ ಕೂಡಿ ಹತ್ತು ಕಂಠಗಳಲ್ಲಿ ದಶಕಂಠನಂತೆ ಹಾಡುತ್ತ, ಕೇಳುವವರ ತಲೆ ಹತ್ತು ಹೋಳಾಗುವಂತೆ ಊರತುಂಬ ಗುಲ್ಲೆಬ್ಬಿಸುವುದು ನಮ್ಮದೇ ಆದ ಒಂದು ವೈಶಿಷ್ಟ್ಯ! ಇಂತಹ ರೂಢಿಯಲ್ಲಿಯೆ ಒಂದು ಮಟ್ಟ- ಒಂದು ಕಟ್ಟು ಇರಿಸಿಕೊಂಡು, ಹೊಸ ರೀತಿಯನ್ನು ವಾಡಿಕೆಗೊಳಿಸುವುದು ಅಶಕ್ಯವೇನೂ ಅಲ್ಲ. ಆದರೆ ಆ ನಿಟ್ಟಿನಲ್ಲಿ ಯಾವ ದೃಷ್ಟಿಯೂ ಹೊರಳಲಿಲ್ಲ. ರಾಷ್ಟ್ರಗೀತ ಹಾಡುವ ಬಗೆಯ ಮಾತು ಬದಿಗಿರಲಿ, ರಾಷ್ಟ್ರಗೀತವೇ ಯಾವುದಾಗಬೇಕೆಂಬುದು ಪಾಕಿಸ್ತಾನದ ಪ್ರಶ್ನೆಯಂತೆಯೇ, ಸಂಪೂರ್ಣ ಸ್ವಾತಂತ್ರ್ಯದ ಸಮಸ್ಯೆಯಷ್ಟೇ ಬಿಗಿಯಾಗಿ ಕುಳಿತಿದೆ. ಇವು ಯಾವುವೂ ಅಟ್ಲಾಂಟಿಕ್ ಘೋಷಣೆಯಲ್ಲಿ ಬಂದಿಲ್ಲವಷ್ಟೇ! ಅಂತೆಯೆ ನಿರುಪಾಯವಾಗಿದೆ! ಹರಿಪುರಾ ಅಧಿವೇಶನದಲ್ಲಿ "ರಾಷ್ಟ್ರಗೀತ" ವನ್ನು ಗೊತ್ತುಪಡಿಸುವ ಕುರಿತು ಒಂದು ಗೊತ್ತುವಳಿಯಾಗಿತ್ತು; ಒಂದು ಸಮಿತಿಯೂ ಉಂಟಾಗಿತ್ತು! ಆದರೆ "ಕಾರ್ಯ ಬಾಹುಳ್ಯ" ದ ಮೂಲಕವೇನೊ, ಆ ಚಿಕ್ಕ ಕೆಲಸ ಹಾಗೆಯೆ ಬಿದ್ದುಹೋಯಿತು. ನಡುವೆ ಈ ಹಾಳು ಯುದ್ಧ ಅಡ್ಡ ಬಂದಿತು. ಮೇಲಾಗಿ, ಹಿಂದುಸ್ತಾನವು ಒಂದು ರಾಷ್ಟ್ರವೆಂಬುದೇ ಇನ್ನೂ ನಿರ್ಣಯವಾಗಿಲ್ಲ; ಎಂದಮೇಲೆ ಗೀತವೆಲ್ಲಿಯದು?

ನಮ್ಮ ರಾಷ್ಟ್ರಗೀತದ ಸಮಸ್ಯೆಯು ಮೂರು ಪ್ರಶ್ನೆಗಳನ್ನೊಳಗೊಂಡಿದೆ:- (೧) ರಾಷ್ಟ್ರಗೀತವು ಹೇಗಿರಬೇಕು? - ಇದು ಮೂಲಭೂತ ಪ್ರಶ್ನೆ. (೨) ಈಗ ಇದ್ದ ರಾಷ್ಟ್ರಗೀತವು ಯೋಗ್ಯವಿದೆಯೆ? - ಇದು ಸದ್ಯ ಭೂತದಂತೆ ಬಾಧೆಗೆ ಮುಳುವಾದ ಪ್ರಶ್ನೆ. (೩) ರಾಷ್ಟ್ರಗೀತವು ಒಂದಿರಬೇಕೋ ಹಲವಿರಬೇಕೋ?- ಅರ್ಥಾತ್ ಇದು ಭಾರತದ ಭಾವೀ ಪ್ರಾಂತ ರಚನೆಯ ಕುರಿತು ಏಳುವ ಪ್ರಶ್ನೆ. ಇವುಗಳ ಕುರಿತು ಸ್ಥೂಲವಾಗಿ ಕೆಲವು ವಿಚಾರಗಳನ್ನು ಇಲ್ಲಿ ಮಂಡಿಸಬೇಕಾಗಿದೆ.

ರಾಷ್ಟ್ರಗೀತವು ಹೇಗಿರಬೇಕು? ಇದು ಅತ್ಯಂತ ಮಹತ್ತ್ವದ ಪ್ರಶ್ನೆ. ಏಕೆಂದರೆ ಈ ಪ್ರಶ್ನೆಯ

ಮೇಲೆಯೆ ಮುಂದಿನವು ನಿಂತಿವೆ. ರಾಷ್ಟ್ರಗೀತದ ಉದ್ದೇಶವೇ ಅದರ ರೂಪವನ್ನು ಗೊತ್ತುಪಡಿಸುತ್ತದೆ. ಒಂದು ಜನಾಂಗದ ಉತ್ಸಾಹವನ್ನು ಕುದುರಿಸಿ, ಅದನ್ನು ಉದ್ಯೋಗಕ್ಕೆ ಹೂಡಿ, ಉತ್ಕರ್ಷದ ಗುರಿಗೆ ರಾಷ್ಟ್ರದ ರಥವು ನುಗ್ಗಿ ನಡೆಯುವಂತೆ ಮಾಡುವ ಸ್ಫೂರ್ತಿ ರಾಷ್ಟ್ರಗೀತದಲ್ಲಿ ಇರಬೇಕು. ಈ ಉದ್ದೇಶವು ಕೈಗೂಡಬೇಕಾದರೆ - ಜನಾಂಗದ ಕೊರಳಲ್ಲಿ ಆ ಗೀತವು ಸುಗಮವಾಗಿ ಇಳಿಯುವಂತಹದಿರಬೇಕು. ಅವರ ಮಿದುಳಿನಲ್ಲಿ ಅದರ ಹುರುಳು ಸುಲಭವಾಗಿ ಹೊಳೆಯುವಂತಹ ದಿರಬೇಕು. ಎಂದರೆ ಹಾಡಿನ ಶೈಲಿಯಲ್ಲಿ ಸುಬೋಧತೆ ಸರಳತೆಗಳು ತುಂಬಿ ತುಳುಕಬೇಕು. ಹೇಳಿದ ಮಾತ್ರಕ್ಕೆ ಕೇಳಿದ ಕೂಡಲೆ ಮನಮುಟ್ಟುವ ಮತ್ತು ಎದೆತಟ್ಟುವ ರೀತಿಯಲ್ಲಿ ಹಾಡಿನ ರಚನೆಯೂ ಭಾವದ ವ್ಯಂಜನೆಯೂ ಇರಬೇಕು. ಆದರೆ ಇದೆಲ್ಲ ಸಪ್ಪಗೆ ಗದ್ಯದಂತೆ ಆಗಬಾರದು; ಅದರಲ್ಲಿ ಕಾವ್ಯದ ಕಾವು ಭಾವದ ಬೆಳಕಿನೊಂದಿಗೆ ಬೆರೆತು ಬೆಳಗಬೇಕು. ಹಾಡುವ ಮತ್ತು ಕೇಳುವ ಎದೆಗಳು ಹಿಗ್ಗುವಂತೆ ಬಿಚ್ಚುವಂತೆ ಉತ್ತೇಜನವು ತುಂಬಿರಬೇಕು. ರಾಷ್ಟ್ರೀಯತೆಯ ಆವೇಶ, ರಾಷ್ಟ್ರಕಾರ್ಯದ ಆವೇಶ ಇವೆರಡೂ ಅಂತಹ ಗೀತದ ವಾದಿ-ಸಂವಾದಿ ಸ್ವರಗಳಂತಿರಬೇಕು.

ಜಗತ್ತಿನ ಉತ್ತಮ ರಾಷ್ಟ್ರಗೀತಗಳಲ್ಲಿ ಇವೆಲ್ಲ ಲಕ್ಷಣಗಳು ಕಾಣುತ್ತವೆ. ಇಂತಹ ಅತ್ಯಂತ ಉತ್ತೇಜಕವಾದ ಗೀತವೆಂದರೆ ಫ್ರೆಂಚ್ ರಾಷ್ಟ್ರಗೀತವು. ಇಂದಿನ ದೀನ-ದಲಿತ ಫ್ರೆಂಚ್ ಜನತೆಯನ್ನು ನೆನೆದುಕೊಂಡಾಗ, ಅವರ ಅಂತಹ ಉದ್ದಾಮ ಉದ್ದೀಪಕವಾದ ರಾಷ್ಟ್ರಗೀತಕ್ಕೆ ಒಂದು ಕರುಣಾಮಯ ಭಾವವು ಆವರಿಸುವಂತೆ ಎನಿಸುತ್ತದೆ. ಆ ರಾಷ್ಟ್ರಗೀತದ ಹೆಸರು "ಮಾರ್ಸೆಲಾಝ್" ಎಂದು. ಅದನ್ನು ರಚಿಸಿದ ಕವಿಯು ಕ್ಲಾಡ್ ಜೊಸೆಫ್ ರೋಗದ್ ಲೆಸ್ಲಿ ಎಂಬವನು. ಆ ರಾಷ್ಟ್ರಗೀತದ ಶಕ್ತಿಯ ಕುರಿತು ಓರ್ವ ಫ್ರೆಂಚ್ ಸೇನಾಪತಿಯು ಹೀಗೆಂದನು: "ಈ ಹಾಡು, ಒಂದು ಸಾವಿರ ಹೊಸ ಹುರುಪಿನ ಸೈನಿಕರಷ್ಟು ಪರಿಣಾಮಕಾರಿಯಾಗಿದೆ!". ಓರ್ವ ಜರ್ಮನ್ ಕವಿಯು ಈ ಗೀತವನ್ನು ಕುರಿತು ಹೀಗೆ ಉದ್ಗಾರ ತೆಗೆದನು: "ಈ ಹಾಡು ಐವತ್ತು ಸಾವಿರ ಜರ್ಮನರ ಸಾವಿಗೆ ಮುಳುವಾಯಿತು!" ಕಾವ್ಯವೇ ಕತ್ತಿಯಾದಲ್ಲಿ ಕಲಿತನವು ಬೇರೆ ಬೇಕೇ?

ಈ ಹಾಡು ಹುಟ್ಟಿದ್ದೂ ತೀರ ಅಕಲ್ಪಿತವಾಗಿ. ೧೭೯೨ರಲ್ಲಿ ಫ್ರಾನ್ಸ್ ದೇಶದಲ್ಲಿ ರಾಜ್ಯಕ್ರಾಂತಿಯ ಪ್ರಚಂಡ ಅಗ್ನಿಪ್ರಲಯವು ಹಬ್ಬಿತ್ತು. ಆಗ ಒಂದು ಚಿಕ್ಕ ದಂಡು ಸ್ಟ್ರೆನ್‌ಬರ್ಗ್ ಪಟ್ಟಣದಿಂದ ಹೊರಡುವುದಿತ್ತು. ಆ ದಂಡಿನ ಪ್ರೀತ್ಯರ್ಥವಾಗಿ ಅಲ್ಲಿಯ ನಗರಸಭೆಯ ಅಧ್ಯಕ್ಷರು ಒಂದು ಮೇಜವಾನಿಯನ್ನಿತ್ತರು. ದಂಡು ಕೂಚುಮಾಡುವಾಗ ಹುರಿದುಂಬಿಸಲು ಹಾಡುವಂತಹ ಸರಿಯಾದ ಹಾಡುಗಳೇ ಇಲ್ಲವೆಂದು, ಅಧ್ಯಕ್ಷರು ತಮ್ಮ ಭಾಷಣದಲ್ಲಿ ದೂರಿಕೊಂಡರು. ನೆರೆದ ಸೈನಿಕರಲ್ಲಿ ಕ್ಲಾಡ್ ಜೊಸೆಫ್ ರೋಗದ್ ಲೆಸ್ಲೀ ಎಂಬ ತರುಣ ದಳವಾಯಿಯೊಬ್ಬನು ಈ ಮಾತು ಕೇಳಿದನು. ಆಯಿತು. ಆ ರಾತ್ರಿ ಆ ಉತ್ಸಾಹಿ ತರುಣನಿಗೆ ನಿದ್ದೆಯೆ ಇಲ್ಲ. ಅವನು ಕೆಲಮಟ್ಟಿಗೆ ಕವಿಯೂ ಸಂಗೀತಗಾರನೂ ಆಗಿದ್ದನು. ಮರುದಿನ ಹಗಲಾಗುವುದರೊಳಗೆ, ರೋಗದ್ ಲೆಸ್ಲಿಯು ತನ್ನ ಹಾಡನ್ನು ಕಟ್ಟಿ,ಬರೆದು ಹಾಡಿ ಕಾಣಿಸಿದನು! ಆ ಹಾಡಿನ ಗತ್ತಿಗೆ ಕ್ರಾಂತಿಯೇ ಹೆಜ್ಜೆಯಿಟ್ಟು ಕುಣಿಯಿತು!

ಅಂದಿನ ಸಭೆಯು ಮುಗಿಯುವುದರೊಳಗೆ, ಆ ಹಾಡನ್ನು ಕೇಳಿ ಹುರುಪಿನಿಂದ ಹುರಿದುಂಬಿ ೪೦೦ ಹೊಸ ತರುಣರು ದಂಡಿಗೆ ಸೇರಿದರು. ಬಾಯಿಂದ ಬಾಯಿಗೆ ದಂಡಿನಿಂದ ದಂಡಿಗೆ ದೇಶದಲ್ಲೆಲ್ಲ ಹಾಡು ಕಾಡುಕಿಚ್ಚಿನಂತೆ ಹಬ್ಬಿತು. ಪ್ಯಾರೀಸ್ ರಾಜಧಾನಿಯನ್ನು ರಕ್ಷಿಸುವುದಕ್ಕಾಗಿ

ಮಾರ್ಶೆಲ್ಸ್‌ದ ರಾಷ್ಟ್ರೀಯ ಸಂರಕ್ಷಕ ದಂಡು ಹೊರಟಿತು. ನೂರಾರು ಮೈಲು ದಾರಿಯುದ್ದಕ್ಕೂ ರೋಗದ್ ಲೆಸ್ಲಿಯ ಆ ಹಾಡನ್ನು ಹಾಡುತ್ತ ಆ ಪ್ರಸಿದ್ಧ ದಂಡು ಕೂಚುಮಾಡಿತು. ದಾರಿಗುಂಟ ಹಳ್ಳಿ-ಪಟ್ಟಣಗಳಲ್ಲೆಲ್ಲ ಅವರನ್ನು ಕಾಣಲು ನೆರೆದ ಜನಸಮುದಾಯವೆಲ್ಲ, ಮೊದಲೇ ಲೋಕಪ್ರಿಯವಾದ ಆ ಹಾಡಿನ ಪಲ್ಲವಿಯನ್ನು, ದಂಡಿನೊಂದಿಗೇ ಒಕ್ಕೊರಲಿನಿಂದ ಹಾಡುತ್ತಿದ್ದರು! ಹಾಡಿನ ಮೂಲವು ಎಲ್ಲಿಯದೆಂದು ತಿಳಿಯದೆ, ಮಾರ್ಶೆಲ್ಸ್‌ದ ದಂಡು ತಂದ ಹಾಡೆಂದು, ಆ ಗೀತವು ದೇಶದ ತುಂಬೆಲ್ಲ "ಮಾರ್ಸೆಲಾಯ್ಝ್" ಎಂದು ಹೆಸರು ಪಡೆಯಿತು. ದಂಡಿನ ಹಾಡು ರಾಷ್ಟ್ರಗೀತವಾಯಿತು. ಒಂದು ಕವಿತೆ ಬರೆದು ರೋಗದ್ ಲೆಸ್ಲಿಯು ಅಜರಾಮರನಾದನು! "ಮಾರ್ಸೆಲಾಯ್ಝ್' ರಾಷ್ಟ್ರಗೀತವೇ ಹಾಗೆ ನೆತ್ತರ ಕುದಿಸುವಂತಹದಿದೆ! ಫ್ರೆಂಚರು ಆ ಹಾಡನ್ನು ಕೇಳಿದರೆ, ಮಿಂಚು ಸಂಚರಿಸಿದಂತೆ ಪರವಶರಾಗುತ್ತಾರೆ! ರಶಿಯನ್ನರ ರಾಷ್ಟ್ರಗೀತವೂ ಅಂತರ್‌ರಾಷ್ಟ್ರೀಯ ಗೀತವೂ ಹಾಗೆಯೆ ರೋಮಾಂಚಕಾರಿಯಾದ ಉತ್ತೇಜನದಿಂದ ತುಂಬಿವೆ! ಅಂತರ್‌ರಾಷ್ಟ್ರೀಯ ಗೀತವು ಜಗತ್ತಿನ ಎಲ್ಲ ಮುಂದುವರೆದ ದೇಶಗಳಲ್ಲಿ ಮುಂದುವರೆದ ಭಾಷೆಗಳಲ್ಲಿ ಅನುವಾದಿಸಿ ಹಾಡಲಾಗುತ್ತದೆ. ಅದು ಜಗತ್ತಿನ ಸಾಮ್ಯವಾದಿಗಳ ಯುದ್ಧಗೀತ. ಯಾವ ಭಾಷೆಯಲ್ಲಿದ್ದರೂ ಅದರ ಭಾವ ಒಂದೇ, ಅರ್ಥ ಒಂದೇ. ಅದೇಕೆ, ರಾಗ-ತಾಲಗಳು ಕೂಡ ಒಂದೇ! ಅಖಿಲ ವಿಶ್ವ ದಲಿತ ಮಾನವರ ದುಃಖವಿಮೋಚನೆಯ ಅಖಂಡ ಆಹ್ವಾನವನ್ನು ಕೊಡುವ ಆ ಗೀತವು ಎಷ್ಟೊಂದು ಹೃದಯಸಂವಾದವನ್ನು ಬಾಂಧವ್ಯ-ಮಾನವ್ಯಗಳನ್ನು ಉಂಟುಮಾಡುತ್ತಿರ ಬಹುದು!

ಈ ದೃಷ್ಟಿಯಿಂದ ನಮ್ಮ ರಾಷ್ಟ್ರಗೀತವು ತೀರ ನಿರ್ಜೀವವೆನಿಸುತ್ತದೆ! ಈ ಮಾತು ನಮ್ಮ ಎರಡನೆಯ ಪ್ರಶ್ನೆಯನ್ನು ಎಬ್ಬಿಸುತ್ತದೆ. ನಮ್ಮ ರಾಷ್ಟ್ರಗೀತದ ಹುಟ್ಟೇ ಕಲ್ಪನಾಲೋಕದ್ದಾಗಿದೆ. ಅದನ್ನು ಬರೆದ ಕವಿಗೆ ಕೂಡ ಅದರ ಭವಿಷ್ಯ ಗೊತ್ತಿದ್ದಿಲ್ಲ. ಬಂಗಾಲದ ಆದಿ ಕಾದಂಬರಿಕಾರರಾದ ಭಂಕಿಮ ಚಂದ್ರರ "ಆನಂದಮಠ" ಎಂಬ ಕಾದಂಬರಿಯಲ್ಲಿ ಒಂದು ತುಂಟ ಸಂನ್ಯಾಸಿಗಳ ಪಡೆಯು ಬರುತ್ತದೆ. ಅವರು ತಮ್ಮ ಕಾಲೀದೇವಿಯನ್ನು ಕುರಿತು ಗವಿಯಲ್ಲಿ ಹಾಡುವ ಪ್ರಾರ್ಥನೆಯಿದು. ಅದು ಬರಿಯೆ ದೇವೀಸ್ತವನವಲ್ಲವೆಂಬುದು ಹಾಡಿನ ಅರ್ಥದಿಂದ ಸ್ಪಷ್ಟವಾಗುತ್ತದೆ. ಆದರೆ ಅದು ರಾಷ್ಟ್ರಗೀತವಾದದ್ದು ತೀರ ಯೋಗಾಯೋಗದಿಂದ. ವಂಗಭಂಗ ಪ್ರಕರಣದಲ್ಲಿ ಬಂಗಾಲಿಗಳು ಅದನ್ನು ತಮ್ಮ ವಂಗದೇವಿಯ ಆಹ್ವಾನಕ್ಕಾಗಿ ಪ್ರಚಾರದಲ್ಲಿ ತಂದರು. ಮುಂದೆ ಭಾರತೀಯ ಸ್ವಾತಂತ್ರ್ಯದ ಆಂದೋಲನವೂ ಬಂಗಾಲದಿಂದಲೇ ಪ್ರೇರಣೆ ಪಡೆದುದರಿಂದ, ಆ ಗೀತವು ಸರ್ವತೋಮುಖವಾಯಿತು. ನಿಜವಾಗಿಯೂ "ವಂದೇ ಮಾತರಂ" ಇದು ಒಂದು ರಮ್ಯವಾದ ಗೀತ. ಆದರೆ ಅದು ರಾಷ್ಟ್ರೀಯ ಆಂದೋಲನೆಯ ದಂಡಿನ ಕಿಷ್ಕಿಂಧೆಯಲ್ಲಿ ಹಾಡಲು ನೀರಸವು. ಸ್ವತಂತ್ರ ಭಾರತದ ಸೌಭಾಗ್ಯ ಲಕ್ಷ್ಮಿಯ ಆರಾಧನೆಯ ಅಯೋಧ್ಯೆಯಲ್ಲಿ ಹಾಡಲೇ ಅದು ಚೆಂದ. ರಾಷ್ಟ್ರಗೀತವಾಗಲು ಅದು ಕೆಲವು ಮುಖ್ಯ ಕಾರಣಗಳ ಮೂಲಕ ಯೋಗ್ಯವಲ್ಲ. ೧. ಅದು ಕೇವಲ ಭೌಗೋಲಿಕ ವರ್ಣನೆಯನ್ನೂ ಪ್ರಾದೇಶಿಕ ಪ್ರಶಸ್ತಿಯನ್ನೂ ಒಳಗೊಂಡಿದೆ. ಮೂಲತಃ ಅದು ಬರಿಯೆ ಬಂಗಾಲದ "ಸುಜಲ ಸುಫಲ ಸಸ್ಯಶಾಮಲ" ಭೂಮಿಯನ್ನು ಕಣ್ಣೆದುರಿಟ್ಟುಕೊಂಡು ಬರೆದುದಾಗಿತ್ತು. ಈಗಲಾದರೂ ಇವಿಷ್ಟು ಲಕ್ಷಣಗಳುಳ್ಳ ಯಾವುದೇ ಬೆಳೆಯುಳ್ಳ ಪ್ರದೇಶಕ್ಕೆ ಅದು ಅನ್ವಯಿಸಬಹುದಾಗಿದೆ. ರಾಷ್ಟ್ರಗೀತೆಯಲ್ಲಿ ಭೂಮಿಯ ವರ್ಣನೆ ಬರಬಾರದೆಂತಲ್ಲ; ಆದರೆ ಹಾಗೆ ಬಂದಲ್ಲಿ ಅದು ರಾಷ್ಟ್ರದ ಮಹತ್ತ್ವದ ವೈಶಿಷ್ಟ್ಯಗಳನ್ನು ಉಲ್ಲೇಖಿಸಿರಬೇಕು. ಈ ದೃಷ್ಟಿಯಿಂದ ಕವೀಂದ್ರ ರವೀಂದ್ರರ "ದೇವೀಭುವನ ಮನಮೋಹಿನಿ!"

ಎಂಬ ಗೀತವೂ ಡಾ. ಇಕ್ಬಾಲರ "ಸಾರೇ ಜಹಾಂಸೆ ಅಚ್ಛಾ" ಎಂಬ ಸ್ಫೂರ್ತಿಮಯ ಗೀತವೂ ರಾಷ್ಟ್ರಗೀತವಾಗಲು ಹೆಚ್ಚು ಯೋಗ್ಯವಿರುತ್ತವೆ. ಇವುಗಳಲ್ಲಿಯೂ ಇಕ್ಬಾಲರ ಗೀತವು ಹಿಂದುಸ್ತಾನಿಯಲ್ಲಿ ಇದ್ದುದರಿಂದ, ಅದರ ಪ್ರಚಾರವು ರಾಷ್ಟ್ರೀಯತೆಗೆ ಹೆಚ್ಚು ಪೋಷಕವಾಗಿದೆ. ೨. ನಮ್ಮ ರಾಷ್ಟ್ರಗೀತವು ತೀರ ಸಂಸ್ಕೃತ ಪ್ರಚುರ ವಂಗ ಭಾಷೆಯಲ್ಲಿದೆ. ಸದ್ಯಕ್ಕೆ ಬಳಕೆಯಲ್ಲಿದ್ದ ಚರಣಗಳಂತೂ ಕೇವಲ ಸಂಸ್ಕೃತವೇ ಆಗಿವೆ. ಇದರಿಂದ ಎರಡು ಹಾನಿಗಳಿವೆ: ಅಜ್ಞ ಜನತೆಗೆ ಯಾವ ಅರ್ಥಸ್ಫೂರ್ತಿಯೂ ಸಿಗುವುದಿಲ್ಲ; ಹೆಚ್ಚಿನ ತೊಡಕೆಂದರೆ, ಸಂಸ್ಕೃತವು ಹಿಂದೂ ಸಂಸ್ಕೃತಿಯ ವಾಹಕವಾದುದರಿಂದ, ಇಸ್ಲಾಮೀ ಸಂಸ್ಕೃತಿಯ ಜನಾಂಗಕ್ಕೆ ಅದು ಅಸಹ್ಯವೆನಿಸ ಬಹುದು - ಎನಿಸುತ್ತದೆ, ಜಾತಿವಾದದ ನಂಜಿನ ಸುಳಿಯಲ್ಲಿ ಸುತ್ತಾಡುವ ನಮ್ಮ ರಾಜಕಾರಣಕ್ಕೆ ಹೊಸದೊಂದು ತಲೆತಿರುಕತನದ ತಿರುಗಣೆಯನ್ನು ಕೊಟ್ಟಂತಾಗುತ್ತದೆ. ೩. ಅರ್ಥಸ್ಫೂರ್ತಿಯ ದೃಷ್ಟಿಯಿಂದ ಈಗ ಹಾಡಲಾಗುವ ಭಾಗವು ತೀರ ಸಾಮಾನ್ಯವಿದೆ. ಮುಂದಿನ ನುಡಿಗಳು ಒಳ್ಳೇ ಆದೇಶಯುಕ್ತವಿದೆ. ಆದರೆ ಅವು ನಿರ್ವಿವಾದವಾಗಿ ಮೂರ್ತಿ ಪೂಜಕತೆಯ ಕಡೆಗೆ ಒಲಿದಿವೆ. ಇಲ್ಲಿಯೂ ರಾಷ್ಟ್ರಗೀತವಾಗುವ ಮಾರ್ಗದಲ್ಲಿ ಇಸ್ಲಾಮೀ ಸಂಸ್ಕೃತಿಯು ಅಡ್ಡ ನಿಲ್ಲುತ್ತದೆ. ೪. ಮುಖ್ಯ ಮಾತೆಂದರೆ ನಮ್ಮ ಈಗಿನ ರಾಷ್ಟ್ರಗೀತವು ಗತಿಮಯ (Dynamic) ವಿರುವುದಿಲ್ಲ. ಅದರಲ್ಲಿ ಓಜಸ್ವಿತೆಗಿಂತ ಮಾಧುರ್ಯವೆ ಹೆಚ್ಚಿದೆ. ಸಮುದಾಯದ ಕಲಕಂಠಕ್ಕಿಂತ ಸಂಗೀತಗಾರನ ಕೋಕಿಲಕಂಠಕ್ಕೇ ಅದು ಹೆಚ್ಚು ಒಪ್ಪುತ್ತದೆ. ಚೇತರಿಸುವ ಜನಾಂಗದ ಚೈತನ್ಯಮಯವಾದ ಚಾಂಚಲ್ಯವು ಅದರಲ್ಲಿ ಮೂಡಿಲ್ಲ. "ವಂದೇ ಮಾತರಂ" ಗೀತಕ್ಕೆ ಜನಪ್ರಿಯತೆಯು ಅದರ ಹುರುಳು ಹುರುಪುಗಳಿಂದ ಬಂದಿಲ್ಲ; ಅದನ್ನು ಹಾಡಿಹೋದ ಹುತಾತ್ಮರ ಸ್ಮೃತಿಯಿಂದ. ಪರರಾಷ್ಟ್ರಗಳವರು ನಮ್ಮ ಗೀತದಲ್ಲಿ ಯಾವ ಪ್ರಭಾವವನ್ನೂ ಪಡೆಯಲಾರರು; ಯಾವ ಪ್ರತಾಪವನ್ನೂ ನೋಡಲಾರರು! ರವೀಂದ್ರರ "ಜನಗಣ ಮನ ಅಧಿನಾಯಕ" ಎಂಬ ಗೀತವು ಹೆಚ್ಚು ಸ್ಫೂರ್ತಿದಾಯಕವಾಗಿದೆ. ಆದರೆ ಅದರಲ್ಲಿಯ ಕಾವ್ಯಶೈಲಿಯು ಜನಗಣ ಮನಕ್ಕೆ ತಿಳಿಯದಂತಹದಾಗಿನೆ. ಇದ್ದುವುಗಳಲ್ಲಿ ತಿಳಿಯಾದ ರಾಷ್ಟ್ರಗೀತವಾಗಲು ಯೋಗ್ಯವಾದ ಗೀತವೆಂದರೆ ನಮ್ಮ "ಧ್ವಜಗೀತ"; ಆದರೆ ಅದರಲ್ಲಿಯೂ ಒಂದು ನ್ಯೂನವಿದೆ. "ವಿಶ್ವವಿಜಯ" ಮಾಡಿ ಕಾಣಿಸಿಯೇ ತಮ್ಮ "ಪಣವನ್ನು ಪೂರ್ಣ" ಮಾಡುವ ಮಹದಾಂಕ್ಷೆಯು, ನಮ್ಮ ರಾಷ್ಟ್ರೀಯತೆಯಲ್ಲಿ ಹುದುಗಿದ ಭಾವೀ ಸಾಮ್ರಾಜ್ಯವಾದಿತ್ವವನ್ನು ಸೂಚಿಸುವಂತಿದೆ. ಇಲ್ಲವಾದರೆ ಆ ಪದ್ಯವೇ ಸದ್ಯಕ್ಕೆ ನಮ್ಮ ರಾಷ್ಟ್ರಗೀತವಾಗಲು ತಕ್ಕುದಿದೆ. ಆದರೂ ಅದರ ಸ್ವರರಚನೆಯು ಉತ್ಸಾಹಭರಿತವಾಗಿಲ್ಲ. ಹೆಚ್ಚು ವೇಗ, ಹೆಚ್ಚಿನ ವೀರವೃತ್ತಿ ಧಾಟಿಯಲ್ಲಿ ಸೇರುವಂತೆ ಅದರ ಗತ್ತು ಕಟ್ಟಬೇಕು. ಆದರೆ ಇದು ಅಶಕ್ಯಪ್ರಾಯವೇ.

ಆದ್ದರಿಂದ ನಮಗೆ ಹೊಸದೊಂದು ರಾಷ್ಟ್ರಗೀತವಾಗಬೇಕು. ಅದರ ಅನುವಾದ ಎಲ್ಲ ಪ್ರಾಂತೀಯ ಭಾಷೆಗಳಲ್ಲಿ ಒಂದೇ ಧಾಟಿಯಲ್ಲಿ ಆಗಬೇಕು. ಅದರಲ್ಲಿಯ ಭಾವನೆಯು ಪ್ರಾತಿನಿಧಿಕವಿರಬೇಕು. ದಲಿತ ಜನಾಂಗವನ್ನು ಜಾಗ್ರತಗೊಳಿಸಿ; ಜಾಗ್ರತರನ್ನು ಸಜ್ಜುಗೊಳಿಸಿ, ಸಜ್ಜನರನ್ನು ಸಿದ್ಧಿಗೆ ಒಯ್ಯುವಂತೆ ಅದು ಇರಬೇಕು. ಇದು ನಮ್ಮ ಮೂರನೆಯ ಪ್ರಶ್ನೆಯ ಬಗಗೆಹರಿಕೆ.

●

('ಜಯಂತಿ' ೧೯೪೩)

# ಆರು ಹಿತವರು ನಿನಗೆ ಈ ಮೂವರೊಳಗೆ?

## ಜೀವನವೋ? ಶಿಕ್ಷಣವೋ? ಹಿಂದಿ-ಇಂಗ್ಲಿಷೋ?

ಮೈಸೂರು ಸರಕಾರವು ಪ್ರಾಥಮಿಕ ಶಾಲೆಗಳಿಗಾಗಿ ಹೊಸ ಅಭ್ಯಾಸಪತ್ರಿಕೆಯ ಕರಡನ್ನು ಇದೀಗ ಪ್ರಕಟಿಸಿದೆ. ಮತ್ತು ಇದನ್ನು ಸಾಂಗೋಪಾಂಗವಾಗಿ ಚರ್ಚಿಸಿ ಆ ಕುರಿತು ತಮ್ಮ ವಿವರವಾದ ತಿದ್ದುಪಡಿಯ ಸೂಚನೆಗಳನ್ನು ಅಧಿಕೃತವಾಗಿ, ಸಾರ್ವತ್ರಿಕರು ಸರ್ವಸಮ್ಮತವಾಗಿ ವ್ಯಕ್ತಪಡಿಸಬೇಕೆಂದು ನಮ್ಮ ಜಿಲ್ಹೆಯಲ್ಲಿ ಅಲ್ಲಲ್ಲಿ ಪ್ರಾಥಮಿಕ ಶಾಲಾ ಮುಖ್ಯಾಧ್ಯಾಪಕರ ವಿಚಾರಸಂಕಿರಣಗಳು ಏರ್ಪಡಿಸಲಾದವು. ಇಂಥ ಒಂದು ಸಂಕಿರಣದ ಒಂದು ದಿನದ ಚರ್ಚೆಯಲ್ಲಿ ಘನಿಷ್ಠವಾಗಿ ಭಾಗವಹಿಸುವ ಸುಯೋಗ ನನ್ನದಾಗಿತ್ತು. ಅಲ್ಲಿ ನಡೆದ ಚರ್ಚೆ ಆ ಮೂಲಕ ನನ್ನನ್ನು ಚಿಂತನೆಗೆ ಒಳಪಡಿಸಿದ ಪ್ರತಿಕ್ರಿಯೆಗಳು ಇವೆರಡರಿಂದಲೂ ಒಡಮೂಡಿದ ಒಂದು ವಿಚಾರ ಭೂಮಿಕೆ ಇಂದು ಓದುಗರ ಮುಂದೆ ಇಡುತ್ತಿದ್ದೇನೆ. ಚರ್ಚೆಯಲ್ಲಿಯೇ ಒಪ್ಪಿಕೊಂಡಂತೆ ಇದೊಂದು "loud thinking" ದೊಡ್ಡ ದನಿಯಲ್ಲಿ ನಡೆದ "ಸ್ವಗತ" ವಿಚಾರ. ೫೦ ಮಂದಿ ಮುಖ್ಯಾಧ್ಯಾಪಕರ ನಡುವೆ ನಡೆದ ವಿಚಾರಮಂಥನ ಇಡಿಯ ಪ್ರಾಥಮಿಕ ಶಿಕ್ಷಕರ ಪ್ರಜ್ಞಾ-ಪ್ರಪಂಚಕ್ಕೆ ಅಷ್ಟೇ ವಿಚಾರಣೀಯವೆನಿಸಬಹುದಷ್ಟೇ? ಅಂತೆಯೇ ಆ ಚರ್ಚೆಯ ಚರ್ವಣ ಇಲ್ಲಿ ಇನ್ನೊಮ್ಮೆ ಮಾಡುತ್ತಿದ್ದೇನೆ.

### ಮೆಹರಬಾನ ಸಾಹೇಬರ ವರ್ಚಸ್ಸು

ಮೊದಲಿಗೆ ಇಂಥ ಒಂದು ಉಪಕ್ರಮ - ಅಭ್ಯಾಸಪತ್ರಿಕೆಯನ್ನಿಟ್ಟುಕೊಂಡು ಮುಖ್ಯಾಧ್ಯಾಪಕರ ಮಂಡಳಗಗಳು ಅಭ್ಯಸಿಸಿ ವಿಮರ್ಶಿಸಿ ಚರ್ಚಿಸುವ ಅನುವು ಒದಗಿಸಿಕೊಡುವ ಈ ಯೋಜನೆ - ಅತ್ಯಂತ ಸ್ವಾಗತಾರ್ಹ. ಆದರೆ ಎಂಥ ಸುತ್ತ್ಯ ಕ್ರಮವಾದರೂ ಸರಕಾರೀ ದಪ್ತರಿನ ದಾರದ ಸುತ್ತುಗಳಲ್ಲಿ ಸುಸುಳಿ ಬರುವಂತಾದರೆ ಅದರ ವಿಡಂಬನೆಯಾಗದೆ ಉಳಿಯುವುದೇ ಸೋಜಿಗ! ನನ್ನ ತಿಳುವಳಿಕೆಯ ಮಟ್ಟಿಗೆ ಹೊಸ ಅಭ್ಯಾಸ ಪತ್ರಿಕೆಯ ಕರಡು ಈ ಸೆಮಿನಾರುಗಳಿಗೆ ಬರುವ ಮುಖ್ಯಾಧ್ಯಾಪಕರಿಗೇ ಎಲ್ಲರಿಗೂ ಸಾಕಷ್ಟು ಅವಧಿ ಪೂರ್ವದಲ್ಲಿಯೇ ಕೈ ಸೇರಿದ್ದಿಲ್ಲ. ಮತ್ತು ಸಾಮಾನ್ಯವಾಗಿ ಪ್ರಾಥಮಿಕ ಶಿಕ್ಷಣರಂಗದಲ್ಲಿ ವಜ್ರಲೇಪವಾಗಿ ಬಂದ ಶಿಕ್ಷಣಾಧಿಕಾರಿಗಳ "ಮೆಹರಬಾನ ಸಾಹೇಬರ" ವರ್ಚಸ್ಸಿನ ಪಟಲವು ಎಷ್ಟು ಭಾದಿ ಎಂಬುದನ್ನು ನೆನೆದುಕೊಂಡರೆ ಸೆಮಿನಾರಿಗೆ ಬಂದ ಮುಖ್ಯಾಧ್ಯಾಪಕರಿಗೆ ಸ್ವತಂತ್ರವಾಗಿ ನಿರ್ಭಿಡೆ - ನಿರ್ಭಯವಾಗಿ ವಿಚಾರ ಮಾಡುವ, ತಮ್ಮ ಬುದ್ಧಿಗೆ ಪ್ರಾಮಾಣಿಕವಾಗಿ ನುಡಿಯುವ, ನಡೆಯುವ ವಾಡಿಕೆಯೇ ವಿರಳವೆಂಬುದನ್ನು ಮರೆಯದಿದ್ದರೆ, ಒಂದು ಸಂಗತಿ ಮನದಟ್ಟಾಗುವುದು.

### ಶಿಕ್ಷಕರ ಹೀನಗಂಡ

ಅಭ್ಯಾಸಪತ್ರಿಕೆಯನ್ನು ಸಾಕಷ್ಟು ಅರಗಿಸಿಕೊಂಡು ಮುಖ್ಯಾಧ್ಯಾಪಕರು ಬಂದದ್ದು ಕಡಿಮೆ. ವಿಧಾಯಕವಾಗಿ ವಿದ್ಯಾಭಿರುಚಿಯನ್ನು ಗ್ರಹಿತವಿಟ್ಟುಕೊಂಡು ವ್ಯವಹಾರದಿಂದ ಸೂಚನೆಗಳನ್ನು

ಮುಂದಿಡುವವರು ಇನ್ನೂ-ಕಡಿಮೆ. ಮುಂದಿಟ್ಟ ಸೂಚನೆಗಳನ್ನು "ಹೀಗೆ ಠರಾವು ಮಾಡುವ ಅಧಿಕಾರ ನಿಮಗಿಲ್ಲ. ಸರಕಾರದ ಧೋರಣ ನಿರ್ಧಾರವಾಗಿ ಬಿಟ್ಟಿದೆ. ಆ ಕುರಿತು ಮತ್ತೆ ಠರಾವು ಮಾಡುವುದು ಸರಿಯಲ್ಲ" - ಇತ್ಯಾದಿ ನಿಷೇಧ ಬಿಂದುಗಳನ್ನು ಎತ್ತಿ ಶಿಕ್ಷಣಾಧಿಕಾರಿಗಳು ಸೌಮ್ಯವಾಗಿಯೇ ಎಚ್ಚರಿಕೆ ಕೊಡುವಾಗ, "ಇದು ನಮ್ಮ ಖಚಿತವಾದ ಉಚಿತವಾದ ಅಭಿಪ್ರಾಯ. ಅದನ್ನು ನಾವು ಪ್ರಕಟಿಸಲು ಇಲ್ಲಿ ಬಂದದ್ದು, ಅದನ್ನು ಸರಕಾರ ಒಪ್ಪಲಿ, ಬಿಡಲಿ. ನಮ್ಮ ಕರ್ತವ್ಯ ನಾವು ಮಾಡೋಣ." ಎಂದು ಕಟ್ಟುನಿಟ್ಟಾಗಿ ಗಟ್ಟಿಮುಟ್ಟಾಗಿ ಹೇಳುವ ಮುಖ್ಯಾಧ್ಯಾಪಕರು ಇನ್ನೂ ಕಡಿಮೆ. ಯಾರೊಬ್ಬ ವಿಶಿಷ್ಟ ಅಧಿಕಾರಿಗೆ ವಿಶಿಷ್ಟ ಮುಖ್ಯಾಧ್ಯಾಪಕರು ಅಂಜುವರೆಂದಲ್ಲ. ಸೆಮಿನಾರಿನಲ್ಲಿ ವಾತಾವರಣ ಎಷ್ಟೇ ಪ್ರಸನ್ನವಿದ್ದರೂ ಪ್ರಶಾಂತವಿದ್ದರೂ ಸಂಚಾಲಕ ವರಿಷ್ಠಾಧಿಕಾರಿಗಳ ಇದುರಿಗೆ ಸೆಮಿನಾರಿನ ಸದಸ್ಯರು ಒಟ್ಟಾರೆ ಒಂದು ರೀತಿ "ಹೀನ ಗಂಡ"ದಿಂದ (Inferiority Complex) ನಡೆಯುವುದು ಅವರ ಜೀವಾವಧಿಯ ಮೈಯುಂಡ ಚಟವಾದದ್ದು ಇಲ್ಲಿಯೂ ಕಂಡು ಬರುತ್ತದೆ.

ಇದಕ್ಕೂ ವಿಶೇಷದ ಸಂಗತಿಯೆಂದರೆ ಮುಖ್ಯಾಧ್ಯಾಪಕರು ಸೆಮಿನಾರಕ್ಕೆ ಬರುವ ಮುಂಚೆ ಅಭ್ಯಾಸಪತ್ರಿಕೆಯ ಅಂಗ-ಅಂಶಗಳನ್ನು ತಮ್ಮ ಸಹ ಶಿಕ್ಷಕರೊಂದಿಗೆ ತಮ್ಮ ತಮ್ಮ ಶಾಲೆಗಳಲ್ಲಿ ಕೂಲಂಕಷವಾಗಿ ಚರ್ಚಿಸಿ ಬಂದಂತೆ ತೋರುತ್ತಿದ್ದಿಲ್ಲ. ಇದಕ್ಕೆ ಕಾರಣ ಹಿಂದೆ ಹೇಳಿದಂತೆ ಅವಧಿಯ ಕೊರತೆ ಇರಬಹುದು. ಇಲ್ಲವೆ ವರಿಷ್ಠರಿಗೆ ವಿಧೇಯವಾಗಿ ವರ್ತಿಸುವುದೇ ವಿಹಿತವೆಂದು ಒಪ್ಪಿಕೊಂಡ ಪ್ರವೃತ್ತಿಯೂ ಇರಬಹುದು.

ಏನೇ ಆದರೂ ಈ ಆರಂಭ, ಇಂಥ ಸೆಮಿನಾರುಗಳ ಉಪಕ್ರಮ ತುಂಬ ಸ್ವಾಗತಾರ್ಹ.

## ಮೂಲೋದ್ಯೋಗದ ವೇಳೆ

ನಾನು ಭಾಗವಹಿಸಿದ ಸಂದರ್ಭ ಪ್ರಾಥಮಿಕ ಶಾಲೆಯ ಮೇಲ್ವರ್ಗಗಳಲ್ಲಿ ಕಲಿಸಬೇಕಾದ ಇಂಗ್ಲಿಷ ಮತ್ತು ಹಿಂದೀ ಭಾಷಾ ವಿಷಯಗಳ ಚರ್ಚೆಯದಾಗಿತ್ತು. ಈ ವಿಷಯಗಳತ್ತ ಹೊರಳುವ ಮುಂಚೆ ಅಭ್ಯಾಸಪತ್ರಿಕೆಯಲ್ಲಿ ಪ್ರಥಮದಲ್ಲಿಯೇ ಕೊಟ್ಟ ಪಾಠದ ಅವಧಿಗಳ ಲೆಕ್ಕವನ್ನು ಪರಿಶೀಲಿಸಿದರೆ ಒಂದು ಸಂಗತಿ ಸ್ಫುಟವಾಯಿತು. ಇಂದು ಪ್ರಾಥಮಿಕ ಶಿಕ್ಷಣ ಜೀವನಶಿಕ್ಷಣವಾಗಿ ಮಾರ್ಪಟ್ಟಿದೆ. ಮೂಲೋದ್ಯೋಗದ ಮೇಲೆ ನೆಲೆಗೊಂಡಿದೆ. ಶಿಕ್ಷಣದ ಶರೀರಕ್ಕೆ ಮೂಲೋದ್ಯೋಗವೇ ಅಸ್ತಿಪಂಜರ. ಇತರ ವಿಷಯಾಭ್ಯಾಸಗಳೆಲ್ಲ ಇದರಲ್ಲಿ ಅಂಟಿ, ಸುತ್ತಿನಿಂತ ಮಜ್ಜೆ - ಮಾಂಸ! ಯಾವ ಹಂತದಲ್ಲಿಯೂ ಮೂಲೋದ್ಯೋಗವನ್ನು ವಿಷಯಾಭ್ಯಾಸವು ಬಿಡುವಂತಿಲ್ಲ. ಆದರೆ ಈ ಅಭ್ಯಾಸಪತ್ರಿಕೆಯಲ್ಲಿ ತೋರಿ ಬರುವುದೇನು? ಕೆಳಗಿನ ಎರಡು ವರ್ಗಗಳಲ್ಲಿ - ಬಾಲಕರ ಎಳೆಯ ವಯಸ್ಸಿನ ಮಟ್ಟದಲ್ಲಿ! - ವಾರಕ್ಕೆ ೧೨ ತಾಸು (ಅವಧಿ)ಗಳನ್ನು ಮೂಲೋದ್ಯೋಗಕ್ಕೆ ಕೊಡಲಾಗಿದೆ. ಮುಂದೆ ಕ್ರಮೇಣ ೯ರಿಂದ ೭ರ ತನಕ ಉದ್ಯೋಗಾಭ್ಯಾಸದ ಅವಧಿಗಳನ್ನು ಕಡಿಮೆ ಮಾಡಲಾಗಿದೆ. ಏಕೆ ಗೊತ್ತೆ? ಉತ್ತರೋತ್ತರ ವಿಷಯಾಭ್ಯಾಸಗಳು ವಿವಿಧವಾಗಿ ವಿಪುಲವಾಗಿ ಬೆಳೆಯುತ್ತವೆ. ಅವೆಲ್ಲವುಗಳ ಮೇಲೆ ಮೂಲೋದ್ಯೋಗದೊಂದಿಗೆ ಘನಿಷ್ಠವಾಗಿ ಸ್ವಾದಿಷ್ಟವಾಗಿ ಕೂಡಿ ಬರುವುದಿಲ್ಲ. ಉದ್ಯೋಗದ ವೇಳೆ ಕುಗ್ಗಿಸದ ಹೊರತು ಉಪದೇಶದ ಪ್ರಮಾಣ ಬೆಳೆಸಲು ಬರುವುದಿಲ್ಲ. ಅಂದರೆ "ಜೀವನಶಿಕ್ಷಣ" ಪಂಚ ಈ ಪದ್ಧತಿಯಲ್ಲಿ

- ಈಗ ರೂಪಿಸಿದ ರೀತಿಯಲ್ಲಿ - ಮೂಲವ್ಯವಸಾಯಕ್ಕೂ ಇತರ ವಿಷಯಾಭ್ಯಾಸಕ್ಕೂ ಮೂಲತಃ ವಿರೋಧವಿದೆಯೆಂದಾಯಿತು.

ವಿವಿಧ ಜ್ಞಾನ-ವಿಜ್ಞಾನದ ವಿಷಯಗಳಿಗೆ ಹೆಚ್ಚಿನ ಆಳದ ಗಮನಕೊಡುವದೆಂದರೆ, ಮೂಲೋದ್ಯೋಗವನ್ನು ಆ ಮಟ್ಟಿಗೆ ಮೂಲೆಗೊತ್ತುವುದೇ ಸರಿ - ಎಂಬ ಅಪ್ರಿಯವಾದ ಸತ್ಯವನ್ನು ಈ ಅವಧಿಗಳ ಲೆಕ್ಕಾಚಾರವೇ ಸೂಕ್ಷ್ಮವಾಗಿ - ಅಷ್ಟೇ ತೀಕ್ಷ್ಣವಾಗಿ ಸೂಚಿಸುತ್ತದೆ! ಇದು ಹೀಗಾಗುವುದು ಅನಿವಾರ್ಯವು. ಪೂಜ್ಯ ಮಹಾತ್ಮಜೀಯವರು ಕನಸು ಕಂಡ "ನಯೀ ತಾಲೀಮು" ಈಗ ವಿದ್ಯಾಖಾತೆಯ ವಿದ್ಯಮಾನದಲ್ಲಿ ಅವತಾರವೆತ್ತಿದ 'ಜೀವನಶಿಕ್ಷಣ' ಇವೆರಡರಲ್ಲಿ ಒಂದು ಮಹತ್ವದ ಭೇದವಿದೆ. ಮಹಾತ್ಮರಾಗಲಿ, ವಿನೋಬಾಜೀಯವರಾಗಲಿ ಕಲ್ಪಿಸಿದ ಗ್ರಾಮರಾಜ್ಯದ ಸ್ವಾವಲಂಬಿ ಬಾಲಬಾಲಿಕೆಯರ ಪ್ರಾಥಮಿಕ ಶಿಕ್ಷಣದಲ್ಲಿ ಇಂದಿನ ಮುಲ್ಕೀ ಮಟ್ಟದ ಅಭ್ಯಾಸಕ್ರಮಕ್ಕೆ ಅವಕಾಶವೇ ಇಲ್ಲ. ಓದು-ಬರಹದೊಂದಿಗೆ ಇತಿಹಾಸ, ಭೂಗೋಲ, ಆರೋಗ್ಯ ವಿಜ್ಞಾನಾದಿಗಳ ತೀರ ಪ್ರಾಥಮಿಕ ಜ್ಞಾನ ಮತ್ತು ರಾಷ್ಟ್ರಭಾಷೆಯ ವ್ಯವಹಾರಿಕ ಪರಿಚಯ ಇವಿಷ್ಟೇ ಅವರು ರೇಖಿಸಿದ ಮೂಲ ಶಿಕ್ಷಣ ಕ್ರಮ. ಆದರೆ ಇಂದು ವಾರ್ಧಾದಿಂದ ಹೊಸದಿಲ್ಲಿಗೆ - ಅಲ್ಲಿಂದ ಈಗ ಹಂಸಭಾವಿಗೆ! - ಬಹುದೂರದ ದಾರಿ ಬೆಳೆದಿದೆ, ಇರಲಿ.

## ಕೆಲ ಪ್ರಶ್ನೆಗಳು

ಈ ಮೂಲದ ಒಳವಿರೋಧವನ್ನು ಬಿಟ್ಟರೆ ಮುಂದೆ ಇಂಗ್ಲಿಷ್ - ಹಿಂದೀ ಅಭ್ಯಾಸಕ್ರಮ ಗಳನ್ನು ಗಮನಿಸಿದರೆ, ನಮ್ಮೆದುರು ಏಳುವ ಪ್ರಶ್ನೆಗಳು ಯಾವುವು?

ಹಿಂದಿ ರಾಷ್ಟ್ರಭಾಷೆ. ಇಂಗ್ಲೀಷ್ ಬರುವ ೧೯೬೫ಕ್ಕೂ ಮುಂದೆ ೫-೧೦ ವರ್ಷಗಳಲ್ಲಿಯೇ ಪೂರ್ತಿ ಉಚ್ಚಾಟನೆ ಆಗುವ ಭಾಷೆ. ಆದರೆ ಅಭ್ಯಾಸಪತ್ರಿಕೆಯ ವಿಧಾತರು ಹಿಂದಿಗೆ ವಾರಕ್ಕೆ ೩ ಪಿರಿಯಡ್ಡುಗಳನ್ನು ಕೊಟ್ಟರೆ, ಇಂಗ್ಲಿಷಿಗೆ ೬ ಕೊಟ್ಟಿದ್ದಾರೆ! ಇದು ಯೋಗ್ಯವೆ? ಇನ್ನು ಹಿಂದೀ ಕಲಿಸುವ ಗುರಿ ಏನು? "Ability to converse clearly and correctly in Hindi" ಅಂದರೆ ಹಿಂದಿಯಲ್ಲಿ ಅಸ್ಖಲಿತವಾಗಿ ಸುಸ್ಪಷ್ಟವಾಗಿ ಸಂಭಾಷಣೆ ನಡೆಯಿಸುವ ಸಾಮರ್ಥ್ಯ ವಿದ್ಯಾರ್ಥಿಗೆ ಇರಬೇಕು. ಅದೂ ೨ ವರ್ಷ ಕಲಿತು. ಇಂಗ್ಲೀಷಿನಲ್ಲೋ? "Ability to read write and speak." ಓದಲು ಬರೆಯಲು ಮತ್ತು ಮಾತನಾಡಲು ಬರಬೇಕು. - ೩ ವರ್ಷಗಳಲ್ಲಿ! ಇದು ಶಕ್ಯವೇ?

ಅದಕ್ಕೂ ಹೆಚ್ಚು, ಈ ಉದ್ದೇಶ ಪ್ರಾಮಾಣಿಕವೇ? ಹಿಂದಿ ರಾಷ್ಟ್ರ ಭಾಷೆ. ಅದರಲ್ಲಿ ತಕ್ಕ ಸಾಮರ್ಥ್ಯ ಬರಲಿ, ಬಿಡಲಿ. ರಾಷ್ಟ್ರೀಯತೆಯ ಒಂದು ಅವಶ್ಯಗಮಕವೆಂದು - ಕಾಂಗ್ರೆಸ್ಸಿಗನಿಗೆ ಹೇಗೆ ಗಾಂಧೀ ಟೊಪ್ಪಿಗೆಯೋ ಹಾಗೆ! ಪ್ರತಿ ಭಾರತೀಯ ಬಾಲಕನಿಗೆ ಒಂದು ಹಿಂದೀ ಸಂಸ್ಕಾರ ಕೆಲಮಟ್ಟಿಗೆ ಆಗಲೇ ಬೇಕು. ಇದೊಂದು ಪ್ರತಿಜ್ಞೆ; ಅಥವಾ ದೀಕ್ಷೆಯೆಂದು ಭಾವಿಸಿ ಮುಂಪರಿಯೋಣ. ಆದರೆ ಇಂಗ್ಲಿಷು ಪ್ರಾಥಮಿಕ ಶಾಲೆಯಲ್ಲಿಯ ಮಟ್ಟದಲ್ಲಿಯೂ ಮತ್ತೆ ತಂದೊಡ್ಡಿದ ಉದ್ದೇಶವೇನು? ಇದು S.S.C. ಆದವನಿಗೂ ಸರಿಯಾಗಿ ಓದಲು ಬರೆಯಲು ಮತ್ತು ಮಾತನಾಡಲು ಬರುವದಿಲ್ಲ. S.S.C. ಏನು ಬಂತು? ಇಂದಿನ ಗ್ರ್ಯಾಜುವೇಟರನ ನಾಲಗೆಗೂ

ಇಂಗ್ಲಿಷ್ ಸರಿಯಾಗಿ ಎಟಕಿದ್ದುಂಟೇ? ನಿಜವಾಗಿಯೂ ಬ್ರಿಟಿಷರು ರಾಜ್ಯ ಬಿಟ್ಟು ಹೋದದ್ದು ಸತ್ಯಾಗ್ರಹ ಅಸಹಕಾರ, ಅಗಸ್ತು ಚಳವಳಿ ಇತ್ಯಾದಿಗಳಿಗೆ ಅಂಜಿ ಅಲ್ಲವೇ ಅಲ್ಲ! ಕಳೆದ ಯುದ್ಧೋತ್ತರ ಕಾಲದಿಂದಲೂ ಪದವೀಧರರಾಗಿ ಕೋರ್ಟು ಕಚೇರಿ ಕಂಪನಿ ಮುಂತಾದುವುಗಳಲ್ಲಿ ಚಾಕರಿಗೆ ನಿಂತ ನಮ್ಮ "ಇಂಗ್ಲೀಷ್ ಕಲಿತ" ತರುಣರ ಬಾಯಿಯಲ್ಲಿ ತಮ್ಮ ಮಾತೃಭಾಷೆಯ ಮೇಲೆ ನಿರಾತಂಕವಾಗಿ ನಿರಂತರವಾಗಿ ನಡೆಯುವ ಅತ್ಯಾಚಾರಗಳನ್ನು ನೋಡಿ ಹೆದರಿ ಹೇಸಿ ಬ್ರಿಟಿಷರು ಭಾರತದಿಂದ ಕಾಲುಕಿತ್ತಿರಬೇಕು. ಒಂದು ಶತಮಾನ ಹಿಂದೆಯೇ ಒಬ್ಬ ಬ್ರಿಟಿಷ್ ಸಾಹಿತಿ ಕಾರ್ಲೈಲ ಸಾರಿದ್ದ "ನಮ್ಮ ಸಾಮ್ರಾಜ್ಯ ಮತ್ತು ಸಾಹಿತ್ಯ ಇವುಗಳಲ್ಲಿ ಯಾವುದನ್ನು ಆಯ್ದುಕೊಳ್ಳುವುದು? ಎಂಬ ಬಿಕ್ಕಟ್ಟು ಬಂದಾಗ ನಾವು ಸಾಹಿತ್ಯ ಉಳಿಸಿಕೊಳ್ಳಲಿಕ್ಕೆ ಸಾಮ್ರಾಜ್ಯವನ್ನಾದರೂ ಬಿಟ್ಟೇವು!" ಮತ್ತು ಹಾಗೆಯೇ ಅದನ್ನು ಅವರು ಬಿಟ್ಟಿರಬೇಕು?

## ತಜ್ಞರ ಭ್ರಮೆ

ಏನೇ ಇರಲಿ, ಮುಲ್ಕೀ ಮಟ್ಟದ ಮಕ್ಕಳು ಕನ್ನಡ ಕೂಡ ಶುದ್ಧ ಬರೆಯಲು ಬಾರದ ತರಳರು! - ಇಂಗ್ಲಿಷಿನಲ್ಲಿ ಓದಿ ಬರೆದು ಮಾತನಾಡಿಯಾರೆಂಬ ಭ್ರಮೆ ನಮ್ಮ ಶಿಕ್ಷಣ ತಜ್ಞರಿಗೆ ಆದದ್ದು ಜನತೆಯ ದುರ್ದೈವ. ಹಾಗಾದರೆ ಹೀಗೆ ಇಂಗ್ಲಿಷ್ ಪ್ರಾಥಮಿಕ ಮಟ್ಟದ ಮೇಲ್ವರ್ಗಗಳಲ್ಲಿ ಇಡುವುದೇಕೆ? 'ಏಕೆಂದರೆ ಮಾಧ್ಯಮಿಕ ಮಟ್ಟದಲ್ಲಿಯ ಇಂಗ್ಲಿಷಿನ ತಲೆಭಾರ ಕಡಿಮೆ ಮಾಡಲಿಕ್ಕೆ. ಇಂಗ್ಲಿಷಿನ ಒಟ್ಟು ಪರಿಮಾಣ ಇಂದು ಹೆಚ್ಚಿಸಿಲ್ಲ. ಅದರ ಕಲಿಯುವ ಕಲಿಸುವ ಅವಧಿ ವಿಸ್ತರಿಸಲಾಗಿದೆ. ೮ನೇ ಇಯತ್ತೆಯಿಂದ ಆರಂಭವಾಗುವ ಅಭ್ಯಾಸ ಹಂಚಿ-ಹರಡಿ ಕೆಳಗಿನ ೫ನೇ ಇಯತ್ತೆಯಿಂದಲೇ ಅರಂಭ ಮಾಡಲಿದ್ದಾರೆ. ಅತ್ತ ವಿಶ್ವ ವಿದ್ಯಾಲಯದ ಪಠ್ಯಕ್ರಮ ೩ ವರ್ಷಗಳಿಗೆ ಇಳಿಸಿ ಉಚ್ಚಮಟ್ಟದ ಕೆಳವರ್ಗಗಳನ್ನು ಮಾಧ್ಯಮಿಕ ಶಾಲೆಗಳಲ್ಲಿಯೇ ಸಮಾವೇಶ ಮಾಡುವವರಿದ್ದಾರೆ. ಹೀಗೆ ಒಟ್ಟು ಮಾಧ್ಯಮಿಕ ಶಿಕ್ಷಣದಲ್ಲಿ ಒತ್ತಡ ಹೆಚ್ಚಾಗದಂತೆ ಅದರ ಸ್ವಲ್ಪ ಭಾರ ಪ್ರಾಥಮಿಕ ಶಾಲಾಂತ ಪರೀಕ್ಷೆಯಾದ ವಿದ್ಯಾರ್ಥಿಗಳಲ್ಲಿ ನೂರಕ್ಕೆ ೩೫-೪೦ ಜನ ಮಾತ್ರ ಮಾಧ್ಯಮಿಕಕ್ಕೆ ಹೋಗುತ್ತಾರೆ. ಅಂದರೆ ಈ ಅಲ್ಪಸಂಖ್ಯಾಕರ ಅನುಕೂಲತೆಗಾಗಿ ಉಳಿದ ೬೦ ಮಕ್ಕಳಿಗೆ ಹೊಸ ತಲೆಶೂಲಿಯೇಕೆ? ಇನ್ನು S. S. C. ಗೂ ಇಂಗ್ಲಿಷ್ ಒಂದು ಅವಶ್ಯ ವಿಷಯವೂ ಅಲ್ಲ. ಅಂದರೆ ಮುಂದೆ ಇಚ್ಛಿಕವಾಗಿದ್ದ ವಿಷಯದ ಶಿಕ್ಷಣ ಸೌಕರ್ಯಕ್ಕಾಗಿ ಕನ್ನಡ ಶಾಲೆಯಲ್ಲಿಯೇ ಅದನ್ನು ಕಲಿಸುವ ಕಡ್ಡಾಯವೇಕೆ?

## ಚಕ್ರವ್ಯೂಹ

ಕಲಿಸುವದಾದರೂ ಅದು ಒಬ್ಬೊಬ್ಬ ಇಂಗ್ಲಿಷ್ ಬಲ್ಲ ವರ್ಗ ಶಿಕ್ಷಕನನ್ನು ಕೊಟ್ಟರೆ ಸಾಲುವುದೇ? ಹೆಚ್ಚು ಮಂದಿಯನ್ನು ಕೊಟ್ಟರೆ ಇಂಗ್ಲಿಷ್ ಅರಿಯದ ಕನ್ನಡ ತರಬೇತಿ ಶಿಕ್ಷಕರನ್ನು ಎಲ್ಲಿಗೆ ವರ್ಗಾಯಿಸಬೇಕಾಯಿತು? ಈಗಾಗಲೇ ಬೇಸಿಕ್ ನೊನ್‌ಬೇಸಿಕ್ ಶಾಲಾಭೇದಗಳ ಹಾಗೂ ಶಿಕ್ಷಕರ ವರ್ಗಭೇದದ ಮೂಲಕ ವರ್ಗಾವರ್ಗಿಯ ತೊಡಕು ಎ.ಓ ಆಗಿ ಬರುವ ಎಂಥ ಅಭಿಮನ್ಯುವಿಗೂ ಪಾರಾಗಲಾರದ ಚಕ್ರವ್ಯೂಹವಾಗಿ ಬಿಟ್ಟಿದೆ. ಅಂಥಲ್ಲಿ ಈ ಇಂಗ್ಲಿಷ್ ಮತ್ತು ನೊನ್ ಇಂಗ್ಲಿಷ್ ತಜ್ಞಶಿಕ್ಷಕರ ಹೊಂದಾಣಿಕೆಯ ತೊಡಕೂ ಕೂಡಿದಾಗ ಆ ಜಿಡುಕು ಬಿಡಿಸುವದು ಹೇಗೆ? ಪ್ರಾಥಮಿಕ ಶಾಲಾಂತ ಪರೀಕ್ಷೆಗೆ ಚಿತ್ರಕಲೆ ಇಟ್ಟಿದ್ದರಿಂದ ಆ ಮೂಲಕ ವಿದ್ಯಾರ್ಥಿಗಳ

ಚಿತ್ರಹಿಂಸೆ ಎಷ್ಟು ವ್ಯವಸ್ಥಿತವಾಗಿ ನಡೆಯುತ್ತಿದೆಯೆಂಬುದು ಒಂದು ಬಯಲುಗುಟ್ಟು. ಅದರ ಜೋಡಿಗೆ ಇಂಗ್ಲಿಷಿನ ಈ ಏರ್ಪಾಟವೂ ಬರಬಹುದೇ?

ಇನ್ನು ಹಿಂದೀ? ವಾರಕ್ಕೆ ೩ ಪಿರೀಯಡ್ಡು ಕಲಿಸಿದ ಪುಸ್ತಕೀ ಹಿಂದಿಯಿಂದ "ಅಸ್ಖಲಿತ ಸುಸ್ಪಷ್ಟ ಸಂಭಾಷಣ ಸಾಮರ್ಥ್ಯ" ಬಂದೀತೆಂದು ಭಾವಿಸುವಷ್ಟು ಈ ತಜ್ಞರು ಸರಳಜೀವಿಗಳೇ? ಹಿಂದಿಯ ವಾತಾವರಣವೇ ಇಲ್ಲದ ಶಿಕ್ಷಕರಿಗೂ ಅನೇಕರಿಗೆ ಹಿಂದಿಯ ಸಹಜ ಪ್ರಭುತ್ವವಿಲ್ಲದ, ಕೇವಲ ಕೃತ್ರಿಮವಾದ ಅವಾಸ್ತವವಾದ ಸನ್ನಿವೇಶದಲ್ಲಿ ಪಾಠ ನಡೆಯಿಸಬೇಕಾದ ಈ ಹಿಂದೀ ಪರಿಶ್ರಮ ಒಂದು "ಫಲಾಶಾರಹಿತ" ವಾದ ನಿಷ್ಕಾಮ ಕರ್ಮವೇ ಸರಿ. ಆದರೂ ಅದು ಅವಶ್ಯ. ಬ್ರಾಹ್ಮಣನಿಗೆ ಜನಿವಾರ, ಜೀವನ ಶಿಕ್ಷಣ ಶಿಬಿರಗಳಲ್ಲಿ ಪ್ರಾರ್ಥನೆ ಇರುವಂತೆ ಹಿಂದಿಯೂ ಒಂದು ಪ್ರತೀಕಾತ್ಮಕ ಕರ್ತವ್ಯ ದೀಕ್ಷಾ ವಿಧಿ.

ಆದರೆ ಇಂಗ್ಲಿಷು ಹಾಗಲ್ಲವಲ್ಲ. ಯಾವುದೇ ಭಾಷೆ-ವಿದ್ಯೆ ಇರಲಿ. ಕಲಿಸುವದಾದರೆ ಚೆನ್ನಾಗಿ ಕಲಿಸಬೇಕು. ಹಾಗೆ ಕಲಿಸಲು ಅನುಕೂಲ ಒದಗಿಸಿಕೊಡಬೇಕು. ಪ್ರಾಥಮಿಕ ಶಾಲೆಗಳಿಗೆ ಅಂಥ ಅನುಕೂಲ ಇದೆಯೋ-ಬರುವದಿದೆಯೋ? ನಿಜವಾಗಿಯೂ ಜನೇ ಇಯತ್ತೆಯಿಂದ ಈ ಶಾಲೆಗಳಲ್ಲಿಯೂ ವಿಷಯವಾರು ಪಾಠ ಪದ್ಧತಿ-ವಿಷಯಕ್ಕೆ ಒಬ್ಬ ಶಿಕ್ಷಕ-ಆಗಬೇಕು; ಹೊರತು ಈಗಿದ್ದಂತೆ ವರ್ಗ ಶಿಕ್ಷಣ-ಅದೂ ಬಹುವರ್ಗ ಶಿಕ್ಷಣವಿರಕೂಡದು. ಮೂರು ಭಾಷೆ ಕಲಿಸುವಲ್ಲಿ ಈ ಹೊಸ ವ್ಯವಸ್ಥೆ ತೀರ ಅಗತ್ಯ. ಆದರೆ ಈ ಮಟ್ಟಿಗೂ ಕನ್ನಡ ಶಾಲಾ ಮಾಸ್ತರ ಅಗತಿಕ!

ಮೂರು ವರ್ಷ ಕೂಡಿ ೮೫೦ ಶಬ್ದಗಳ ಇಂಗ್ಲಿಷ್ ಕಲಿಸಬೇಕೆಂದಿದೆ ಅಭ್ಯಾಸ ಪತ್ರಿಕೆಯಲ್ಲಿ. ಇಲ್ಲಿಯೂ ಹಳೆ ಮೈಸೂರಿನ ಕ್ರಮದಿಂದ ಈ ಪರಿಣಾಮ ಎತ್ತಿಕೊಂಡಂತಿದೆ. ಆದರೆ ಅಲ್ಲಿ ೮೫೦ ಶಬ್ದ ೪ ವರ್ಷ ಕೂಡಿ ಕಲಿಸುವದಿತ್ತು. ಅದು ಮಾತ್ರ ೩ಕ್ಕೆ ಇಳಿಸಿದ್ದಾರೆ. ಇನ್ನು ಕಲಿಸಲು ಪಠ್ಯಪುಸ್ತಕ? ನಿಜವಾಗಿಯೂ ಸಮವಾಯದ ರೀತಿಯಂತೆ ಇಂಗ್ಲಿಷ್ ಆ ಮಕ್ಕಳಿಗೆ ಕಲಿಸಲಾಗುವ ಕೈಗಾರಿಕೆ-ಕಸಬಿನ ವಸ್ತು ಪಾಠಗಳೊಳಗಿಂದಲೇ ನಿರ್ದಿಷ್ಟ ಸಂಖ್ಯೆಯ ಶಬ್ದಗಳನ್ನು ಅಳವಡಿಸಿಕೊಂಡು ಕಲಿಸಿದರೆ ಭಾಷಾ ಪಾಠ ಹೆಚ್ಚು ನೇರವಾಗಿ ಜೀವಂತವಾಗಿ ಮತ್ತು ನಿರಾಯಾಸವಾಗಿ ಕಲಿಸಲು ಬರುತ್ತದೆ. ಪಠ್ಯ ಪುಸ್ತಕಕ್ಕಾಗಿ ತಡೆಯಬೇಕಾಗಿಲ್ಲ. ನಿರ್ದಿಷ್ಟ ಶಬ್ದ ಸಂಗ್ರಹ ಅವುಗಳ ಕ್ರಮಬದ್ಧ ಗುಂಪು, ಅದಕ್ಕೆ ಹೊಂದಿದ್ದ ವಾಕ್ಯ ರಚನಾ ಮಾದರಿಗಳು, ಅವುಗಳಿಗೆ ಹೊಂದಿಸಬೇಕಾದ ವಸ್ತು-ವಿವರಗಳ ಸೂಚಿ ಇವುಗಳ ಕೈಪಿಡಿ ಪ್ರತಿ ಶಾಲೆಗೆ ಮೊದಲು ಒದಗಿಸಬೇಕು-ಮುಂದಿನದು ಆ ಭಾಷೆಯ ಭಾಗ್ಯ, ವಿದ್ಯಾರ್ಥಿಗಳ ದೈವ, ಮತ್ತು ಆ ಶಿಕ್ಷಕನ ವಿಧಿ!

●

('ಜನಸೇವಕ' ೧೯೫೮)

# ಶಿವರಾಮಕಾರಂತರ 'ಯಕ್ಷಗಾನ ಬಯಲಾಟ'

"ಕನ್ನಡಕ್ಕೊಬ್ಬನೆ ಕೈಲಾಸಂ" ಎಂದು ಲೋಕಪ್ರಿಯವಾದ ಮಾತೊಂದು ನಮ್ಮ ಸಾಹಿತ್ಯ ಪ್ರೇಮಿಗಳಲ್ಲಿ ಬಳಕೆಯಲ್ಲಿತ್ತು. ಆದರೆ "ಕನ್ನಡಕ್ಕೊಬ್ಬನೆ" ಎಂಬ ಪದ ಪ್ರಯೋಗ ಹೆಚ್ಚು ಸಾರವತ್ತಾಗಿ ಸಮಂಜಸವಾಗಿ ಮತ್ತು ಶಾಶ್ವತ ಸಂದರ್ಭದಿಂದ ಇಂದಿಗೆ ಕನ್ನಡ ಸಾಹಿತಿಗಳಲ್ಲಿ ಯಾರಿಗಾದರೂ ಅನ್ವಯಿಸುತ್ತಿದ್ದರೆ ಅದು ಶ್ರೀ ಶಿವರಾಮ ಕಾರಂತರಿಗೇ ಎಂದೆನ್ನಬೇಕು. "ಕನ್ನಡಕೊಬ್ಬನೆ ಕಾರಂತ" ಎಂದರೆ ಅದು ಸರ್ವ ಪರಿಯಿಂದಲೂ ಸತ್ಯವೆನಿಸುತ್ತದೆ. ಅವರು ಕೇವಲ ಒಂದು "ಬಾಲಪ್ರಪಂಚ" ದಂಥ ಜ್ಞಾನಕೋಶ ಬರೆದರೇ ಸಾಹಿತ್ಯದಲ್ಲಿ ಅವರ ಸ್ಥಾನ ಸ್ಥಿರವಾಗುತ್ತಿತ್ತು. ಒಂದು "ಚೋಮನ ದುಡಿ" ಇಲ್ಲವೆ "ಮರಳಿ ಮಣ್ಣಿಗೆ" ಬರೆದಿದ್ದರೇ ಅವರ ಸಾಹಿತ್ಯ ಪ್ರತಿಭೆಗೆ ಅದೊಂದು ಅಮರ ದ್ಯೋತಕವಾಗುತ್ತಿತ್ತು. "ಅಪೂರ್ವ ಪಶ್ಚಿಮ" ದಂಥ ಒಂದು ಪ್ರವಾಸ ವಾಙ್ಮಯದ ಕೃತಿಯನ್ನು ಪ್ರಕಟಿಸಿದರೇ ಅದು ಶ್ರೀ ಕಾರಂತರ ಸಾಹಿತ್ಯಿಕ ಪ್ರತಿಷ್ಠೆಯ ಭದ್ರತೆಗೆ ತುಂಬ ಸಾಕಿತ್ತು. ಅದೇಕೆ, ಒಂದು "ಸಿರಿಗನ್ನಡ ಅರ್ಥಕೋಶ" ಅವರಿಂದ ಹೊಸಗನ್ನಡದ ಸಿರಿವಂತಿಕೆಗೆ ಒಂದು ತೀರದ ಕೋಶವಾಗಿ ನಿಲ್ಲುವಂತಿತ್ತು. ಇದೆಲ್ಲ ಬಿಟ್ಟು ಕಾರಂತರು "ಗೀತನಾಟಕ" ಗಳನ್ನಷ್ಟೇ ಬರೆದಿಟ್ಟಿದ್ದರೂ ಅವರ ಹೆಸರು ಸಾಹಿತ್ಯ ಚರಿತ್ರೆಯಲ್ಲಿ ಒಂದು ಮರೆಯದ ತಾರೆಯಾಗುತ್ತಿತ್ತು. ಆದರೆ ಇವೆಲ್ಲವನ್ನು ಮಾಡಿ ಮೀರಿ ಅವರ ವ್ಯಕ್ತಿತ್ವ ಒಂದು ಅಖಂಡ ಪ್ರಚಂಡ ಕ್ರಿಯಾಶಕ್ತಿಯ "ಬತ್ತದ ತೊರೆ" ಯಾಗಿ ಹರಿದು ಜೀವನ ಸೌಂದರ್ಯದ ಅನೇಕ ಕ್ಷೇತ್ರಗಳಲ್ಲಿ ಹುಲುಸಾದ ಹಚ್ಚ ಹಸಿರಾದ ನವನಿರ್ಮಿತಿಯ ಪೈರನ್ನು ಬೆಳೆಯಿಸುತ್ತಲಿದೆ. ಇಂಥ ಲೇಖನಿಯ ಲೋಕೈಕವೀರ ಅಸೂಯೆ ಇಲ್ಲದ ಅಸಹಾಯ ಶೂರ ಕನ್ನಡಕ್ಕೆ ಇಷ್ಟು ಪಟ್ಟಿನಿಂದ ಇಂಥ ಕೆಚ್ಚಿನಿಂದ ಕೀರ್ತಿಮುಖವನ್ನು ಕಟ್ಟುವವನು - ಅದೂ ತನ್ನ ಅಲಿಪ್ತ ಅಭಿರುಚಿಯ ಒಂಟಿ ನೇಗಿಲು ಹೂಡುತ್ತ ಯಾವ ಅಪೇಕ್ಷೆಯೂ ಇಲ್ಲದೆ, ಉಪೇಕ್ಷೆಯನ್ನೂ ಲೆಕ್ಕಿಸದೆ ಕನ್ನಡದ ಕಲ್ಯಾಣ ಕಟ್ಟುವವನು ಬೇರೆ ಯಾರು? ಈ ದೃಷ್ಟಿಯಿಂದ ಇಂಥ ನಿರಂಕುಶ ಗತಿಯ ಸರ್ವತೋಮುಖ ಪ್ರತಿಭೆಯ ಸತ್ವವನ್ನು ಕುರಿತು "ಕನ್ನಡಕೊಬ್ಬನೆ ಕಾರಂತ" ಎಂದು ಕರೆದರೆ ತಪ್ಪೇನು? ಅದಕ್ಕೂ ಹೆಚ್ಚಿನ ಲೇಸೇನು?

## ಉದ್ಗ್ರಂಥದ ವೈಶಿಷ್ಟ್ಯ

ಕಾರಂತರ ಪ್ರತಿಭೆಯ ವಿಶೇಷ ವಿನ್ಯಾಸದ ಒಂದು ವಿಶಾಲ ಕ್ಷೇತ್ರವೆಂದರೆ "ಯಕ್ಷಗಾನ" ಕಲೆ. ಆ ಕಲೆಯ ವಿದ್ಯೆ, ಪ್ರಯೋಗ, ರೀತಿ ಮತ್ತು ಮರ್ಮಗಳ ಕುರಿತು ಅವರ ಕಳೆದ ೨೦ ವರ್ಷಗಳ ವ್ಯಾಸಂಗದ ಅನುಭವದ ಅವಲೋಕನೆಯ ಮತ್ತು ಸಂಶೋಧನೆಯ ಪರಿಪಕ್ವವಾದ ಫಲವನ್ನು ಅವರು ಇಂದು ಕನ್ನಡ ರಸಿಕರ ಇದುರಿಗೆ ಇಟ್ಟಿದ್ದಾರೆ. ಈ ಕಲೋಪಾಸನೆಯ ಸಾಫಲ್ಯದ ಫಲವೇ ಶ್ರೀ ಕಾರಂತರು ಕಳೆದ ವರ್ಷದ ನವ್ಹೆಂಬರ ತಿಂಗಳಲ್ಲಿ ಪುತ್ತೂರಿಂದ ಪ್ರಕಟಿಸಿದ "ಯಕ್ಷಗಾನ ಬಯಲಾಟ" ಎಂಬ ಉದ್ಗ್ರಂಥ! ಈ ಗ್ರಂಥವು ಇದುವರೆಗೆ ಈ ವಿಷಯದ ಕುರಿತು ಬೆಳಕಿಗೆ ಬಂದ ಎಲ್ಲ ಪುಸ್ತಕಗಳಲ್ಲಿ ಒಂದು ಸೀಮಾಕೃತಿ! ಇಂಥ ಮಾದರಿಯ ಕೃತಿ ಇದೊಂದೇ - ಎಂದರ ಏನೂ ಅಂದಂತೆ ಅನಿಸಲಿಕ್ಕಿಲ್ಲವಾದರೂ ಹಾಗೆ ಹೇಳದೆ ಇದನ್ನು ಯಥಾರ್ಥವಾಗಿ ಹೊಗಳಿ ದಂತೆಯೂ ಅಲ್ಲ! ಯಕ್ಷಗಾನದ ಕುರಿತು ಈಗಾಗಲೇ ೪-೫ ಪುಸ್ತಕಗಳು ಪ್ರಕಟವಾಗಿವೆ. - "ಯಕ್ಷನಾಟಕಗಳು", "ಯಕ್ಷಗಾನ ಕೈಪಿಡಿ" ಇತ್ಯಾದಿ ಇತ್ಯಾದಿ. ಇವೆಲ್ಲ ತಮ್ಮ ಮಟ್ಟಿಗೆ - ತಕ್ಕಮಟ್ಟಿಗೂ

ಅಹುದು - ಒಳ್ಳೆಯ ಕೃತಿಗಳು. ಆದರೆ ಯಕ್ಷಗಾನವನ್ನು ಇಷ್ಟು ಸಮಗ್ರವಾಗಿ ಏಕಾಗ್ರವಾಗಿ ಆಲೋಚನೆಮಾಡಿ ಅಲೋಚನೆಗೈದು ತಮ್ಮ ಸಮುಜ್ಜ್ವಲ ಪ್ರತಿಭಾ ಸಂಸ್ಪರ್ಶದಿಂದ ಒಮ್ಮೆಲೆ ಒಂದು ಉನ್ನತ ಸೌಂದರ್ಯಶಾಸ್ತ್ರೀಯ (aesthetic) ಪಾತಳಿಗೆ ಎತ್ತಿ ನಿಲ್ಲಿಸಿ ಅದರ ಪದರು ಪಾಂಗುಗಳನ್ನೆಲ್ಲ ಇಷ್ಟೊಂದು, ಪಾರದರ್ಶಿಯಾಗಿ ಪರಿಶೀಲಿಸಿದ ಗ್ರಂಥ "ಯಕ್ಷಗಾನ ಬಯಲಾಟ" ಒಂದೇ ಸರಿ. ಅಂದರೆ ಯಕ್ಷಗಾನದ ಕುರಿತು ಕೊನೆಯ ಮಾತು ಇಲ್ಲಿದೆ ಎಂದಲ್ಲ. ಅಂಥ ಅಹಂ ಮಾನ್ಯತೆಯ ಅಭಿನಿವೇಶ ಕಾರಂತರದಲ್ಲವೇ ಅಲ್ಲ. ಅವರೇ ಅನ್ನುತ್ತಾರೆ: "ಈ ಬರಹದಲ್ಲಿ ನನಗೇನನಿಸಿದೆಯೋ ಅದನ್ನು ದಾಕ್ಷಿಣ್ಯವಿಲ್ಲದೆ ನಿಮ್ಮ ಮುಂದಕ್ಕೆ ಇರಿಸಿದ್ದೇನೆ. ಅವನ್ನೆಲ್ಲರೂ ಒಪ್ಪುತ್ತಾರೆ, ಒಪ್ಪಲೇ ಬೇಕು - ಎಂಬ ಹಟ ನನಗಿಲ್ಲ. ಹೊಸ ಸಾಕ್ಷಿಗಳೂ ಈ ಹೊಸ ಅನುಭವಗಳೂ - ನಾನಂದುದನ್ನು ನಾಳಿಯ ದಿನ ಅಲ್ಲಗಳೆಯಿಸಬಹುದು. ಪ್ರಾಮಾಣಿಕವಾಗಿ ಅನಿಸಿದ್ದನ್ನು ಹೇಳಿದ್ದೇನೆ. ನೀವು ಇದನ್ನು 'ಸರಿ ಇರಬಹುದೇ.?' ಎಂಬ ಅನುಮಾನದಿಂದಲೇ ನೋಡಿ, ಉಳಿದುದನ್ನು ನಿಷ್ಪಕ್ಷಪಾತ ದೃಷ್ಟಿಗೆ ಬಿಟ್ಟುಬಿಡಿ. ಚರಿತ್ರೆಯ ಅಂಶ ಬರುವಲ್ಲೆಲ್ಲ ಚಾರಿತ್ರಿಕ ಸತ್ಯ ದೊಡ್ಡದೇ ಹೊರತು, ಹೇಳಿದಾತನ ವ್ಯಕ್ತಿ ಪ್ರತಿಷ್ಠೆ ದೊಡ್ಡದಲ್ಲ ಎಂಬುದನ್ನು ನಾವು ತಿಳಿಯಬೇಕು. ಇಂಥ ದೊಡ್ಡ ವ್ಯಕ್ತಿಯೇ ಹೀಗೆ ಹೇಳಿರುತ್ತ, 'ಈ ಕಾರಂತರು ಆಕ್ಷೇಪಿಸುತ್ತಾರಲ್ಲ!' ಎಂದವರುಂಟು. ನಾಳೆ ನನ್ನನ್ನೂ ಅಂಥ ದೊಡ್ಡ ವ್ಯಕ್ತಿಯನ್ನೂ ಕೂಡಿಯೇ ಅಲ್ಲಗಳೆಯಬಲ್ಲ ಇನ್ನೊಬ್ಬ ಹುಟ್ಟಬಹುದು."

"ಆ ಮೇಲೆಯೂ ಕೆಲವರ ಪ್ರಶ್ನೆ ಎದ್ದೀತು; ಕಾರಂತರಿಗೆ ಯಕ್ಷಗಾನದ ಮೇಲೆ ಬರೆಯುವ ಅಧಿಕಾರವೆಲ್ಲಿ? ಸಾಹಿತಿಗೆ ಸಂಶೋಧನೆ ಮಾಡುವ ಅಧಿಕಾರವೆಲ್ಲಿ? - ಅಂಥ ಪ್ರಶ್ನೆಯೆಂದರೆ 'ಹಕ್ಕಿಯೊಡನೆ ನೀನೇಕೆ ಹಾಡುತ್ತೀ?' 'ಹೂವಿನೊಡನೆ ನೀನೇಕೆ ಅರಳುತ್ತೀ?" 'ಜೀವಿಯೊಡನೆ ನೀನೇಕೆ ಬಾಳುತ್ತೀ?" ಎಂದು ಕೇಳುವಷ್ಟೇ ವ್ಯರ್ಥಸಾಹಸವಾದೀತು".

ಇವೆರಡು ಚಿಕ್ಕ ಪರಿಚ್ಛೇದಗಳೊಡನೆ ಶ್ರೀ ಕಾರಂತರು ತಮ್ಮ ಮುನ್ನುಡಿ ಮುಗಿಸಿದ್ದಾರೆ. ಈ ಮಾತುಗಳಲ್ಲಿ ಕಾರಂತರ ಸತ್ವ, ಅವರ ಸತ್ಯನಿಷ್ಠೆ, ಅವರ ಕಲಾದೃಷ್ಟಿ, ಅವರ ವಿಮರ್ಶಾ ಭೂಮಿಕೆ ಮತ್ತು ಹೃದ್ಯವಾದ ವಿನಮ್ರ ನ್ಯಾಯ ನಿಷ್ಠುರತೆ ಒಡೆದದ್ದು ಮೂಡಿದೆ.

## ವಿದೇಶೀ ಪ್ರಚಾರ

ಎರಡು ವರ್ಷಗಳ ಆಚೆ ಕರ್ನಾಟಕ ಸಂಶೋಧನೆಯ ಸಂಸ್ಥೆಯ ವಿದ್ಯಮಾನದಲ್ಲಿ ಕಾರಂತರು ಧಾರವಾಡದಲ್ಲಿ ಯಕ್ಷಗಾನದ ಕುರಿತು ಮೂರು ಉಪನ್ಯಾಸಗಳನ್ನು ಕೊಟ್ಟರು. ಅದಕ್ಕೂ ೧೫-೨೦ ವರ್ಷಗಳ ಆಚೆಯಿಂದಲೂ ಅವರು ಈ ವಿಷಯದ ಆಕರ್ಷಣೆಗೆ ಸೋತು ಅಭ್ಯಾಸವನ್ನು ಸೋಲದೆ ಸಾಗಿಸುತ್ತ ಬಂದಿದ್ದರು. ೧೯೩೮ರಲ್ಲಿ ಅಮೇರಿಕೆಯ 'ಏಶಿಯಾ' ಪತ್ರಿಕೆಯಲ್ಲಿ ಯಕ್ಷಗಾನದ ಕುರಿತು ಲೇಖನವನ್ನು ಪ್ರಕಟಿಸಿದ್ದರು. ಮುಂದೆ ಮುಂಬಯಿಯ "ಇಲಸ್ಟ್ರೇಟೆಡ್ ವೀಕ್ಲಿ" ಯಲ್ಲಿಯೂ ಒಂದು ಸಚಿತ್ರ ಲೇಖ ಬಂದಿತು. ಚಿತ್ರ ಶಿಲ್ಪಕಲೆಗಳಿಗಾಗಿ ಅನೇಕ ಊರು ಸಂಚರಿಸುವ ಕಾರಂತರು ಕ್ರಮೇಣ ಯಕ್ಷಗಾನದ ಚಿತ್ರ, ಗೀತ, ನೃತ್ಯಗಳ ಸಂಮಿಶ್ರ ಕಲೆಯ, ಈ ಮೂರು ಲೋಕದಲ್ಲಿ ಹೆಚ್ಚಿನ ಸ್ವಾರಸ್ಯವನ್ನು ಕಂಡರು. ಯಕ್ಷಗಾನದ ಹಾಡು, ಕುಣಿತ, ರಸಭಾವಗಳಿಗೆ ಎಷ್ಟು ಚೆನ್ನಾಗಿ ಒದಗುತ್ತದೆಂಬ ಪ್ರತ್ಯಕ್ಷ ಅನುಭವ ಇವರಿಗೆ ಆಯಿತು. ಇದೇ ವೇಳೆಗೆ ಅರ್ನಾಲ್ಡ ಬಾಕೆಯವರಂಥ ಸಂಗೀತ ಶಾಸ್ತ್ರ ಸಂಶೋಧಕರ ಸ್ನೇಹ ಕಾರಂತರಿಗೆ ದೊರಕಿತು. ಅವರೊಡನೆ ಜಾನಪದ ಗೀತಗಳ ಸಂಶೋಧನೆಗಾಗಿ ಸಂಚಾರವೂ ನಡೆಯಿತು. ಆ ಮೂಲಕ ಯಕ್ಷಗಾನದಲ್ಲಿಯೂ ಮಾತಿನಲ್ಲಿಯೂ

ಗೀತಕ್ಕೂ ಇರುವ ನಿಕಟ ಸಂಬಂಧ ಕಾರಂತರು ಮನಗಂಡರು. ಅದರ ಬಹುಭಾವಮುಖವುಳ್ಳ ಸೌಂದರ್ಯವನ್ನು ಅವರು ಉಂಡರು. - ಈ ಗ್ರಂಥದಲ್ಲಿ ನಮಗೂ ಧಾರಾಳವಾಗಿ ಉಣಿಸಿದ್ದಾರೆ.

ಮುಂದೆ ಕಾರಂತರು ಬಣ್ಣದ ಕುಷ್ಟ, ಗಣಪತಿ ಪ್ರಭು ಮುಂತಾದ ದಕ್ಷಿಣ ಕನ್ನಡದ ಯಕ್ಷಗಾನ ಕಲಾವಿದರನ್ನು ಕರೆದುಕೊಂಡು ಬೆಂಗಳೂರು ಮುಂಬಯಿ ತನಕ ಹೋಗಿ ನಮ್ಮ ಯಕ್ಷಗಾನ ನೃತ್ಯದ ಬೆಡಗನ್ನು ತೋರಿಸಿಕೊಂಡು ಬಂದರು. ಆಗ ಮುಂಬಯಿಯಲ್ಲಿ ರಸ್ಯನ್ ರಂಗಭೂಮಿಯ ವೇಷ ನಿರ್ಮಾಣಕರಾಗಿದ್ದ ಕಲಾವಿದೆ ದಿ॥ ಮಾಗ್ದಾ ನಾಚುಮನ್, ಮುಂದೆ 'ಇಂದ್ರದೇವ' ನೆನಿಸಿಕೊಂಡ ವೆಸ್ಟರ ಕೇಂಪ್, ಅವನ ಗೆಳೆಯ ಪೀಟರ್ ಹೊ ಬೊಕಿನ್. ಇವರೆಲ್ಲ ಯಕ್ಷಗಾನದ ಕುಣಿತ, ವೇಷಗಳಿಗೆ ಮರುಳಾದರು. ಈ ಕೊನೆಯವರಿಬ್ಬರು ಬಾಲಿ, ಜಾವ ಮೊದಲಾದ ದೇಶಗಳ ನೃತ್ಯ ತಿಳಿದು ಬಂದವರು. ಆ ಮರುವರ್ಷ ಇಂಟರ್‌ನ್ಯಾಶನಲ್ ಡಾನ್ಸ್ ಅರ್ಚೀವ್ಸದ ಅಧ್ಯಕ್ಷ ರೋಲ್ಫದ್ ಮಾರಿ ಎಂಬಾತ ಮಂಗಳೂರು ತನಕ ಬಂದು ಕಾರಂತರನ್ನು ಆಗ್ರಹಪಡಿಸಿ ಯಕ್ಷಗಾನ ನರ್ತಕರ ಚಿತ್ರಸಂಗ್ರಹ ಮಾಡಿಕೊಂಡನು. ಫ್ರೆಂಚ್, ಸ್ವೀಡಿಶ್ ಕಲಾವಿದರೊಂದಿಗೆ ಕೂಡಿ ಕಾರಂತರು ಇಂಥ ಚಿತ್ರ ಸಂಗ್ರಹಣಕ್ಕಾಗಿ ಪಟ್ಟ ಕಷ್ಟ ತುಂಬ ಇದೆ. ಇದರ ಅನುಷಂಗಿಕವಾಗಿ ಬೊಂಬೆ, ತೊಗಲು ಬೊಂಬೆಗಳ ಚಿತ್ರಸಂಗ್ರಹವೂ ಸಾಗಿತು.

### ಶೋಧನೆಗಾಗಿ ತಿರುಗಾಟ

ಇದಕ್ಕೂ ಹೆಚ್ಚಿನ ಪರಿಶ್ರಮ ಯಕ್ಷಗಾನದ ಚರಿತ್ರೆ ಸಾಹಿತ್ಯಗಳ ಪರಿಚಯಕ್ಕಾಗಿ ತನ್ನ ವಿಶಿಷ್ಟವೂ ಮೌಲಿಕವೂ ಆದ ಕೆಲವು ಪ್ರತಿಪಾದನೆಗಳ ಪ್ರಮಾಣಗಳಿಗಾಗಿ ನೂರಾರು ತಾಡವಾಲೆಗಳ ಪರಿಶೋಧನೆ ಕಾರಂತರು ಕೈಗೊಂಡರು. ಅದಕ್ಕಾಗಿ ದಕ್ಷಿಣೋತ್ತರ ಕನ್ನಡ ಜಿಲ್ಹೆಗಳಲ್ಲಿ ಸಂಚರಿಸಿದರು. ಇದೂ ಅಲ್ಲದೆ, ನಾಗಮಂಡಲ ಢಕ್ಕೆ ಬಲಿ ದೆವ್ವಗಳ ವೈದ್ಯರ ಕುಣಿತ - ಇತ್ಯಾದಿಗಳ ಪರಿಶೀಲನೆಯನ್ನು ದಣಿವಿಲ್ಲದೆ ಮಾಡಿದರು. ಇದೆಲ್ಲ ಅವಿಶ್ರಾಂತ ಪರಿಶ್ರಮದ ಫಲ - ಪಾಕ ಈ ಉತ್ತಮ ಗ್ರಂಥದಲ್ಲಿ ಈ ಕಲಾತಪಸ್ವಿ ಬಳಸಿದ್ದಾರೆ. ಇದನ್ನು ಯಕ್ಷಗಾನ ಕವಿಗಳು ಓದಿ ತಮ್ಮ ಗತ್ತು ತಿದ್ದಿಕೊಳ್ಳಬೇಕು. ಕಲಾವಿದರು ಓದಿ ತಮ್ಮ ಕಸಬು ಹೊಸ ಹದಕ್ಕೆ ಕುಸುರಿಕೊಳ್ಳಬೇಕು. ನನ್ನಂಥ ಇತರ ರಸಿಕರು ಓದಿ ಹೊತ್ತಿನ ಸದುಪಯೋಗ ಚಿತ್ತದ ರಸ ಸಂಸ್ಕಾರಕ್ಕೆ 'ಒಂದು ಹೊಸ ವಿಧಿಯ ನಿರ್ದೇಶ' ಪಡೆಯಬೇಕು. ಮೊನ್ನೆ ಜರುಗಿದ ಬಳ್ಳಾರಿಯ ಸಾಹಿತ್ಯ ಸಮ್ಮೇಲನದ ಕನ್ನಡ ಶಾರದೆಯ ಮಯೂರಾಸನದಿಂದ ಕವಿ ಗೋಕಾಕರು ತಮ್ಮ ಭಾಷಣದಲ್ಲಿ ಯಕ್ಷಗಾನಕ್ಕೆ ಒಂದು ಗೌರವದ ಉಲ್ಲೇಖ ಕೊಟ್ಟರೂ ಆ ಸಭೆಯ ಕಾರ್ಯಕಲಾಪದಲ್ಲಿ ಇಲ್ಲವೆ ವಿವಿಧ ಸಲ್ಲಾಪಗಳಲ್ಲಿ ಶ್ರೀ ಕಾರಂತರ ಈ ಅಪೂರ್ವ ಉದ್ಗ್ರಂಥದ ಉದಾಹರಣೆಯಾಗಲಿ, ಉಲ್ಲೇಖವಾಗಲಿ ಅಧಿಕೃತವಾಗಿ ಬಂದಂತೆ ಇಲ್ಲ. ಇದು ಶೋಚನೀಯವಿದ್ದಷ್ಟೇ ಯೋಚನೀಯವೂ ಅಹುದು.

### ಪುಸ್ತಕದಲ್ಲೇನಿವೆ?

ಪುಸ್ತಕದಲ್ಲಿ ಒಟ್ಟೂ ಎರಡು ಭಾಗಗಳು. ಮೊದಲನೆಯದು ಯಕ್ಷಗಾನ ಕಲೆಯ ಸ್ವರೂಪ ಪ್ರಭೇಧ, ವಿಶೇಷ, ಸಂಪ್ರದಾಯ, ಪ್ರಯೋಗ-ವಿಪರ್ಯಾಸ, ಯಕ್ಷಗಾನದ ಗದ್ಯ ಪದ್ಯಾತ್ಮಕ ಸಾಹಿತ್ಯದ ವರ್ಣನೆ, ವಿವರಣೆ. ಆ ಹಾಡುಗಬ್ಬಗಳ ಕೆಲವು ಮಾದರಿಯ ಸ್ವರವ್ಯಸ್ತಾರ, ಸಭಾಲಕ್ಷಣ, ನೃತ್ಯ ಪದ್ಧತಿಯ ಪರಿಚಯ, ಪ್ರಚಲಿತ ಪರಿಸ್ಥಿತಿಯ ವಿಮರ್ಶೆ, ವೇಷ-ಭೂಷಣಗಳ ದರ್ಶನ

ದಿಗ್ದರ್ಶನ ಪುನರುಜ್ಜೀವನ ಕಾರ್ಯದ ರೂಪರೇಖೆ-ಇತ್ಯಾದಿ ತಾತ್ವಿಕ ಹಾಗೂ ತಾಂತ್ರಿಕ ವಿವೇಚನೆ ಪ್ರತಿಪಾದನೆಗಳಿಂದ ತುಂಬಿದೆ. ಇಲ್ಲಿ ಬಂದ ಪ್ರತಿಯೊಂದು ಪ್ರತಿಪಾದನೆ ಪ್ರತಿಯೊಬ್ಬರಿಗೂ ಒಪ್ಪಿಗೆ ಆಗುವಂತಿಲ್ಲ - ಬೇಕೆಂತಲೂ ಇಲ್ಲ. ಆದರೆ ಇಲ್ಲಿಯ ಬಹುಪಾಲು ಅಭಿಪ್ರಾಯ ಸರ್ವಸಮ್ಮತವೂ ಸನ್ಮಾನ್ಯವೂ ಆಗಿದೆ. ವಿಶೇಷತಃ ಈ ಕಲೆಯ ರಂಗು ಪ್ರಯೋಗದ ಕುರಿತು-ನರ್ತನ, ವೇಷ-ಭೂಷೆ, ಪ್ರಯೋಗ ಪರಿಮಾಣ ಅರ್ಥಗಾರಿಕೆ ಇತ್ಯಾದಿಗಳ ಕುರಿತು ಕಾರಂತರು ಕೊಟ್ಟ ಸೂಚನೆಗಳೂ ಪಟ್ಟ ಅಭಿಪ್ರಾಯಗಳೂ ಅತ್ಯಂತ ಮಾರ್ಮಿಕವಾಗಿದೆ ಮಾರ್ಗದರ್ಶಕವಾಗಿದೆ.

ಬಯಲಾಟದ ಹುಟ್ಟು, ಗೊಂಬೆಯಾಟಗಳಿಗೂ ಅದಕ್ಕೂ ಇರುವ ಸಂಬಂಧ, ತಾಳಮದ್ದಳೆ ಬಯಲಾಟಗಳ ಸಂಬಂಧ, ನರ್ತನ ಪ್ರಧಾನವಾದ ಈ ಪ್ರಾಯೋಗಿಕ ಕಥನ ಕಲೆಗೆ 'ಯಕ್ಷಗಾನ' ವೆಂಬ ಹೆಸರೇಕೆ? ಎಂಬ ವಿಚಾರ, ದಕ್ಷಿಣಾದಿಯಿಂದ ಬೇರೆಯಾದ ಯಕ್ಷಗಾನವೆಂಬ ಸ್ವತಂತ್ರವಲ್ಲದಿದ್ದರೂ ಪ್ರತ್ಯೇಕ ಗಾಯನ ಸಾಂಪ್ರದಾಯದ ಅಸ್ತಿತ್ವ-ವಿಕಾಸಗಳ ಕುರಿತು ಚರ್ಚೆ-ಇವೆಲ್ಲ ನಿರ್ಣಾಯಕವಲ್ಲದಿದ್ದರೂ ತುಂಬ ಉದ್ಬೋಧಕವಾಗಿ ಬಂದಿವೆ. ವಿಶೇಷತಃ 'ಗಂಧರ್ವಗಾನ' ಮತ್ತು 'ಪಂಚಮಸ್ವರ' ದ ವಿಚಾರ ಶ್ರೀ ಕಾರಂತರು ಪ್ರಸ್ತಾಪಿಸಿದ ಸಿದ್ಧಾಂತಗಳು ಕನ್ನಡದಲ್ಲಿ ಪ್ರಕಟವಾಗುತ್ತಿರುವದು ಇದೇ ಮೊದಲು. ಕನ್ನಡ ಕಲಾ ಪ್ರಪಂಚಕ್ಕೆ ಇದು ಕಾರಂತರ ಮೌಲಿಕ (Original) ಸಂಶೋಧನೆ. ಅದೇ ರೀತಿ ಅವರ ಸತ್ಯ ಪಕ್ಷಪಾತಿ ನಿರ್ಭಯ ಅಭ್ಯಾಸದ ಇನ್ನೊಂದು ಮೌಲಿಕ ಶೋಧ "ಪಾರ್ತಿ ಸುಬ್ಬ" ನ ಅಂತ್ಯೋಷ್ಟಿ! ಇದಕ್ಕಾಗಿ ಮಾಡಿದ ತಾಡವಾಲೆ, ಯಕ್ಷಗಾನ ಅಖ್ಯಾನ-ಪದ್ಯ-ಪಾಠಗಳ ಪರಿಶೀಲನೆಯೇ ಪುಸ್ತಕದ ೨ನೇ ಭಾಗಕ್ಕೆ ಸಾಮಗ್ರಿ ಒದಗಿಸಿದೆ. ಇಲ್ಲಿ ಯಕ್ಷಗಾನ ಕವಿಗಳ ಚರಿತ್ರೆ ಸಂಗ್ರಹವಾಗಿ ಬಂದಿದೆ.

ಈ ಲೇಖಕರ ಈ ಕುರಿತ ಅಧಿಕಾರ ಅನನ್ಯವಾದದ್ದು. ಏಕೆಂದರೆ ಜಾವಾ, ಬಲಿ, ಉಝುಬೆಕ್, ಸ್ಪೇನ್ ಮುಂತಾದ ಪೂರ್ವಪಶ್ಚಿಮಗಳ ಜಾನಪದ ನೃತ್ಯ-ಗೀತ ಪ್ರಕಾರಗಳ ದರ್ಶನಾನುಭವಗಳಿಂದ ತಾರತಮ್ಯಶೀಲವಾದ ಸೌಂದರ್ಯ ಸಮೀಕ್ಷಕನ ದೃಷ್ಟಿಯ ಆಳ ಅಗಲಗಳು ಈ ಕಲೋಪಾಸಕರಿಗಿದ್ದಂತೆ ಇದಷ್ಟು ಕ್ಷೇತ್ರದಲ್ಲಿ ಅಲೆದಾಡುವ ಇಲ್ಲವೆ ತಳವೂರಿದ ಇನ್ನೊಬ್ಬರಿಗೆ ಇಲ್ಲ. ಈ ದೃಷ್ಟಿ ಯಕ್ಷಗಾನದಲ್ಲಿ ಕಂಡ ಸೌಂದರ್ಯ ಸಂಪತ್ತು, ಕಲಾನಿಧಿ ಏನೆಂಬುದನ್ನು ಪ್ರತ್ಯಕ್ಷ ಓದಿಯೇ ತಿಳಿಯಬೇಕು. ತಿಳಿದೇ ಸವಿಯಬೇಕು. 'ಯಕ್ಷಗಾನ'ದ ಒಂದು ಎಲ್ಲೆ ಮುಟ್ಟುವ ಸಂಶೋಧನೆಯಿಂದ Ph.D ಪಡೆಯುವ ವಿದ್ವಾಂಸರಿದ್ದ ಈ ಕರ್ನಾಟಕದ ವಿಶ್ವವಿದ್ಯಾಲಯವು ಇಂಥ ಅಮೋಘ ಗ್ರಂಥಕ್ಕಾಗಿ ಶ್ರೀ ಕಾರಂತರಿಗೆ D. Litt ಪದವಿ ಕೊಟ್ಟರೂ ಆ ಪದವಿ ಸತ್ಪಾತ್ರಕ್ಕೆ ದಾನ, ಉತ್ತಮನಿಗೆ ಮಗಳು ಕೊಟ್ಟಂತೆ ಆದೀತು!

●

('ಜನಸೇವಕ' ೧೯೫೮)

# ಪ್ರಾದೇಶಿಕ ಭಾಷೆಯ ಬಳಕೆಯಲ್ಲಿ ಕೇರಳದ ಮಾದರೀ ಹೆಜ್ಜೆ

ಕನ್ನಡ ರಾಜ್ಯದ ಕನ್ನಡ ರಮಾರಮಣರೆನಿಸಿಕೊಂಡ ಮೈಸೂರೊಡೆಯರ ಸುಕೀರ್ತಿ ಮಂದಿರದಲ್ಲಿ ಕನ್ನಡಾಂಬೆಯ ಪ್ರತಿಮೆಯೆನಿಸಿದ ಚಂಡಿ ಚಾಮುಂಡಿ ಕನ್ನಡಿಗರ ರಾಜೇಶ್ವರಿಯಾದ ಮಹಿಷಾಸುರ ಮರ್ದಿನಿಯ ನವರಾತ್ರಿಯ ಮಹೋತ್ಸವ ಪರಂಪರಾಗತ ವಿಜೃಂಭಣೆಯಿಂದ ನಡೆಯಿತು. ಪ್ರತಿಯೊಂದು ಜಿಲ್ಹೆ ತಹಶೀಲು ಗ್ರಾಮದ ಮಟ್ಟದಲ್ಲಿ ಈ ದಸರಾ ಮಹೋತ್ಸವ ತಕ್ಕ ಸಡಗರದಿಂದ ನಡೆಯತಕ್ಕದ್ದೆಂದು ಮೈಸೂರು ಸರಕಾರದ ಆದೇಶವಿತ್ತು. ಆದರೆ ಇಲ್ಲಿ ನಾವು ಗಮನಿಸುವ ಸಂಗತಿಯೆಂದರೆ ಈ ಕನ್ನಡಿಗರ ಕನ್ನಡ ಸಂಸ್ಕೃತಿಯ ಸಂಪತ್ತಿಗೆ ಕಲಶಕನ್ನಡಿ ಹಿಡಿಯುವ ಈ ನಾಡಹಬ್ಬದ ಕುರಿತು ಹೊರಡಿಸಿದ ಪರಿಪತ್ರಕದ ಭಾಷೆ ಮಾತ್ರ ಕನ್ನಡವಲ್ಲ. ರಾಷ್ಟ್ರಭಾಷೆ ಹಿಂದಿಯೂ ಅಲ್ಲ. ಕನ್ನಡ ನಾಡಹಬ್ಬದ ಕುರಿತು ಹೊರಟ ಅಪ್ಪಣೆ ಇಂಗ್ಲಿಷ್ ಭಾಷೆಯಲ್ಲಿ!

ಭಾಷಾನುಗುಣ ರಾಜ್ಯಪುನರ್ಘಟನೆ ಆದದ್ದೇ ಜನತೆಯ ಹೃದಯದ ಭಾಷೆಯಲ್ಲಿ ಜನತೆಯ ಆಡಳಿತ ಸಾಗಬೇಕೆಂದು - ಈ ಮಾತು ಈಗ ಬಹಳ ಪ್ರಾಚೀನವೆನಿಸುತ್ತದೆ, ಮಳೆಗರೆದು ಹೋದ ಮೋಡದ ದೂರದ ಗುಡುಗಿನಂತೆ! ಏಕೆಂದರೆ ರಾಜ್ಯ ನಮ್ಮದಾದರೂ ರಾಜ್ಯದ ಭಾಷೆ ನಮ್ಮದಾಗಿಲ್ಲ. ಅಧಿಕೃತವಾಗಿ ಘೋಷಣೆಯೇನೋ ಎಂದೋ ಹೊರಟಿದೆ - ಮೈಸೂರು ಸರಕಾರದ ರಾಜಭಾಷೆ ರಾಜ್ಯ ಕಾರಭಾರ ವ್ಯವಹಾರದ ಭಾಷೆ ಕನ್ನಡವೇ ಆಗಿದೆಯೆಂದು. ಆದರೆ ಆ ನಿಟ್ಟಿನಲ್ಲಿ ಆ ನೋಟದಿಂದ ನಡೆದ ದಾರಿ ಎಷ್ಟು? ಅಲ್ಲ ಈವರೆಗೆ ಇಟ್ಟ ಹೆಜ್ಜೆಗಳೆಷ್ಟು? ಅದೂ ಅಲ್ಲ ಹೆಜ್ಜೆ ಇಡಲೆಂದು ಸರಕಾರ ಎತ್ತಿದ ಕಾಲಾದರೂ ಎಷ್ಟು ಸಲ? ಈ ವಿಚಾರ ನಿಷ್ಪನ್ನವಾಗುವುದು ಶೂನ್ಯ ಸಂಪಾದನೆಯೇ।

## ನೆರೆಯ ಕೇರಳದಲ್ಲಿ

ಸಂಭಾವಿತ ಕಾಂಗ್ರೆಸ್ ಜಗತ್ತಿನಲ್ಲೆಲ್ಲ ಕುವಿಖ್ಯಾತವಾಗಿ ಬಿಟ್ಟ ಕೇರಳದ ರಾಜ್ಯವು ತನ್ನ ಸರಕಾರೀ ಭಾಷೆ ಪ್ರಾದೇಶಿಕ ಭಾಷೆಯೇ ಮಾಲಿಯಾಳಿಯೇ ಎಂದು ಸಾರಿತ್ತು. ಆ ಸಾರಿಕೆಯ ಬೆನ್ನಿಗೇ ಈವರೆಗೆ ಆ ಸರಕಾರವು - ಭಾಷೆಯೆಂಬುದೊಂದು ಬರೆ ಭಾವನೆಯ ಬಾಬಲ್ಲವೆಂದು ಭಾವಿಸುವ ಕಮ್ಯುನಿಸ್ಟ ಸರಕಾರವು- ಏನು ಕಾರ್ಯ ಸಾಧಿಸಿತು? ಈ ಪ್ರಶ್ನೆಗೆ ಉತ್ತರ ಈ ಕೆಳಗೆ ಕೊಡಲಾಗಿದೆ. ಭಾಷೆಯೊಂದು ಸಾಧನ. ಅದೊಂದು ಆಯುಧ. ಜನಸಂಘಟನೆಯ ಜನಹಿತದ ಜನತಾ ಹೃದಯದ ಮೂಲೆಮೂಲೆಗೆ ಮೂಲಮೂಲಕ್ಕೆ ಮುಟ್ಟಬಲ್ಲ ಏಕಮೇವ ಅದ್ವಿತೀಯ ಉಪಕರಣವೂ ಅಹುದು ಉಪಾಯವೂ ಅಹುದು. ಅದು ಸಂಸ್ಕೃತಿಯ ಪ್ರತ್ಯಕ್ಷವಾಹನ. ರಾಷ್ಟ್ರೀಯತೆಯ ಪ್ರಕಟವಾದ ಗಮಕ. ಈ ಮಾತು ಬೇರೆ. ಕೇವಲ "ಜನಸಂಪರ್ಕ"ದ ಆಡಳಿತ ಹಾಗೂ ಆಳರಸರೊಂದಿಗೆ ಪ್ರಜೆಯ ಘನಿಷ್ಠವಾದ ನಿಕಟವೂ ಉತ್ಕಟವೂ ಆದ ಸಂಬಂಧ ಅಥವಾ ಆತ್ಮೀಯತೆ ಸ್ಥಾಪಿಸುವ ಒಂದೇ ಅತ್ಯಗತ್ಯದ ಪ್ರಯೋಜನದ ದೃಷ್ಟಿಯಿಂದಾದರೂ ಜನತೆಗೆ ಹೊಣೆಗಾರವಾದ ಜನತೆಯನ್ನು ಪ್ರತಿನಿಧಿಸುವ ಪ್ರತಿಧ್ವನಿಸುವ ಸರಕಾರವು ಜನತೆಯ ಭಾಷೆಯನ್ನು ತನ್ನ ವ್ಯವಹಾರದ ಮಾಧ್ಯಮವಾಗಿ ಮಾಡಿಕೊಳ್ಳುವುದು ಆ ಕುರಿತು ಒಂದು ನಿಶ್ಚಿತವೂ ಆದ ಯೋಜನೆ ಹೂಡುವುದು ಆ ಹೂಟದ ಹಿಡಿತ ಪಟುವಾಗಿ ಪಟ್ಟಾಗಿ ಇಟ್ಟುಕೊಂಡು ಸಾರ್ವತ್ರಿಕ ಸಾರ್ವಜನಿಕ ಕಾರ್ಯ ನಡೆಯಿಸುವುದೂ ಕ್ರಮಪ್ರಾಪ್ತವಾದ ಕರ್ತವ್ಯ. ಈ ಕರ್ತವ್ಯವನ್ನು

ಕಿಡಿಗೇಡಿಗಳೆಂದು ವಿಶ್ವಪ್ರಚಾರಕ್ಕೆ ಗುರಿಯಾದ ಕೇರಳದ ಸರಕಾರವು ಹೇಗೆ ಕ್ರಮಗೊಳಿಸಿದೆ? ತುಸು ನೋಡಿಕೊಳ್ಳೋಣ.

## ಸೂಚನೆಗಳು

ಕೇರಳದ ಸರಕಾರವು ಸರಕಾರೀ ಭಾಷಾ ಸಮಿತಿಯನ್ನೊಂದು ನೇಮಿಸಿತ್ತು. ಅದರ ವರದಿಯ ಸಾರಾಂಶವು ಈಗ ಪ್ರಸಿದ್ಧವಾಗಿದೆ. ಈ ಸಾರಾಂಶವು ಸಾರುವ ಅಂಶವೆಂದರೆ, ಮಲಿಯಾಳಿಯೆ ಕೇರಳದಲ್ಲಿ ಆಡಳಿತದ ಎಲ್ಲ ಮಟ್ಟಗಳಲ್ಲಿ ಆದಷ್ಟು ಬೇಗ ಸರಕಾರಿ ಭಾಷೆಯಾಗಿ ಆಡಳಿಸಲ್ಪಡಬೇಕು. ಆದಷ್ಟು ಬೇಗೆಂದರೆ ಹೇಗೆ? ಅಭ್ಯಂತರದ ಅವಧಿಯಲ್ಲಿ ಸ್ಥಿತ್ಯಂತರ ವೇಗವು ಆಡಳಿತದ ಕಾರ್ಯಕ್ಷಮತೆ ಹಾಗೂ ಪರಿಣಾಮಕಾರಿತೆಯನ್ನು ಹದಗೆಡಿಸದಂತೆ ಹಾಳುಮಾಡದಂತೆ ಜಾಗ್ರತೆ ವಹಿಸತಕ್ಕದ್ದು.

ಜನತೆಯ ಭಾಷೆಯ ಸರಕಾರೀ ಉಪಯೋಗದ ರೀತಿ ನೀತಿಗಳ ಪರಿಶೀಲನೆಗೆ ಒಂದು ಸಮಿತಿ ಏರ್ಪಟ್ಟದ್ದು ಇದೇ ಮೊದಲು. "ಜನತೆಯ ಭಾಷೆಯಲ್ಲಿ ಸರಕಾರ ವ್ಯವಹರಿಸದಿದ್ದರೆ, ಪ್ರಜಾಪ್ರಭುತ್ವವೆಂಬುದು ಡಂಭಾಚಾರ" ವಾಗುತ್ತದೆಂದು ಸಮಿತಿಯ ಅಭಿಪ್ರಾಯ.

ಇಂಥ ಸಮಸ್ಯೆ ಮುಂದೆ ಬಂದಾಗ ಯಾವಾಗೂ ಮುಂದೊಡ್ಡಲಾಗುವ ಮೂರ್ಖ ವಾದ ಒಂದಿದೆ. ಅದೆಂದರೆ ಇಂಥ ಪ್ರಾದೇಶಿಕ ಭಾಷೆಯು ಅಪರಿಪಕ್ವ, ಅನಭಿವೃದ್ಧ. ಆದರೆ ಇದೊಂದು ಮೋಸವಲ್ಲದಿದ್ದರೂ ಅಭಾಸ. ಮಲೆಯಾಳಿ ರಾಜ್ಯಭಾಷೆಗೆ ತಕ್ಕ ಬೆಳವಣಿಗೆಯನ್ನು ಹೊಂದಿದೆ. ಹಿಂದೆಲ್ಲ ಝಮೋರಿನ್ನರ ಕಾಲಮಾನದಲ್ಲಿ ಮಲೆಯಾಳಿಯದೇ ಜಾಯಮಾನವಿತ್ತು. ಬರೆ ಕಳೆದ ಅರ್ಧ ಶತಮಾನದಿಂದ ಇಂಗ್ಲಿಷು ಮಳೆಯಾಳಿಯ ಸ್ಥಾನವನ್ನು ಆಕ್ರಮಿಸಿದೆ.

## ಸಜೀವತೆಯ ಲಕ್ಷಣ

ಈ ಪ್ರಶ್ನೆ ಬರೆ ಕಾಲಮಾನದಿಂದ ಅಳೆಯತಕ್ಕದ್ದೇ ಅಲ್ಲ. ಯಾವ ಭಾಷೆಯೂ ಕೇವಲ ಶೂನ್ಯದಲ್ಲಿ ಹವೆಯಾಡದ ಪೊಳ್ಳಿನಲ್ಲಿ ವಿಕಾಸವಾಗಲಾರದು. ದಿನನಿತ್ಯದ ವಿವಿಧಮಟ್ಟದ ಒತ್ತಾಯದ ಬಳಕೆಗೆ ಬಂದು, ಬಿದ್ದು ಭಾಷೆಯು ಹದಗೊಳ್ಳುತ್ತದೆ. ಅದರ ಪದ ಸಂಗ್ರಹ, ಶಬ್ದ ಶಕ್ತಿ ವಾಗ್ಧೋರಣ, ಪ್ರಯೋಗ ಪರಿಣತಿ ಸಂವೃದ್ಧವಾಗುತ್ತದೆ ಸಮೃದ್ಧವಾಗುತ್ತದೆ. ಇಂಗ್ಲಿಷ, ಸಂಸ್ಕೃತ ಭಾಷೆಗಳಿಂದ ಪದ ಸಂಪತ್ತನ್ನು ಪಡೆಯಬಹುದು. ಸಜೀವ ಭಾಷೆಯ ಭಾಷೆಯ ಸಜೀವತೆಯ ಲಕ್ಷಣವೇ ಇದು - ಹೊರಗಿನ ಸತ್ವಾಂಶಗಳನ್ನು ಹೀರಿಕೊಂಡು ತನ್ನದಾಗಿ ಮಾಡಿ ಬಲಿತು ಬೆಳೆಯುವದು. ಹೀಗೆ ಮಡಿಯಾದ ಮಣೆಯಲೊಲ್ಲದ ಜಡವಾದ ಭೂಮಿಕೆಯನ್ನು ಇಟ್ಟುಕೊಂಡಿಲ್ಲ.

ಸಮಿತಿಯ ಮುಖ್ಯ ಸೂಚನೆಯೆಂದರೆ, ಮಲೆಯಾಳಿ ಬರುವ ೭ ವರ್ಷಗಳಲ್ಲಿ ರಾಜಭಾಷೆಯ ಪಟ್ಟಕ್ಕೆ ಏರಬೇಕು. ಈ ಅವಧಿಯಲ್ಲಿ ಈ ಬದಲಾವಣೆ ಕ್ರಮಬದ್ಧವಾಗಿ ದೃಢಬದ್ಧವಾಗಿ ಸಾಗಬೇಕು.

## ಕೆಲ ಶಿಫಾರಸುಗಳು

ಕ್ರಮಬದ್ಧತೆಯ ಮೊದಲನೆಯ ಹಂತವೆಂದರೆ ಸರಕಾರದ ದಿನನಿತ್ಯದ ಜನಸಂಪರ್ಕವುಳ್ಳ ೧೭ ವಿಭಾಗಗಳಲ್ಲಿ ಕೂಡಲೇ ಮಲೆಯಾಳಿ ಭಾಷೆ ಜಾರಿಯಲ್ಲಿ ತರುವದು. ಈ ವಿಭಾಗಗಳೆಂದರೆ, ಸ್ಥಾನಿಕ ಸ್ವರಾಜ್ಯ, ಕಂದಾಯ, ಆಯುರ್ವೇದ, ಉದ್ದಿಮೆ, ಸಹಕಾರ, ಹರಿಜನ ಕಲ್ಯಾಣ; ರಜಿಸ್ಟ್ರೇಷನ್, ಕಾರ್ಮಿಕ, ಪೋಲೀಸ, ಅರಣ್ಯ, ಬೇಸಾಯ, ಮೀನುಗಾರಿಕೆ, ಪಶುವೈದ್ಯಕ,

ಶಿಕ್ಷಣ, ಸಾರಿಗೆ, ಪಂಚಾಯತ ಕೋರ್ಟು ಮತ್ತು ರಾಷ್ಟ್ರೀಯ ವಿಕಾಸ ಯೋಜನೆ.

ಈ ವಿಭಾಗಗಳಲ್ಲಿಯೂ ಪ್ರಥಮ ಕರ್ತವ್ಯವೆಂದರೆ, ಎಲ್ಲಿ ಟಂಕಲೇಖನ (ಟೈಪರಾಯಟಿಂಗ್) ಬಳಕೆಯಲ್ಲಿ ಇಲ್ಲವೋ ಅಂಥ ಕಚೇರಿಗಳೂ ಅಧಿಕಾರಿಗಳೂ ತಮ್ಮ ಪತ್ರವ್ಯವಹಾರವನ್ನು ಕೂಡಲೆ ಮಲೆಯಾಳಿಯಲ್ಲಿ ಆರಂಭಿಸಬೇಕು. ಜನಸಕ್ಕೆ ಕಳಿಸುವ ಪತ್ರ ತಿಳಿಸುವ ಜಾಹೀರುನಾಮೆಗಳು ಮಾತ್ರವಲ್ಲ, ತಮ್ಮ ವರಿಷ್ಠರೊಡನೆ ಇಡುವ ಪತ್ರ ವ್ಯವಹಾರವನ್ನು ಮಲೆಯಾಳಿಯಲ್ಲಿಯೇ ಬರೆಯತಕ್ಕದ್ದೆಂದು ಸಮಿತಿಯ ಶಿಫಾರಸು. ಇದಕ್ಕೆಲ್ಲ ಅನುಕೂಲವಾಗುವಂತೆ ಸಮಿತಿಯು ೫೦ ಸಾವಿರ ಮಲೆಯಾಳಿ ಭಾಷೆಯ ಶಬ್ದ ಸಂಗ್ರಹವನ್ನು ಸಿದ್ಧ ಮಾಡಿದೆ. ಸಂಬಂಧಪಟ್ಟ ಸರಕಾರಿ ವಿಭಾಗಗಳಿಗೆ ಈ ಸಂಗ್ರಹ ಅನುವಾದದ ಅನುಕೂಲಕ್ಕಾಗಿ ಪೂರೈಸಲಾಗುವದು.

ಈ ಶಬ್ದ ಸಂಗ್ರಹ ತಯಾರಿಸಬೇಕಾಯಿತೆಂಬ ಮಾತೇ ಒಂದು ಅಗತ್ಯವನ್ನು ಸೂಚಿಸುತ್ತದೆ. ಸದ್ಯದ ಸ್ಥಿತ್ಯಂತರದ ಅಭ್ಯಂತರದಲ್ಲಿ ಅನೇಕಾನೇಕ ಮಂದಿ ಇಂಗ್ಲಿಷಿನಲ್ಲಿ ಚಿಂತಿಸಿದ ವಿಚಾರಗಳನ್ನು ಮಲೆಯಾಳಿಯಲ್ಲಿ ರೂಪಾಂತರಿಸಬೇಕಾಗುವುದು. ಆದರೆ ಈ ಮಾನಸಿಕ ಭಾಷಾಂತರದ ವ್ಯಾಪಾರ ನಿರಂತರ ನಡೆಯಲಾರದು.

ಇಲ್ಲಿ ಇನ್ನೊಂದು ಮಹತ್ವದ ಸೂಚನೆ ಸಮಿತಿ ಕೊಡುತ್ತದೆ. ಪ್ರಾದೇಶಿಕ ಭಾಷೆ ಮಾಧ್ಯಮವಾಗಿ ಸ್ವೀಕರಿಸಿದಾಗ ಇಂಗ್ಲಿಷ್ ವಾಕ್ಯಗಳನ್ನು ಅಕ್ಷರಶಃ ಶಬ್ದಕ್ಕೆ ಶಬ್ದವಾಗಿ ಅನುವಾದಿಸಬೇಕಾಗಿಲ್ಲ. ಬಳಕೆ ಹೆಚ್ಚಾದಂತೆ ವಿಷಯ ಹಾಗೂ ಮಾಧ್ಯಮದ ಹೊಂದಿಕೆಯ ಹದ ಹೆಚ್ಚು ಹೆಚ್ಚು ಕೂಡಿ ಬಂದು ಸರಕಾರಿ ಕಾಗದ ಪತ್ರಗಳ ಅಧಿಕೃತವಾದ ಶೈಲಿಯು ಕ್ರಮೇಣ ಹೆಚ್ಚು ಅಚ್ಚುಕಟ್ಟಾಗಿ ಮಾರ್ಪಡುವುದರಲ್ಲಿ ಸಂದೇಹವಿಲ್ಲ. ಆ ಕಾಲ ಮಾಗಿ ಬಂದಾಗ ಶಬ್ದ ಸಂಗ್ರಹದ ಅವಶ್ಯಕತೆ ಇಂದಿನದಕ್ಕೆ ವಿಪರೀತವಾಗುವುದು - ಮಲೆಯಾಳಿಗೆ ಸಮಾನಾರ್ಥಕವಾದ ಇಂಗ್ಲಿಷ್ ಪದಪ್ರಯೋಗಗಳ ಒಂದು ಸೂಚಿ ತಯಾರಿಸಬೇಕಾದೀತು.

## ಶಬ್ದ ಸಂಗ್ರಹ ವಿಧಾನ

ಈ ಶಬ್ದ ಸಂಗ್ರಹದ ಕುರಿತು ಸಮಿತಿ ವಹಿಸಿದ ದಕ್ಷತೆಯೆಂದರೆ ಕೇಂದ್ರ ಸರಕಾರದ ಸೂಚನೆಯ ಮೇರೆಗೆ ಎಲ್ಲ ಮಲೆಯಾಳಿ ಶಬ್ದಗಳನ್ನು ದೇವನಾಗರಿ ಲಿಪಿಯಲ್ಲಿಯೂ ಜತೆಗೆ ಬರೆಯಲಾಗಿದೆ. ಅಲ್ಲದೆ ಅನ್ಯ ಭಾಷೆಯ ಶಬ್ದಗಳೂ - ಈಗಾಗಲೇ ಜನರ ಬಾಯಮಾತಿನಲ್ಲಿ ಕೂತಂಥವು - ಸಮಾವೇಶಗೊಳಿಸಲಾಗಿವೆ.

ಹೀಗೆ ಸರಕಾರಿ ವಿಭಾಗಗಳಿಗೆ ಶಬ್ದ ಸಂಗ್ರಹವನ್ನು ರೂಢಿಗೊಳಿಸುವದಲ್ಲದೆ, ಆಯಾ ಕಚೇರಿಯ ಚಿತ್ರಗುಪ್ತರೆಲ್ಲ ಮಲೆಯಾಳಿಯಲ್ಲಿ ಒಂದು ವರ್ಷದೊಳಗಾಗಿ ಯೋಗ್ಯ ಪ್ರಾವಿಣ್ಯ ಪಡೆಯತಕ್ಕದ್ದೆಂದೂ ಸಮಿತಿಯ ಆಗ್ರಹ. ಅವರಿಗಾಗಿ ಆ ಭಾಷೆಯಲ್ಲಿ ಒಂದು ನಿಬಂಧ, ಭಾಷಾಂತರ ಹಾಗೂ ಸಾರಾಂಶ ಲೇಖನವನ್ನೊಳಗೊಂಡ ಪ್ರಶ್ನೆ-ಪತ್ರಿಕೆಯಲ್ಲಿ ಪರೀಕ್ಷೆ ಏರ್ಪಡಿಸಲಾಗುವುದು. ಪ್ರಚಲಿತವಿದ್ದ ನಿಯಮೋಪನಿಯಮಗಳ ಕೋಡು, ಮ್ಯಾನ್ಯುಎಲ್ ಮುಂತಾದವೆಲ್ಲ ಮಲೆಯಾಳಿಗೆ ತರ್ಜುಮೆ ಮಾಡಲಾಗುವುದು. ಇದಿಷ್ಟು ಮೊದಲನೆಯ ಹಂತ.

ಎರಡನೆಯ ಹಂತದಲ್ಲಿ ತಾಂತ್ರಿಕ ಅಥವಾ ವಿಶೇಷ ತಜ್ಞತೆಯ ಕಾರ್ಯ ವಿಭಾಗಗಳನ್ನು ಮಲೆಯಾಳಿಯ ಮರ್ಯಾದೆಯಲ್ಲಿ ತರಲಾಗುವದು. ಇಂಥ ವಿಭಾಗಗಳೆಂದರೆ ಲೋಕೋಪಯೋಗಿ ಖಾತೆ, ವಿದ್ಯುತ್ ವಿಭಾಗ, ಸಾರ್ವಜನಿಕ ಆರೋಗ್ಯ ಇತ್ಯಾದಿ. ಇಲ್ಲಿ ಒಂದು ವರ್ಷದ ಅವಧಿಯನ್ನು

ಕೊಡಲಾಗಿದೆ. ಇಲ್ಲಿ ಕೂಡಲೇ ಸ್ಥಿತ್ಯಂತರವಿಲ್ಲ.

ಇನ್ನು ನ್ಯಾಯಾಲಯಗಳಲ್ಲಿ ಸಾಕ್ಷಿ, ಪುರಾವೆ ಉದಾಹರಣೆ (ಕೈಫಿಯತ್ತು) ಗಳೆಲ್ಲ ಈಗಾಗಲೆ ಪ್ರಾದೇಶಿಕ ಭಾಷೆಯಲ್ಲಿ ಸ್ವೀಕರಿಸಲಾಗುತ್ತದೆ, ಪುರಸ್ಕರಿಸಲಾಗುತ್ತಿವೆ. ಆದರೆ ತೀರ್ಪುಗಳು ಇನ್ನೂ ಇಂಗ್ಲಿಷದಲ್ಲಿಯೇ ಬರೆಯಲಾಗುತ್ತದೆ. ಈ ತೀರ್ಪಿನ ಭಾಷೆಯ ನಿಷ್ಕರ್ಷ ಅಖಿಲ ಭಾರತೀಯ ಭಾಷಾ ತೀರ್ಪಿನ ಮೇಲೆ ಅವಲಂಬಿಸಿ ಇಡಬೇಕೆಂದು ಸಮಿತಿಯ ಮತ. ರಾಷ್ಟ್ರಭಾಷೆಯ ಪ್ರಶ್ನೆ ಇತ್ಯರ್ಥವಾಗಿ ಅದು ಖಚಿತವಾಗಿ ಕಾರ್ಯಗತವಾಗುವನಕವೂ ನ್ಯಾಯ ನಿರ್ಣಯದ ಭಾಷೆ ಈಗಿನಂತೆ ಇಂಗ್ಲಿಷದಲ್ಲಿಯೇ ಮುಂದುವರಿಸಬೇಕೆಂದು ಸೂಚನೆ ಇದೆ. ಆಗಾಗ್ಗೆ ತಾತ್ಕಾಲಿಕ ತಾತ್ಪೂರ್ತಿಕ ಆಜ್ಞೆ-ಆದೇಶಗಳನ್ನು ಕೋರ್ಟು ಕೊಡುವದಾದರೆ ಮಲೆಯಾಳಿಯನ್ನೇ ಉಪಯೋಗಿಸಬೇಕೆಂದು ಸಮಿತಿ ಪುರಸ್ಕರಿಸಿದೆ. ಇನ್ನು ಇಂಗ್ಲಿಷಿನಲ್ಲಿ ಕೊಟ್ಟ ತೀರ್ಪುಗಳನ್ನು ಕಕ್ಷಿಗಾರರು ಪ್ರಾದೇಶಿಕ ಭಾಷೆಯಲ್ಲಿ ಬಯಸಿದರೆ ಅವುಗಳ ಅಂಥ ಭಾಷಾಂತರದ ಏರ್ಪಾಟು ಎಲ್ಲ ನ್ಯಾಯಾಲಯಗಳಲ್ಲಿ ಮಾಡಲಾಗುವದು.

## ವಿಧಾನ ಸಭೆಯಲ್ಲಿ

ಸಮಿತಿಯ ಅಭಿಪ್ರಾಯದಂತೆ ವಿಧಾನ ಸಭೆಯ ಹಾಗೂ ಕಾಯಿದೆ ಕಟ್ಟಳೆಗಳ ಭಾಷೆ, ಕಾನೂನಿನ ಪರಿಭಾಷೆಯು ಅಖಿಲ ಭಾರತಕ್ಕೂ ಏಕರೂಪವಾಗಿ ಮಾರ್ಪಡುವ ತನಕವೂ, ಇಂಗ್ಲಿಷ್ಲೇ ಇರಬೇಕು. ಆದರೆ ಹೊಸದಾಗಿ ಮಂಜೂರಾಗುವ ಕಾಯಿದೆ ಕಟ್ಟಳೆಗಳ ಮಸೂದೆಗಳನ್ನು ಇಂಗ್ಲಿಷಿನ ಜತೆಯಲ್ಲಿ ಮಲೆಯಾಳಿಯಲ್ಲಿಯೂ ಪ್ರಕಟಿಸಬಹುದು. ಅದೇ ಮೇರೆಗೆ ಉಚ್ಚ ಶಿಕ್ಷಣದಲ್ಲಿಯೂ ಪ್ರಾದೇಶಿಕ ಭಾಷೆಯನ್ನೇ - ಮಲೆಯಾಳಿಯನ್ನೇ - ಬೋಧ ಮಾಧ್ಯಮವಾಗಿ ಇಂಗ್ಲಿಷಿಗೆ ಸರಿಸಮಾನ ಸ್ಥಾನವನ್ನು ಪಡೆಯುವಂತಾಗಬೇಕು.

ಇದರ ಜತೆಗೆ ಸಮಿತಿಯ ಇನ್ನೊಂದು ಸೂಚನೆಯೆಂದರೆ, ಎಲ್ಲ ರಾಜ್ಯಗಳ ವಿಜ್ಞಾನಿಗಳ ಹಾಗೂ ವಿದ್ವಾಂಸರ ಸಭೆ ಕೇಂದ್ರ ಸರಕಾರದ ವಿದ್ಯಮಾನದಲ್ಲಿ ಸೇರಿ ಶಾಸ್ತ್ರೀಯ-ತಾಂತ್ರಿಕ ಆಡಳಿತ ಹಾಗೂ ನ್ಯಾಯಾಂಗ ಸಂಬಂಧಿಯಾದ ಪರಿಭಾಷೆಯ ಸರ್ವಸಮ್ಮತ ಸರ್ವಸಾಧಾರಣ ಸಂಗ್ರಹ ಒಂದು ಸಿದ್ಧವಾಗಬೇಕು. ಇದೂ ಅಲ್ಲದೆ ಇಂಥ ಪಾರಿಭಾಷೆ ಹಾಗೂ ಆ ಭಾಷೆಯನ್ನೊಳಗೊಂಡ ಜನತೆಯ ಭಾಷೆಯಲ್ಲಿ ಗ್ರಂಥಗಳು ಪ್ರಸಿದ್ಧವಾಗುವವೆಗೆ ಪಠ್ಯಪುಸ್ತಕಗಳನ್ನು ಇಂಗ್ಲಿಷಿನಲ್ಲಿ ಪ್ರಕಟಿಸಿದರೂ ಅವುಗಳ ಮಲೆಯಾಳಿ ಅನುವಾದಗಳನ್ನು ಜತೆಗೆ ಪ್ರಕಾಶನಗೊಳಿಸಬೇಕು - ಅದೂ ಯೋಗ್ಯ ಬೆಲೆಗೆ.

ಇಂಥ ವ್ಯವಸ್ಥಿತ ಕ್ರಮಬದ್ಧ ಹಾಗೂ ಸವಿಸ್ತರ ಕಾರ್ಯ ಯೋಜನೆಯನ್ನು ಇಟ್ಟುಕೊಂಡ ಹೊರತು ಜನತೆಯ ಭಾಷೆ ಸರಕಾರದ್ದಾಗುವದಿಲ್ಲ. ರಾಜ್ಯ ಪುನರ್ಘಟನೆ ಸಾರ್ಥಕವಾದಂತಲ್ಲ. ನಮ್ಮ ಕನ್ನಡ ರಾಜ್ಯದ ರಾಯಸಗಳೆಲ್ಲ ಆಂಗ್ಲ ಭಾಷೆಯಲ್ಲಿ ಹೊರಡುವನಕವೂ, ಜನತೆಗೆ ಆ ರಾಜ್ಯ ತನ್ನದೆನಿಸದು. ಮಾನ್ಯಮಂತ್ರಿ ಜತ್ತಿಯವರು ಈ ಕುರಿತು ಕಣ್ಣೆತ್ತಿ ಬೆರಳಿಟ್ಟು ನೋಡುವರೇ?

●

('ಜನಸೇವಕ' ೧೯೫೮)

# ಸಾಹಿತ್ಯದಲ್ಲಿ ಪ್ರಸಾದ ಗುಣ

ಭಾಷೆಯು ಸಂಸ್ಕೃತಿಯ ವಾಹನ. ಸಂಸ್ಕೃತಿಯು ಸಾಮಾಜಿಕ ಅಧಿಷ್ಠಾನವುಳ್ಳದ್ದು. ಅದೇ ರೀತಿ ಭಾಷೆಯೂ ಒಂದು ಸಾಮಾಜಿಕ ಸಿದ್ಧಿ. ಸಂಸ್ಕೃತಿಯು ಜೀವನದ ಒಂದು ರೀತಿಯಾದರೆ ಭಾಷೆಯು ಈ ರೀತಿಯ ಪಳಗುವಿಕೆಯ ಒಂದು ಸಾಧನ. ಅದನ್ನು ಪಳಗಿಸಿಕೊಂಡವರ ಒಂದು ಸತ್ವಶೀಲ ಸಾಧನ. ಹೀಗೆ ಜೀವಸ್ಪಂದವು ಮಿಡಿಯುತ್ತಿರುವ ಭಾಷೆಯಲ್ಲಿ ನಿಜವಾಗಿ ನೋಡಿದರೆ, ಸಮನಾರ್ಥಕ ಶಬ್ದಗಳು ಇರಕೂಡದು. ಶಬ್ದಗಳನ್ನು ಸಮಾನಾರ್ಥದಲ್ಲಿ ಬಳಸುವದಾದರೆ ಅದು ಒಂದು ರೂಢಿವಿಪಾಕವೇ ಎನ್ನಬೇಕು. "ಸೌಂದರ್ಯ" ವನ್ನು "ಲಾವಣ್ಯ" ವೆಂದಂತೆ, "ಕುಶಲ"ನನ್ನು "ಪ್ರವೀಣ" ವೆಂದಂತೆ, "ಲವಣ" ದಿಂದ ಬಂದ "ಲಾವಣ್ಯ" ಉಪ್ಪಿನಗುಣ, ವೀಣೆಯಿಂದ ಬಂದ "ಪ್ರವೀಣ" ಚೆನ್ನಾಗಿ ವೀಣೆ ಬಾರಿಸಬಲ್ಲವ, ಗಂಡ ಒಡೆಯ "ಯಜಮಾನ" ನಾಗಿದ್ದರೂ "ಯಜ್ಞಮಾಡುವವ"ನಲ್ಲ. ಆದರೂ ಇಂಥ ಪರ್ಯಾಯಾರ್ಥಕ ಶಬ್ದಗಳೂ ಹೇಗೋ ಅದಲು ಬದಲಾಗಿ ಬಳಕೆ ಬಂದಿವೆ. ಹಲವು ಅರ್ಥಗಳಿಗೆ ಒಂದು ಶಬ್ದ; ಹಲವು ಶಬ್ದಗಳಿಗೆ ಒಂದು ಅರ್ಥ ಹೀಗೆ ಏಕೆ? ಎಂಬ ಪ್ರಶ್ನೆ ನಮಗಿಲ್ಲಿ ಪ್ರಸ್ತುತವಲ್ಲ. ಇಂಥ ಪರ್ಯಾಯ ಶಬ್ದಗಳಲ್ಲಿ ಪ್ರತಿಯೊಂದು ಭಾಷೆಯಲ್ಲಿ ಕೆಲವು ಶಬ್ದಗಳು ಅನೇಕ ಮಹತ್ವಾರ್ಥಗಳ ಏಕವಾಹಕವಾಗಿ ಬಂದಿವೆ. ಇವು ಸಾಂಸ್ಕೃತಿಕ ಬೆಲೆಯನ್ನು ಹೆಚ್ಚಾಗಿ ಹೊತ್ತು ತಂದ ನುಡಿಯ ನಡವಳಿಕೆಯ ನಾಣ್ಯಗಳು. ಉದಾಹರಣೆಗೆ "ರಸ" "ವಿಧಿ" ಇವನ್ನೇ ನೋಡಬಹುದು. ಅಂತಹದೇ ಸಾಂಸ್ಕೃತಿಕ ಜೀವಾಳದ ಭಾರತೀಯತ್ವದ ಸತ್ವಸಾರದ ಇನ್ನೊಂದು ಶಬ್ದ "ಪ್ರಸಾದ".

"ಪ್ರಸಾದ"ವು ದೇವರ, ಗುರುವಿನ ಅನುಗ್ರಹ. ಪೂಜ್ಯರ ಆಜ್ಞೆ ಆದೇಶ ಶಿರಸಾವಹಿಸಿದುದರ ಉದ್ಗಾರ. ಈ ಅರ್ಥದಲ್ಲಿ ಅದು ಕನ್ನಡಕ್ಕೆ "ಹಸಾದ"ವಾಗಿ ಬಂದಿತು. "ಪ್ರಸಾದ"ವು ಪೂಜಾ ಸ್ಥಾನಕ್ಕೆ ದೈವತಕ್ಕೆ ಒಪ್ಪಿಸಿದ ನೈವೇದ್ಯ, ಅಲ್ಲಿಂದ ಪಡೆದ ನಿರ್ಮಾಲ್ಯ. ಇದೆಲ್ಲ ಅರ್ಥ ಭೇದದಲ್ಲಿಯೂ ಅಭೇದ್ಯವಾಗಿ ಮೊಳಗುವ ಒಂದು ಅರ್ಥ ಪ್ರಸನ್ನತೆಯದು. ಮನಸ್ಸಿನ ಹೃದಯದ ಸಂತೋಷದ ಸಂತೃಪ್ತಿಯದು. ಗೀತೆಯು "ಪ್ರಸಾದ"ದಲ್ಲಿ "ಸರ್ವದುಃಖಗಳ ಹಾನಿ"ಯನ್ನು ಹೇಳಿದೆ. ಯಾವದು ಮೆಚ್ಚುಗೆಯನ್ನು, ಹಿಗ್ಗನ್ನು, ನಲುಮೆಯನ್ನು, ಮೂಡಿಸುವದೋ ಸೂಚಿಸುವದೋ ಅದೇ ಪ್ರಸಾದ. ಹೀಗೆ ಜೀವನದ್ದೇ ಸ್ಥಾಯಿಯಂತೆ ಮಿಡಿಯಬೇಕಾದ ಈ ಪ್ರಸಾದ ಗುಣಕ್ಕೆ ಜೀವನದ ನೆಳಲಾದ, ಬೆಳಕಾದ, ಒಡಪಾದ, ಸಾಹಿತ್ಯದಲ್ಲಿಯೂ ಸ್ಥಾನವಿರಬೇಕಾದದ್ದು ಸಹಜವೇ. ಹೀಗೆ ಸಾಹಿತ್ಯದ ಒಂದು ಗುಣಧರ್ಮವಾಗಿರುವ "ಪ್ರಸಾದ"ದ ನೆಲೆ ಬೆಲೆಗಳನ್ನು ನಾವು ಗಮನಿಸುವುದು ಅಪ್ರಸ್ತುತವಾಗಲಾರದು.

ಲೇಖಕನು ಗದ್ಯವನ್ನೇ ಬರೆಯಲಿ, ಪದ್ಯವನ್ನೇ ಬರೆಯಲಿ, ಲಲಿತವಾಗಿ ಬರೆಯಲಿ, ಗಂಭೀರವಾಗಿ ಬರೆಯಲಿ, ಸಾಹಿತ್ಯದ ರೂಪ, ರೀತಿ, ರುಚಿ ಯಾವುದೇ ಆಗಿರಲಿ ಅದರ ರುಚಿಕತೆಯ ಮೊದಲನೆಯ ಮರ್ಮ ಈ ಪ್ರಸಾದ ಗುಣದಲ್ಲಿಯೇ ಇದೆ. ಪ್ರಸಾದ ಗುಣದ ಒಂದು ಸಾರ್ವಕಾಲಿಕ ಪರಮೋನ್ನತಿ (all time high)ಯ ಸಮುಜ್ವಲ ಉದಾಹರಣೆಯೆಂದರೆ "ರಾಮಾಯಣ"ದ ಆದಿಕಾವ್ಯ. ಎಲ್ಲ ಕಾವ್ಯಗಳಿಗೂ ಇತರ ಅಲಂಕಾರ ರಸ ಪ್ರಕಾರಗಳ

ತಳಹದಿಯಾಗಿ ಒಳಮೈಯಾಗಿ ಇರಬೇಕಾದ ಮೂರು ಮುಖ್ಯ ಗುಣಗಳಲ್ಲಿ "ಪ್ರಸಾದ"ವು ಒಂದು. ಅಲ್ಲ ಪ್ರಸಾದವೇ ಅತಿ ಮುಖ್ಯವು. ನಮ್ಮ ಹಿಂದಿನ ಲಾಕ್ಷಣಿಕರಲ್ಲಿ ಈ ಮೂಲಭೂತಗುಣಗಳ ಬಗೆಗೆ ಎರಡು ಮತಗಳಿವೆ. ಇವು ಮೂರು-ಎಂದು ಕೆಲವರು, ಹತ್ತು-ಎಂದು ಕೆಲವರು ಹೇಳುವುದು ಕಾಣುತ್ತದೆ. ಆದರೆ ೧೦ ಗುಣಗಳನ್ನು ಹೇಳುವವರೂ ಈ ೨ ಗುಣಗಳನ್ನು ಎತ್ತಿ ಹೇಳುತ್ತಾರೆ, ಅಂದಾಗ ಈ ಮೂರು ಗುಣಗಳು ಸರ್ವಸಮ್ಮತವಾದ ಮೂಲಗುಣಗಳೆನ್ನಲು ಅಡ್ಡಿಯಿಲ್ಲ.

ಈ ಮೂರು ಗುಣಗಳೆಂದರೆ ಓಜ, ಮಾಧುರ್ಯ ಮತ್ತು ಪ್ರಸಾದ. ಇವುಗಳಲ್ಲಿ ಪ್ರಸಾದವು ಓಜಕ್ಕೆ ಒಂದು ರೀತಿಯಾಗಿ ವಿರುದ್ಧ ತುದಿಯದೆಂದೂ ಹೇಳಬಹುದು. ಓಜೋಗುಣವು ಶೈಲಿಯಲ್ಲಿ ಉಂಟಾಗುವದು. ಭಾಷೆಯ ಪ್ರೌಢಿಮೆಯಿಂದ, ಮಾತಿನ ಚಮತ್ಕಾರದಿಂದ, ಕಲ್ಪನೆಯ ಅತಿಶಯದಿಂದ, ಶಬ್ದಾರ್ಥಗಳ ಆಡಂಬರದ ವಾಗ್ವಿಜೃಂಭಣೆಯಿಂದ ಇದಕ್ಕೆ ವಿರುದ್ಧವಾಗಿ ಪ್ರಸಾದ ಗುಣವು ಸಿದ್ಧವಾಗುವದು. ಪದಲಾಲಿತ್ಯದಿಂದ, ಸುಲಭ ಶಬ್ದಾರ್ಥ ಪ್ರಯೋಗದಿಂದ, ಕ್ಲಿಷ್ಟವಲ್ಲದ ಸರಳ ರೀತಿಯಿಂದ, ಸುದೀರ್ಘ ಸಮಸ್ತ ಪದಯೋಜನೆ ಓಜಸ್ಸಿನ ಒರಣ. ಅಂಥ ಬಂಧದ ಬಿರುಸು ಇಲ್ಲದ ನಾನಾರ್ಥಕ ಪದಯೋಜನೆಯ ಡೊಂಬರಮಣಿತವಿಲ್ಲದ ನಿರಾಭರಣ ಸೌಂದರ್ಯ ಪ್ರಸಾದದ ಒಸಪು, ಇನ್ನು ಮಾಧುರ್ಯ? ನಮ್ಮ ಲಾಕ್ಷಣಿಕರ ಮತದಂತೆ ಅದು ಮಧ್ಯಮ ಮಾರ್ಗದ ಗುಣ ಹೆಚ್ಚಾಗಿ ಶ್ರವ್ಯ "ಅತಿಸಮಸ್ತಾರ್ಥ" ಸಿಗದಿರುವದು.

ಓಜೋಗುಣಕ್ಕೆ ಒಪ್ಪುವ ವಾಗ್ಧೋರಣೆಯು "ಗೌಡೀ" -ಅದು ಉದೀಚ್ಯದ ರೀತಿ. ಪ್ರಾಸದ ಗುಣದ ವಾಗ್ಧೋರಣೆಯು ವೈದರ್ಭೀ-ಇದು ದಕ್ಷಿಣದ ರೀತಿ. ಗೌಡಿಯಲ್ಲಿ ಆಡಂಬರ ವರ್ಣಾನುಪ್ರಾಸಗಳಿಗೆ ಪ್ರಾಶಸ್ತ್ಯವಿದ್ದರೆ ವೈದರ್ಭಿಯಲ್ಲಿ ಶ್ರುತ್ಯಾನುಪ್ರಾಸಕ್ಕೆ ಪ್ರಾಶಸ್ತ್ಯ: ಇಷ್ಟೇ ಅಲ್ಲ ದಂಡಿಯ ಮತದಂತೆ ಕಾವ್ಯದ ಹತ್ತೂ ಗುಣಗಳು ವೈದರ್ಭ ರೀತಿಯಲ್ಲಿ ಪ್ರಕಟವಾಗಬಲ್ಲವಂತೆ ಅಂದರೆ ಓಜಸ್ಸೂ, ಇದರಲ್ಲಿ ಅಡಕವಾಗಿದೆ. ಇದು ಒಂದು ವಿರೋಧಾಭಾಸವೆನಿಸುವಂತಿದೆ. ಪ್ರಸಾರದ ಪ್ರಧಾನವಾದ ರೀತಿಯು ಓಜಗುಣಕ್ಕೂ ವಾಹನವಾಗುವದೆಂದರೆ ಯಾವ ಮಾತಿಗೆ ಯಾವ ಅರ್ಥ; ಆದರೆ ಈ ಚರ್ಚೆಯ ಚರ್ವಣದಲ್ಲಿ ನಾವು ಹಲ್ಲು ಮುರಿದುಕೊಳ್ಳಬೇಕಾಗಿಲ್ಲ. ದಂಡಿಯ ಮಾತಿನಿಂದ ನಾವು ಪಡೆಯಬಹುದಾದ ಸಮರ್ಥನೆಯು ಒಂದೇ - ಪ್ರಸಾದವೇ ಲೇಖಕನ ಶೈಲಿಯ ಸಾರ್ವಭೌಮ ಗುಣವೆನ್ನಬಹುದು.

ಪ್ರಸಾದವೆಂದರೇನು? ಮನಸ್ಸು ಮೆಚ್ಚಿ ಎದೆ ಮುಗುಳನ್ನು ಅರಳಿಸಬಲ್ಲ ಶೈಲಿಯ ಗುಣ ಯಾವದು? "ಅವಿದ್ವದಂಗನಾ ಬಾಲಪ್ರತೀತ"ವಾಗುವ ಶಕ್ತಿ ಯಾವದು ಮಿದುಳಿಗೆ ಆಯಾಸವಿಲ್ಲದೇ' ಊಹೆಗೆ ಕ್ಲೇಶವಿಲ್ಲದೆ, ಓದುಗನ ವಿಶೇಷಜ್ಞತೆಯ ಪರೀಕ್ಷೆ ಹೂಡದೆ ಲೇಖಕನ ಅಭಿಪ್ರಾಯವನ್ನು ಲೇಖನದ ಆಶಯವನ್ನು ಹೊರಗೆಡುಹಬಲ್ಲ ಗುಣವೇ "ಪ್ರಸಾದ" ಇದು ಬರೇಮಾತಿನ ಸರಳತೆಯಲ್ಲ. ಬೋಳು ಬೋಳಾದ ಕೇಳಲು ನುಣ್ಣಗಾದ ಶಬ್ದ ಸರಣಿಯಲ್ಲ. 'ಶಬ್ದ' ಮತ್ತು 'ಅರ್ಥ' ಇವುಗಳ ಹೊಂದಿಕೆ ಒಳಹೊರಗೆ ಕೂಡೆಯೇ ಎರಕವಾಗಿರಬೇಕು. ಅದರಿಂದ ಸ್ವಾರಸ್ಯದ ಅರ್ಕ ಹೊರಡಬೇಕು. ಕೇವಲ ಉಚ್ಚಾರಕ್ಕೆ ಕಷ್ಟವಾಗುವದಿಲ್ಲವೆಂಬ ಮಾತ್ರಕ್ಕೆ ಆ ಬರಹಗಾರಿಕೆ ಪ್ರಾಸಾದಿಕವಾಗಲಾರದು. ನಮ್ಮ ಹಿಂದಿನ ಲಾಕ್ಷಣಿಕರು ಕೊಡುವ ಉದಾಹರಣೆಯೊಂದಿದೆ:

"ರುಕ್ಷೋ ವೃಕ್ಷಸ್ತಿಷ್ಠತ್ಯಗ್ರೇ"

"ನೀರಸತರುರಿಹ ಪುರತೋಭಾತಿ".

- ಇವೆರಡು ವಾಕ್ಯಗಳಲ್ಲಿ ಒಂದೇ ವಿಧಾನವಿದೆ. "ಒಣಗಿದ ಮರ ಒಂದು ಮುಂದೆ ನಿಂತಿದೆ". ಆದರೆ ಇದೇ ಆಶಯವನ್ನು ಎರಡನೆಯ ವಾಕ್ಯವು ಮೊದಲನೆಯಕ್ಕಿಂತ ಹೇಗೆ ನುಣ್ಣಗೆ ಹೇಳುತ್ತದೆ. ಸರಿ ಶಬ್ದಲಾಲಿತ್ಯ ಎರಡನೆಯ ವಾಕ್ಯದಲ್ಲಿ ತುಂಬಿತುಳುಕುತ್ತಿದೆ. ಆದರೆ ಆ ಮಾತ್ರಕ್ಕೆ ಅದರಲ್ಲಿ ಪ್ರಸಾದ ಗುಣ ಹೆಚ್ಚೆಂದು ಒಪ್ಪಲು ಕಷ್ಟವೆನಿಸುತ್ತದೆ. ಏಕೆಂದರೆ ವಾಕ್ಯಕ್ಕೆ ಒಳಪಟ್ಟ ಅರ್ಥದ ಅವಶ್ಯಕತೆಯನ್ನೂ ಮೀರಿ ಆ ವಾಕ್ಯದ ಪದದ ಎಣಿಕೆ ಮಿದುವಾಗಿದೆ, ನುಣುಪಾಗಿದೆ. ಉಚ್ಚಾರ ಸೌಲಭ್ಯ, ಶ್ರುತಿಸುಭಗತೆ ಇದರಿಂದ ಸಾಧಿಸಬಹುದು. ಆದರೆ ಅಷ್ಟರಿಂದಲೆ ಅರ್ಥಪುಷ್ಟಿಯನ್ನು ಸಾಧಿಸಿದಂತಾಗುವದಿಲ್ಲ. ಏಕೆಂದರೆ ಬೋಳು ಬರಲಾಗಿ ನಿಂತ ಒಣಮರದ ಒಳ ಹೊರಗಿನ ಕರ್ಕಶತೆಯ ಭಾವ "ನೀರಸ ತರು" ಎನ ವಾಕ್ಯದಲ್ಲಿ ಒಡಮೂಡುವದೇ? ಅಲ್ಲದೆ "ಭಾತಿ" ಎಂಬುದು ಕೇವಲ ಕಿವಿಗೆ ಕೋಮಲವೆಂತಲೇ ಆಯ್ದುಕೊಂಡಂತಿದೆ! ಅದು ವಾಕ್ಯದ ಭಾವಾರ್ಥಕ್ಕೆ ತೀರ ವಿರೋಧಿಯಾದ ಕ್ರಿಯೆ, ಹೀಗೆ ಸೂಕ್ಷ್ಮವಾಗಿ, ಮಾರ್ಮಿಕವಾಗಿ ನೋಡಿದರೆ, ಮೊದಲನೆಯ ಕರ್ಕಶ ಶಬ್ದರಚನೆಯ ವಾಕ್ಯವೇ ಅರ್ಥಕ್ಕೆ ಹೆಚ್ಚು ಸಮರ್ಪಕವೆನಿಸುತ್ತದೆ. ಮತ್ತು 'ಪ್ರಸಾದ' ಗುಣದ ಮರ್ಮವೇ ಈ ಸಮರ್ಪಕತೆಯಲ್ಲಿದೆ. ಪೂರ್ವ ಸೂರಿಗಳ ಕುರಿತು ಭವಭೂತಿ ಹೇಳಿದ್ದಾನೆ. ಅವರ "ಮಾತಿನ ಹಿಂದೆ ಅರ್ಥ ಓಡುತ್ತದೆ. (ವಾಚಮರ್ಥೋನು ಧಾವತಿ) ಇದರ ಅರ್ಥವನ್ನು ನಾವು ಹೇಗೆ ಗ್ರಹಿಸುತ್ತೇವೆ? ಅಂದಿನ ಆ ಕವಿಗಳು ಹೇಗೆ ಮಾತನ್ನಿಟ್ಟರೂ ಅದಕ್ಕೆ ಒಂದು ಅರ್ಥ ಮೂಡುತ್ತಿತ್ತು. ಆದರೆ ಇಲ್ಲಿ ಆ ಮಾತನ್ನು ಒಂದು ವಿಶಿಷ್ಟಾರ್ಥದಲ್ಲಿ ಬಳಸಬಹುದು. ಅವರ ವಾಣಿ ಪ್ರಾಸಾದಿಕವಿತ್ತು. ಅವರ ಮಾತು ಓಡಿದಂತೆ ಅರ್ಥ ಕೊಡುತ್ತಿತ್ತು.

ಎಂಪ್ಸನ್ ಎಂಬ ಆಂಗ್ಲ ವಿದ್ವಾಂಸರು "Seven Types of Ambiguity" "ಅರ್ಥ ಸಂದಿಗ್ಧತೆಯ ಏಳು ಮಾದರಿಗಳು" ಎಂಬ ಗ್ರಂಥವನ್ನು ಸ್ವಾರಸ್ಯವಾಗಿ ಬರೆದಿದ್ದಾನೆ. ಆದರೆ ಕಾಲಿದಾಸನೆನ್ನುವಂತೆ "ವಾಗರ್ಥ ಪ್ರತಿಪತ್ತಿ" ತುಂಬ ಕಷ್ಟ ಸಾಧ್ಯ, ಏಕೆಂದರೆ ಅರ್ಥ ಪ್ರತೀತಿ ವಾಚಕನ ಭಾಷೆಯ, ಬುದ್ಧಿಯ, ಭಾವನೆಯ ಹಾಗೂ ಒಟ್ಟು ಸಾಂಸ್ಕೃತಿಕ ಸಂದರ್ಭದ ಪಾತಳಿಯನ್ನೇ ಅವಲಂಬಿಸಿರುತ್ತದೆ. ಇಂದಿನ ಭಾಷಾ ಶಿಕ್ಷಣದ ಅನವಸ್ಥೆಯ ಪ್ರಸಂಗದಲ್ಲಿ ಎಲ್ಲ ಜ್ಞಾನವೂ ಅಜ್ಞಾನದಲ್ಲಿಯ ತಾರತಮ್ಯವೇ ಆಗಿದೆ. ಅಂದಾಗ ಅರ್ಥದ ಸಂದಿಗ್ಧತೆಗೆ ಏಳೇ ಮುಖಗಳಾಗಲಾರವು. ದುರೂಹತೆ ದುರ್ಬೋಧತೆ ಹೀಗೆ ಅನಂತ ಮುಖವಾಗಿರಬಹುದು. ನನಗೆ ಗೊತ್ತಿದ್ದ ಒಬ್ಬ ಪದವೀಧರ ಜ್ಞಾನವೃದ್ಧ ಕನ್ನಡ ಕವಿಗಳೊಬ್ಬರು ಒಮ್ಮೆ ಕನ್ನಡ ಪ್ರಾಧ್ಯಾಕರೊಬ್ಬರೊಡನೆ ಸಾಹಿತ್ಯ ಚರ್ಚೆಯಾರಂಭಿಸಿದರು. ಆಗ ಮಾತಿನ ತೊಡಕಿನ ಮಾತು ಬಂದಿತು. "ಪ್ರೊಫೆಸರರೆ, ಏನು ಹೇಳಲಿ. ಮಾತು ನಮ್ಮ ಕೈಯದು, ಅದನ್ನು ತಿಳಿಯುವದು ಬೇರೆಯವರಿಗೆ ಒಪ್ಪಿದ್ದು. ಅದಕ್ಕಾಗಿಯೇ ನಮ್ಮ ಕಾಲಿದಾಸ ಅಂದಿಲ್ಲವೇ 'ಅರ್ಥೋಹಿ ಕನ್ಯಾ ಪರಕೀಯ ಏವ' ಅರ್ಥವು ಯಾವಾಗಲೂ ಹೆರವರ ಮನೆಯ ಕನ್ಯೆ. ಆಕೆಯನ್ನು ನಮ್ಮ ಇಚ್ಛೆಯಂತೆ ಇತ್ಯಾದಿ-ಇತ್ಯಾದಿ" ಇಲ್ಲಿ ನಮ್ಮ ಪದವೀಧರ ವೃದ್ಧ ಕವಿಗಳೂ ಕಾಲಿದಾಸನ ಕನ್ಯೆಯನ್ನೂ ತಮ್ಮ ಇಚ್ಛೆಯಂತೆ ಅರ್ಥಮಾಡಿಕೊಂಡು ಬಿಟ್ಟಿದ್ದರು. ಕಾಲಿದಾಸನ ಶೈಲಿ ಪ್ರಸಾದ ಗುಣಕ್ಕೆ ರನ್ನಗನ್ನಡಿ,

ಅವನ ಒಂದು ಚಿಕ್ಕವಾಕ್ಯವೇ ತಿಳಿದವರ ತಿಳುವಳಿಕೆಯಲ್ಲಿ ಇಂಥ ವಿಪರ್ಯಾಸ ಬರಡು ಮಾಡುವಂತಾದರೆ ಅರ್ಥ ಸಂದಿಗ್ಧತೆಗೆ ಮಿತಿ ಹಾಕುವದು ಯಾರು ಮತ್ತು ಹೇಗೆ?

ಹಾಗಿದ್ದರೆ ಪ್ರಸಾದ ಗುಣ ಕೇವಲ ವಾಚಕರ ತಿಳುವಳಿಕೆಯ ವೃಢಭಾಜಕವೇ? ಕಾವ್ಯದಲ್ಲಿ ಕವಿಯ ಶೈಲಿಯಲ್ಲಿ ಅದರ ಅಧಿಷ್ಠಾನವಿರುವದಿಲ್ಲವೇ? ತಿಳುವಳಿಕೆಯ ಶಕ್ತಿ ಓದುಗನದು. ಆದರೆ ಅದಕ್ಕೆ ತೊಡಕು ಒಡ್ಡದಂತೆ ಮಾಡುವ ಕರ್ತವ್ಯ ಲೇಖಕನದು. ಗದ್ಯ ಲೇಖಕನೇ ಇರಲಿ, ಕವಿಯೇ ಇರಲಿ ತಾನು ಬಳಸುವ ಭಾಷೆ ತಾನೇ ಕೃತಕವಾಗಿ ಕಲ್ಪಿಸಿಕೊಂಡ ಒಂದು ಖಾಸಗೀ ಉಪಕರಣವಲ್ಲ, ಅದು ಸಾಮಾಜಿಕವಾಗಿ ರೂಪಗೊಂಡ ಸೊತ್ತು. ಅದಕ್ಕೆ ಹೆಚ್ಚಿನ ಪುಟ, ಪಾಕ, ದಕ್ಷತೆ ವೈಯಕ್ತಿಕ ವೈಖರಿಯಿಂದ ಬರಬೇಕು. ಸರಿ ಆದರೆ ಅದೂ ಮುಂದೆ ಜನಮನೋರಂಗದಲ್ಲಿ ಸಂಸ್ಕಾರ ಪ್ರಸಾರದಿಂದ ಪರಿಸರಣ ಹೊಂದಿ ಹೊಸ ತಲೆಮಾರಿನ ಭಾಷೆಯ ರಕ್ತಗತ ಸತ್ವವಾಗಬೇಕು. ಹೇಗೂ ವಿಕ್ಷಿಪ್ತ ವೈಯಕ್ತಿಕ ಸರ್ವತಂತ್ರ ಸ್ವತಂತ್ರ ಭಾಷಾ ಪ್ರಯೋಗದಲ್ಲಿ ಸಾಧುವಲ್ಲ ನ್ಯಾಯವೂ ಅಲ್ಲ. ಏಕೆಂದರೆ ಭಾಷೆಯ ಮೂಲ ಮತ್ತು ಮುಖ್ಯ ಹೇತುವು ವ್ಯಂಜನೆ (Expression) ಗಿಂತ ಹೆಚ್ಚು ವೇದ್ಯತೆ (Communication) ಯಾದ್ದರಿಂದ ಅದಕ್ಕೆ ವಿರೋಧಿಯಾಗುವ ಸಂಗತಿಗಳ ನಿರಸನವು ಭಾಷಾ ಪ್ರಯೋಜಕರ ಒಂದು ಹೊಣೆಯಾಗಿ ನಿಲ್ಲುತ್ತದೆ. ಕವಿ ಹೃದಯದ ಅರ್ಥವು ಭಾಷೆಯಲ್ಲಿ ಮೂಡಿ ಅದರಿಂದ ಸಹೃದಯನ ಹೃದಯದಲ್ಲಿ ಅದು ಪುನಃ ರೂಪಗೊಂಡು ಉಜ್ಜೀವನಗೊಳ್ಳುತ್ತದೆ ಆದ್ದರಿಂದ ಭಾಷೆಯ ಪ್ರಯೋಗ ಕ್ಷಮತೆಯ ಮೇಲೆ ಎರಡು ಹೊಣೆಗಳು ಬರುತ್ತವೆ. ಕವಿಯ ಭಾವಾರ್ಥವನ್ನು ಸಮಗ್ರವಾಗಿ ಸಾಕಲ್ಯದಿಂದ ಮೂಡಿಸುವದು ಮತ್ತು ಅದು ಸಹೃದಯನಿಗೆ ಓದುಗನಿಗೆ ಸರಿಯಾಗಿ ವಿಶದವಾಗಿಸುವದು. ಇಲ್ಲಿ Expression ಮತ್ತು Communiction ಎರಡೂ ಒಂದಾಗುತ್ತದೆ. ಈ ದೃಷ್ಟಿಯಿಂದ ಪ್ರಸಾದ ಗುಣವು ಎಂಥ ಭಾವವ್ಯಂಜನೆಗೂ ಅರ್ಥ ವೇದ್ಯತೆಗೂ ಅನಿವಾರ್ಯವಾದ ಅಗತ್ಯವು.

ಆದ್ದರಿಂದಲೇ ಮುಕ್ಕು ಭಟ್ಟನೆಂಬ ಲಾಕ್ಷಣಿಕನು ಹೇಳಿದನು;

"ಪದವಾಕ್ಯ ಪ್ರಮಾಣೇಷು ತದೇತತ್ಪ್ರತಿಬಿಂಬಿತಂ!

ಯೋ ಯೋಜಯತಿ ಸಾಹಿತ್ಯೇ ತಸ್ಯವಾಣೀ ಪ್ರಸೀದತಿ!!"

ಆದ್ದರಿಂದಲೇ ಆನಂದವರ್ಧನನು ಸರ್ವರಸಗಳಿಗೂ ಸಕಲ ರಚನೆಗಳಿಗೂ ಆಶ್ರಯವಾದ ಗುಣವೇ ಪ್ರಸಾದವೆಂದು ಪ್ರತಿಪಾದಿಸಿದ್ದಾನೆ.

"ಸಮರ್ಪಕತ್ವಂ ಕಾವ್ಯಸ್ಯ ಯತ್ತು ಸರ್ವರಸಾನ್ ಪ್ರತಿ!

ಸಪ್ರಸಾದೋ ಗುಣೋ ಜ್ಞೇಯೋ ಸರ್ವಸಾಧಾರಣ ಕ್ರಿಯಃ।।"

ಇಲ್ಲಿ ನಾವು ಮರೆಯದೆ ಮನನ ಮಾಡಬೇಕಾದ ಅಂಶವೆಂದರೆ "ಯತ್ತು ಕಾವ್ಯಸ್ಯ ಸಮರ್ಪಕತ್ವಂ" ಕಾವ್ಯದ ಸಮರ್ಪಕತ್ವ ಈ ಪ್ರಸಾದ ಗುಣದಲ್ಲಿ ಅದೆ. ಸಾಮಾನ್ಯವಾಗಿ ಮಾರ್ಗಕ್ಕಿಂತ ದೇಸೀ, ಸಂಸ್ಕೃತಕ್ಕಿಂತ ಅಚ್ಚುಗನ್ನಡ ಪದಪವಣಿಕೆ ಪ್ರಸಾದ ಗುಣಕ್ಕೆ ಪೋಷಕ.

"ನಿನ್ನ ಮಾತಿನೊಳಿಹುದು ಒಡಪಿನಂದ
ನನ್ನ ಹತ್ತಿರಿದೊಂದೆ ಉಳಿದಿಹುದು ಕಂದ"

- ಎಂಬ ಪ್ರಶ್ನೋತ್ತರದಲ್ಲಿ ಕವಿವರ್ಯ ಅಂಬಿಕಾತನಯದತ್ತರು ಈ ವೈಶಿಷ್ಟ್ಯವನ್ನು ಅಮರಗೊಳಿಸಿರುವರು. ಜಾಂಬುವತಿಯ ಕೊರಳ ಸ್ಯಮಂತಕದಂತೆ ಕನ್ನಡದ ದುರ್ದಿನದಲ್ಲಿಯೂ ಅದರ ಪ್ರಸಾದ ಗುಣವೊಂದೇ ಅದರ ನಿಧಿಯಾಗಿ ಅದರ ಭಕ್ತರ ಭಾಗ್ಯದ ವಿಧಿಯಾಗಿ ಉಳಿದಿದೆ. ಮುದ್ದಣ್ಣನಿಂದೀಚೆಗೆ ಇಂದಿನ ತನಕವೂ ಕೃಷಿಯಾಗಿ ಮಾಗಿ ಬಂದ ಕನ್ನಡ ವಾಗ್ಘೋರಣೆಯನ್ನು ಅದರ ವಿವಿಧ ಪಾಂಗುಗಳಲ್ಲಿ ಪ್ರಸಾದ ಗುಣದ ಉತ್ಕರ್ಷಾವಕರ್ಷಕಗಳ ದೃಷ್ಟಿಯಿಂದ ವಿಮರ್ಶಿಸಬೇಕಾದದ್ದು ನಮ್ಮ ಸಾಹಿತ್ಯ ಸಮಾಲೋಚನೆಯ ಒಂದು ಜೀವಾಳದ ಕರ್ತವ್ಯವಾಗಿದೆ. ಈ ಕರ್ತವ್ಯದ ಪ್ರಥಮ ಹೆಜ್ಜೆ ಪ್ರಾ. ಬಿ. ಎಚ್. ಶ್ರೀಧರರು "ಹೊಸಗನ್ನಡ ಗದ್ಯಶೈಲಿ" ಎಂಬ ಹೊತ್ತಿಗೆಯಲ್ಲಿ ಸ್ತುತ್ಯವಾಗಿ ಇಟ್ಟಿದ್ದಾರೆ. ಅದಕ್ಕೆ ಮುಂದಿನ ಹೆಜ್ಜೆ ಇಲ್ಲದೆ ಮುನ್ನಡೆ ಎಲ್ಲಿ?

ಏಕೆಂದರೆ ಶೈಲಿಯ ಪ್ರಸಾದಗುಣವನ್ನು ಎಂದಿಗಿಂತ ಹೆಚ್ಚು ಕಾಪಾಡಿಕೊಳ್ಳುವದು ಇಂದಿಗೆ ಅವಶ್ಯವಾಗಿದೆ. ಇಂದು ಕನ್ನಡದಲ್ಲಿ ಹೊಸದೊಂದು ಸಾಮಾಜಿಕ ಕ್ರಾಂತಿ ಲೌಕಿಕ ಪಾತಳಿಯಲ್ಲಿ ನಡೆಯಬೇಕಾಗಿದೆ. ಜನಜೀವನದ ಎಲ್ಲ ಸಂಸ್ಕೃತಿ-ಪರಿಷ್ಕೃತಿಗಳ ವ್ಯವಹಾರ ಕನ್ನಡದಲ್ಲಿಯೇ ನಡೆಯಬೇಕು. ಆದ್ದರಿಂದ ಒಂದೆಡೆಗೆ ಕನ್ನಡದ ಅರ್ಥವಾಹಿತ್ವ ಹೆಚ್ಚಬೇಕು. ಇನ್ನೊಂದೆಡೆಗೆ ಅದರ ಬಹುಮುಖದ ವ್ಯಾಪ್ತಿ ವಿಶಾಲವಾಗಬೇಕು. ಹಲವು ಹಂತಗಳಲ್ಲಿ ಹಲವು ಹಾದಿಗಳಗುಂಟ ಕನ್ನಡ ಹದಗೊಳ್ಳಬೇಕು. ಶಾಸ್ತ್ರ, ವಿದ್ಯೆ, ವಿಜ್ಞಾನ, ಕಾವ್ಯ ವೇದಾಂತ, ವ್ಯವಹಾರ, ಆಡಳಿತ ಎಲ್ಲ ಕ್ಷೇತ್ರಗಳಲ್ಲಿಯೂ ಕನ್ನಡದ ಶೈಲಿ ಸ್ಫುಟವಾಗಿ, ಶುಚಿಯಾಗಿ, ಸ್ಫೂರ್ತಿದಾಯಕವಾಗಿ ರೂಪಗೊಳ್ಳಬೇಕು. ಕೇವಲ ಅಭಿಮಾನಕ್ಕಾಗಿ ಅಭಿನವೇಶಕ್ಕಾಗಿ ಒಂದು ದೇಶಭಕ್ತಿಯ ದೀಕ್ಷೆಯೆಂದು ಕನ್ನಡ ಓದುವ ಬಳಸುವ ದಿನಗಳು ಈಗ ಹಿಂದಾದವು. "ಕನ್ನಡ ಬಳಸಿರಿ" ಎಂದು ಸ್ವಾಕ್ಷರಿಯನ್ನು (autograph) ಕೊಡುವ ಸಾಹಿತಿಗಳೂ ಇಂಗ್ಲಿಷಿನಲ್ಲಿ ಬರೆಯುವ ಮಾತನಾಡುವದನ್ನು ನಾವು ಕಾಣುತ್ತೇವೆ, ಮೆಚ್ಚುತ್ತೇವೆ. ಅಂದರೆ ಇದರಿಂದ ಅಂಥವರ ಕನ್ನಡದ ಲೇಖನಶಕ್ತಿ ಕುಂದಿದೆ, ಕಂದಿದೆ ಎಂದಲ್ಲ. ಈ ಕಲಿಗಳು ಕಳ್ಳು ಕುಡಿದರೆ ಕಂಜೂ ಕುಡಿಯಬಲ್ಲರು. ಆದರೆ ಇತರೇ ಜನರು ಬಹುಜನ ಸಮುದಾಯ ತನ್ನ ಶಿಕ್ಷಣದ ಮಟ್ಟದಲ್ಲಿ ಕನ್ನಡ ಬಳಸಿಯೇ ಬದುಕಬೇಕು. ಆದ್ದರಿಂದ ಕನ್ನಡವು ಇನ್ನು ಬರೇ ಅಲಂಕಾರವಾಗಿ (ವಿದ್ಯಾ ಪರಿಣತರ?) ಉಳಿದರೆ ಸಾಲದು. ಅದು ಉಪಯೋಗದ ಉಪಕರಣವಾಗಬೇಕು, ಆಯುಧವಾಗಬೇಕು. ಅದಕ್ಕೆ ತಕ್ಕ ಹರಿತ, ಉಕ್ಕಿನ ಹದ, ತುಕ್ಕು ಹಿಡಿಯದ ಒಪ್ಪೆ ಮೊರಡಾಗದ ಮೊನೆ - ಎಲ್ಲ ಒದಗಿಬರಬೇಕು.

ಇಂಗ್ಲಿಷ, ಫ್ರೆಂಚ, ಭಾಷೆಗಳಲ್ಲಿ ಎಂಥ ಪ್ರಗಲ್ಭ, ಪ್ರೌಢ ವಿಚಾರವನ್ನೂ ತಿಳಿಯಾಗಿ, ಸೊಗಸಾಗಿ, ಮರ್ಮಸ್ಪರ್ಶಿಯಾಗಿ, ಪಾರದರ್ಶಿಯಾಗಿ ಪ್ರತಿಬಿಂಬಿಸುವ ಗದ್ಯ ಶೈಲಿಯೂ ಪಳಗಿಬಂದಿದೆ. ಅಂಥ ಶೈಲಿ ನಮ್ಮಲ್ಲಿಯೂ ಕೆಲವೇ ಸೀಮಾಪುರುಷರಲ್ಲಿ, ಸರ್ವಶ್ರೀ ಮಾಸ್ತಿ, ಸಿದ್ದವ್ವನಳ್ಳಿ ಕೃಷ್ಣಶರ್ಮ, ಕುವೆಂಪು, ಬೇಂದ್ರೆ, ವೀಸಿ, ಗೋಕಾಕ, ಮುಗಳಿ, ಎ.ಎನ್. ಮೂರ್ತಿರಾವ, ಶಿವರಾಮ ಕಾರಂತ - ಪ್ರಭೃತಿಗಳಲ್ಲಿ ಸಿದ್ಧಿಗೆ ಮುಟ್ಟಿದೆ. ಆದರೆ ಅದು ನಮ್ಮ ಇಂದಿನ ಜ್ಞಾನ-ವಿಜ್ಞಾನದ ವಾಙ್ಮಯಾಭಿವೃದ್ಧಿಯ ವಿಕಾಸಕ್ಕೂ-ವಿಸ್ತರಣೆಗೂ ಸಾಲದು. ಅಲ್ಲದೆ, ಕಳೆದ ಎರಡು ತಲೆಮಾರುಗಳ

ಇಂಥ ಮಾದರಿಗಳ ಕೈಹಿಡಿದು ಅವರ ಹೆಗಲೆತ್ತರಕ್ಕೆ ಹೊಸ ಶೈಲಿಕಾರರು ಬೆಳೆದು ನಿಂತು ಇಂದಿನ ಮುಂದಿನ ತಲೆಮಾರುಗಳಿಗೆ ತಲೆದೀವಿಗೆಯಂತೆ ಬೆಳಕು ನೀಡಬೇಕು.

ಮಿಕ್ಕ ಪ್ರಾಂತಗಳ ಮಾನದಲ್ಲಿ ಆಧುನಿಕ ಕನ್ನಡದ ಗದ್ಯಕ್ಕಿಂತ ಪದ್ಯಕಾವ್ಯವು ಹೆಚ್ಚು ಗುಣ, ಸತ್ವ ಮತ್ತು ಕಾಂತಿಯುಕ್ತವಾಗಿದೆಯೆಂದು ಕೆಲವು ತಜ್ಞರ ಅಭಿಪ್ರಾಯ. ಕನ್ನಡದ ರಸದ್ರವ್ಯ ರಾಸಾಯನಿಕ ಪರಿಭಾಷೆಯಲ್ಲಿ ಹೇಳುವದಾದರೆ ಒಮ್ಮೆಲೆ Sublimation ಆಯಿತು. ಸಾಮಾನ್ಯ ಸುಶಿಕ್ಷಿತರ ಅಳವಿನ ನಿಲುಕಿನ ಆಚೆಯ "ಹೊರ ಬಾನಿ" ನಲ್ಲಿಯೇ "ತಾರೆಗಳು ಮೇಳವಿಸಿ ಬೀಡು ಬಿಟ್ಟಂತೆ" ಆಗಿದೆ. ನಮ್ಮ ನೆರೆಯ ಮರಾಠೀ ಜನತೆಯಲ್ಲಿ ಬಿಸಿದೋಸೆಗಳಂತೆ ನೂರುಗಟ್ಲೆ ಮಾರಿಹೋಗಿ ಮನೆಗಳ ಹೊರಗೂ ಒಳಗೂ ಮಧುರ ಮಂಗಳ ವಾತಾವರಣವನ್ನುಂಟುಮಾಡುವ ಕೌಟುಂಬಿಕ, ಗ್ರಾಮೀಣ, ರಾಮಾಯಣ, "ಕೃಷ್ಣಾಯನ"ದಂಥ ಸರ್ವಪ್ರಿಯ, ಸರ್ವ ಪರಿಚಿತ ವಸ್ತು-ಸನ್ನಿವೇಶಗಳನ್ನು ರೂಪಿಸಿ ರಂಜಿಸುವ "ಭಾವಗೀತ"ಗಳ ಆಳವಿದ್ದಷ್ಟೇ ಅಗಲವಾದ ಕೊರತೆ ನಮ್ಮ ಸುಶಿಕ್ಷಿತ ಸಮಾಜದ ಹೃದಯ ದಾರಿದ್ರ್ಯದ ಪೊಳ್ಳಿನ ಪ್ರತಿಧ್ವನಿಯಾಗಿದೆ.! ಹಿಂದೆ ದಾಸರ ಪದ್ಯಗಳೂ, ವಚನಗಳೂ ತುಂಬುವ ಈ ಪೊಳ್ಳನ್ನು ಇಂದು ಲೌಕಿಕ ಭಾವಗೀತಗಳು ತುಂಬುತ್ತಿಲ್ಲ! ಇದೆಲ್ಲ ಕೃತಿನಿರ್ಮಿತಿಯ ವ್ಯಾಪ್ತಿ-ದೀಪ್ತಿಗಳಿಗೆ ಪ್ರಸಾದಗುಣದ ಪರಿಪೋಷಣೆ ಅವಶ್ಯ.

ಉತ್ತಮ ಕವಿಗಳು ಬರೆದಾಗೆಲ್ಲ, ಬರೆದುದೆಲ್ಲ ಉತ್ತಮ ಮಟ್ಟದ್ದೇ ಇರುವದೆಂಬ ಭ್ರಮೆಯಲ್ಲಿ ಯಾರೂ ಇರಕೂಡದು. "ಸಖೀ ಗೀತ"ದಂಥ ಪ್ರಸಾದಗುಣದ ಅತ್ಯಂತ ರಮಣೀಯ ಚಿತ್ರಮಯ ಪ್ರಸಾದವನ್ನು ನಿಲ್ಲಿಸಿದ ಶಬ್ದಶಿಲ್ಪಿ ಅಂಬಿಕಾತನಯರೇ ಇಂಥ ಸಾಲುಗಳನ್ನೂ ಬರೆದದ್ದುಂಟು.

ಹಾಸ್ಯ ಕಿರಣ
ತದನುಸರಣ
ತದಿತರ ಪಥ ಕಾಣೆ ನಾ॥

ಅದೇ ರೀತಿ "ಪಾಂಚಜನ್ಯ" ದಿಂದ "ರಾಮಾಯಣ ದರ್ಶನ"ದವರೆಗೂ ಕಾವ್ಯಲೋಕದ ಮಹತ್ತು-ಬೃಹತ್ತುಗಳನ್ನು ತನ್ನ ಓಜಸ್ವಿಯಾದ ರತ್ನಖಚಿತ ಕವನಶೈಲಿಯಲ್ಲಿ ಕಡೆದು ನಿಲ್ಲಿಸಿದ ಇಂದಿನ ನಾಡೋಜ "ಕುವೆಂಪು" ವೂ ತೀರ ಗದ್ಯಗಂಧಿಯಾದ ಅನೇಕ ಪದ್ಯಗಳನ್ನು ಬರೆದದ್ದುಂಟು. "ಮಿತಂ ಚ ಸಾರಂ ಚ ವಚೋ ಹಿ ವಾಗ್ಮಿತಾ !" ಎಂಬ ಕವಿವಾಣಿ ನಿಜವಿದ್ದರೆ ವರಕವಿಯಿಂದ ನರಕವಿಯನ್ನು ವಿಂಗಡಿಸುವ ವ್ಯವಚ್ಛೇದಕವು ಪ್ರಸಾದ ಗುಣದ ಅಭಾವವೇ ಆಗಬೇಕು. ಉತ್ತಮ ಶಬ್ದಗಳ ಉತ್ತಮ ವ್ಯವಸ್ಥೆಯೇ ಕಾವ್ಯದ ಕಾಯವಾಗಿದ್ದರೆ ಎಂಥ ಶೈಲಿಗೂ ಈ ಗುಣವು ಮೈಕಟ್ಟಾಗುತ್ತದೆ, ಅಂಗಕಾಂತಿಯಾಗುತ್ತದೆ.

"ವಿವಿಕ್ತ ವರ್ಣಾಭರಣ ಸುಖಶ್ರುತಿಃ।
ಪ್ರಸಾದಯಂತೇ ಹೃದಯಾನ್ಯಪಿ ದ್ವಿಷಾಂ॥"

- ಎಂದು ಕವಿ ಭಾರವಿಯು ಹೊಗಳುವ ಈ ಹಗೆಗಳನ್ನೂ ಹಿಗ್ಗಿಸುವ, ಮುದುಡಿದ ಎದೆಮುಗುಳನ್ನು ಅರಳಿಸುವ, ಕದಡಿದ ಮನಸ್ಸನ್ನು ತಿಳಿಗೊಳಿಸುವ ಪ್ರಸಾದವು ಶ್ಲೇಷ, ಸಮತೆ,

ಮಾಧುರ್ಯ ಸೌಕುಮಾರ್ಯ ಅರ್ಥವ್ಯಕ್ತಿ, ಉದಾರತ್ವ, ಓಜಸ್ಸು, ಕಾಂತಿ ಮತ್ತು ಸಮಾಧಿ ಈ ಉಳಿದ ೯ ಗುಣಮಣಿಗಳನ್ನು ಪೋಣಿಸುವ ರೇಶಿಮೆಯ ದಾರವಾಗುತ್ತದೆ, ಕೆತ್ತಿ ಕೂಡಿಸುವ ಕುಂದಣವಾಗುತ್ತದೆ.

ಅಂದರೆ ಪ್ರಸಾದ ಗುಣವೆಂಬುವದು ಬರೆ ಲಲಿತ ಮೋಹಕವಾದ ಕಿವಿಗೆ ಕೋಮಲವಾದ ಪದಾವಲಿಯಲ್ಲ. "ಸುಲಿದ ಬಾಳೆಯ ಹಣ್ಣಿನಂದದಿ" ಇರಲೇ ಬೇಕಾಗಿಲ್ಲ. ವಾಕ್ಯಗತವಾದ ಭಾವವನ್ನು ಅರ್ಥವನ್ನು ಸಮರ್ಪಕವಾಗಿ ಸಮರ್ಥವಾಗಿ ಒಡಮೂಡಿಸುವದೇ ಈ ಗುಣದ ಮುಖ್ಯ ಲಕ್ಷಣ. 'ವೃಥಾಪಲ್ಲವ' ಬಗೆ ಶಬ್ಧ ಪದ ಪುಂಜಗಳ ಬಾಹುಲ್ಯ ಪ್ರಸಾದಕ್ಕೆ ಮಾರಕವು.

Words are like leaves
Where they much abound
Much fruit of sence beneath
is rarely found.

ಸಸ್ಯ ಸೃಷ್ಟಿಯ ಈ ನಿಯಮ ಸಾಹಿತ್ಯ ಸೃಷ್ಟಿಗೂ ಅನ್ವಯಿಸುತ್ತದೆ. ಎಲೆಗಳೇ ಹುಚ್ಚಾಪಟ್ಟೆ ಭಾರವಾಗಿ ಬೆಳೆಯುವ ಗಿಡಕ್ಕೆ ಹೂ-ಕಾಯಿಗಳು ಹಿಡಿಯುವದು ಕಡಿಮೆಯೇ. ಆದ್ದರಿಂದ ಪ್ರಸಾದಗುಣವನ್ನು ಸಾಧಿಸಿಕೊಳ್ಳುವ ಲೇಖಕನು ತನ್ನ ಅಚ್ಚುಮೆಚ್ಚಿನ ಪದಪ್ರಯೋಗಗಳಿಗೆ ನಿರ್ದಾಕ್ಷಿಣ್ಯವಾಗಿ ಕಡಿತ ಹಾಕಲು ಅನುಮಾನಿಸಬಾರದು. ಎಷ್ಟೋ ಶ್ರೇಷ್ಠ ಕವಿಗಳು ಆತ್ಮ ಸಂಮೋಹಿತರಾಗಿರುವದು ಕಂಡುಬರುತ್ತದೆ. ತಮ್ಮ ಕೆಲವೊಂದು ಪದಪ್ರಯೋಗಗಳಿಗೆ ತಾವೇ ಮರುಳಾಗಿ ಮತ್ತೆ ಮತ್ತೆ ಅವನ್ನು ತಮ್ಮ ಕೃತಿಯಲ್ಲಿ ಜಡಿದು ತುಂಬುವದನ್ನು ನಾವು ಕಾಣುತ್ತೇವೆ. ಈ ಬಗೆಯ "Plug of emotional cotton wool" ಶೈಲಿಯ ಸ್ವಾಸ್ಥ್ಯದ ಲಕ್ಷಣವಲ್ಲ. ವ್ಯಾಯಾಮದ ಅಭ್ಯಾಸ ಬಿಟ್ಟು ಹೋದ ಜಟ್ಟಿಯ ಬೊಜ್ಜು ಬೆಳೆದ ಮೈಯ ಅಂದಗೇಡಿತನವಿದು. ಇದನ್ನೇ ನಿಷೇಧಿಸುತ್ತ ಕ್ವಿಲರ್ ಕೋಚ ಕಟ್ಟಪ್ಪಣೆ ಮಾಡಿದ್ದು 'murder your darlings" ಎಂದು.

ಸಾಮಾನ್ಯವಾಗಿ ಪದಪವಣಿಕೆಯಲ್ಲಿ ಎರಡು ಶೈಲಿಗಳು: ಒಂದು, ಕಲ್ಲು ಕೆತ್ತಿ ಕಡೆದು ಪ್ರತಿಮೆಯನ್ನು ನಿಲ್ಲಿಸುವ ಶಿಲ್ಪಿಯದು. ಇನ್ನೊಂದು ಮಣ್ಣು ಮೆತ್ತಿ ಮೆತ್ತಿ ಮೂರ್ತಿಯನ್ನು ಮಾಡುವ ಶಿಲ್ಪಿಯದು. ಮೊದಲಿನ ಶೈಲಿಯ ತಂತ್ರಶಿಲೆಯಲ್ಲಿಯೇ ಒರಗಿದ್ದ ಅಡಗಿದ್ದ ಚೆಲುವನ್ನು ಹೊರಗೆಡುಹುವದು-ಅನವಶ್ಯಕ ಭಾಗಗಳನ್ನೆಲ್ಲ ಕೆತ್ತಿ ಒಗೆದು. ಎರಡನೆಯದರ ತಂತ್ರ ಇದಕ್ಕೆ ವಿರುದ್ಧ. ಅದು ರೂಪಕ ಪ್ರತಿಭೆ, ಇದು ಸ್ತೂಪಕ ಪ್ರತಿಭೆ. ಪ್ರಸಾದ ಗುಣಕ್ಕೇ ರೂಪಕ ಪ್ರತಿಭೆಯೇ ಹೆಚ್ಚು ಪೋಷಕ. ಓಜೋಗುಣಕ್ಕೆ ಎರಡನೆಯದು ಹೆಚ್ಚು ಅನುಕೂಲ. ಎಲ್ಲಬಗೆಯ ಬರೆಹಗಾರಿಕೆಯಲ್ಲಿ ಮೂಲತಃ ಎರಡು ಘಟಕಗಳು ಅಡಕವಾಗಿರುತ್ತವೆ. ಒಂದು dialectical ಅಂದರೆ ಬೋಧಕ ಮನಗಾಣಿಸುವಿಕೆಯ ಅಂಶ. ಇನ್ನೊಂದು eristical ಅಂದರೆ ಪ್ರಭಾವಕ ಮನ ಒಲಿಸುವಿಕೆಯ ಅಂಶ. ಬೋಧಕನ ಗುರಿ ಸತ್ಯ. ಬುದ್ಧಿಗೆ ತರ್ಕದಿಂದ ತಿಳಿಸಿಹೇಳುವ ಮಾತುಗಾರಿಕೆ ಇದು. ಪ್ರಭಾವಕದ ಗುರಿ ಸತ್ಯಕ್ಕಿಂತ ಹೆಚ್ಚು ಸತ್ತೆ, ವಿಜಯ, ವಾದಗೆಲ್ಲುವದು, ಓದುವವನನ್ನು ಕೇಳುವವನನ್ನು ಮೋಹಗೊಳಿಸಿ ವಿವಶಗೊಳಿಸಿ ಒಪ್ಪಿಸುವದು. ಉತ್ತಮ ಶೈಲಿಯಲ್ಲಿ

ಇವೆರಡೂ ಹದವಾಗಿ ಎರಕವಾಗಿರುತ್ತವೆ. ಆದರೂ ಸಾಮಾನ್ಯವಾಗಿ ಪ್ರಸಾದವು dialectical ಮತ್ತು ಓಜೋಗುಣ eristical ಶೈಲಿಯ ಗುಣಧರ್ಮವೆನ್ನಬಹುದು. 'ದಶರೂಪಕ'ವೆಂಬ ಭಾರತೀಯ ನಾಟಕ ಲಕ್ಷಣ ಶಾಸ್ತ್ರದಲ್ಲಿ ನಟರಾಡುವ ಮಾತಿನ ರೀತಿಗಳನ್ನು ಸ್ವಾರಸ್ಯವಾಗಿ ಚರ್ಚಿಸಲಾಗಿದೆ. ಅಲ್ಲಿ ಹೇಳುವ dialectical ಸಂವಾದ ಶೈಲಿಯ ಧರ್ಮವು. "ಉಪನ್ಯಾಸಸ್ತು ಸೋಪಾಯಂ" ಉಪಪತ್ತಿ ಕೃತವಾದ ಅರ್ಥವು ಉಪನ್ಯಾಸ. ಸಾಹಿತ್ಯದರ್ಪಣವು "ಉಪನ್ಯಾಸಃ ಪ್ರಸಾದನಂ" ಎನ್ನುತ್ತದೆ. ಅಂದರ ಪ್ರಸಾದ ಗುಣಕ್ಕೆ ಈ ಸೋಪಪತ್ತಿಕ ಶೈಲಿಯು ಆಗತ್ಯ ವೆಂದಾಯಿತು. ಇನ್ನು ಮಾತಿನ "ಪುಷ್ಪ" ಉದಾಹರಣ ಲಕ್ಷಣಗಳು eristical ಮಾದರಿಗೆ ಪೋಷಕ. "ಪುಷ್ಪಂ ವಾಕ್ಯಂ ವಿಶೇಷವತ್" ಅದು flowery. ವಿಶೇಷ ರೀತಿಯ ಮಾತು. "ಸೋತ್ಕರ್ಷಂ ಸ್ಯಾದುದಾಹೃತಿ;" ಉದಾಹರಣ ಅತಿಶಯವಾದ ಮಾತು. Verbosity.

ಗದ್ಯವು ವೈಚಾರಿಕವಿರಲಿ, ವೈಲಾಸಿಕವಿರಲಿ, ವ್ಯವಹಾರಿಕವಿರಲಿ, ಸ್ಫಟಿಕ ಸ್ಫುಟತೆಯು ಅದರ ಅವಶ್ಯ ಗುಣ. ಈ ಪರಿಸ್ಫುಟತೆಯನ್ನು ಸಾಧಿಸುವದೇ ಪ್ರಸಾದ ಗುಣ. ವಿಶಿಷ್ಟ ಕೋನಕ್ಕೆ ಹಿಡಿದಿಟ್ಟರೇ ಸ್ಫಟಿಕದಿಂದ ಕಿರಣಗಳು ಸ್ಫುರಿಸುತ್ತವೆ. ನಾವು ಲೇಖಕರು ಪ್ರಯೋಗಿಸುವ ಶಬ್ದಗಳನ್ನು ಹಾಗೆ ಹಿಡಿದಿಡುವ ಹದವನ್ನು ಪಳಗಿಸಿಕೊಳ್ಳಬೇಕು. ಭಾಷೆಯ ಪೇಟೆಯಲ್ಲಿ ಸವೆದ ಸತ್ತ ನಾಣ್ಯಗಳ ರಾಶಿ ಬಿದ್ದಿದೆ. ಅವನ್ನೆ ಹೆಚ್ಚಾಗಿ ಬಳಸುವ ಶಬ್ದಪಾಂಡಿತ್ಯಕ್ಕೂ ನಮ್ಮಲ್ಲಿ ಕಡಿಮೆ ಇಲ್ಲ. ಖಚಿತವಾದ ಉಚಿತವಾದ ಅರ್ಥವಾಹಿತ್ವದೊಡನೆ ಅದರ ಪ್ರಸಾರ ವ್ಯಾಪ್ತಿಯನ್ನೂ ಅರಿತುಕೊಂಡ ಶಬ್ದಪ್ರಯೋಗ ಪರಿಣತ ಮತಿಗಳು ನಮ್ಮಲ್ಲಿ ಎಷ್ಟು? ಪ್ರಸಾದಕ್ಕೆ ವ್ಯರ್ಥದ ಶಬ್ದಸಂಭಾರ ಹೇಗೆ ನಿಷಿದ್ಧವೋ ಹಾಗೆಯೇ ಔಚಿತ್ಯವೇ ಮುಖ್ಯ ಪಥ್ಯವು.

ಅರಿವಿನಾಳದೊಳಿರುವ ಅಣಿಮುತ್ತುಗಳನ್ನೆತ್ತಿ
ಪವಣಿಸುವ ಜಾಣ ಬಗೆಗೆಂದು ಬಹುದೋ?
ಸೂಜಿಗೂ ಹದನು ಎಳೆನೂಲಿಗೂ ಮಿದುವಾದ
ನುಡಿನುಡಿಯು ನಾಲಿಗೆಗೆ ನಿಲುಕಲಿಹುದೋ"

ಅಂಬಿಕಾತನಯರ ಈ ಹಾರೈಕೆ ಪ್ರಸಾದ ಗುಣ ಸಾಧನೆಯ ವ್ಯಾಖ್ಯಾನವೇ ಸರಿ. ನುಡಿಯು ಸೂಜಿಗೂ ಹದನು, ಎಳೆನೂಲಿಗೂ ಮಿದು ಆಗಿರಬೇಕು, ಭಾವ-ಅರ್ಥ-ಪ್ರತೀಕ-ರೂಪಕ-ಉತ್ಪ್ರೇಕ್ಷೆ-ಊಹೆ ಇವೆಲ್ಲ ಮೇಲೆದ್ದು ಬರುವದು "ಅರಿವಿನಾಳದೊಳ" ಗಿಂದ - ಅಂತರ್ಮನಸ್ಸಿನಿಂದ. ಅವುಗಳಲ್ಲಿ ಅಣಿಮುತ್ತು ಎಷ್ಟು, ಚಿಪ್ಪು, ಶಂಖ, ಪಾಚಿ, ಕೊಳಚೆ ಎಷ್ಟು ಇದನ್ನು ಆಯ್ಕೆ ಮಾಡದೇ ಪವಣಿಸುವದು "ಜಾಣ ಬಗೆ"ಯಾದೀತೇ? ಅಣಿ ಮತ್ತು "ಅಣಿ"ಯಾದ ಮಾತು. ಉಚಿತವಾದ ಸಮರ್ಪಕವಾದ ಸಂದರ್ಭಕ್ಕೆ, ಅಭಿಪ್ರಾಯಕ್ಕೆ, ಅರ್ಥದ ಅವಿಷ್ಕಾರಕ್ಕೆ ಪರಿಣಾಮದ ಏಕಾಗ್ರತೆ ಸರಿ ಹೊಂದುವ ಮಾತೆ ಅಂಥ ಅಣಿ ಮುತ್ತು. ಅದರ ಜಾಣ ಬಗೆಯ ಪವಣಿಕೆಯೇ ಪ್ರಸಾದ.

"Style is the way of subduing the reader"- ವಾಚಕವನ್ನು ಈಲು ಮಾಡುವ ಒಂದು ಬಗೆಯು ಶೈಲಿ. ಈ ಈಲುಗೊಳಿಸುವ ಕೆಲಸ ಸರ್ಕಸ್ಸಿನ ಕಸಬಲ್ಲ. ಓದುಗನನ್ನು ಚಕಿತಗೊಳಿಸಿ ಮಂತ್ರಮುಗ್ಧ ಜಡಬಧಿರಗೊಳಿಸಿ ವಶಪಡಿಸಿಕೊಳ್ಳುವದು ಸಂಮೋಹನ ವಿದ್ಯೆ. ಉತ್ತಮ ಕಾವ್ಯಶೈಲಿಯಲ್ಲಿ ಹೆಚ್ಚುಕಡಿಮೆ ಈ ಶಕ್ತಿ ಇದ್ದೇ ಇರುತ್ತದೆ. ಆದರೆ ಇಂಥ ಉನ್ಮಾದಕ ಉದ್ದೀಪಕ

ಗುಣ ಉತ್ಕಟವಿದ್ದಷ್ಟೇ ಅವರ ಕಾರ್ಯಕ್ಷೇತ್ರ ಸೀಮಿತವಿರುತ್ತದೆ. ಆದರೆ ಮನಸ್ಸನ್ನು ಪ್ರಸನ್ನಗೊಳಿಸುವ ಶೈಲಿ ಸಾರ್ವತ್ರಿಕ ಯಶಸ್ಸಿನ ತಂತ್ರ.

ಎಂಥ ವಿಚಾರವನ್ನೂ ತಿಳಿಯಾಗಿ, ಸೊಗಸಾಗಿ ಬರೆಯಲು ಬರುವಂತಿದೆ. ಕ್ಲಿಷ್ಟತೆಯೇ ವಿದ್ವತ್ತೆಯ ಗಮಕವಲ್ಲ. ಓದಲು ಬಿಗಿಯಾದದ್ದೆಲ್ಲ ತಿಳಿಯಲು ಹೆಚ್ಚು ಘನವಾದದ್ದಲ್ಲ. ಲೇಖಕನಿಗೆ ಚೆನ್ನಾಗಿ ಅರಿತು ಅರಗಿದ ವಿಚಾರವನ್ನು ಆತ ತಿಳಿಯಾಗಿ ಅರಿಕೆಮಾಡಿಕೊಡಬಲ್ಲ. ಮಾತು ಅರ್ಥವನ್ನು ಅಡಗಿಸಬಾರದು. ಅದನ್ನು ಅನವಶ್ಯಕ ಬೆಡಗಿಸಲೂ ಬಾರದು. ಬಿಂಬ ಪ್ರತಿಬಿಂಬ ಭಾವಕ್ಕೆ ಎಂದೂ ಭಂಗತರಬಾರದು. ಪ್ರತಿಬಿಂಬ (Reflection) ದ ಬದಲು ಪರಾವರ್ತನೆ (Refraction) ಆಗಬಾರದು. ಆದರೆ ಪ್ರಸಾದ ಗುಣ ಓದಲು ಎಷ್ಟು ಸುಕರವೋ ಸಾಧಿಸಲು ಅಷ್ಟೇ ದುಷ್ಕರ. ಅದು ನೂರು ಹೂವುಗಳಿಂದ ರಸಹೀರಿ ತುಂಬಿಯು ಜೇನು ಹನಿಸಿದಂತೆ, ಜೇನಿನ ಸವಿಯ ಹಿಂದೆ ತುಂಬಿಯು ಅವಿಶ್ರಾಂತ ಪರಿಶ್ರಮವಿರುತ್ತದೆ, Easy reading is hard writing. ಶ್ರೀ ಮಾಸ್ತಿಯವರ ಗದ್ಯಶೈಲಿಯನ್ನೇ ನೋಡಬಹುದು. ಅದು ಕಾಣಲು ಎಷ್ಟು ಸರಳ, ನುಣುಪು, ಆದರೆ ಅದರ ಹಿಂದೆ ಎಂಥ ಕೃಷಿ ಇದೆ. ಅದನ್ನು ಯತ್ನಿಸಿದವರಿಗೇ ಗೊತ್ತು. ತಿರ್ರನೆ ತಿರಗುವ ತಿಗರಿ ನಿಂತಲ್ಲಿಯೇ ನಿಂತಂತೆ ಕಾಣುತ್ತದೆ. ಆದರೆ ಅದು ಸ್ಥಿರತೆ ಜಡತೆಯಲ್ಲ. ಓದಲು ಕಠಿಣವಾದದ್ದೆಲ್ಲ ಬರೆಯಲು ಬಲು ಸುಲಭ. ಲೇಖಕ ತಾನು ಮಾಡಬೇಕಾದ ಶ್ರಮದ ಹೊರೆಯನ್ನು ಓದುಗನ ಹೆಗಲಿಗೆ ಹೊತ್ತು ಹಾಕಿ ಕೈಯುಡುಗುಬಿಡುತ್ತಾನೆ. ಒಬ್ಬ ಆಂಗ್ಲ ವಿಮರ್ಶಕನೆನ್ನುವಂತೆ "There are no two things the thought and the style. There is either one thing or a mere string of words". ವಿಚಾರ ಮತ್ತು ಶೈಲಿ ಇವೆರಡು ಬೇರೆ ಇಲ್ಲ. ನದಿಯಿಂದ ಅದರ ಪಾತ್ರ ಬೇರಲ್ಲ, ವಸ್ತುವಿಂದ ರೂಪ ವಿಂಗಡಿಸಲು ಬರುವದಿಲ್ಲ. ಇಬ್ಬರು ಕವಿಗಳ ಎರಡು ಮಾತು ಒಂದಾಗಿ ಕಂಡಾಗಲೂ ಅವುಗಳಲ್ಲಿ ಮಾರ್ಮಿಕವಾದ ಅಂತರವಿದ್ದೇ ಇರುತ್ತದೆ. ಕಾಲಿದಾಸ "ಪೂರ್ಣತಾ ಗೌರವಾಯ" ಅಂದರೆ ಶೇಕ್ಸಪಿಯರ "Ripeness is all" ಅನ್ನುತ್ತಾನೆ. ಆದರೆ ಆ ಮಾತಿಗಿಂತ ಈ ಮಾತಿನ ಅರ್ಥಸಂಪನ್ನತೆ ಹೆಚ್ಚು. ಪೂರ್ಣತೆಯಿಂದ ಪಕ್ವತೆ ಬೇರೆ, ಆದರೆಪ್ರಸಾದ ಗುಣ ಒಬ್ಬರ ಮಾತಿಗೂ ಸಮಾನ ಧರ್ಮ, ಆ ಧರ್ಮದ ಜಿಜ್ಞಾಸೆಯ ಅಲ್ಪ ಪ್ರಯತ್ನವಿದು, ಇದು ಸಫಲವಾದರೆ ಸಾಹಿತಿಯ ಸ್ವಧರ್ಮಕ್ಕೆ ಶ್ರೇಯಸ್ಸು.

●

( 'ಪ್ರಸಾದ' ೧೯೬೧)

# ಭಾವೈಕ್ಯ ಮತ್ತು ಕನ್ನಡದ ಸಮನ್ವಯ

ಭಾರತದ ರಾಷ್ಟ್ರೀಯ ಭಾವೈಕ್ಯವನ್ನು ಕುರಿತು ಮೊನ್ನೆ ತಾನೆ ಹೊಸ ದಿಲ್ಲಿಯಲ್ಲಿ ಹೊಸ ವಿಚಾರ ಮಂಥನವಾಯಿತು. ಈ ಪರಿಷತ್ತಿಗೆ ಸರ್ವ ಪಕ್ಷೀಯ ವಿಚಾರವಂತರನ್ನು ಕರೆಯಲಾಗಿತ್ತು. ಅದಕ್ಕೆ ಪೂರ್ವ ಭಾವಿಯಾಗಿ ಎಲ್ಲ ರಾಜ್ಯಗಳ ಮುಖ್ಯ ಮಂತ್ರಿಗಳೂ ಒಮ್ಮೆ ಒಟ್ಟಾಗಿ ಕೂತು ಈ ಭಾವೈಕ್ಯದ ಸಮಸ್ಯೆಯನ್ನು ಪರ್ಯಾಲೋಚಿಸಿ ಕೆಲವು ಗೊತ್ತುಗುರಿಗಳನ್ನು ಗುರುತು ಹಾಕಿಕೊಂಡು ಹಿಂದಿರುಗಿದ್ದರು. ಅವನ್ನೆ ಮುಂದಿಟ್ಟುಕೊಂಡು ಈ ರಾಷ್ಟ್ರೀಯ ಭಾವೈಕ್ಯ ಪರಿಷತ್ತು ಚರ್ಚಿಸಿತು.

ಇಲ್ಲಿ ಮುಖ್ಯ ಸಂಗತಿಯೆಂದರೆ ಅಂದಿನ ಮುಖ್ಯ ಮಂತ್ರಿಗಳಾಗಲೀ, ಮೊನ್ನೆಯ ಪರಿಷತ್ತಿನ ಆಮಂತ್ರಿತರಾಗಲಿ ತಾವು ಮಾನಸಿಕವಾಗಿ ತಟಸ್ಥರಿದ್ದಿಲ್ಲ. ರಾಷ್ಟ್ರೀಯ ಭಾವೈಕ್ಯಕ್ಕೆ ಬೇಕಾದ ಬಿಚ್ಚು ಮನಸ್ಸು, ತೆರೆದ ಹೃದಯ ಅವರಿಗಿದ್ದಿಲ್ಲ. ಏಕೆಂದರೆ ದೇಶದಲ್ಲಿ ಒಂದೊಂದು ರಾಜ್ಯಕ್ಕೂ ಒಂದೊಂದು ಮನೋವ್ಯಾಧಿ ಇದೆ. ಉತ್ತರದ ಮಾತಂತಿರಲಿ, ದಕ್ಷಿಣದಲ್ಲಿ ಕೆಲವು ರಾಜ್ಯಗಳಿಗೆ ಪ್ರಾಂತೀಯತೆ, ಕೆಲವುಗಳಿಗೆ ಜಾತೀಯತೆ (ಇದಕ್ಕೆ ನಮ್ಮ ಮೈಸೂರು ಸಾಕ್ಷಿ!), ಕೆಲವಕ್ಕೆ ಔತ್ತರೇಯರ ವಿರೋಧ, ಕೆಲವಕ್ಕೆ ತಮ್ಮದೊಂದು ಬಿಟ್ಟು ಮಿಕ್ಕ ರಾಜ್ಯಗಳ ಕುರಿತು ಸಂಕೋಚ ವೃತ್ತಿ-ಹೀಗೆಲ್ಲ ಭಾವ ದೌರ್ಬಲ್ಯಗಳು ಬಲವಾಗಿ ಕಾಡಿವೆ. ಇಷ್ಟು ಸಾಲದ್ದಕ್ಕೆ ಭಾಷೆಯ ಮತಾಂಧತೆ, ಗಡಿ ಸೀಮೆಯ ಮತಾಂಧತೆ, ನೀರಿನ ಹಕ್ಕಿನ ಮತಾಂಧತೆ, ಇಂಥ "ಅಷ್ಟಮದ"ಗಳು ಯಾವ ಮುಖ್ಯಮುಂತ್ರಿಗೂ, ಭಾವೈಕ್ಯ ಪರಿಷತ್ತಿನ ಆಮಂತ್ರಿತನಿಗೂ ಬಿಟ್ಟಿದ್ದಿಲ್ಲ. ತನ್ನ ರಾಜ್ಯ, ತನ್ನ ಪಕ್ಷ, ಪಂಗಡ, ಭೂಮಿಕೆಯೊಂದು ಬಿಟ್ಟರೆ ಮಿಕ್ಕವರ ಕುರಿತೆಲ್ಲ ಈ ಸದ್ಗ್ರಹಸ್ಥರು ಭಾವೈಕ್ಯದ ಅವಶ್ಯಕತೆಯನ್ನೋ ಅಶಕ್ಯತೆಯನ್ನೋ ಧಾರಾಳವಾಗಿ ಒಪ್ಪಿಕೊಳ್ಳಲು ಸಿದ್ಧ! ಅಂದಾಗ ಇಂಥವರು ಒಟ್ಟಾಗಿ ಕೂತು ಎಷ್ಟು ತಲೆಕೆಡಿಸಿಕೊಂಡರೆ ಏನು ಬಂತು?

ಒಬ್ಬ ಹಕೀಮ, ಒಬ್ಬ ವೈದ್ಯ, ಒಬ್ಬ ಹೋಮಿಯೋಪಥಿಕ, ಇನ್ನೊಬ್ಬ ನಿಸರ್ಗ ಚಿಕಿತ್ಸಕ, ಮತ್ತೊಬ್ಬ ಸರ್ಜನ್, ಮಗುದೊಬ್ಬ ಮಾಂತ್ರಿಕ ಎಲ್ಲರೂ ರೋಗಿಯ ಸುತ್ತು ಒಟ್ಟಾಗಿ ನಿಂತು ಒಂದು ಸರ್ವ ಸಮ್ಮತ ಚಿಕಿತ್ಸೆಗೆ ದಾರಿ ಹುಡುಕ ತೊಡಗಿದರೆ ಆ ದಾರಿ ರೋಗಿಯನ್ನು ಎಲ್ಲಿಗೆ ಒಯ್ಯುವುದೆಂಬುದನ್ನು ಊಹಿಸಲು ಅಷ್ಟೇನೂ ಕಷ್ಟವಲ್ಲ. ಇಂಥವರು ಹೆಚ್ಚೆಂದರೆ ರೋಗಿಯ ಅನುಪಾನ ಪಥ್ಯ ಬಾಹ್ಯೋಪಚಾರಗಳ ಮಟ್ಟಿಗೆ ಒಮ್ಮತಕ್ಕೆ ಬರಬಹುದು. ಆದರೆ ರೋಗವಿಧಾನದಿಂದ ಹಿಡಿದು ಅದರ ಚಿಕಿತ್ಸಾಕ್ರಮದವರೆಗೂ- "ತುಂಡೇ ತುಂಡೇ ಮತಿರ್ಭಿನ್ನಾ." ಭಾವೈಕ್ಯದ ಕುರಿತು ರಾಜಕಾರಣಿಗಳು-ಅವರು ಸೇವಾ ನಿವೃತ್ತರಿರಲಿ, ಪಕ್ಷ ಕಾರ್ಯ-ಪ್ರವೃತ್ತರಿರಲಿ, ವಿಚಾರಕ್ಕೆ ಕೂತರೆ ಇದಕ್ಕೂ ಬೇರೆ ತೀರ್ಮಾನ ಹೊರಡಲಾರದು!

ಇಲ್ಲಿ ಮುಖ್ಯವಾಗಿ ನಾವು ಮೂರು ಮಾತುಗಳನ್ನು ಮರೆಯಕೂಡದು. ಭಾವೈಕ್ಯವೆಂಬುದು ಯಾವ ವಸ್ತು? ಅದು ಕೇವಲ ಆಡಳಿತದ, ರಾಜಕೀಯದ ಸೌಕರ್ಯ-ಕೈಂಕರ್ಯಗಳ ದೃಷ್ಟಿಯಿಂದ ನೋಡಬೇಕಾದದ್ದೇ? ಅದನ್ನು ಕೇಂದ್ರದಿಂದ, ಮೇಲಿನಿಂದ ಸರ್ಕಾರೀ ಸತ್ತೆಯಿಂದ ನೋಡಬೇಕಾದ್ದೆ ಅಥವಾ ಜನತೆಯ ಎದೆಯಾಳದಿಂದ ಹಳ್ಳಿ, ತಾಲ್ಲೂಕು ಜಿಲ್ಲೆ, ಪ್ರದೇಶ, ರಾಜ್ಯ ಮಟ್ಟದಿಂದ

ಕುದುರಿಕಟ್ಟಿ ನಿಲ್ಲಬೇಕಾದದ್ದೋ?

ಭಾವೈಕ್ಯವೆಂಬುವದು ಒಂದು ಉಪಾಯಗಾರಿಕೆ ತಂತ್ರಗಾರಿಕೆಯಲ್ಲ. ಅದೊಂದು ಭೌತಿಕ ಕಟ್ಟು ಪಾಡಲ್ಲ. ಭೌತಿಕ ಐತಿಹಾಸಿಕ ತಾತ್ವಿಕ ಸನ್ನಿವೇಶವು ಅದಕ್ಕೆ ಅನುಕೂಲವಾಗಬಹುದು, ಪ್ರತಿಕೂಲವೂ ಆಗಬಹುದು. ಆದರೆ ಅದೊಂದೇ ಭಾವೈಕ್ಯದ ಮೂಲ ಅಥವಾ ಮುಖ್ಯ ಲಕ್ಷಣವಲ್ಲ, ಕಾರಣವೂ ಅಲ್ಲ. ಇಸ್ರಾಯಿಲ್ ರಾಷ್ಟ್ರ ಹುಟ್ಟುವ ಮೊದಲು ಯಹೂದಿಗಳೆಲ್ಲ ಜಗತ್ತಿನಲ್ಲಿಯೇ ಹರಿದು ಹಂಚಿದ್ದರು. ಅಲ್ಲಲ್ಲಿ ಧಿಃಕೃತ ತಿರಸ್ಕೃತರಾಗಿದ್ದರು, ದಲಿತರಾಗಿದ್ದರು. ಆದರೂ ಅವರಲ್ಲಿ ಭಾವೈಕ್ಯ ಸ್ಥಾಪಿತವಾಗಿಯೇ ಇತ್ತು. ಇದಕ್ಕೆ ಪ್ರತಿಯಾಗಿ ಮೂರು ವರ್ಷಗಳ ಹಿಂದೆ ಈಜಿಪ್ತಿನ ಅಧ್ಯಕ್ಷ ನಾಸೇರರ ನೇತೃತ್ವದಲ್ಲಿ ಅಖಿಲ ಅರಬ್ ಜನಾಂಗದ ಸಂಘಟನೆ ಸ್ಥಾಪಿತವಾಯಿತು. ಆದರೆ ಮೊನ್ನೆ ತಾನೆ ಸಿರಿಯಾ ಬೇರೆ ಆಯಿತು. ಇರಾಕ್, ಇರಾನ್, ತುರ್ಕಸ್ಥಾನಗಳೇ ಮುಂತಾದ ಹತ್ತಿರದ ಸುತ್ತಲಿನ ರಾಷ್ಟ್ರಗಳು ಅದನ್ನು ಎತ್ತಿ ಹಿಡಿದಿದೆ. ಅರಬ್ಬಿ ಜನಾಂಗದ ಸ್ವತಃಸಿದ್ಧವಾದ ಸಾಂಸ್ಕೃತಿಕ ಬಾಂಧವ್ಯ ಹೊಸದಾಗಿ ಹೂಡಿದ ಭಾವೈಕ್ಯಕ್ಕೆ ಬಲವಾಗಲು ಸಾಲದಾಯಿತು!

ಇಲ್ಲಿ ಮನಗಾಣತಕ್ಕ ಮಾತೆಂದರೆ ಭಾವೈಕ್ಯ ಕೇವಲ ಪ್ರಾದೇಶಿಕತೆ, ಅಖಂಡ ಶಾಸನ-ಸತ್ತೆಯ ಕೇಂದ್ರೀಕರಣಗಳಿಂದ ಪಾಡಿಗೆ ಬರುವ ಹಣ್ಣಲ್ಲ. ಈ ಸಮಸ್ಯೆಯ ಹೃದಯವೇ ಹೃದಯದ ಸಮಸ್ಯೆಯಾಗಿದೆ. (Heart of the problem is problem of the heart.) ಸಮಾನವಾದ ಪ್ರಚೋದನೆ ಇಲ್ಲದೆ ಸಮಾನವಾದ ಏಕರೂಪವಾದ ಭಾವನೆ ಸಾಧ್ಯವಿಲ್ಲ. ಆವೇಶ ಉನ್ಮಾದಗಳಿಲ್ಲದೆ ಭಿನ್ನ ಭಾವನೆಗಳು ಏಕಾಕಾರವಾಗಿ ಎರಕ ಹೊಯ್ಯುವುದು ಶಕ್ಯವಿಲ್ಲ. ಜನಾಂಗಗಳ ಇತಿಹಾಸವನ್ನು ಅವಲೋಕಿಸಿದರೆ ನಮಗೆ ಕಾಣುವುದೇನು? ಸರ್ವ ಸಾಮನ್ಯವಾದ ಒಂದು ಶತ್ರು, ಒಂದು ಸಂಕಟ, ಒಂದು ಧರ್ಮ, ಒಂದು ಆದರ್ಶ, ಒಂದು ಕ್ರಾಂತಿ, - ಇಂಥ ಪ್ರಚಂಡವೂ ಪ್ರಬಲವೂ ಆದ ಉತ್ತೇಜಕ ಪ್ರಚೋದನೆ ಇದ್ದಾಗಲೇ ಜನಾಂಗಗಳು ಒಂದಾಗಿವೆ, ಮುಂದಾಗಿವೆ. ಹೊಂಡ, ಕೊಳ್ಳ, ತಗ್ಗು ದಿನ್ನೆಗಳನ್ನೆಲ್ಲ ಮುಚ್ಚಿ ಮುಳುಗಿಸಿ ನೆರೆ ನೆಗುಸಿನಿಂದ ನೀರಿನ ಪಾತಳಿ ಏರಿ ನಿಲ್ಲುವಂತೆ, ಭಾವಾವೇಶವಿಲ್ಲದೆ ಭಾವೈಕ್ಯವಿಲ್ಲ. ಜನಮನದ ಮೂಲೆ ಮೂಲೆಗಳನ್ನು ವ್ಯಾಪಿಸಿ ಮೂಲವನ್ನೆ ಅಲ್ಲಾಡಿಸಿ ಸೆಳೆದೊಯ್ಯುವ ಒಂದು ಸಾರ್ವಭೌಮ ಉತ್ಥಾಪನೆಯ ಸಾರ್ವತ್ರಿಕ ಆಂದೋಲನೆ ಇಂಥ ರಾಷ್ಟ್ರೀಯ ಅಥವಾ ಜನತೆಯ ಆತ್ಮಜಾಗೃತಿಗೆ ಭಾವನೆಯ ಏಕಾತ್ಮತೆಗೆ ಅತ್ಯಂತ ಅಗತ್ಯ.

ರಾಷ್ಟ್ರಭಾಷೆ, ಏಕಲಿಪಿ, ರಾಜಕೀಯ ಪಕ್ಷಗಳಿಗೆ ಶಿಷ್ಟಾಚಾರದ ಅಭ್ಯಾಸಪತ್ರಿಕೆ - ಇವೆಲ್ಲ ಹೊರಗಿನ ಓರಣ, ಮೇಲಿನ ಹೊದಿಕೆ. ಬರೆ ಸಮವಸ್ತ್ರಗಳಿಂದಲೇ ಸೈನ್ಯದ ಒಕ್ಕಟ್ಟು ಸಿದ್ಧವಾಗುವದಿಲ್ಲ. ಒಟ್ಟಿನ ಒಕ್ಕೂಟಕ್ಕೆ ಒಂದು ಒಳಕಟ್ಟು ಬೇಕು. ಎಲುಬು ಮುರಿದಲ್ಲಿ ಪ್ಲಾಸ್ಟರ್ ಪಟ್ಟಿ ಹಾಕಿಟ್ಟಂತೆ ಅಲ್ಲ- ರಾಷ್ಟ್ರೀಯ ಭಾವೈಕ್ಯ.

ಜನಾಂಗದ ಮನಸ್ಸನ್ನು- ಭಾರತೀಯ ಹೃದಯ ಸಮುದ್ರವನ್ನು-ಉಕ್ಕೇರಿಸಿ ಹೊಡೆ ಮರಳುವಂತೆ ಮಾಡುವ ಉತ್ಪಾದದ ಆವೇಶ, ಉದ್ರೇಕದ ಸಂಭ್ರಮ ದೇಶದ ಮುಂದೆ ಯಾವುದಿದೆ? ದೇಶದ ಪಂಚವಾರ್ಷಿಕ ಅಭಿವೃದ್ಧಿ ಸಾಧನೆಯ ಮಹಾ ಯಾತ್ರೆ. ಆದರೆ ಆ

ಕುರಿತು ಜನತೆ ಜಡಬಧಿರ, ಶೀತಶಿಥಿಲವಾಗಿಯೇ ಉಳಿದಿದೆ. ಯಾವ ಯೋಜನಾ ಕಾರ್ಯದಲ್ಲಿಯೂ ಜನತೆಯ ಪಾಲುಗಾರಿಕೆ ಎಂಬುವದು ಅಭಾವದಿಂದಲೇ ಒಡೆದೆದ್ದು ಕಾಣುತ್ತದೆ! ಹಿಂದೆ ಸ್ವಾತಂತ್ರ್ಯದ ಆಂದೋಲನದ ಆರಂಭದಲ್ಲಿ ರೌಲೆಟ್ ಆಕ್ಟಿನ ಬಹಿಷ್ಕಾರವಿರಲಿ, ದಂಡೀ ಉಪ್ಪಿನ ಸತ್ಯಾಗ್ರಹವಿರಲಿ, ಭಾರತೀಯ ಹೃದಯವನ್ನೇ ಆಕಸ್ಮಿಕವಾಗಿ ಆಶ್ಚರ್ಯಕರವಾಗಿ ಕಲುಕಿ ಕೆರಳಿಸಿ ಸೂರೆ ಗೈಯ್ಯುವ ಯಾವದೋ ಒಂದು ಮಾಯಾ ಸ್ಪರ್ಶವನ್ನು ಮಹಾತ್ಮರು ಮಾಡಿದ್ದರು. ಲೋಕಕ್ಕೆ ಅದ್ಭುತವೆನಿಸುವಂತೆ ಈ ಕಾರ್ಯಕ್ರಮವು ಜನತೆಯ ಪ್ರಚಂಡ ಪ್ರತಿಕ್ರಿಯೆಯನ್ನು ಪಡೆಯಿತು. ಆದರೆ ಇಂದು ಸ್ವರಾಜ್ಯ ಸ್ಥಾಪನೆಯಲ್ಲಿ ಅದರ ಉತ್ತರೋತ್ತರ ಅಭಿವೃದ್ಧಿ ವಿಕಾಸದ ವಿವಿಧ ವಿಕ್ರಮದ ಹಾದಿಯಲ್ಲಿ ಅದೇ ಜನತೆಯ ಮನೋರಥವನ್ನು ಎಳೆದೊಯ್ಯುವದರಲ್ಲಿ ನಮ್ಮ ನಾಯಕರು ನಿರುಪಯೋಗಿಯೆಂದು ಸಿದ್ಧರಾಗಬೇಕೆ? ಹಲವು ಹೆಳವರು ಕೂಡಿ ಒಬ್ಬ ಕಾಲಾಳು ಆಗುವದಿಲ್ಲ. ನಮ್ಮ ನಾಯಕತ್ವದ ಗತಿ ಅದೇ ಬಗೆಯದಾಗಿದೆ. ನವ್ಯ ಮಹಾಕವಿ ಅಡಿಗರು ಹೇಳುವಂತೆ "ಕುಂಟನ ಬೆನ್ನಿಗೆ ಕುರುಡ ಕೂತಿದ್ದಾನೆ." ದಾರಿ ಹೇಗೆ ಸಾಗಬೇಕು?

ಅಂದರೆ ಇಂದಿನ ಭಾವಾನೈಕ್ಯಕ್ಕೆ ಕಾರಣ ನಮ್ಮಲ್ಲಿ ಏಕಮುಖವಾದ ಆವೇಶವನ್ನು ಪ್ರೇರಿಸಬಲ್ಲ ನೇತೃತ್ವವಿಲ್ಲದಿರುವುದು. ಪ್ರಜಾಪ್ರಭುತ್ವದ ಸಂಸ್ಕಾರ ಶತಮಾನ ಇಚ್ಛೆ ಇದ್ದ ರಾಷ್ಟ್ರಗಳಲ್ಲಿಯೂ ಒಬ್ಬ ವಿಭೂತಿಯ ಪ್ರಭಾವ ಸಾಕಷ್ಟು ಬೀಳುತ್ತದೆ. ಹೊಸದಾಗಿ ಪ್ರಜಾರಾಜ್ಯ ಕಟ್ಟನಿಂತ ಭಾರತೀಯ ಜನತೆಗೆ ಎಂದಿಗಿಂತಲೂ ಹೆಚ್ಚಾಗಿ ಸ್ಫೂರ್ತಿದಾಯಕ ನಾಯಕತ್ವ, ಮಾಯಾಸ್ಪರ್ಶದ ಮುಂದಾಳುತನ ಹೊಸದಿಲ್ಲಿಯಿಂದ ಹಳೆಯ ಹಳ್ಳಿಯವರೆಗೂ ಬೇಕೇ ಬೇಕು. ಎಷ್ಟೋ ಶಿಲೆಗಳು ಬಿದ್ದಿವೆ. ಎಷ್ಟೋ ಪಾದಗಳೂ ನಡೆದಿವೆ. ಆದರೆ ಅಹಲ್ಯೆಯ ಉದ್ಧಾರಕ್ಕೆ ಒಂದು ವಿಶಿಷ್ಟ ಶಿಲೆಗೆ ವಿಶಿಷ್ಟ ಪಾದವೇ ಸೋಂಕಬೇಕಾಯಿತು. ಭಾರತದ ಜನಮನವು ಅಂಥ "ಅಹಲ್ಯೆ"-"ಹಲ"ದ ಸಾಗಿಲ್ಲದೇ ಪಡಬಿದ್ದ ಕಸಿಮಣ್ಣಿನ ನೆಲ! ಆದರೆ ಅದಕ್ಕೆ ಬೇಕಾದ ಶ್ರೀರಾಮ ಪಾದಸ್ಪರ್ಶ ಒಬ್ಬ ನೆಹರೂಜಿಯಿಂದ ಬಂದರೆ ಸಾಲದು. ಆದರೆ ಅವರನ್ನು ಕಣ್ಮರೆಯಲ್ಲಿಟ್ಟರೆ ನಾವು ಕಾಣುವುದೇನು? ನಾಯಕರಲ್ಲಿ ಅನೈಕ್ಯ, ಲಾಭ-ಲೋಭ, ಲಂಪಟತನದ, ಅಧಿಕಾರದ ಜೂಜಾಟ, ಸೆಣಸಾಟ. ಕಾಲಿಗೆ ತೊಡಕು, ಬೆನ್ನಿಗೆ ಚೂರಿ, ಕತ್ತಲೆ ಗುದ್ದು, ಕಣ್ಣಿಗೆ ಮಣ್ಣು, ಮುಸುಕಿನ ಮೋಸ, ನೆತ್ತಿಗೆ ಕಣ್ಣು, ಮಾತಿನ ಜಂಭ, ಸ್ವಾರ್ಥದ ಸೇವೆ ಮತ್ತು ತತ್ವಕ್ಕೆ ಸೊನ್ನೆ! ಇಂಥ ಮುಂದಾಳುಗಳಲ್ಲಿ ಅನೇಕರು ಅನನುಭವಿಗಳು, ಅನಭಿಜ್ಞರು. ಆಡಂಬರದ ಬಣ್ಣದ ವೇಷಗಳು, ಉದರ ವೈರಾಗ್ಯದ ರಾಜಕಾರಣಿಗಳು, ವಿನಾಯಕರಾಗಿ ಬಂದ ವಾನರರು, ಇನ್ನೂ ಕೆಲವರು ಪತಿವ್ರತೆಯರಾಗಿ ಮೆರೆವ ವೃದ್ಧವೇಶ್ಯೆಯರು, ಸಂಧಿ ಸಾಧಿಸುವ ಸಿದ್ಧ ಸಾಧುಗಳು ಸಜ್ಜನರು, ದುರ್ಬಲರು, ಮೂರ್ಖರು, ಬಲಿಷ್ಠರು, ದುಷ್ಟರು, ಧೂರ್ತರು-ಒಬ್ಬರು ಆತ್ಮವಂಚಕರು; ಇನ್ನೊಬ್ಬರು ಪರ ವಂಚಕರು, ಇಂಥವರ ಮಾದರಿಯನ್ನು ಮುಂದಿಟ್ಟುಕೊಂಡ ಜನತೆ ರಾಷ್ಟ್ರೀಯತೆಯ ಭಾವನಾತ್ಮಕ ಸಮನ್ವಯವನ್ನು ಏನು ಮಣ್ಣು ಸಾಧಿಸೀತು?

ಇರಲಿ, ನಾಯಕತ್ವದ ಸಮಸ್ಯೆಯ ಇತ್ಯರ್ಥಕ್ಕೆ ನಾವು ಇಲ್ಲಿ ಹೊರಟಿಲ್ಲ. ಇಂದು ಹೊರಗಿನ ಶತ್ರುವನ್ನು ಒಳಗಿನ ಹಗೆಯನ್ನು ಬೆರಳೆತ್ತಿ ಕಾಣಿಸಿ ನಾವು ಒಂದು ತಾತ್ಕಾಲಿಕ ಕೃತಕ ಭಾವಾವೇಶವನ್ನು

ದ್ವೇಷದ ಬಲದಿಂದ ಕಟ್ಟಬಹುದು. ಚೀನೀ ಆಕ್ರಮಣ, ಪಾಕೀಸ್ಥಾನದ ಭಯ, ಕಮ್ಯೂನಿಸಂ ದ್ವೇಷ, ಮುಂತಾದವೆಲ್ಲ ಇಂಥ ನೈಮಿತ್ತಿಕ ಪ್ರಚೋದನೆಗಳಾಗಬಲ್ಲವು. ಹಿಟ್ಲರನು ಯಹೂದಿಗಳ ದ್ವೇಷದ ದಳ್ಳುರಿ ಹುಟ್ಟಿಸಲಿಲ್ಲವೇ-ತನ್ನ ರೊಟ್ಟಿ ಸುಟ್ಟುಕೊಳ್ಳಲಿಕ್ಕೆ? ಆದರೆ ಹೀಗೆ ಪ್ರತಿಭಟನೆಗಾಗಿ ಪ್ರತೀಕಾರಿಯಾಗಿ ಹುಟ್ಟುವ ಒಕ್ಕಟ್ಟು, ಒಮ್ಮನಸ್ಸು ಸ್ಥಿರವಲ್ಲ. ಬ್ರಿಟಿಷರ ವಿರುದ್ಧ ಭಾರತವು ಸ್ಥಿರವಲ್ಲ. ಬ್ರಿಟಿಷರ ವಿರುದ್ಧ ಭಾರತವು ಅಖಂಡವಾಗಿ ಹೋರಾಡಿತು. ಆದರೆ ಆ ಅಖಂಡತೆಯ ಬೆಲೆ ತೆತ್ತೇ ವಿಭಜನೆಯೊಂದಿಗೆ ಸ್ವಾತಂತ್ರ್ಯ ಪಡೆಯಿತು. ಅಂಥ ನಿಮಿತ್ತ ದೂರವಾದೊಡನೆ ಅಂಥ ಒಕ್ಕಟ್ಟು ಕುಸಿದು ಬೀಳುವುದು. ನಮ್ಮ ರಾಷ್ಟ್ರೀಯ ಚಳವಳಿಯ ನೆಲೆಯೇ ಹಾಗೆ ನೈಷಧಿಕ ನಕಾರಾತ್ಮಕವಾಗಿತ್ತು. ಇಂದಿನ ಅನೈಕ್ಯದ ಅನಾಹುತಕ್ಕೆ ಈ ದುರಂತವೇ ಕಾರಣ. ಆ ಪೊಳ್ಳು ತುಂಬಲು ಮಹಾತ್ಮರು ತಮ್ಮ ವಿಧಾಯಕವೆಂಬ ಕಾರ್ಯಕ್ರಮವನ್ನು ಮುಂದಿಟ್ಟರು. ಈ ಮಟ್ಟಿಗೆ ಅವರಿಗೆ ರಾಷ್ಟ್ರದ ರೋಗ ನಿದಾನವಾಗಿತ್ತು. ದೇಶಭಕ್ತಿ ರಾಷ್ಟ್ರಾಭಿಮಾನ ಒಂದೇ ಸಾಲದು. ಅದಕ್ಕೆ ಪೂರಕವಾಗಿ ರಚನಾತ್ಮಕ ಕಾರ್ಯಯೋಜನೆ ಬೇಕು - ಎಂದು ಗಾಂಧೀಜಿ ಗುರುತಿಸಿದರು. ಆದರೆ ಅವರಿಟ್ಟ ವಿಧಾಯಕ ಕಾರ್ಯಕ್ರಮವು ಆಧುನಿಕ ವೈಜ್ಞಾನಿಕ ಪ್ರಗತಿಯೊಂದಿಗೆ ಸಾಗುವ ಜಾಗತಿಕ ಮುನ್ನೋಟಕ್ಕೆ, ಮುನ್ನಡೆಗೆ ಪ್ರತಿಗಾಮಿಯಾಗಿತ್ತು. ಗಾಂಧೀಜಿಯವರು ಸಾರಿದ ವಿಧ್ವಂಸಕ ಕ್ರಾಂತಿಕಾರಿ ಕಾರ್ಯಕ್ರಮಕ್ಕೆ ಅವರ ವಿಧಾಯಕ ರಚನಾತ್ಮಕ ಕಾರ್ಯಕ್ರಮವು ವಿಸಂಗತವಾಗಿತ್ತು. ಆದ್ದರಿಂದ ಅಂದಿನ ಉತ್ಥಾಪನೆಗೆ ತಕ್ಕ ಹೊಸ ಉತ್ಕರ್ಷ ಸಾಧನೆಯ ಸ್ಥಾಪನೆ ಸಿಗಲಿಲ್ಲ. ಅಂದು ಮುಪ್ಪುರಿಗೊಂಡಿದ್ದ ಶಕ್ತಿಗಳಿಗೆ ಯೋಗ್ಯ ದಿಶೆ ದೀಕ್ಷೆ ದೊರೆಯದೆ ಆ ಜನಜಾಗೃತಿಯು ಶಕ್ತಿಪಾತವಾಯಿತು. ರಾಷ್ಟ್ರೀಯ ಆಂದೋಲನ ಯೋಜನಾ ಬದ್ಧವಾಗಿ ಮುಂದರಿಯದೆ ಸ್ಥಗಿತವಾಗಿ ಕೋಮುವಾರಿನ ಪ್ರತಿಕ್ರಿಯೆಗಳಿಗೆ ಎಡೆಕೊಟ್ಟಿತು. ಇದರ ಮೀಮಾಂಸೆಗೂ ಈ ಲೇಖ ಸ್ಥಾನವಲ್ಲ.

ಹೀಗೆ ವಿರೋಧಿ ವೃತ್ತಿಯಲ್ಲಿ ಪ್ರತೀಕಾರ ಪ್ರವತ್ತಿಯಿಂದ ಹೊರಟ ಸಂಘಟನೆ ಅಂಥ ವೃತ್ತಿ-ಪ್ರವೃತ್ತಿಗಳ ಸನ್ನಿವೇಶ ಕಳೆದ ಮೇಲೆ ತಾಳಿ ಉಳಿಯುವುದಿಲ್ಲ. ಅಂದಾಗ ಭಾವೈಕ್ಯಕ್ಕೆ ಹೆಚ್ಚಿನ ಭದ್ರವಾದ ಭೂಮಿಕೆ ಅಗತ್ಯ. ಮಾನವ ಇತಿಹಾಸದಲ್ಲಿ ನಡೆದ ಕಲಹ ಆಂದೋಲನಗಳೆಲ್ಲ ಮುಖ್ಯವಾಗಿ ಮೂರು ಉದ್ದೇಶಗಳಿಗಾಗಿ ನಡೆದು ಬಂದಿವೆ. ಅವೆಂದರೆ ಸತ್ತೆ, ಸಂಪತ್ತಿ ಮತ್ತು ಸಂಸ್ಕೃತಿ. ಮಾರ್ಕ್ಸ್‌ವಾದದ ಇತಿಹಾಸದ ಭೌತಿಕ ಉಪಪತ್ತಿಯ ಅಥವಾ ವರ್ಗ ಕಲಹದ ತರ್ಕ ಕರ್ಕಶ ವಿವೇಚನೆಗೆ ಇಳಿಯದೆ ಈ ಸ್ಥೂಲ ಉದ್ದೇಶಗಳನ್ನು ಗುರುತಿಸಲಾಗಿದೆ. ಕೇವಲ ಸತ್ತೆಗಾಗಿ ನಡೆದ ಹೋರಾಟದಿಂದ ಸತ್ತೆಯ ಆಕ್ರಮಣ, ವಿಭಜನೆಗಳಿಗಾಗಿ ಸ್ಪರ್ಧೆ-ಸಂಘರ್ಷ ನಡೆಯುತ್ತ ಹೋಗುತ್ತದೆ. ಉಳಿದ ಎರಡು ಉದ್ದೇಶಗಳಿಗಾಗಿ ನಡೆಯುವ ಕ್ರಾಂತಿಯಿಂದ ಜನಾಂಗದ ಬುಡಕಟ್ಟು ಒಳಕಟ್ಟು ದೊಡ್ಡ ಪ್ರಮಾಣದಲ್ಲಿ ವ್ಯತ್ಯಾಸಗೊಳ್ಳುತ್ತದೆ. ಭಾರತ ಸ್ವತಂತ್ರವಾಯಿತು. ಮುಂದೆ ಭಾಷಾನುಗುಣ ರಾಜ್ಯಗಳು ಏಕತಂತ್ರವಾದವು. ರಾಷ್ಟ್ರದ ಸ್ವರಾಜ್ಯ ಗ್ರಾಮದ ಪಂಚಾಯತ ರಾಜ್ಯವು ಆಗಿ ಪರಿಣಮಿಸಿತು. ಆದರೆ ಇದೆಲ್ಲ ರಾಜಕೀಯ ರಂಗದ ಹೊಸಸಂಘಟನೆ. ಒಂದು ಕೇವಲ ಅಧಿಕಾರದ ಅಧಿಪತ್ಯದ ಪೈಪೋಟಿಗೆ ಹೆಚ್ಚು ಎಡೆಕೊಟ್ಟಂತಿದೆ. ಇದರಿಂದ ದೇಶದ ಎಲ್ಲ ರಾಜಕೀಯ ಹಂತಗಳಲ್ಲಿ ರಾಜಕೀಯ ನಾಯಕರೇ ಹೆಚ್ಚು ಬೆಳೆದರು, ಬಲಿತರು, ಅವರ ಪಂಗಡ-ವಿಂಗಡಗಳ ಗುಂಪುಗೇಡಿತನ ಬೆಳೆಯಿತು. ದೇಶದ ಭಾವಾತ್ಮಕ ಐಕ್ಯಕ್ಕೆ ಇದು ಅಡ್ಡಬಾರದುಂಟೇ?

ಈ ಮೂಲಕ ಒಂದು ಭಾವೈಕ್ಯದ ಸಮಸ್ಯೆಯನ್ನು ಕೇವಲ ಪಕ್ಷ-ಪ್ರತಿಪಕ್ಷಗಳ ಆಚಾರಶುದ್ಧತೆಯ ದೃಷ್ಟಿಯಿಂದಲೇ ಹೆಚ್ಚು ನೋಡಲಾಗುತ್ತಿದೆ. "Code of Conduct" ರೂಪಗೊಂಡದ್ದು ಇದರದೇ ಕುರುಹು. ಆಡಳಿತದ ಅಂತರ್ದೇಶೀಯ ಸಂಪರ್ಕ-ಸೌಂದರ್ಯದ ದೃಷ್ಟಿಯಿಂದಲೂ ಈ ಪ್ರಶ್ನೆಯ ಚರ್ಚೆ ಹೆಚ್ಚಾದಂತಿದೆ. ಏಕಲಿಪಿಯ ಹೊರಲೇಪ. ರಾಷ್ಟ್ರ ಭಾಷೆಯ, ಆಂಗ್ಲ ಭಾಷೆಯ, ಬಾಹ್ಯ ಬಂಧನ ಇವುಗಳ ಒತ್ತಾಯದ ವಿಚಾರವೇ ಇದಕ್ಕೆ ಸಾಕ್ಷಿ. ಆದರೆ ಇದೆಲ್ಲ ಒಂದು ಹಂದರ ಕಟ್ಟಿದಂತೆಯೇ ಹೊರತು ಅದರ ಮೇಲೆ ಬಳ್ಳಿ ಹಬ್ಬಿಸಿದಂತಲ್ಲ. ಐಕ್ಯ ಭಾವನೆ ಒಂದು ಸಾಮಾಜಿಕ ಸಾಂಸ್ಕೃತಿಕ ಅನುಭವ. ಮಳಲ ತಳದ ತೇವಿನಂತೆ ನೀರಿನ ಸೆಲೆಯಂತೆ ಅದು ಅಂತಸ್ಥವಾಗಿದ್ದರೂ ಸಂತತವಾಗಿ ಹರಿಯುವ ಭಾವನೆಯ ರಕ್ತಾಭಿಸರಣ ವಾಗಿರುತ್ತದೆ. ನಮ್ಮಲ್ಲಿ ಸಮಾಜ ವಿಕಾಸ ಯೋಜನೆ ಬಂದಿತು. ಅದು ರಾಷ್ಟ್ರೀಯ ವಿಸ್ತರಣೆಯ, ಕೆಲವೊಂದು ಸಿಬ್ಬಂದಿ, ಸೇವಾ ಯೋಜನೆಗಳ ನಿರ್ದಿಷ್ಟ ಗುರಿಗಳ ಉಪಚಾರ, ಉಪಸ್ಕರಗಳ ಆಡಳಿತಗಾರಿಕೆಯ ಹೊಸದೊಂದು ವಿಭಾಗವಾಯಿತೇ ಹೊರತು ಸಾಮಾಜಿಕ ಭಾವನೆಯನ್ನು (Community feeling) ಹುಟ್ಟಿಸಲಿಲ್ಲ, ಹಬ್ಬಿಸಲಿಲ್ಲ. ಅಂದರೆ ಸಮಾಜವಿಕಾಸದ ಮೂಲ ಉದ್ದೇಶವೇ ನಿಷ್ಫಲವಾಯಿತು. ಅದರ ಮುಖ್ಯ ಸಂದೇಶವೇ ನಿಷ್ಫಲವಾಯಿತು. ಯಾವ ಅಂಶದಲ್ಲಿಯೂ ಧ್ಯೇಯವಾದಿತ್ವ, ಕಾರ್ಯದ ಆವೇಶ ಅಭಿನಿವೇಶಗಳು ಇಲ್ಲದ ಡಾಯರಿ ತುಂಬುವ ಜೀಪು ಭರ್ತಿಯ ಅಧಿಕಾರಿಗಳು ಅಮೆರಿಕೆಯ ಸಾಲದ ಹಣ ಹುಡಿಹಾರಿಸುವುದರಲ್ಲಿಯೇ ಕೃತಾರ್ಥವಾಯಿತು. ಜನತೆಯಲ್ಲಿ ಇನ್ನಿಷ್ಟು ಗುಂಪು, ಒಳಜಗಳ, ಗ್ರಾಮ ಸೇವಕರ ಹೊಸದೊಂದು ಕೈವಾಡ, ಕೃತಕ ಸಂಸ್ಥೆಗಳ ಸ್ಕೀಮುಗುಳಿಗಳಾದ ಹೊಸ ಕಾರ್ಯಕರ್ತರಿಗೆ ಇನ್ನೊಂದು ವಂಚನಾ ವ್ಯಾಸಂಗಕ್ಕೆ ಹೊಸ approach ರಸ್ತೆಗಳನ್ನು ತೆರೆದಂತೆ ಆಯಿತು. ಹೀಗೆ ರಾಷ್ಟ್ರೀಯ ಐಕ್ಯ ವಿಸ್ತರಣೆಯ ಸಮಸ್ಯೆಯನ್ನು ರಾಜಕೀಯ ಅಥವಾ ಆಡಳಿತ ರಂಗದ ಅಂಗವಾಗಿ ಕಂಡದ್ದರಿಂದ ಸಮಸ್ಯೆಗಳ ಸಂಕರವಾಗಿ ಜನತೆಯ ಮನೋರಂಗದಲ್ಲಿ ಬುದ್ಧಿಭೇದ ಭಾವ ಸಂಭ್ರಮ ಉಂಟಾಯಿತೇ ಹೊರತು ಅದರಿಂದ ಭಾವೈಕ್ಯಕ್ಕೆ ಅನುಕೂಲವೇನೂ ಆಗಲಿಲ್ಲ.

ಹಾಗಿದ್ದರೆ ಈ ಸಮಸ್ಯೆಯ ಬಗೆಹರಿಕೆಯ ಬಗೆಗೆ ಪುನರ್ವಿಮರ್ಶೆ ಅಗತ್ಯ. ಅದು ಮೇಲಿನಿಂದ ಕೇಂದ್ರದಿಂದ ಆಳರಸರಿಂದ ಪಕ್ಷೀಯ ಮತೀಯ ನಾಯಕ ಶ್ರೇಷ್ಠಿಗಳಿಂದ ಹೊರಗಿನಿಂದ ಹೇರಿದರೆ ಸಾಧ್ಯವಾಗುವಂತಿಲ್ಲ. ಅದಕ್ಕೆ ಜನತೆಯಿಂದ ಜನತೆಯ ಬಹು ಭಾಗವು ಬಾಳುವ ಹಳ್ಳಿಗಳಿಂದ ಆರಂಭವಾಗಬೇಕು. ಹಳ್ಳಿಯ ಜನರ ಹತಾಶವೃತ್ತಿಯನ್ನು ಹೊಡೆದೋಡಿಸುವ ಉಜ್ವಲ ಕಾರ್ಯಕ್ರಮ ಒಂದು ಬೇಕು. ಚುನಾವಣೆಗೊಮ್ಮೆ ಮಂತ್ರಿಗಳ ಬೆನ್ನಿಗೊಮ್ಮೆ ಬಂದು ಹೋಗುವ ಡಾಂಭಿಕ ಪುಢಾರಿಗಳ "ಸುದೀರ್ಘ ಭಾಷಣ"ಗಳಿಂದ ಈ ಕಾರ್ಯ ಆಗುವಂತಿಲ್ಲ. ಮಹಾತ್ಮರದೇ ಪದಪ್ರಯೋಗ ಮಾಡುವದಾದರೆ, ಇಂಥ ಭಾವೈಕ್ಯದ ಆಂದೋಲನ "Oceanic Circles" ಕಡಲಲ್ಲಿ ಬಿತ್ತರಿಸುತ್ತ ಹೋಗುವ ತೆರೆಗಳ ಸುಳಿಗಳಂತೆ ಹಳ್ಳಿಯ ಜನತೆಯ ಹೃದಯ ಸಮುದ್ರದಲ್ಲಿ ಅಲೆ ಅಲೆಯಾಗಿ ವಿಸ್ತಾರಗೊಳ್ಳಬೇಕು. ಜನತೆ ತನ್ನ ಕ್ಷುದ್ರ ದೌರ್ಬಲ್ಯಗಳನ್ನು ದೈನಂದಿನ ದೈನ್ಯದಿಂದ ಪಳಗಿ ಬಂದ ಸಂಕುಚಿತ ಸ್ವಾರ್ಥದ ಅನೇಕ ಇತಿ-ಮಿತಿಗಳನ್ನು ಕುಟುಂಬ ಕಲಹ, ದಾಯಾದಿ ಮತ್ಸರ ಜಾತೀಯ ದ್ವೇಷ, ಜಿದ್ದಿನ ದ್ವೇಷ, ವ್ಯಾಜ್ಯ ವ್ಯವಹರಣೆಯ ವ್ಯಾಮೋಹ-ಇವುಗಳನ್ನೆಲ್ಲ

ಮರೆಯುವಂಥ ಒಂದು ಉನ್ನತ ಉತ್ಸಾಹದ ಸಾಮುದಾಯಿಕ ಕಾರ್ಯಾರಂಭದ ಆದೇಶದಿಂದ ಹುರಿದುಂಬಿ ಹುರುಪುಗೊಂಡು ಮುನ್ನುಗ್ಗುವಂತೆ ಆಗಬೇಕು. ಅಂದರೇನೇ ಭಾವೈಕ್ಯ ಸಾಧ್ಯ.

Community of interest ಹಿತ ಸಂಬಂಧದ, ಸಾಮುದಾಯಿಕ ಸ್ವಾರ್ಥದ ಅಂಶಗಳನ್ನೆ ಎತ್ತಿ ಅವುಗಳ ಸಾಧನೆಗೆ ಸಮಾಜವನ್ನು ಒಟ್ಟಾಗಿ ಸಡಿಲು ಬಿಡದೆ ಒಂದೇ ಸಮನೆ ದುಡಿಯುವಂತೆ ಮಾಡಿದ ಹೊರತು ಭಾವನಾತ್ಮಕ ಸಮನ್ವಯ ಸಾಧ್ಯವಿಲ್ಲ. ವೀರಶೈವ ಸಮಾಜಕ್ರಾಂತಿ ಅಂಥ ಒಂದು ವಿಶಾಲ ಧ್ಯೇಯವಾದದ ಆಹ್ವಾನವಾಗಿತ್ತು. ಕೆಲಮಟ್ಟಿಗೆ ಇಂದು ಸರ್ವೋದಯ ಆಂದೋಲನ ಅಂಥ ಆತ್ಮನಿವೇದನೆಯ ಆಕರ್ಷಣೆಯ ಕರುಳಿನ ಕರೆಯಾಗಿದೆ. ಆದರೆ ಇಂಥ ಒಂಟಿ ಸಾಹಸದ ನಂದಾ ದೀಪ ಸುತ್ತಲಿನ ಕತ್ತಲೆಯನ್ನೇ ಒಡೆದು ಕಾಣಿಸುವದಲ್ಲದೆ ಹೆಚ್ಚಿನ ಬೆಳಕು ಹೇಗೆ ಚೆಲ್ಲಬಹುದು?

ಭಾರತದ ಮಾತಿರಲಿ, ನಮ್ಮ ಕನ್ನಡ ನಾಡಿನ ಭಾವೈಕ್ಯದ ಪ್ರಶ್ನೆಯನ್ನು ತೆಗೆದುಕೊಳ್ಳೋಣ. ಕಳೆದ ವರ್ಷ ಮಹಾರಾಷ್ಟ್ರ ರಾಜ್ಯ ನಿರ್ಮಾಣವಾಯಿತು. ಅದರ ಆರಂಭೋತ್ಸವದ ಆನಂದಾತಿರೇಕದ ವಿಜೃಂಭಣೆಯೊಂದಿಗೆ ನಮ್ಮ ಹೊಸ ಮೈಸೂರು ರಾಜ್ಯ ನಿರ್ಮಾಣದ ಸಮಾರಂಭವನ್ನು ಹೋಲಿಸಿ ನೆನೆದುಕೊಂಡರೆ ಭಾವೈಕ್ಯದ ವಿಷಯಕ್ಕೆ ಯೋಗ್ಯ ಹಿಂಬೆಳಕು ಸಿಗುತ್ತದೆ. ಬ್ರಿಟಿಷರು ಮುಂಬಯಿಯಲ್ಲಿ ರಾಜ್ಯ ಸ್ಥಾಪಿಸುವತನಕವೂ ಮಹಾರಾಷ್ಟ್ರಕ್ಕೆ ಒಂದು ಐತಿಹಾಸಿಕ ಪರಂಪರೆ ಅವಿಚ್ಛಿನ್ನವಾಗಿದೆ. ಆದರೆ ಮೈಸೂರಿನ ಹಾಗೂ ಹೊರಗಿನ ಕನ್ನಡ ಜನತೆಯ ರಾಜಕೀಯ ಜೀವನಕ್ಕೆ ಇಂಥ ಅವಿಚ್ಛಿನ್ನ ಪರಂಪರೆ ಇಲ್ಲ. ಇದ್ದ ಪರಂಪರೆ ಆತ್ಮವಿಸಂಗತವಾಗಿದೆ. ಇಂದಿನ ಹೊಸ ಮೈಸೂರಿನ ಘಟಕಗಳಲ್ಲಿ ಈ ಐತಿಹಾಸಿಕ ಹಿನ್ನೆಲೆ ವಿಸಂಗತಿಯನ್ನು ನಿಚ್ಚಳವಾಗಿ ಕಾಣಬಹುದು. ಮೈಸೂರು ಏಕಮುಖವಾದ ಸರಂಜಾಮೀ ಅರಸೊತ್ತಿಗೆ ಅನುಭವಿಸಿ ಬಂದ ಸೀಮೆ. ಬ್ರಿಟಿಷ್ ಕರ್ನಾಟಕವು ಈ ಸರಂಜಾಮೀ ಸಂಪ್ರದಾಯದಿಂದ ಒಂದೂವರೆ ಶತಮಾನದಿಂದಲೇ ಹೊರಬಿದ್ದು ಆ ಮಾನದಲ್ಲಿ ಹೆಚ್ಚು ಪ್ರಜಾಪ್ರಭುತ್ವವಾದಿಯಾಗಿ ಬೆಳೆದು ಬಂದ ಸಾಮಾಜಿಕ ಜೀವನದ ಸೀಮೆ. ಅತ್ತ ನಿಜಾಮನ ರಾಜ್ಯದಿಂದ ಬಂದ ಜನ ಅರಸೊತ್ತಿಗೆಯ ಒಂದು ಆತ್ಮ ಪ್ರತಿಷ್ಠೆಯೂ ಇಲ್ಲದೆ ಬರೇ ಸರಂಜಾಮೀ ಮನೋವೃತ್ತಿಗೆ ಮೈಯುಂಡಿ ಬಂದ ಪ್ರಜೆ. ಇನ್ನು ಕೊಡಗು ಸ್ಕಾಟ್ಲಂಡ್‌ದಂತೆ, ನಮ್ಮ ನೇಪಾಳದಂತೆ ಒಂದು ವಿಶಿಷ್ಟ ಸಾಂಪ್ರದಾಯಿಕ ಪಡಿಯಚ್ಚಿನ ಜೀವನದ ಸೀಮೆ. ಇವೆಲ್ಲವೂ ಆಧುನಿಕ ಪ್ರಜಾಪ್ರಭುತ್ವವಾದಿಯಾದ ಉದಾರ ಮತ ಸರಣಿಯ ಪ್ರಗತಿಪರ ಜೀವನ ಪದ್ಧತಿಯ ಸೀಮೆಯಲ್ಲಿ ಸಮಾವೇಶವಾದರೆ ಆಗ ಭಾವೈಕ್ಯ ಕಡಿಮೆ ಕಷ್ಟದ್ದು ಆಗಬಹುದಿತ್ತು.

ಆದರ ಹಾಗೆ ಆಗಲಿಲ್ಲ. ನಾವೆಲ್ಲ ಮೈಸೂರು ಸಂಸ್ಥಾನದಲ್ಲಿ ಸಮಾವೇಶಗೊಂಡೆವು. ಅಲ್ಲಿಯೇ ನಮ್ಮ ವಿಶಾಲ ಜೀವನದ ಆಶೋತ್ತರಗಳ ಆವೇಶಕ್ಕೆ ಕುಗ್ಗು ಬಂದಿತು. ಪ್ರಾಗತಿಕತೆಗೆ ಅಗತಿಕತೆಯ ಕುತ್ತು ಬಂದಿತು. ಇಲ್ಲಿ ಒಂದು ಪ್ರಚಂಡ ಮನೋವೈಕ್ಲವ್ಯದ ಘಟನೆ ಒದಗಿ ಬಂದಿತು. ಮೈಸೂರಿನ ಅರಸೊತ್ತಿಗೆ ಹೋಗಿ ಬರೇ ಜಂಬೂ ಸವಾರಿ ಉಳಿದಿತ್ತು. ಆ ಮಟ್ಟಿಗೆ ಅಳಿದ ಆಳುವ ಮಹಾ ಪ್ರಭುಗಳಿಗೂ ಅವರನ್ನು ದೇವಾಂಶ ಸಂಭೂತರೆಂದು ಕಂಡು ಕೊಂಡಾಡುತ್ತಾ

ಬಂದ ಪ್ರಜೆಗಳಿಗೂ ಒಂದು ಸಾಂಘಿಕ ಮಾನಭಂಗವಾಯಿತು. ಅದರಿಂದ ಹೊಸ ಜನ-ಅವರು ಕನ್ನಡಿಗರೇ ಇರಲೊಲ್ಲರೇಕೆ ಸ್ವಕೀಯರಿದ್ದುದರಿಂದಲೇ ಅವರೊಂದಿಗೆ ಹೊಸ ಸಮಾನತೆಯಿಂದ ಕೂಡುವದು ಇನ್ನೂ ಅಸಾಧ್ಯ! ಹಳೆಯ ಮೈಸೂರಿಗೆ ಸೇರುವದು ಮೈಸೂರಿಗರಿಗೆ ಸೇರದಿದ್ದರೆ ಸೋಜಿಗವಲ್ಲ. ಆದರೆ ಇತ್ತ ಈ ಹೊಸ ಜನಕ್ಕೂ ಒಂದು ಸಾಂಘಿಕ ಮನೋಭಂಗವಾಗಿತ್ತು. ಏಕೀಕರಣ ಚಳವಳಿಯ ಅಧ್ವರ್ಯುಗಳೆಲ್ಲ ಎಂದಿನಿಂದ ಕನಸು ಕಂಡ ನೆನೆದುಕೊಂಡ ಅಖಂಡ ಕರ್ನಾಟಕ, ಕನ್ನಡ ರಾಜ್ಯ ಹೀಗೆ ಮೈಸೂರಿನಲ್ಲಿ ಸೇರ್ಪಡೆ ಆಗುವ ಮಾದರಿಯದಿದ್ದಿಲ್ಲ. "ಬಯಲು ಆಲಯದೊಳಗೆ" ಸೇರಿದಂತಾಯಿತು. ಆದರೆ ಏನೇ ಇರಲಿ, ಅಖಂಡ ಏಕತಂತ್ರ ಕನ್ನಡ ಶಾಸನದ ಶಕ ಆರಂಭವಾಗುವದೆಂಬ ಒಂದೇ ಸಮಾಧಾನದಿಂದ ನಾವೆಲ್ಲ ಮೈಸೂರು ಸೇರಿದ್ದಾಯಿತು. ಹೀಗೆ ಒಂದೊಂದು ವಿಷಮ ಮನೋಗಂಡವಿಟ್ಟುಕೊಂಡ ಕನ್ನಡ ಜನ ಒಂದು ದಾವಣಿಯಲ್ಲಿ ಕಟ್ಟಿ ನಿಂತಾಗ ಅವರೆಲ್ಲರ ಭಾವೈಕ್ಯ ಹೇಗೆ ಸುಗಮವಾದೀತು?

ಮೊನ್ನೆ ತಾನೇ ನಮ್ಮ ರಾಜ್ಯಪಾಲರು ಉದ್ಘಾಟಿಸಿದ ಒಕ್ಕಲಿಗರ ಮಹಾಧಿವೇಶನದಲ್ಲಿ ಮೈಸೂರು ರಾಜ್ಯಕ್ಕೆ ಎರಡು ಹೆಸರಿಡಬೇಕು, ತುಂಗಭದ್ರೆಯ ದಕ್ಷಿಣಕ್ಕೆ ಮೈಸೂರು, ಉತ್ತರಕ್ಕೆ ಕರ್ನಾಟಕ ಎಂಬ ನಿರ್ಣಯ ಸ್ವೀಕೃತವಾಯಿತೆಂದು ಸುದ್ದಿ! ಇದು ತುಂಬ ಸೂಚಕವಾದ ಸಂಗತಿ. ನಾಮಕ್ಕೆ ಒಂದು ರೂಪವಿರಬೇಕು. ಈ ನಾಮರೂಪಗಳ ಆಚೆಗಿರುವ ಸತ್ಯವೇನು? ಕೊನೆಗೂ ಮೈಸೂರು ಹಳೆಯದಾಗಿಯೇ ಮಾನಸಿಕವಾಗಿ ಮಿಕ್ಕ ಕನ್ನಡಿಗರಿಂದ ಸಿಡಿದೇ ಉಳಿಯ ಬಯಸುವದೆಂಬುದೇ ಆ ಸತ್ಯ! ಇದು ಒಂದು ಅತಿಶಯೋಕ್ತಿಯಾಗಿ ಕಂಡೀತು. ಪಾಕೀಸ್ಥಾನವೂ ಹಾಗೆಯೇ ಕಂಡಿತ್ತು. ದ್ವಿಭಾಷಾ ಮುಂಬಯಿಗೆ ಗುಜರಾಥ-ಮಹಾರಾಷ್ಟ್ರ ವಿಭಜನೆ ಹಾಗೆಯೇ ಕಂಡಿತ್ತು! ಈ ನಿಟ್ಟಿನಲ್ಲಿ ಗಂಡಾಂತರವಿದೆ.

ಈ ಮನೋಗಂಡಗಳ ತೊಡಕಲ್ಲದೆ, ಕನ್ನಡಿಗರ ಭಾವೈಕ್ಯಕ್ಕೆ ಇನ್ನೊಂದು ತೊಡಕಿದೆ. ಸಾಮಾನ್ಯವಾಗಿ ಜೀವನದ ಪಡಿಯಚ್ಚಿನ ದೃಷ್ಟಿಯಿಂದ ಈ ಮೂಲಕ ರೂಪಗೊಂಡ ವಿಶಿಷ್ಟ ಸಾಂಸ್ಕೃತಿಕ ಸ್ವರೂಪದಲ್ಲಿ ಕೊಡಗು ಬಿಟ್ಟು, ಉಳಿದ ಕನ್ನಡ ನಾಡು ಮೂರು ಮುಖವಾಗುತ್ತದೆ. ದಕ್ಷಿಣೋತ್ತರ ಕನ್ನಡ, ಬಯಲು ಸೀಮೆ, ಸಂಸ್ಥಾನೀ ಕನ್ನಡನಾಡು, ಇವೆ ಆ ಮೂರು ಮುಖಗಳು. ಕನ್ನಡತನಕ್ಕೆ ಕನ್ನಡಿಗತ್ವಕ್ಕೆ ಈ ಮೂರು ಮುಖಗಳು ಸಮೃದ್ಧವಾಗಿ ಅರಳಬೇಕು. ಈ ಮೂರೂ ಜೀವನ ಪರಂಪರೆಗಳ ಪ್ರವಾಹಗಳು ಪುಷ್ಟವಾಗಿ ತುಂಬಿ ಹರಿದು ಕೂಡಿದಲ್ಲಿ ಕನ್ನಡಪ ತ್ರಿವೇಣಿ ಸಂಗಮ ಅಂದರೆ ಕನ್ನಡದ ಕೆಚ್ಚು ಒಂದು ಬಲಿಷ್ಠ ಹುರಿಯಾಗಬೇಕಾದರೆ ಈ ಮೂರೂ ಮಾದರಿಯ ಹೃದಯಗಳು ಮುಪ್ಪುರಿಗೊಂಡು ವಿಕಾಸವಾಗಬೇಕು. ಇಂದು ಹೊಸ ಮೈಸೂರಿನ ಪ್ರಗತಿ ಹೀಗೆ ಸರ್ವಾಂಗೀಣವಾಗಿ ಸಾಗುತ್ತಿಲ್ಲ. ಪ್ರಾದೇಶಿಕ ಪರಿಮಿತಿಯ ಸಂಸ್ಕಾರ ಸಂಕೋಚ ಕನ್ನಡದ ಭಾವೈಕ್ಯಕ್ಕೆ ದೊಡ್ಡ ತೊಡಕಾಗಿದೆ. ಸಾಂಸ್ಕೃತಿಕ ಸಾಮರಸ್ಯವನ್ನು ಸಾಧಿಸುವದು ಭಾವೈಕ್ಯದ ಒಳಕಟ್ಟು. ಅದಕ್ಕೆ ಈ ಪ್ರಾದೇಶಿಕ ಸಂಸ್ಕೃತಿ ಸಮನ್ವಯ ಮೊದಲು ಪಕ್ವವಾಗಬೇಕು. ದಕ್ಷಿಣೋತ್ತರ ಕನ್ನಡಗಳು ಸಾಂಸ್ಕೃತಿಕವಾಗಿ ಸಾಮಾಜಿಕವಾಗಿ ಜಾಗೃತ ಪ್ರಯತ್ನದಿಂದ ಒಂದಾಗಬೇಕು. ಅದೇ ರೀತಿ ಮಿಕ್ಕೆರಡು ಮಾದರಿಯ ಕನ್ನಡಿಗತ್ವವೂ ಅಭಿವೃದ್ಧಿ ಹೊಂದಬೇಕು. ಇದಕ್ಕೆ ಅಂಥ ವಿಶಾಲ ದೃಷ್ಟಿಯ, ಆದರ್ಶ

ದೃಷ್ಟಿಯ ಆಶಾವಾದಿಯಾದ ಆವೇಶಯುಕ್ತವಾದ ಮುಂದಾಳುತನ ಜೀವಾಳದ ಅವಶ್ಯಕತೆ. ಅದೇ ಇಂದು ಇಲ್ಲವಾಗಿದೆ!

ಈಗಿನ ಮುಂದಾಳುತನಕ್ಕೆ ಒಂದಲ್ಲ ಒಂದು ಗುಂಪಿನ ಜಾತೀಯ ಪಂಗಡದ ಕರೀ ಬಣ್ಣದ ಮೈಲಿಗೆ ಕಂಡುಬರುತ್ತದೆ. ಭಾರತದ ಎಲ್ಲ ರಾಜ್ಯಗಳಲ್ಲಿ ಮೈಸೂರಿನ ಮೈಯುಂಡ ವ್ಯಾಧಿ ಜಾತೀಯತೆಯೆಂದು ಪ್ರಸಿದ್ಧವಾಗಿದೆ. ಇಂದಿನ ನಮ್ಮ ಹಿರಿಕಿರಿಯ ಮುಂದಾಳುಗಳು ರಾಜಕೀಯದ ಬಿಸಿಲುಕುದುರೆಯೇರಿ ವೈಹಾಳಿಗೆ ಹೊರಟ ವಿಕಟವಿಕ್ರಮ ವೀರರು. ನಾವು ಕಲ್ಪಿಸುವ ಭಾವೈಕ್ಯವು ಇವರಿಂದ ಶಕ್ಯವಿಲ್ಲ. ಇವರ ನೆತ್ತರು ಹಳೆಯ ಹವಾಮಾನಕ್ಕೆ ದಟ್ಟವಾಗಿದೆ. ಜಾತೀಯ ವೈಷಮ್ಯ ಇವರಲ್ಲಿ ಅಸ್ಥಿಗತವಾಗಿದೆ. ಕನ್ನಡದ ಭಾವೈಕ್ಯಕ್ಕೆ ಸಾಂಸ್ಕೃತಿಕ ರಂಗದಲ್ಲಿ ಬಹುದೊಡ್ಡ ಪ್ರಮಾಣದಲ್ಲಿ ಯುವಜನರು ಮುಂದೆ ಬರಬೇಕು. ಒಂದು ವಲಯದ ಯುವಕರು ಇನ್ನೊಂದು ವಲಯಕ್ಕೆ ಹೋಗಿ ವಿದ್ಯಾರ್ಥಿಗಳಾಗಿ ವ್ಯವಸಾಯಿಗಳಾಗಿ, ವಿಲಾಸಿಗಳಾಗಿ, ಜನ ಜೀವನದ ಅಭ್ಯಾಸಿಗಳಾಗಿ ಅಲ್ಲಲ್ಲಿಯ ಬದುಕಿನಲ್ಲಿ ಕೆಲಕಾಲ ಸಮರಸವಾಗಿ ಬಾಳಲು ಕಲಿಯಬೇಕು.

ಇನ್ನು ಸತ್ತೆ, ಸಂಸ್ಕೃತಿಗಳಿಗೆಲ್ಲ ಆಧಾರಭೂತವಾದದ್ದು ಸಂಪತ್ತು. ಅದರ ವೈಷಮ್ಯ ತಾರತಮ್ಯಗಳು ಸಮತಲವಾದ ಹೊರತು ಸಾಮಾಜಿಕ ಜೀವನದ ಯಾವ ಮೇಲ್ಕಟ್ಟಡವೂ ತುಂಗವಾಗಿ ಭದ್ರವಾಗಿ ನಿಲ್ಲದು. ನಮ್ಮ ಆರ್ಥಿಕ ವೈಷಮ್ಯ ಹಾಗೂ ಪ್ರತಿಗಾಮಿಯಾದ ದೃಷ್ಟಿ ಕೊನೆಗೂ ಭಾವೈಕ್ಯದ ಬುಡಕ್ಕೇ ಸುರಂಗ ಹಾಕುವಂತಿದೆ. ನಮ್ಮ ರಾಜಕೀಯರಂಗದ ಜಾತೀಯ ಗುಂಪುಗಳ ಪೈಪೋಟಿ ಒಳತೊಟಗಳನ್ನು ಹೂಡುವ ಎಲ್ಲ ಧೂರ್ತರೂ ಒಂದು ವಿಷಯಕ್ಕೆ ಗುಪ್ತ ಅಥವಾ ಮೌನ ಒಪ್ಪಂದಕ್ಕೆ ಬಂದಂತಿದೆ. ಆದೆಂದರೆ, ಸಮಾಜವಾದದ ಸ್ಥಾಪನೆಯ ನಿಜವಾದ ಪ್ರಯತ್ನದ ಕುರಿತು ಆದಷ್ಟು ಉದಾಸೀನವಾಗಿರಬೇಕು. ಪ್ರಚಲಿತ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮಾಣದಲ್ಲಿ ಕ್ರಾಂತಿಯಾದ ಹೊರತು ಜನಮನದ ಹೊಸ ಎರಕ ಶಕ್ಯವೇ ಇಲ್ಲ. ಮನಸ್ಥಿತಿಯು ಪರಿಸ್ಥಿತಿಯ ಪ್ರತಿಬಿಂಬ ಮತ್ತು ಪರಿಪಾಕವೆಂಬುವದು ಒಂದು ಸಾಮಾಜಿಕ ಸತ್ಯ, ಆದರೆ ಈ ಸತ್ಯದೊಂದಿಗೆ ಯಾವ ದೊಡ್ಡ ಪ್ರಯೋಗವೂ ಇನ್ನೂ ಮೈಸೂರಲ್ಲಿ ನಡೆದಿಲ್ಲ. ಅಂಥ ಪ್ರಯೋಗ ನಡೆದ ರಶಿಯದಲ್ಲಿ, ಚೀನದಲ್ಲಿ, ಯುಗೋಸ್ಲಾವಿಯದಲ್ಲಿ, ಕ್ಯೂಬಾದಲ್ಲಿ ಜನತೆ ಭಾವೈಕ್ಯದ ಭರದಲ್ಲಿ ತೇಲಿ ಹೊಸ ಶ್ರೇಯಸ್ಸಿಗೆ ನಡೆಯಿತು. ನಾವು ಇನ್ನೂ ಕೆಸರಲ್ಲಿ ಹೂತು ಬಿಟ್ಟಿರುತ್ತೇವೆ. ಕ್ರಾಂತಿಗರ್ಭ ಅಸಂತೋಷದಲ್ಲಿ ಜನತೆ ಆತ್ಮ ಜಾಗೃತವಾಗಿ ಮುನ್ನುಗ್ಗಿದರೆ ಆಗಲೇ ಅಲ್ಲಿಯೇ ಆಳವಾದ ಅಖಂಡವಾದ ಭಾವೈಕ್ಯ!

●

('ಜನಶಕ್ತಿ' ೧೯೬೧)

# ಮಧ್ಯಮ ವರ್ಗಗಳು ಎಲ್ಲಿಗೆ?

ನಮ್ಮ ದೇಶದಲ್ಲಿ ಮಧ್ಯಮ ವರ್ಗ ರಾಜಕೀಯ, ಸಾಮಾಜಿಕ ಇಲ್ಲವೆ ಎಲ್ಲ ಸಾರ್ವಜನಿಕ ಧೋರಣೆಗಳನ್ನು ರೂಪಿಸುವದರಲ್ಲಿ ಮಿಕ್ಕ ಯಾವದೇ ವರ್ಗದವರಿಗಿಂತ ಹೆಚ್ಚು ಮಾರ್ಮಿಕ ಪಾತ್ರವನ್ನು ವಹಿಸುವದು. ರಾಜಕಾರಣವಿರಲಿ, ಉದ್ದಿಮೆಗಾರಿಕೆ ಇರಲಿ, ಕಾರ್ಮಿಕರದೇ ಸಂಘಟನೆ ಇರಲಿ, ಹೆಚ್ಚಾಗಿ ಮಧ್ಯಮ ವರ್ಗದಿಂದ ಎದ್ದು ಬಂದ ಮುಖಂಡರ ವ್ಯವಸ್ಥಾಪನೆ ಮಾರ್ಗದರ್ಶನ ಗಳಡಿಗೇ ಊರ್ಜಿತವಾಗುತ್ತಿರುವುದನ್ನು ನಾವು ಕಾಣುತ್ತೇವೆ. ನಮ್ಮ ರೈತರ ಚಳವಳಿ, ಟ್ರೇಡ್ ಯೂನಿಯನ್‌ಗಳೂ ಹೆಚ್ಚಾಗಿ ಮಧ್ಯಮ ವರ್ಗೀಯ ಮುಂದಾಳುಗಳ ಮುಷ್ಠಿಯಲ್ಲಿಯೇ ನಡೆಯುತ್ತ ಬಂದಿವೆ.

ರಾಷ್ಟ್ರೀಯ ಚಳವಳಿಯಂತೂ ಮೂಲತಃ ಮಧ್ಯಮ ವರ್ಗದ್ದೇ ಅವಿರ್ಭಾವ. ರಾಷ್ಟ್ರವೆಂಬ ಒಂದು ಸುಸ್ಪಷ್ಟ ಕಲ್ಪನೆಯೇ ಹುಟ್ಟಿದ್ದು ಮಧ್ಯಮ ವರ್ಗದ ಉದಯದೊಂದಿಗೆ, ಇದಕ್ಕೆ ಪಾಶ್ಚಾತ್ಯ ಇತಿಹಾಸವೇ ಸಾಕ್ಷಿ. ರಾಷ್ಟ್ರದಂತೆಯೇ ಸಂಸದೀಯ ಪ್ರಜಾಪ್ರಭುತ್ವವೂ ಮಧ್ಯಮವರ್ಗದ್ದೇ ರಾಜಕೀಯ ತತ್ವ. ನಮ್ಮಲ್ಲಿಯೂ ರಾಷ್ಟ್ರೀಯ ಪುಢಾರಿಗಳೂ ಸಮಾಜ ಸುಧಾರಣೆಯ ಧುರೀಣರೂ ಪ್ರಾಗತಿಕರೂ ಪುರೋಗಾಮಿಗಳೂ ಎಲ್ಲರೂ ವಿಶೇಷವಾಗಿ ವಕೀಲರು, ಡಾಕ್ಟರರು, ಪ್ರಾಧ್ಯಾಪಕರು, ಶಿಕ್ಷಕರು, ವರ್ತಕರು, ಜಮೀನುದಾರರು- ಒಟ್ಟಾರೆ ಮಧ್ಯಮ ತರಗತಿಯ ವ್ಯವಸಾಯಗಾರರು. ಇದಕ್ಕೆ ಉದಾಹರಣೆ ಗಾಂಧೀಜಿಯಿಂದ ಗ್ರಾಮಪಂಚಾಯಿತು ಸದಸ್ಯರ ವರೆಗೂ ಸಾವಿರ ಗಟ್ಟಲೆಯಾಗಿ ಸಿಗಬಹುದು.

## ವರ್ಗಬೇಧದ ಹುಟ್ಟು

ಆದ್ದರಿಂದ ದೇಶದ, ಸಮಾಜದ ಮುನ್ನಡೆಯ ಉನ್ನತಿಯ ಗುಟ್ಟು ನಿಟ್ಟು ಗೊತ್ತುಗುರಿಗಳನ್ನು ಅರಿತುಕೊಳ್ಳಬೇಕಿದ್ದರೆ, ನಾವು ಈ ಮಧ್ಯಮ ವರ್ಗದ ಸ್ವರೂಪ ಸ್ವಾಥ್ಯಗಳ ಕುರಿತು ಚೆನ್ನಾಗಿ ಕಾಲಕಾಲಕ್ಕೆ ಸಮಾಲೋಚನೆ ಮಾಡಬೇಕು. ಜಗತ್ತಿನ ಇತಿಹಾಸ ವರ್ಗಕಲಹದ ಕಥೆ-ಎಂದು ಕಾರ್ಲ್ ಮಾರ್ಕ್ಸ್ ಎಂದೋ ಅಂದಿದ್ದ. ಆಗ ಆತ ಕಂಡುಕೊಂಡಿದ್ದ ಎರಡೇ ವರ್ಗಗಳು- ಧನಿಕ ವರ್ಗ ಮತ್ತು ಅದು ಬಳಸಿಕೊಂಡು ಸುಳಿಯುವ ಕಾರ್ಮಿಕ ವರ್ಗ. ಆದರೆ ಅಂದಿನಿಂದ ಇಂದಿಗೆ ಮಾನವ ಸಮಾಜದ ವರ್ಗ ವಿಗ್ರಹದ ಸ್ವರೂಪ ಬಹಳ ವಿಶಾಲವಾಗಿ ವೈವಿಧ್ಯದಿಂದ ಕೂಡಿ ಬೆಳೆದಿರುತ್ತದೆ. ಹಿಂದೆ ಸರಂಜಾಮೀ ಸಮಾಜರಚನೆ ಊರ್ಜಿತವಾಗಿರುವಲ್ಲಿ- ಎರಡೇ ಮುಖ್ಯವಾಗಿ ಕಂಡುಬರುವದು. ಒಂದು ಜಮೀನದಾರ-ಜಾಗೀರದಾರ ವರ್ಗ, ಭೂಮಾಲಿಕರದು, ಇನ್ನೊಂದು ಅಮೇರಿಕೆಯಲ್ಲಿ ದುಡಿಯುವ ರೈತವರ್ಗ. ಆದರೆ ಆಗಲೂ ಪೂಜಾರಿ, ಪಾದರಿ, ವ್ಯಾಪಾರಿ, ಕಸಬು ಕೈಗಾರಿಕೆಗಾರ ಇವರದೆಲ್ಲ ಕಿರುಕುಳು ವರ್ಗಗಳಿದ್ದವು. ಆದರೆ ಅವೆಲ್ಲ ಇವೆರಡು ಪ್ರಧಾನ ವರ್ಗಗಳನ್ನೇ ಹೊಂದಿ ಜೀವಿಸುತ್ತಿದ್ದವು. ಒಂದು ಪ್ರಭಾವಿಯಾದ ಸಾಮಾಜಿಕ ವರ್ಚಸ್ಸು ಇದ್ದವಲ್ಲ. ಆದಾಗ್ಯೂ ಆಗಲೂ ಸಮಾಜ ಐತಿಹಾಸಿಕವಾಗಿ ಬಹುವರ್ಗೀಯವೇ ಆಗಿತ್ತು.

## ಸಮಾನ ಒಲವು ನಿಲುವು

ಅಂದಿನಿಂದ ಇಂದಿಗೆ ಮಧ್ಯಮವರ್ಗ ಬಲಿಷ್ಠವಾಗಿ ಘನಿಷ್ಠ ಹಿತ ಸಂಬಂಧಗಳುಳ್ಳದ್ದಾಗಿ ಬೆಳೆದು ಹಬ್ಬಿ ನಿಂತಿದೆ. ಇದು ಮುಂದುವರಿದ ಔದ್ಯೋಗಿಕ ರಾಷ್ಟ್ರಗಳಲ್ಲಿ ಹೇಗೋ ಹಿಂದುಳಿದ ಅನಭಿವೃದ್ಧ ಅವ್ಯವಸ್ಥೆಯಿಂದ ತಲೆಯೆತ್ತುತ್ತಿರುವ ರಾಷ್ಟ್ರಗಳಲ್ಲಿಯೂ ಕಂಡುಬರುವ ವಸ್ತುಸ್ಥಿತಿ. ನಮ್ಮ ತ್ವರಿತ ಔದ್ಯೋಗಿಕರಣ, ಅದರೊಂದಿಗೆ ರೂಢವಾಗುತ್ತಿದ್ದ ಸಂಮಿಶ್ರ ಅರ್ಥವ್ಯವಸ್ಥೆ. ಅದಕ್ಕೆ ಹಿನ್ನೆಲೆಯಾದ ಆಧುನಿಕ ಸಾಮ್ರಾಜ್ಯಶಾಹಿಯ ೨೦೦ ವರ್ಷಗಳ ಇತಿಹಾಸ ಬಿಟ್ಟು ಹೋದ ಹಿತಸಂಬಂಧಗಳ ಹಿಳಿಲು ಇವೆಲ್ಲವೂ ಕಾರ್ಲ್ ಮಾರ್ಕ್ಸ್ ಕಲ್ಪಿಸಿದ ವರ್ಗಕಲಹದ ಶುದ್ಧ ದ್ವೈತಮತದ ತೆಕ್ಕೆಯಲ್ಲಿ ಕೂಡುವಂತಿಲ್ಲ. ಉದಾಹರಣೆಗಾಗಿ ಸಾಮಾನ್ಯ ನಾಗರಿಕರು, ಚಿಕ್ಕ ಉಳಿತಾಯದ ವ್ಯವಸಾಯಿಕರೂ ಹಣಕಾಸಿನ ವ್ಯವಹಾರದವರೂ ತಮ್ಮ ಗಳಿಕೆಯನ್ನು ಹಿರಿಕಿರಿ ಉದ್ದಿಮೆಗಳ ಪಾಲುಗಾರಿಕೆಯಲ್ಲಿ ಹೆಚ್ಚಾಗಿ ತೊಡಗಿಸಿದ್ದರಿಂದ ಸಾರ್ವತ್ರಿಕವಾಗಿ ಎದ್ದು ನಿಂತ joint stock ಕಂಪನಿಗಳೂ ಅವುಗಳ ಹಿಂದಿನ ಅತಿ ವಿಶಾಲವಾದ ಮಧ್ಯಮ ವರಮಾನದ ವರ್ಗಗಳ ಹಂದರವೂ ಕಾರ್ಲ್ ಮಾರ್ಕ್ಸ್‌ನ ಕಲ್ಪನಾ ಚಿತ್ರದಲ್ಲಿ ಇದ್ದಿಲ್ಲ. ಇವೆಲ್ಲ ವರ್ಗಗಳು ಆತ ಚಿತ್ರಿಸಿದ ವರ್ಗಕಲಹದ ಉಗ್ರತೆಯನ್ನು ಕ್ಷೀಣಗೊಳಿಸುತ್ತವೆ. ವರ್ಗ ದ್ವೇಷದ ತೀವ್ರತೆಯನ್ನು ತಣಿಸುತ್ತದೆ. ಕಡಿಮೆ ಸಂಬಳಿಗನೂ ಚಿಕ್ಕ ವರಮಾನದ ಕಸಬುಗಾರನೂ ಸುಸ್ಥಿತಿಯಲ್ಲಿದ್ದ ಕೆಲಸಗಾರನೂ ಬಂಡವಾಳಗಾರನ ಸುಖವಸ್ತು ಬದುಕನ್ನೇ ಬಾಳಲು ಬಯಸುತ್ತಾನೆ. ಅದಕ್ಕೆ ಸರಿಯಾಗಿ ಬದುಕನ್ನೂ ಬಳಿಸುತ್ತಾನೆ. ಅವನ ಮಾನಸಿಕ ಒಲವು ನಿಲುವುಗಳು ಸಿರಿವಂತರಿಂದ ವಿಶೇಷ ಬೇರೆ ಆಗಿರುವದಿಲ್ಲ.

## ಮಧ್ಯಮವರ್ಗದ ನೀತಿ

ಇಂಥ ವರ್ಗಗಳೇ ಇಂದು ಯಾವದೇ ದೇಶದಲ್ಲಿ-ಭಾರತದಲ್ಲಿಯೂ-ರಾಜಕೀಯ ಪರಿವರ್ತನೆಯ ಗತಿಗುರಿಗಳನ್ನು ಅನಿಶ್ಚಿತಗೊಳಿಸುತ್ತದೆ. ಹಾಗೆ ಗೊಳಿಸುತ್ತ ಬಂದಿವೆ. ಪ್ರತಿಯೊಂದು ನಿಕರ ಪ್ರಸಂಗವೂ ಕ್ರಾಂತಿಯಷ್ಟೇ ಪ್ರತಿಕ್ರಾಂತಿಯ ಆಯಕಟ್ಟಿನ ಪ್ರಸಂಗವಾಗಿಬಿಡುತ್ತದೆ. ಆಧುನಿಕ ರಾಜ್ಯಸತ್ತೆಯಲ್ಲಿ ಬಂಡವಾಳಗಾರರಷ್ಟೇ ತೀವ್ರವಾಗಿ ಆದರೆ ಅವರಿಗಿಂತ ಸಂಖ್ಯಾಬಲದಲ್ಲಿ ವಿಶಾಲವಾಗಿ ಮಧ್ಯಮವರ್ಗಗಳ ಪಟ್ಟಭದ್ರ ಸ್ವಾರ್ಥವು ಒತ್ತೆ ಇಟ್ಟಿರುತ್ತದೆ.-ರಾಷ್ಟ್ರೀಯ ಸಾಲ ಒಂದೇ ಸಾಕು ಇದಕ್ಕೆ ಸಾಕ್ಷಿ. ಕಲ್ಯಾಣ-ರಾಜ್ಯದ ಧೋರಣೆಗಳ ಅನುಸಾರವಾಗಿ, ಒಟ್ಟಿನ ಅಭಿವೃದ್ಧಿಯ ಫಲವಾಗಿ ಜನಜೀವನದ ಮಟ್ಟ ಎತ್ತರಿಸುತ್ತ ಹೋದಂತೆ ಕೆಲಸಗಾರ-ಕೂಲಿಕಾರ-ರೈತವರ್ಗದ ಜನವೂ ತಾವು ಶೋಷಿತರೆಂದುಕೊಳ್ಳುವದಕ್ಕೆ ನಾಚುತ್ತಾರೆ. ಮಧ್ಯಮವರ್ಗದಲ್ಲಿ ತಮ್ಮ ಸ್ಥಿತಿಗತಿ-ವೃತ್ತಿಗಳಿಗನುಸಾರವಾಗಿ ಸೇರಿಕೊಳ್ಳುತ್ತಾರೆ.

ಆದ್ದರಿಂದ ಮಧ್ಯಮವರ್ಗದ ಉಗಮ ವಿಕಾಸಗಳ ಚರಿತ್ರೆಯೇ ಆಧುನಿಕ ಪ್ರಜಾಪ್ರಭುತ್ವದ ಹಾಗೂ ರಾಷ್ಟ್ರೀಯ ವಿಕಾಸದ ಇತಿಹಾಸವಾಗಿದೆ ಎಂದರೆ ತಪ್ಪಾಗಲಾರದು. ಅಧಿಕಾರದ, ಉದ್ದಿಮೆಯ ವಿಕೇಂದ್ರಿಕರಣ, ಬಂಡವಾಳದ ರಾಷ್ಟ್ರೀಕರಣ, ವಿಷಮತೆಯ ನಿವಾರಣೆ ಇವೆಲ್ಲ ಸಾಧನೆಗಳ ಗುರಿ ಏನು? ನೆಲ ಸಮತಾವಾದವೇ? ಒಡೆತನ-ಬಡತನಗಳನ್ನು ಸರಿಸಮವಾಗಿ ಹಂಚಿಹಾಕುವದೆಂದರೆ ಒಟ್ಟು ಮಧ್ಯಮ ತರಗತಿಗೇ ಸಮಾಜವನ್ನು ತರುವಂತೆ ತಾನೇ? ಅಂದಾಗ

ಮಧ್ಯಮವರ್ಗದ ವಿಸ್ತರಣೆ, ಪೋಷಣೆ, ಹಾಗೂ ಸಂವರ್ಧನೆಯೇ ಇಂದಿನ ಸಮಾಜವಾದಿ ಕಲ್ಯಾಣವಾದಿ ಸಾಧನೆಯ ಗುರಿಯೆಂದಾಯಿತು. "ಮಾಗೃಧ, ಕಸ್ಯಸ್ವಿತ್ ಧನಂ?"-ಎಂದು ಘೋಷಿಸಿದ ಉಪನಿಷತ್ತಿನ ಅರ್ಥದ ಮರ್ಮವೂ ಇದೇ ಆರ್ಥಿಕ ಸಿದ್ಧಾಂತದ ಧ್ವನಿಯನ್ನೇ ಮೊಳಗಿಸುತ್ತದೆ. 'ಧನವು ಯಾರದು? ಹೆದ್ದಾಸೆ ಬೇಡ' ಇದು ಮಧ್ಯಮವರ್ಗವಾದದ ಸೊಲ್ಲು. ಇದು ಸಾತ್ವಿಕವಾಗಿ ತಾತ್ವಿಕವಾಗಿ ಆಚರಣೆಗೆ ತಂದಲ್ಲಿ ಪ್ರಜಾಸತ್ತಾತ್ಮಕ ಸಮಾಜವಾದದ ಕಲ್ಯಾಣ ರಾಜ್ಯ. ಛಲದಿಂದ ಬಲದಿಂದ ದಂಡಿನ ಪುಂಡಾಟಿಕೆಯಿಂದ ಸ್ಥಾಪಿತವಾದಲ್ಲಿ ಸರ್ವಾಧಿಕಾರ.

## ಬೆಳೆಯುತ್ತಿರುವ ಮಧ್ಯಮವರ್ಗ

ನಮ್ಮ ದೇಶದಲ್ಲಿ ಕಳೆದ ೧೫ ವರ್ಷಗಳಲ್ಲಿ ಮಧ್ಯಮ ವರ್ಗವು ಬಲವಾಗಿ ಬೆಳೆದಿದೆ- ಇದಕ್ಕೆ ಕಾರಣ ಮೂರು- ೧) ತ್ವರಿತವಾದ ಉದ್ದಿಮೆಗಾರಿಕೆ, ೨) ಸಾಮಾಜಿಕ ಸೇವಾಸೌಕರ್ಯಗಳ ವಿಸ್ತರಣೆ, ೩) ಯೋಜನಾ ಕಾರ್ಯಕ್ಕೆ ಹೂಡಿದ ಆಡಳಿತಗಾರಿಕೆಯಿಂದಾಗಿ ಬೆಳೆದು ಹಬ್ಬಿದ ಅಧಿಕಾರಿಗಳ ವಿಸ್ತಾರ ಪ್ರಪಂಚ. ಆದರೂ ಈ ವರ್ಗದ ಉದಯ ಹೀಗೆ ಸ್ವರಾಜ್ಯ ಬಂದ ಮೇಲೆಯೇ ಒಮ್ಮಿಂದೊಮ್ಮೆ ಆದದ್ದಲ್ಲ. ಅದರ ಇತಿಹಾಸ ಸಂಕ್ಷೇಪವಾಗಿ ಇಂತಿದೆ.

೧೮೩೩ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ವ್ಯಾಪಾರೀ ಮಕ್ತೇಗಾರಿಕೆಯನ್ನು ರದ್ದುಮಾಡಲಾಯಿತು. ಅಂದಿನಿಂದ ಹಿಂದಿಗಿಂತ ಹೆಚ್ಚು ನೆಮ್ಮದಿಯ ಬ್ರಿಟಿಷ್‌ಸತ್ತೆ ಭಾರತದಲ್ಲಿ ನೆಲೆಯೂರಿತು. ಕಾಯಿದೆಯ ಆಳಿಕೆ, ಖಾಸಗಿಯ ಸೊತ್ತಿಗೆ ಭದ್ರತೆ, ಬೇಸಾಯದ ಹಕ್ಕು ಬಾಧ್ಯಸ್ಥಿಕೆಗಳಿಗೆ ನಿರ್ಧಾರದ ಸ್ವರೂಪ, ಒಂದು ಬಗೆಯ ರಾಷ್ಟ್ರೀಯ ಶಿಕ್ಷಣದ ಧೋರಣೆ, ಹಿಂದಿಗಿಂತ ಹೆಚ್ಚಾದ ಶಾಂತಿ-ಸುವ್ಯವಸ್ಥೆಗಳ ದೀರ್ಘಾವಧಿ, ವ್ಯಾಪಾರ ಸ್ವಾತಂತ್ರ್ಯ ಒಟ್ಟಾರೆ ಉದಾರ ಪ್ರಗತಿಪರ ಸುಧಾರಕ ಸಾಮಾಜಿಕ ನೀತಿ ಇವೆಲ್ಲ ಈ ಹೊಸ ಬ್ರಿಟಿಷ್ ಆಳಿಕೆಯ ಕಾಲಮಾನದ ಲಕ್ಷಣಗಳಾಗಿದ್ದವು. ಇವುಗಳ ಜಲ-ವಾಯುಗುಣದಲ್ಲಿ ಮಧ್ಯಮ ವರ್ಗಗಳು ಬೆಳೆದವು. ಆದರೂ ಈ ಬೆಳವಣಿಗೆ ಮೋಟಾಗಿ ಮುರುಟಾಗಿಯೇ ಉಳಿಯಿತು. ಬ್ರಿಟಿಷರ, ಒಟ್ಟು ಧೋರಣೆ ಬ್ರಿಟಿಷ್ ಬಂಡವಾಳಗಾರಿಕೆಗೆ ಭಾರತದ ಪೇಟೆಗಳನ್ನು ಗುತ್ತಿಗೆ ಹಿಡಿಯುವದೇ ಆಗಿತ್ತು. ಆದ್ದರಿಂದ ೧ನೆಯ ಮಹಾಯುದ್ಧದ ತನಕವೂ ದೇಶದಲ್ಲಿ ಅವರು ಯಾವದೇ ದೊಡ್ಡ ಉದ್ದಿಮೆಗಾರಿಕೆ, ದೊಡ್ಡ ಮೊತ್ತದ ಸಮಾಜ ಸುಧಾರಣೆಯನ್ನು ಮಾಡುವ ಎದೆಗಾರಿಕೆ ಬ್ರಿಟಿಷರು ತೋರಿಸಲಿಲ್ಲ. ವಿಕ್ಟೋರಿಯಾ ಮಹಾರಾಣಿಯ ಜಾಹೀರನಾಮೆಯಂತೂ ನಮ್ಮಲ್ಲಿಯ ಜಾತಿ ಪಂಥಗಳ ಜಟಿಲ ಜಾಲಕ್ಕೆ ಒಂದು ಭದ್ರತೆಯ ತಾಮ್ರ ಪಟವೇ ಆಗಬಿಟ್ಟಿತು. ಇದರಿಂದಾಗಿ ಜನತೆಯ ಸಾಮಾಜಿಕ ಜಡತೆ ಸಡಿಲಿಸಲಿಲ್ಲ. ಮಧ್ಯಮ ವರ್ಗಕ್ಕೂ ಜಾತೀಯ ಕಟ್ಟುಗಳು ಬಿಗಿದು ನಿಂತವು. ಶಿಕ್ಷಣವು ಕೇವಲ ಕಾರಕೂನಿಕೆಯ ಕೈಗಾಜವಾಯಿತು. ಸಾಮಾಜಿಕ ಚಲನವಲನ ಎತ್ತರಕ್ಕೂ ಬಿತ್ತರಕ್ಕೂ ತಡೆದು ನಿಂತಿತು. ಆದರೂ ಹಿಂದಿಗಿಂತ ಹೆಚ್ಚು ಸ್ಪಷ್ಟ ರೂಪದಲ್ಲಿ ಮಧ್ಯಮವರ್ಗಗಳು ಒಡಮೂಡಿ ಬಂದವು.

## ಮಹಾಯುದ್ಧ ಪುಸಾರ

ಆನಂತರ ನಮ್ಮ ಮಧ್ಯಮವರ್ಗಗಳಿಗೆ ಹೊಸ ಆರಂಭ ದೊರೆತದ್ದು ಮೊದಲನೆಯ

ಮಹಾಯುದ್ಧದಿಂದ. ಯುದ್ಧಕಾಲದಲ್ಲಿ ಬ್ರಿಟಿಷ್ ಸರಕಾರವು ಇಚ್ಛೆಯಿಲ್ಲದಿದ್ದರೂ ಉಪಾಯವಿಲ್ಲದೆ ದೇಶದಲ್ಲಿ ಕೆಲವು ದೊಡ್ಡ ಉದ್ದಿಮೆಗಳನ್ನು ಸ್ಥಾಪಿಸಲು ಬಿಡಬೇಕಾಗಿ ಬಂತು. ಇದರಿಂದಾಗಿ ಮಧ್ಯಮವರ್ಗಗಳ ವಿಸ್ತರಣೆಗೆ ಅನುಕೂಲವಾಯಿತು. ಅದುವರೆಗೆ ಹೆಚ್ಚಾಗಿ ಆಡಳಿತಗಾರಿಕೆ ಹಾಗೂ ವಕೀಲಿ-ವೈದ್ಯಕೀಯ ಮುಂತಾದ ಶಾಕ್ಷಿತ ವ್ಯವಸಾಯಗಳ ಮಟ್ಟಿಗೇ ಸೀಮಿತವಾದ ಆತ್ಮಜಾಗೃತ ಮಧ್ಯಮವರ್ಗಕ್ಕೆ ಇನ್ನು ಹಲವು ಮುಖಗಳು ತೆರೆದವು. ಜತೆಗೆ ಹೊಸ ಉದ್ದಿಮೆಗಾರಿಕೆಯಿಂದ ಕೆಲವು ಧನಪತಿಗಳೂ ತಲೆ ಎತ್ತಿದರು. ಹೊಸ ಸ್ವದೇಶಿ ಬಂಡವಾಳಗಾರ ವರ್ಗದ ಉದಯವೂ ಆಯಿತು. ಇವೆರಡರ ನಡುವೆ ನಮ್ಮ ರಾಷ್ಟ್ರೀಯ ಆಂದೋಲನ ಜನ್ಮವೆತ್ತಿತು. ಸಾರಾಭಾಯೀ ಬಜಾಜ, ಬಿರ್ಲಾ-ಪ್ರಭೃತಿಗಳು ಸ್ವದೇಶೀ ಬಂಡವಾಳಗಾರಿಕೆಯಂತೆಯೇ ಭಾರತೀಯ ರಾಷ್ಟ್ರವಾದ ಪ್ರಮುಖ ಆಧಾರ ಸ್ತಂಭಗಳಾದರೂ ಈ ಆಂದೋಲನದ ಯಜಮಾನ್ಯ ಅಂಥವರಾದರೂ, ಅಧ್ವರ್ಯುತನ. ಸುಶಿಕ್ಷಿತ ಮಧ್ಯಮ ವರ್ಗದ್ದೇ ಆಯಿತು. ಹೀಗೆ ನಮ್ಮ ರಾಷ್ಟ್ರೀಯತ್ವದ ಇತಿಹಾಸ ಮಧ್ಯಮ ವರ್ಗದ ವಿಕಾಸದೊಂದಿಗೆ ಹಾಸುಹೊಕ್ಕಾಗಿ ಬೆಳೆದಿದೆ.

### ಸಂಪಾದನೆ ಮಾಡಿಕೊಂಡರು

೧೯೦೫ ಕ್ಕಿಂತ ಮೊದಲು ಮಧ್ಯಮವರ್ಗದ ಘಟಕಗಳು ಈಸ್ಟ್ ಇಂಡಿಯಾ ಕಂಪನಿಯ ಏಜಂಟರೂ ನೌಕರವರ್ಗವೂ ಅದರ ಅವಲಂಬಿತ, ಸಂಬಂಧಿತ ವರ್ಗಗಳೂ ಆಗಿದ್ದರು. ಇವರೇ ಭಾರಿ ಸಂಪಾದನೆ ಮಾಡಿಕೊಂಡರು. ದೊಡ್ಡ ಇಸ್ಟೇಟು ಕೊಂಡುಕೊಂಡರು. ಶಿಕ್ಷಣ ಪಡೆದವರಲ್ಲಿ ಮೊದಲಿಗರಾದರು. ೧೯೦೫ರ ನಂತರ ಶಿಕ್ಷಣ ಕೆಳಗಿನ ಸ್ತರಗಳಲ್ಲಿ ಪಸರಿಸಿತು. ವ್ಯವಸಾಯಕರು ನಾಯಕತ್ವ ವಹಿಸಿಕೊಂಡರು. ನಮ್ಮ ರಾಷ್ಟ್ರೀಯ ಧುರೀಣರಲ್ಲಿ ವಕೀಲರೇ ಹೆಚ್ಚೆಂಬುದನ್ನು ನಾವು ಗಮನಿಸಬೇಕು. ಏಕೆಂದರೆ ದೇಶದ ಸರ್ವಸ್ವ ಶೋಷಣೆ ಮಾಡುವ ಬ್ರಿಟಿಶ್ ಸತ್ತೆಯು ಕೆಲವೊಂದು ಮರ್ಯಾದೆಯ ಮಟ್ಟಿಗೇ ನಮ್ಮಲ್ಲಿ ಈ ವರ್ಗಗಳಿಗೆ ವಿಕಾಸ ಸ್ವಾತಂತ್ರ್ಯ ನೀಡಿತ್ತು. ಹೆಚ್ಚಿನ ಸ್ವಾತಂತ್ರ್ಯಕ್ಕೆ ಸ್ವರಾಜ್ಯವೇ ಬೇಕಿತ್ತು. ಆದ್ದರಿಂದ ನಮ್ಮಲ್ಲಿಯ ಹೊಸ ಬಂಡವಾಳಗಾರರೂ ಮಧ್ಯಮ ವರ್ಗದವರೂ ಒಟ್ಟಾಗಿ ಕಾಂಗ್ರೆಸ್ ಸಂಸ್ಥೆ-ಚಳವಳಿ ಹಬ್ಬಿಸಿದರು.

ಇಂದು ಸ್ವರಾಜ್ಯದಲ್ಲಿ ಇವೆರಡೂ ವರ್ಗಗಳು ಭರದಿಂದ ಬೆಳೆದಿವೆ. ಆದರೆ ಅವರ ಒಕ್ಕಟ್ಟು ಒಡೆದಿದೆ. ಬಂಡವಾಳಗಾರಿಕೆ ಪ್ರಚಂಡವಾಗಿ ಬಲಿತಿದೆ. ಮಧ್ಯಮ ವರ್ಗದ ಮಟ್ಟಕ್ಕೆ ಉತ್ತರೋತ್ತರ ಕೆಳವರ್ಗದ ಶ್ರಮಜೀವಿ ವರ್ಗದ ಜನರೂ ಅಭಿವೃದ್ಧಿ ಯೋಜನಾ ಕಾರ್ಯದ ಫಲವಾಗಿ ಸೇರುತ್ತಿದ್ದಾರೆ. ಆದರೆ ಇಂದು ಬ್ರಿಟಿಶರ ಬದಲು ದೇಶೀಯ ಬಂಡುವಾಳಗಾರಿಕೆಯೇ ಈ ಹೊಸ ಮಧ್ಯಮ ವರ್ಗದ ಆಶೋತ್ತರಗಳಿಗೆ ಮರ್ಯಾದೆ ಹಾಕುತ್ತಿದೆ. ಈಗ ಮೂರನೆಯ ಸಲ ಮಹಾ ಚುನಾವಣೆಗಳನ್ನು ಗೆದ್ದು ಗದ್ದುಗೆ ಏರಿದ ಕಾಂಗ್ರೆಸ್ಸು ಬ್ರಿಟಿಶ್ ಸತ್ತೆಯ ಮಾದರಿಯಲ್ಲಿ ದೇಶದಲ್ಲಿ ತೊಡಗಿದ ಸ್ವದೇಶಿ-ವಿದೇಶೀ ಸುಲಿಗೆಗಾರ ಬಂಡುವಾಳಗಾರಿಕೆಯನ್ನೇ ಎತ್ತಿ ಹಿಡಿದಿದೆ.

●

('ಜನಸೇವಕ' ೧೯೬೨)

# ಗಾಂಧೀ ಸ್ಮರಣೆ ಪ್ರಾಮಾಣಿಕವೆ?

ಗಾಂಧೀ ಜಯಂತಿಯ ದಿನವಾದರೂ ಸತ್ಯವನ್ನೇ ಆಡೋಣ - ಎಂದಿದ್ದಾರೆ ತಮ್ಮದೊಂದು ಪ್ರಸಿದ್ಧ ಕವನದ ಆರಂಭದಲ್ಲಿ ಕವಿವರ್ಯ ಬೇಂದ್ರೆಯವರು. ಅವರು ಹೇಳಿದ್ದು ಬಹಳ ರಸಿಕರು ಎಂದೋ ಮರೆತಿರಬಹುದು. (ಇಂದಿನ ಕುಲರಸಿಕರಿಗೆ ಕಾವ್ಯದ ಅಭಿರುಚಿಗಿಂತ ಅಭಿಮಾನ ಹೆಚ್ಚು. ಕವಿಯನ್ನು ಹೊಗಳಿ, ಕವನಸಂಗ್ರಹವನ್ನು ಬದಿಗಿಟ್ಟು ಬಿಡುವದೇ ನಮ್ಮ ರಸಿಕತನದ ಸೋಶಲಿಸ್ಟ್ ಪ್ಯಾಟರ್ನ್ ಆಗಿಬಿಟ್ಟಿದೆ!)

## ಗಾಂಧೀಜಿಯ ಅಮರತ್ವ

ಅಂಥ ಪರ್ವಕಾಲ ವರ್ಷಕ್ಕೆ ಒಮ್ಮೆ ಶ್ರಾದ್ಧ ದಿನದಂತೆ ಈ ಗಾಂಧೀ ಜಯಂತಿ ಬರುತ್ತದೆ! ನಿಜವಾದ ವರ್ಷಶ್ರಾದ್ಧದ ಪರ್ವ ಜನೆವರಿಯ ೩೦ಕ್ಕೆ. ಕಾಲಮಿತಿಯ ಕ್ರಮದಲ್ಲಿ ಹೀಗೆ ಒದಗಿ ಬಂದದ್ದು ನಿಜವಾಗಿಯೂ ವಿಧಿಯ ವಿಕಟ ವಿಡಂಬನೆ. ಏಕೆಂದರೆ ಗಾಂಧೀಜಿಯ ಶ್ರಾದ್ಧದಿನ ವರ್ಷದ ಆರಂಭಕ್ಕೆ ಆಚರಿಸಿ, ನಾವು ಅವರ ಜಯಂತಿಯನ್ನು ಅನಂತರ ಆಚರಿಸುವಂತೆ ಆಗಿದೆ. ಗಾಂಧೀಜಿಯ ಸಿದ್ಧಿ-ಸಿದ್ಧಾಂತ, ಧ್ಯೇಯ-ಧೋರಣೆಗಳನ್ನು ನಾವು ಮನ್ನಿಸಿ ಭಾವಿಸಿ ನಡೆದುಕೊಂಡು ಬಂದುದರ ದ್ಯೋತಕವಾಗಿದೆ ಈ ವ್ಯತಿಕ್ರಮ! ಇದನ್ನು ಇಂದಾದರೂ ಒಮ್ಮೆ ಒಪ್ಪಿಕೊಳ್ಳಲು ನಮ್ಮ ವೃಥಾಭಿಮಾನಕ್ಕೆ ಭಂಗಬರುತ್ತಿದ್ದರೆ ನಾವು ಹೀಗೂ ಹೇಳಿ ಸಮಾಧಾನಪಟ್ಟುಕೊಳ್ಳಬಹುದು: ಗಾಂಧೀಜೀ ನಿಧನಹೊಂದಿದರು! ಆದರೆ ಗಾಂಧೀಜಿ ಅಮರರಾಗಿ ಹುಟ್ಟಿ ಬಂದಿದ್ದಾರೆ. ಅದರ ದ್ಯೋತಕವೇ ನಾವು ಜಯಂತಿಯನ್ನು ಶ್ರಾದ್ಧ ದಿನದ ನಂತರ ಆಚರಿಸುವದು!

## 'ಗಾಂಧೀ' ಟ್ರೇಡ್ ಮಾರ್ಕು!

ಏನೇ ಇರಲಿ, ಕೊಂಚ ಕಾಲ ಅಭಿಮಾನ ಬದಿಗಿಟ್ಟು ಪ್ರಾಂಜಲವಾಗಿ ಒಪ್ಪಿಕೊಳ್ಳಬೇಕಾದ ನಾಲ್ಕು ಮಾತುಗಳನ್ನು ಇದೀಗ ಇಲ್ಲಿ ತೋಡಿಕೊಳ್ಳುತ್ತಿದ್ದೇನೆ. ಆಧುನಿಕ ಇತಿಹಾಸದ ಮೊದಲನೆಯ ಮತ್ತು ಕೊನೆಯ ಸತ್ಯಾಗ್ರಹಿಯ ಜಯಂತಿಗೆ ನಾವು ಕಂಡಷ್ಟು ಕಂಡಂತೆ ಸತ್ಯವನ್ನು ಒಮ್ಮೆ ಉಚ್ಚರಿಸುವದು ನಮ್ಮ ಕರ್ತವ್ಯ! ಡಂಭ ಜಂಭಾಚಾರ ಎಂದಿಗೂ ಇದ್ದೇ ಇದೆ, ವರ್ಷಾವಧಿಯ ಭೋಕ್ತವ್ಯ.

ಮೊದಲನೆಯ ಮಾತೆಂದರೆ ಗಾಂಧೀಜಿಯನ್ನು ನಾವು, ನಮ್ಮ ಸಾರ್ವಭೌಮ ಪ್ರತಿನಿಧಿಯಾದ ಕಾಂಗ್ರೆಸ್ಸು ಕೇವಲ ನಮ್ಮ ರಾಜಕೀಯ ಕಂಪನಿಯ Trade Mark ಆಗಿ ಬಳಸುತ್ತ ಬಂದಿದ್ದೇವೆ. ಕ್ರೈಸ್ತರು ರವಿವಾರ ಚರ್ಚಿಗೆ ಹೋಗಿ ಉಳಿದ ವಾರ ದೇವರನ್ನು ಮರೆಯುವಂತೆ ನಾವು ಚುನಾವಣೆಯ ಸಮಯ, ಜಯಂತಿಯ ಸಂದರ್ಭಕ್ಕೆ, ರಾಷ್ಟ್ರೀಯ ವಿಷಯಗಳ ಮತ್ತು ಪ್ರಸಂಗಗಳ ನಿಮಿತ್ತ ಭಾಷಣ ಬಿಗಿಯುವಾಗ ಈ ರಾಷ್ಟ್ರಪಿತಾಮಹರ ನಾಮೋಚ್ಚಾರಣೆ ಮಾಡುತ್ತೇವೆ. "ನೀನ್ಯಾಕೋ? ನಿನ್ನ ಹಂಗ್ಯಾಕೋ? ನಿನ್ನ ನಾಮದ ಬಲ ಒಂದಿದ್ದರೆ ಸಾಕೋ!" -ಎಂಬ ದಾಸೋಪನಿಷತ್ತು ಗಾಂಧೀಜಿಯ ಕುರಿತು ನಮ್ಮ ಉಪಾಸನೆಯ ಮಂತ್ರವಾಗಿದೆ.

## ನಂಬಿ ಕೆಟ್ಟೆವು!

ಗಾಂಧೀಜೀ ಯುಗಪುರುಷರಾಗಿ ಊರ್ಜಿತವಾಗಿರುವಾಗಲೂ ಗಾಂಧೀವಾದವನ್ನು ಕಾಂಗ್ರೆಸ್ಸು ತನ್ನ ತತ್ವವೆಂದು ಸೈದ್ಧಾಂತಿಕ ನಿಷ್ಠೆಯೆಂದು ಎಂದೂ ಒಪ್ಪಿದ್ದಿಲ್ಲ. ಅದೊಂದು ರಾಜಕೀಯ ನೀತಿಯೆಂದು ಕಾಂಗ್ರೆಸ್ಸು ಸ್ವೀಕರಿಸಿತು. ಅನುಕೂಲತೆಯಂತೆ ಅನುಸರಿಸಿತು. ಆದರೆ ಸರಳ ಮುಗ್ಧ ಜನತೆ ಮಾತ್ರ ಕಾಂಗ್ರೆಸ್ಸು ಪೂರ್ತಿ ಗಾಂಧೀ ಅನುಯಾಯಿಯೆಂದು ನಂಬಿಕೆಟ್ಟಿತು. ಇದರಿಂದ ಕಾಂಗ್ರೆಸ್ಸೂ ಕೆಟ್ಟಿತು.

ಹೇಗೆಂದರೆ ಗಾಂಧೀಜಿಯ ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯನಿಗ್ರಹ, ಅಪರಿಗ್ರಹ, ಆಸ್ವಾದಗಳೇ ಮುಂತಾದ ನಿಷ್ಠೆಗಳ ಯಾವ ಒಂದು ಒರೆಗಲ್ಲಿಗೂ ಕಾಂಗ್ರೆಸ್ಸಿನ ಶ್ರೇಷ್ಠಿಗಳಾಗಲಿ ಇತರೇ ಜನರಾಗಲಿ ಬಹು ಕಾಲ ಸರಿಯಾಗಿ ನಿಂತಿದ್ದಿಲ್ಲ. ಗಾಂಧೀಜಿಯ ಅಂತೇವಾಸಿಗಳು ಗಾಂಧೀ ಸೇವಾ ಸಂಘದ ಅಜೀವ ಸದಸ್ಯರೆಂದು ಮೆರೆದವರೂ ವಿಶುದ್ಧ ಗಾಂಧೀವಾದಿಗಳಾಗಿ ಸತ್ವಪರೀಕ್ಷೆಯಲ್ಲಿ ಎಲ್ಲರೂ ಉತ್ತೀರ್ಣರಾದವರಲ್ಲ. ಅಲ್ಲಿಯೂ ಡಾಂಭಿಕರು ಹೆಚ್ಚು. ಪ್ರಾಮಾಣಿಕರಲ್ಲಿಯೂ ಎರಡು ಪರಂಪರೆ:- ಮಹಾದೇವ ದೇಸಾಯಿ, ಕಾಕಾ ಕಾಲೇಲಕರ ಪ್ರಭೃತಿಗಳ ಮಹಾಯನ, ವಿನೋಬಾ ಮೀರಾಬೆನ್‌ರಂಥವರ ಹೀನಯಾನ!

## ಖಾದಿ ಮೇಲಂಗಿಯ ನಕ್ಷತ್ರಕರು

ಗಾಂಧೀಜಿಯ ಅತ್ಯಂತಿಕ ಆದರ್ಶವಾದದ ಶೀಘ್ರ ಮತ್ತು ತೀವ್ರ ಪ್ರತಿಕ್ರಿಯೆಯೆಂದರೆ ಅವರ ಸುತ್ತಲೂ ಶುದ್ಧ (?) ಡಂಭಾಚಾರಿಗಳ ವಲಯವು ಉಂಟಾಯಿತು! ಶುಭ್ರ ಖಾದಿಯ ಅಡಿಗೆ ಎಲ್ಲ ಮಾನವೀಯ ದೌರ್ಬಲ್ಯಗಳು ಮುಚ್ಚಿ ಹೋದವು. ಗಾಂಧೀಜಿಯವರ ತತ್ವ ತಂತ್ರಗಳ ಪ್ರಾಮಾಣಿಕ ಅನುಷ್ಠಾನ ಅವರ ಕಾಲದಲ್ಲಿಯೇ ಮನಸೋಕ್ತ ಮಾಡಿ ಬದುಕಿದವರು ಕಡಿಮೆ. ಆದರೆ ಅದನ್ನು ಒಂದು ತಾತ್ಕಾಲಿಕ ಆಡಂಬರವಾಗಿ ಉಪಚಾರವೆಂದು ವ್ರತ-ವಿಧಿಯಂತೆ ಕಣ್ಣು ಮುಚ್ಚಿ ಅಥವಾ ಗಾಂಧೀಜಿಯ ಕಣ್ಣಿಗೆ ಮಣ್ಣೆರಚಿ ನಡೆದ ಲುಬ್ಧ ಪ್ರತಿಷ್ಠಿತ ನಕ್ಷತ್ರಕರೆ ಹೆಚ್ಚಾಗಿದ್ದರು. ಆದ್ದರಿಂದಲೇ ಅವರ ಸಾಬರಮತೀ ಆಶ್ರಮ ಮುಚ್ಚಬೇಕಾಯಿತು. (ನೀಲಾ ನಾಗಿಣೆಯು ಅನೇಕ ಗಾಂಧೀ ಭಕ್ತರ ನಿಷ್ಠೆಯನ್ನು ವಿಷ್ಠೆಯಾಗಿ ಮಾಡಿಬಿಟ್ಟಳು!) ಸೇವಾ ಗ್ರಾಮವು ಅಂಥ ದುರಂತಕ್ಕೆ ಈಡಾಗದಿದ್ದರೂ ಅದೊಂದು ನಿಷ್ಕಾಮ ನಿಷ್ಕರ್ಮಿಗಳ ಗೋಶಾಲೆಯಾಗಿ ಉಳಿಯಿತು!

## ಮುರಿಕೆಗೆ ಸಿಗುವ ಚೆಕ್ಕು

ಕಾಂಗ್ರೆಸ್ಸಿಗರೂ ಇದೇ ರೀತಿ ಗಾಂಧೀ ಕಾರ್ಯಕ್ರಮವನ್ನು ಒಂದು ನಿತ್ಯ ಕರ್ಮದ ಕರ್ಮಠ ವಿಧಿಯಂತೆ ಪಾಲಿಸಿ ಜನತೆಯಲ್ಲಿ ತಾವು ಗಾಂಧೀ ಮಠಕ್ಕೆ ಒಳಪಟ್ಟವರೆಂದು ನಟಿಸಿ ಗಾಂಧೀಜಿಯನ್ನು ರಾಜಕೀಯಕ್ಕೆ ಒಂದು ಬಂಡವಾಳದಂತೆ ಉಪಯೋಗಿಸಿಕೊಂಡರು.

ದಿವಂಗತ ವಿಠ್ಠಲಭಾಯಿ ಪಟೇಲರು ಒಮ್ಮೆ ಬ್ರಿಟಿಶರಿಗೆ ಎಚ್ಚರಿಕೆ ಕೊಟ್ಟಿದ್ದರು. "ಗಾಂಧೀಜೀ ನಿಮ್ಮ ಹಾಗೂ ಕ್ರಾಂತಿಯ ನಡುವೆ ನಿಂತಿದ್ದಾರೆ. ಅವರ ಪ್ರಯೋಜನ ಪಡೆದುಕೊಳ್ಳಿರಿ!" ಅಂದರೆ ಕಾಂಗ್ರೆಸ್ಸಿನ ತಂತ್ರವೇ ಜನಸಮುದಾಯದ ಬಂಡಾಯದ ಬೆದರಿಕೆಯನ್ನು ಬ್ರಿಟಿಶರಿಗೆ ಹಾಕಿ ದೇಶದ

ಬಂಡವಾಳದಾರ ಹಾಗೂ ಮೇಲ್ವರ್ಗದ ಮುಂದಾಳುಗಳ ಕೈಗೆ ಸತ್ತೆಯನ್ನು ಕೊಡುವಂತೆ ಒತ್ತಾಯ ತರುವದಿತ್ತು.

ಇದಕ್ಕಾಗಿ ಪ್ರತಿಯೊಮ್ಮೆ '೨೦', '೩೦', '೩೨', '೪೨', ರ ಆಂದೋಲನಗಳಲ್ಲಿ ಮಾತ್ರ ಗಾಂಧೀಜಿಯನ್ನು ಕಾಂಗ್ರೆಸ್ ಬೇಕಾದಾಗ ಬಳಸಿಕೊಂಡು ಬೇಡಾದಾಗ ಬದಿಗಿಟ್ಟಿತು. ಅಂಥ ಬಳಿಕೆಗೆ ಗಾಂಧೀಜೀ ಆತ್ಮವಂಚನೆ ಇಲ್ಲದೆಯೇ ಒಗ್ಗಿ ನಡೆದರು. ಏಕೆಂದರೆ ಅವರ ಸತ್ಯ-ಅಹಿಂಸೆಗಳ ತತ್ವದ್ವಯದಲ್ಲಿಯೇ ಅದ್ವೈತವಿದ್ದಿಲ್ಲ. ಅದೊಂದು ದ್ವಂದ್ವವಾಗಿತ್ತು. ಸತ್ಯಕ್ಕೆ ಅಹಿಂಸೆಯ ತಡೆ-ತೊಡಕಿತ್ತು.

## ಸಾಧನೆ ಶುದ್ಧತೆ ಗೌಣ

ಗಾಂಧೀಜಿ ಆರಂಭಿಸಿದ ಯಾವ ಆಂದೋಲನವೂ ಆರಂಭದಲ್ಲಿ ಎಷ್ಟೇ ಸತ್ವಶುದ್ಧ ವಾಗಿದ್ದರೂ ಅದು ಯಶಸ್ವಿಯಾಗುತ್ತಿದ್ದಂತೆ ಬಿಹು ಜನ ಸಮುದಾಯವು ಒಳನುಗ್ಗಿ ಪ್ರಚಂಡ ಒತ್ತಡವನ್ನುಂಟುಮಾಡತೊಡಗುತ್ತಿತ್ತು. ಆಗ ಸತ್ಯವು ಕಟುವಾಗಿ ಘೋರವಾಗಿ ವಿರಾಟ ರೂಪ ತಾಳಿ ಅಹಿಂಸೆಯ ಕಟ್ಟು ಒಡೆಯುವಂತೆ ಆಗುತ್ತಿತ್ತು. ಮತ್ತು ಹಾಗೆ ಆಗದಂತೆ ಗಾಂಧೀಜಿ ತನ್ನ ಶಕ್ತಿ ಸರ್ವಸ್ವವನ್ನು ಪಣಕ್ಕೆ ಒಡ್ಡಿ ಚಳವಳಿಯನ್ನೇ ನಿಲ್ಲಿಸಿಬಿಡುತ್ತಿದ್ದರು! ಹೀಗೆ ಸಾಧನಗಳ ಶುಚಿತ್ವದ ಅತ್ಯಂತಿಕ ಆಗ್ರಹವು ಸಾಧ್ಯವನ್ನು ಮುಂದೆ ದೂಡುತ್ತಿತ್ತು! ಹೆಚ್ಚು ಕಡಿಮೆ ಪ್ರತಿಯೊಂದು ಚಳವಳಿಯೂ ಈ ಇತಿಹಾಸವನ್ನೇ ಪುನರಾವರ್ತಿಸಿದೆ. ಈ ದೃಷ್ಟಿಯಿಂದ ನಮ್ಮ ರಾಷ್ಟ್ರೀಯ ಚಳವಳಿಯ ಮೇಲಿನ ಗಾಂಧೀಜಿಯ ಪ್ರಭಾವದ ಪೂರ್ತಿ ಮೂಲ್ಯಮಾಪನ ಇನ್ನು ಆಗಬೇಕು. ಈ ಶತಸಾಂವತ್ಸರಿಕದ ಅವಧಿಯಲ್ಲಿ ಆ ಕಾರ್ಯ ನಡೆದರೆ ಅದೊಂದು ಗಾಂಧೀಜಿಗೆ ನಾವು ಸಲ್ಲಿಸುವ ಹಿರಿಯ ಸೇವೆಯಾಯಿತು. ಏಕೆಂದರೆ ಅವರೇ ಒಮ್ಮೆ ಅಂದಿದ್ದರು. "My critics know me more than my adherents" (ನನ್ನ ಅನುಯಾಯಿಗಳಿಗಿಂತ ಹೆಚ್ಚು ನನ್ನ ಟೀಕಾಕಾರರು ನನ್ನನ್ನು ಬಲ್ಲರು!)

## ಕಾಯಿದೆ ಭಂಗದ ವಿರೂಪ

ಕಾಂಗ್ರೆಸ್ಸು ನೇರವಾಗಿ ಬಂಡೆಬ್ಬಿಸಿ, ರಾಷ್ಟ್ರೀಯ ಸೈನಿಕ ದಲಗಳನ್ನೋ ಗತ್ತುಗಾರಿಕೆಯ "ಗರಿಲ್ಲಾ" ಪಡೆಗಳನ್ನೋ ಕಟ್ಟಿ ತರಬೇತಿ ಕೊಟ್ಟು ಆಂತರಿಕ ಶಿಸ್ತಿನಿಂದ ಬ್ರಿಟಿಶರೊಡನೆ ಹೋರಾಡಿದರೆ, ಸ್ವರಾಜ್ಯ ಬಂದಾಗ, ಹೋರಾಟ ನಿಂತ ನಂತರವೂ ಕಾಂಗ್ರೆಸ್ಸಿನಲ್ಲಿ, ಜನತೆಯಲ್ಲಿ ಒಂದು ಬಗೆಯ ನಿಯಮ ಶಿಸ್ತು ಉಳಿಯಬಹುದಾಗಿತ್ತು. ಆದರೆ ಗಾಂಧೀಜಿಯ ಅಸಹಕಾರದ ಸವಿನಯ ಕಾಯಿದೆ ಭಂಗದ ಚಳವಳಿಯ ಬಂಡಾಯದ ಸ್ವರೂಪವೇ ಮೂಲತಃ ನಕಾರಾತ್ಮಕ (negative) ಇತ್ತು. ಇದರಿಂದ ಜನತೆಯಲ್ಲಿ ಕಾಯಿದೆ, ಆಡಳಿತಗಳ ಬಗೆಗೆ ಭಯ-ಶ್ರದ್ಧೆ-ಆದರಗಳ ಮೇರೆ ಸಡಿಲಾಯಿತು. ಆದರ್ಶ ನಿಯಮ ಪಾಲಕನೇ ಆದರ್ಶ ಸತ್ಯಾಗ್ರಹಿಯಾಗಬಲ್ಲನೆಂದು ಗಾಂಧೀಜಿ ಸಾರಿದ್ದರು. ಹಾಗೆಯೇ ತಾಸೂ ವರ್ತಿಸಿದರು. ಆದರೆ ಲಕ್ಷಾಂತರ ಸತ್ಯಾಗ್ರಹಿಗಳೂ ಜೇಲ ಯಾತ್ರಿಗಳೂ ಚಳವಳಿಗಾರರೂ ಇವೆರಡೂ ಆದರ್ಶಗಳಿಗೆ ಹೊರತಾಗಿದ್ದರು.

## ಗಾಂಧೀಜಿಯ ತಪ್ಪೊಪ್ಪಿಗೆ

ಇಷ್ಟೇ ಅಲ್ಲ, ಈ ಸಮಗ್ರ ರಾಷ್ಟ್ರೀಯ ಚಳವಳಿಯ ಭವಿತವ್ಯ ಯಾರಿಗೂ ಗೊತ್ತಿರುತ್ತಿದ್ದಿಲ್ಲ. ಬೇರೆ ಲಷ್ಕರೀ ದಾಳಿಗಳಂತೆ ಕೂಚು-ಕಾಳಗಗಳಂತೆ ಈ ಯುದ್ಧದ ನೀತಿ, ನೀಲ ನಕ್ಷೆ, ಪಟ್ಟು ಪೇಚು ಯಾವವೂ ಪೂರ್ವ ನಿಶ್ಚಿತವಿರುತ್ತಿದ್ದಿಲ್ಲ. ಎಲ್ಲಕ್ಕೂ ಗಾಂಧೀಜಿಯ ಆದೇಶಕ್ಕಾಗಿ ಕಾಯಬೇಕಿತ್ತು. ಗಾಂಧೀಜಿ ತಮ್ಮ "ಅಂತರ್ಧ್ವನಿ"ಯ ದೇವರ ಆದೇಶಕ್ಕಾಗಿ ಕಾಯುತ್ತಿದ್ದರು. ಮತ್ತೆ ಮತ್ತೆ ಹಿಮಾಲಯದಂಥ ಪ್ರಮಾದಗಳನ್ನು ಮಾಡುತ್ತಿದ್ದರು. ಆಕಸ್ಮಿಕವಾಗಿ ಧೋರಣೆ ಬದಲಿಸುತ್ತಿದ್ದರು. ಕತ್ತಲೆಯಲ್ಲಿ ಕಾಲ್ತಡವುತ್ತ ಬೆಳಕಿಗಾಗಿ ಪ್ರಾರ್ಥನೆ ಮಾಡುತ್ತಿದ್ದರು! ಇಂಥ ಸೇನಾಪತಿ ಇಂಥ ಸೈನ್ಯ ಸಂಚಾಲನೆ ಇಂಥ ಸ್ವಾತಂತ್ರ್ಯಯುದ್ಧ ಪ್ರಪಂಚದ ಇತಿಹಾಸದಲ್ಲಿಯೇ ಅಭೂತಪೂರ್ವವಾಯಿತು!

## ಗಾಂಧೀಜಿಯ ಅಸಂತೃಪ್ತಿ

ಕೊನೆಗೂ ಸ್ವಾತಂತ್ರ್ಯ ಬಂದಾಗ ಅದರಿಂದ ಗಾಂಧೀಜಿಗೆ ಸಂತೋಷವಾಗಲಿಲ್ಲ. ಅಹಿಂಸೆ ಭಾರತದ ಅಖಂಡ ಐಕ್ಯಗಳ ಬೆಲೆ ತೆತ್ತೇ ಸ್ವಾತಂತ್ರ್ಯ ಕೊಂಡುಕೊಳ್ಳಬೇಕಾಗಿ ಬಂದಿತು. ಭಾರತದ ವಿಭಜನೆ "ನನ್ನ ಶವದ ಮೇಲೆ ಮಾಡಬೇಕಾದೀತು"-ಎಂದಿದ್ದರು ಬಾಪೂಜಿ! ವಿಭಜನೆಯ ಆದ ಮೇಲೆ ಅವರ ದೇಹವು ಬಿದ್ದಿತು-ಅದು ಅವರನ್ನು ಕೊಲೆಮಾಡಿದ್ದು ಬ್ರಿಟಿಶ್‌ನಲ್ಲ, ಮುಸ್ಲಿಂನಲ್ಲ. ಹಿಂದುತ್ವದ ಅಂಥ ಅಭಿಮಾನಿಯಾದ ಒಬ್ಬ ಹಿಂದು! ಗಾಂಧೀಜಿಯ ಕೊಲೆ ಆಗುವ ಮುಂಚೆಯೇ ಗಾಂಧೀ ತತ್ವದ ಕೊಲೆ ಆಗಿತ್ತು. ಸರದಾರ ಪಟೇಲರೂ ತನ್ನ ಮಾತು ಕೇಳುವದಿಲ್ಲವೆಂದು ಗಾಂಧೀಜಿ ವಧದ ಕೆಲವು ದಿನ ಮುಂಚೆ ಗೈದ ಉಪವಾಸದ ಸಮಯ ಉದ್ಗಾರ ತೆಗೆದಿದ್ದರು!

## ಭ್ರಷ್ಟಾಚಾರದ ಉಗಮ

ಗಾಂಧೀವಾದವನ್ನು ಒಂದು ಉಪಚಾರವೆಂದು ಉಪಾಯವೆಂದು ಒಪ್ಪಿದಾಗಲೇ ಕಾಂಗ್ರೆಸ್ಸಿನಲ್ಲಿ ಭ್ರಷ್ಟಾಚಾರವು ಆರಂಭವಾಯಿತು. ನೂಲಿ, ಖಾದೀ ಧಾರಣೆಯ ಶರ್ತು ಕಾಂಗ್ರೆಸ್ ಸದಸ್ಯತ್ವಕ್ಕೆ ಹಾಕಿದಾಗಲೇ ಈ ಭ್ರಷ್ಟಾಚಾರದ ಅಕ್ಷರಭ್ಯಾಸ ನಡೆಯಿತು....

ಚಳವಳಿ ನಿಲ್ಲಿಸಿದಾಗೆಲ್ಲ ಪಾರ್ಲಿಮೆಂಟರೀ ಮನೋವೃತ್ತಿ ಸ್ಥಾಪಿತವಾಯಿತು. ಆದರೆ ಗಾಂಧೀಜಿ ಬೋಧಿಸಿದ ಸಾಧಿಸಿದ್ದೆಂದು ಭಾವಿಸಿದ ಜಾತ್ಯಾತೀತ ಪ್ರಜಾಪ್ರಭುತ್ವ ಯಾವ ಹಂತದಲ್ಲಿಯೂ ಸ್ಥಾಪಿತವಾಗದೇ ಹೋಯಿತು. ನಮ್ಮ ಸಂವಿಧಾನದಲ್ಲಿ ಗಾಂಧೀತತ್ವಗಳು ಅಡಕವಾಗಿದ್ದರೂ ಅವು ಪಠ್ಯಪುಸ್ತಕದಲ್ಲಿಯ ವ್ಯಾಕರಣದಂತೆ! ನಿತ್ಯಜೀವನ ಅದರಿಂದ ಬಲು ದೂರ ಉಳಿಯಿತು!

## ಹೊಸ ವರ್ಗಗಳು ಹುಟ್ಟಿದವು

'ಹರಿಜನ'ರೆಂಬುವವರು ಹೊಸದೊಂದು ಅಸ್ಪೃಶ್ಯವರ್ಗವಾಯಿತು. ರಾಜಕೀಯ ಸಂತೃಪ್ತರಂತೆ ಸರಕಾರೀ ಸವಲತ್ತು ಗಿಟ್ಟಿಸಿಕೊಳ್ಳಲಿಕ್ಕೆ ಲಕ್ಷಾಂತರ ಅಸ್ಪೃಶ್ಯರು ಬೌದ್ಧರಾಗಿ ದೇಶದಲ್ಲಿ

ಹೊಸದೊಂದು ರಾಜಕೀಯ ತಂದೊಡ್ಡಿದರು. ಯಾವ ರಾಜಕೀಯ ಪಕ್ಷವೇ ಆಗಲಿ, ಶುದ್ಧ ಕೋಮುವಾದವಾಗಿಯೇ ಚುನಾವಣೆ ಗೆಲ್ಲುವದೇ 'ಪಾರ್ಲಿಮೆಂಟರಿ ಮನೋವೃತ್ತಿ' ಆಗಿ ಉಳಿಯಿತು. ಜಾತೀಯ ಮತದಾರ ಗುಂಪುಗಳ ಬೇಟೆಗೆ ಜಾತೀಯ ಹುರಿಯಾಳು ನಿಲ್ಲಿಸಿ ಅವಕ್ಕೆ ರಾಜಕೀಯ ಪ್ರಜಾಪ್ರಭುತ್ವವೆಂಬ ಸುಳ್ಳು ಹೆಸರು ಕೊಟ್ಟು ಮೆರೆಯುವ ನಿರ್ಲಜ್ಜ ನಡಾವಳಿ ರೂಢವಾಯಿತು!

ಈ ಪ್ರಜಾಪ್ರಭುತ್ವದಲ್ಲಿ ಬಹುಮತ ಅಲ್ಪಮತಗಳು ಶಾಶ್ವತ. ಏಕೆಂದರೆ ಅವು ಕೋಮುವಾರು ರಾಜಕೀಯ ಮತ ಪರಿವರ್ತನೆಯಿಂದ ಇಂದಿನ ಅಲ್ಪಮತ ನಾಳೆ ಬಹುಮತವಾಗುವಂತಿಲ್ಲ!

ಖಾದಿ, ಹಿಂದೀ, ಹರಿಜನೋದ್ಧಾರ, ಪಾನನಿರೋಧ, ಗ್ರಾಮೋದ್ಯೋಗ, ಸ್ವಾವಲಂಬೀ ಗ್ರಾಮವ್ಯವಸ್ಥೆ, ವೃತ್ತಿಮೂಲಕ ಶಿಕ್ಷಣ - ಇಂಥ ಗಾಂಧೀವಾದದ ಒಂದೊಂದು ವ್ರತವೂ ಇಂದು ಕೇವಲ ಪ್ರತೀಕಾತ್ಮವಾಗಿ ಉಳಿದಿದೆ ಅಥವಾ ವಿಡಂಬನೆಯಾಗಿ ನಡೆದಿದೆ!

●

('ಜನಸೇವಕ' ೧೯೬೬)

# ರಸರಾಜ ಶೃಂಗಾರವೇ? ಅಲ್ಲ, ಹಾಸ್ಯವೇ!

ಜಗತ್ತಿನ ಸಾಹಿತ್ಯ ಪ್ರಪಂಚದ ರೀತಿ ಲಕ್ಷಣಶಾಸ್ತ್ರಕ್ಕೆ ಭಾರತದ ಅದ್ವಿತೀಯ ಕಾಣಿಕೆಯೇ ನಮ್ಮ ರಸ ಸಿದ್ಧಾಂತ. ನವರಸಗಳ ನಿರ್ಮಿತಿಯು ಕಾವ್ಯದ ಪರಮ ಪ್ರಯೋಜನವೆಂದು ನಮ್ಮ ಲಕ್ಷಣಕಾರರು ಜಗತ್ತಿಗೆ ಸಾರಿದರು. ಸಾಹಿತ್ತಿಕ ಮೂಲ್ಯಗಳ ಬಗೆಗೆ ಪಾಶ್ಚಾತ್ಯ ಪಂಡಿತರ ಹಾಗೂ ವಿಮರ್ಶಕರ ವಿಚಾರ- ಸಂಪ್ರದಾಯಗಳನ್ನು ಅರಿತು ಅರಗಿಸಿಕೊಳ್ಳುವನಕವೂ ನಾವು ಈ ರಸಾಲಂಕಾರ ಸಿದ್ಧಾಂತವನ್ನೆ ಸಿರಸಾವಹಿಸಿ ಅನುಸರಿಸಿ ಬಂದೆವು. ಇಂದಿಗೂ ನಮ್ಮ ಕಾವ್ಯ-ರೂಪಕಾದಿ ಕೃತಿಗಳ ಮೌಲ್ಯಮಾಪನಕ್ಕೆ ತೊಡಗಿದಾಗ ನಾವು ಈ ರಸ ದೃಷ್ಟಿಯಿಂದಲೆ ವಿಚಾರಮಾಡುವದು ವಾಡಿಕೆಯಾಗಿ ಬಿಟ್ಟಿದೆ.

ರಸ ಸಿದ್ಧಾಂತವು ಸಾಹಿತ್ಯಶಾಸ್ತ್ರದಲ್ಲಿ ಇಷ್ಟು ಸಾರ್ವಭೌಮತೆಯನ್ನು ಪಡೆಯಲು ಕಾರಣವೇನು? ರಸ ವ್ಯವಸ್ಥೆಯು ನಿಜವಾಗಿಯೂ ಅಷ್ಟು ಪರ್ಯಾಪ್ತವೆ? ರಸಗಳು ಮೂಲತಃ ಎಷ್ಟು? ಒಂಭತ್ತು ರಸಗಳಲ್ಲಿ ಮಾನವ ಜೀವನದ ಸಮಸ್ತ ಭಾವ ವಿನ್ಯಾಸದ ಕಾವ್ಯ ಬಿಂಬಗಳು ಸಮಾವೇಶವಾಗಲಿಲ್ಲವೆ? ಮಾನವ ಜೀವನಕ್ಕೆ ನಿರಪೇಕ್ಷವಾದ ನಿಸರ್ಗ ವರ್ಣನೆಯನ್ನೊಳಗೊಂಡ ಕಾವ್ಯಕ್ಕೆ ಶುದ್ಧ ಮಾನವೀಯ ಸ್ಥಾಯೀ ಭಾವಗಳ ಮೇಲೆ ನಿಂತ ರಸ ಸಿದ್ಧಾಂತವನ್ನು ಅನ್ವಯಿಸುವದು ಹೇಗೆ? ಹಾಗಾದರೆ ಕಾವ್ಯಸೌಂದರ್ಯದ ಸಿದ್ಧಾಂತವು ರಸ ಸಿದ್ಧಾಂತಕ್ಕೆ ಸಮವ್ಯಾಪ್ತವಲ್ಲವೆ? ಸೌಂದರ್ಯಶಾಸ್ತ್ರ ರಸ ಸಿದ್ಧಾಂತಕ್ಕಿಂತ ವಿಶಾಲವಾದದ್ದೆ? ಹೀಗೆ ಅನೇಕ ಪ್ರಮೇಯಗಳು ಈ ರಸ ವಿಚಾರವಾಗಿ ಆಧುನಿಕ ಸಂದರ್ಭದಲ್ಲಿ ತಲೆಎತ್ತುವವು. ಇದು ಸ್ವಾಭಾವಿಕ. ಯಾವ ಹಿರಿಯ ಸತ್ಯವೇ ಇರಲಿ, ತತ್ವವೇ ಇರಲಿ, ಅದು ಮೂಲ ಸ್ವರೂಪದಲ್ಲಿಯೇ- ಮೊದಲಿಗೆ ಮಂಡಿಸಲ್ಪಟ್ಟಂತೆಯೇ - ತ್ರಿಕಾಲಾಬಾಧಿತವಾಗಿ ಸನಾತನ ಸಿದ್ಧಾಂತವಾಗಿ ಇರುವುದಿಲ್ಲ. ಅದನ್ನೂ ಕಾಲಕಾಲಕ್ಕೆ ಜೀವನದ, ಅನುಭವದ, ಹೊಸ ಸಂದರ್ಭಕ್ಕೆ ಸರಿಯಾಗಿ ಸಂಸ್ಕರಣ- ಪರಿಷ್ಕರಣಗಳಿಗೆ ಒಳಪಡಿಸಬೇಕಾಗುತ್ತದೆ. ಭಗವಂತನಿಗೂ ಧರ್ಮ ಸಂಸ್ಥಾಪನ ಒಂದು ಅವತಾರದಿಂದ ಸಾಧ್ಯವಾಗಲಿಲ್ಲ. "ಸಂಭವಾಮಿ ಯುಗೇ ಯುಗೇ" ಎನ್ನಬೇಕಾಯಿತು. (ಅವತಾರಗಳು ೧೦ ಎಂಬ ಮರ್ಯಾದೆ ಆತ ತಾನೇ ಹಾಕಿಕೊಂಡದ್ದಲ್ಲ. ಅದು ಭಕ್ತಾದಿಗಳ ಲೆಕ್ಕಾಚಾರ.) ಒಂದೊಂದು ಅವತಾರವೂ ಒಂದೊಂದು ವಿಧ.

ತತ್ವ ಸಿದ್ಧಾಂತಗಳ ರೀತಿಯೂ ಹಾಗೆಯೇ. ಮೂಲ ಗಾಮಿಯಾದ ಮಹಾ ಸಿದ್ಧಾಂತಗಳೆಲ್ಲ ಇದೇ ರೀತಿ ಯುಗಯುಗಕ್ಕೂ ಪುನರ್ವಿಮರ್ಶೆಯನ್ನು ಹೊಂದುತ್ತ ಬಂದಿದೆ. ಮಹಾಕವಿಗಳ ಅಮರ ಕೃತಿಗಳು ಕೂಡ ಮತ್ತೆ ಮತ್ತೆ ಬೇರೆ ಬೇರೆ ಮಟ್ಟದಿಂದ ನಿಟ್ಟಿನಿಂದ ಪರ್ಯಾಲೋಚನೆ ಪರಿಷ್ಕಾರಗಳಿಗೆ ಒಳಪಡುತ್ತ ಬಂದಿವೆ. ಹಾಗೆ ಶನಿಯೂ ಹಾಗೆ ಸಿಗುವದರಿಂದಲೇ ಆ ಕೃತಿಗಳ, ತತ್ವಗಳ ಸಿದ್ಧಾಂತಗಳ ಅಮರತ್ವ ಮಹತ್ವ ಸಿದ್ಧವಾಗುತ್ತದೆ. ಇನ್ನಿಷ್ಟು ದೃಢವಾಗುತ್ತದೆ. ರಸ ಸಿದ್ಧಾಂತಕ್ಕೂ ಅಂಥ ಪುನರ್ವಿಚಾರ ಅಗತ್ಯವು. ನಾಣ್ಯಗಳು ನಿತ್ಯ ಬಳಕೆಯಿಂದ ಸವೆದು ಬೋಳಾದಾಗ ಅವನ್ನು ಮತ್ತೆ ಟಂಕ ಶಾಲೆಗೆ ತಿರುಗಿ ಕಳುಹಿಸಿ ಕರಗಿಸಿ ಹೊಸ ಎರಕ ಹೊಸ ಅಚ್ಚು ಹಾಕಿಸಿ ಮಿರಿಮಿರಿ

ಮಿರುಗುವಂತೆ ಮಾಡುತ್ತಾರೆ. ಇಂದು ರಸ, ಅಲಂಕಾರ, ಶೈಲಿಗಳ ಕುರಿತು ವಿಮರ್ಶಕರೆನಿಸಿಕೊಳ್ಳುವ ನಾವು ಪ್ರಯೋಗಿಸುವ ಪರಿಭಾಷೆ ಅದೇ ರೀತಿ ಬೋಳು ಬೋಳಾಗ ಹತ್ತಿದೆ. -ಸವಕಲು ನಾಣ್ಯವಾಗುತ್ತಿದೆ. ಅದನ್ನು ಪುನರ್ವಿಮರ್ಶೆಯ ಕುಲುಮೆಯಲ್ಲಿ ಮತ್ತೆ ಕಾಸಿ ಕುದಿಸಿ ಹೊಸ ಅಚ್ಚಿನಲ್ಲಿ ಹೊಯ್ಯ ಬೇಕಾಗಿದೆ. ಇದರಿಂದ ತತ್ವಕ್ಕೆ ಚ್ಯುತಿ ಇಲ್ಲ. ಸತ್ಯಕ್ಕೆ ಲೋಪವಿಲ್ಲ. ಅದು ರತ್ನದಂತೆ. ಅದಕ್ಕೆ ಹೊಸ ಹೊಸ ಪೈಲು ಕೆತ್ತಿದಷ್ಟೂ ಅದರಿಂದ ಹೊರಹೊಮ್ಮವ ಕಿರಣ-ಕಾಂತಿ ಹೆಚ್ಚು ಬಣ್ಣ-ಬೆಡಗುಬೀರುತ್ತದೆ.

ಇಂದು ನಾವು ಸಾಹಿತ್ಯ ವಿಮರ್ಶಕರ ಇದುರಿಗೆ ಇಡುವ ಒಂದು ಪ್ರಮೇಯ ರಸಸಿದ್ಧಾಂತಕ್ಕೆ ಒಪ್ಪಿದ್ದು. ಅಲ್ಲಿಯೂ ಅಷ್ಟೇನೂ ಗಹನವಾದದ್ದೂ ಅಲ್ಲ. ರಸಗಳಲ್ಲಿ ಯಾವದು ಶ್ರೇಷ್ಠ ಯಾವದು ಕನಿಷ್ಠ ಎಂಬ ಕುರಿತು ಚರ್ಚೆ ಮಾಡುವದೇ ಒಂದು ರೀತಿ ಅನುಚಿತವೇನೋ. ಒಂದೊಂದು ರಸವೂ ತನ್ನ ಮಟ್ಟಿಗೆ ಪ್ರಭಾವದಲ್ಲಿ ಪ್ರತೀತಿಯಲ್ಲಿ ಉತ್ಕರ್ಷ ಸಿದ್ಧಿಯಲ್ಲಿ ಅಪ್ರತಿಮವೇ. ಶೃಂಗಾರಕ್ಕೆ, ಕರುಣಕ್ಕೆ, ವೀರಕ್ಕೆ ಹಾಸ್ಯಕ್ಕೆ, ಬೀಭತ್ಸಕ್ಕೆ, ರೌದ್ರಕ್ಕೆ - ಹೀಗೆ ಒಂದೊಂದು ರಸಕ್ಕೂ ಇನ್ನೊಂದರೊಂದಿಗೆ; ತಾರತಮ್ಯ ವೈಷಮ್ಯ ಶಕ್ಯವಾಗುವದಾದರೂ ಹೇಗೆ? ಆದ್ದರಿಂದ ನವರಸಗಳಲ್ಲಿ ಯಾವದು ಹೆಚ್ಚು ಯಾವದು ಕಡಿಮೆ ಎಂದು ನಿರ್ಧರಿಸುವದು. ಎಷ್ಟು ಕಷ್ಟವೋ ನಿರ್ಧರಿಸಲು ಹೊರಡುವದು ಅಷ್ಟೇ ಇಷ್ಟವೂ ಅಲ್ಲವೆನ್ನಬಹುದು.

ಆದಾಗ್ಯೂ ಪರಂಪರೆಯಿಂದ ಶೃಂಗಾರವೇ ಮಿಕ್ಕ ರಸಗಳಿಗೆ ಮಿಕ್ಕಿದ್ದು; ಶೃಂಗಾರವೇ "ರಸರಾಜ"ವೆಂದು ಎಂದಿನಿಂದಲೂ ಹೇಳಲಾಗುತ್ತದೆ. ಈ "ರಸರಾಜತ್ವದ" ಗಮಕವೇನು? ಶೃಂಗಾರವೇ ಈ ರಾಜಪಟ್ಟಕ್ಕೆ ಏರಲು ಹೇಗೆ ಅಧಿಕಾರಿ? ಇನ್ನಾವದೇ ರಸಕ್ಕೆ ಈ ಅಧಿಕಾರ ಸಲ್ಲಬಾರದೇಕೆ? ನನ್ನ ಚರ್ಚೆ ಈ ಪಟ್ಟದ ಅಧಿಕಾರದ ಕುರಿತಾಗಿದೆ!

ಶೃಂಗಾರವೇ ಎಲ್ಲ ರಸಗಳಿಗೆ ರಾಜನೆಂದು ಭಾವಿಸಿದವರೂ ಪೂಜಿಸಿದವರೂ ಅದಕ್ಕಾಗಿ ವಿಶೇಷ ಪ್ರತಿಭೆಯನ್ನು ವ್ಯಯಿಸಿದಂತೆ ಇಲ್ಲ. ಕಾಮ, ರತಿ, ಪ್ರಣಯ ಗಂಡು-ಹೆಣ್ಣಿನ ಆಕರ್ಷಣೆ ಆಸ್ವಾದನೆ ಆದಿಮಾನವ ದಂಪತಿ ಆದಮ ಈವರ ಕಾಲದಿಂದಲೂ ಸ್ವತಃ ಸಿದ್ಧವಾಗಿ ಸ್ವಭಾವ ಸಿದ್ಧವಾಗಿ ಬಂದಿದೆ. ಕಾವ್ಯವು ಕೇವಲ ಲೋಕ ಚರಿತದ ಪ್ರತಿಬಿಂಬವೇ ಆಗಿದ್ದರೆ ಕಾರ್ಯವೂ ಮೂಲ್ಯವೂ ಆ ಕಾವ್ಯಕ್ಕೆ ಇಲ್ಲದಿದ್ದರೆ ಶೃಂಗಾರವೂ ಆಪಾತರಮಣೀಯತೆಯಿಂದ ತಾನೇ ತಾನಾಗಿ ರಾಜಪಟ್ಟವೇರಬಲ್ಲದು. ಏಕೆಂದರೆ ಶೃಂಗಾರವನ್ನು ಅರಿತುಕೊಳ್ಳಲು ಯಾವ ವಿಶೇಷ ಸಂಸ್ಕಾರವೂ ಬೇಡ, ಅಂಥ ಸೂಕ್ಷ್ಮ ರಸಿಕತೆಯೂ ಬೇಕಾಗಿಲ್ಲ.

ರಸಿಕತೆ ಸಹೃದಯತೆ ರಸ ನಿಷ್ಪತ್ತಿಗೆ ಮೂಲ. ಕವಿಯು ಒಟ್ಟು ಒದಗಿಸಿ ಇಡುವದು ಆ ನಿಷ್ಪತ್ತಿಗೆ ಸಾಧಕವಾದ ಸಾಮಗ್ರಿ - ಸ್ಥಾಯೀ ಭಾವಕ್ಕೆ ಪರಿಪೋಷಕವಾದ ವಿಭಾವ, ಅನುಭಾವ, ಸಂಚಾರ ಭಾವಗಳೇ ಮೊದಲಾದ "ಬಹಿರುಪಾಧಿ"ಗಳನ್ನು ಅವುಗಳ ಕ್ರಿಯೆ-ಪ್ರತಿಕ್ರಿಯೆಯಿಂದಾಗಿ ರಸವು ಉಂಟಾಗುವದು ಓದುಗನ ನೋಟಕನ ಹೃದಯದಲ್ಲಿ. ನಿಜವಾದ ನಾಟಕವು ನಡೆಯುವದು ನೋಟಕನ ಹೃದಯ ರಂಗದಲ್ಲಿ. ನಮ್ಮ ಜಿಲ್ಲೆಯ ಪ್ರಥಮ ಸಾಹಿತ್ಯ ಸಮ್ಮೇಲನವು ಹಿಂದೊಮ್ಮೆ ಶಿರ್ಶಿಯಲ್ಲಿ ಜರುಗಿದಾಗ ನಾಟ್ಯಾಚಾರ್ಯ ದಿ. ಟಿ. ರಾಘವಾಚಾರಿ ತಮ್ಮ ಚಿಕ್ಕ ಭಾಷಣದಲ್ಲಿ

ಅಂದಿದ್ದರು. It is the union of the actor and the spectator that creates the theatre" ಈ ಮಾತು ಎಲ್ಲ ರಸ ನಿರ್ಮಿತಿಗೂ ಅನ್ವಯಿಸುವಂತಿದೆ.

ರಸವನ್ನು ನಿರ್ಮಿಸಿ ಅದನ್ನು ಸವಿಯಬಲ್ಲ ಮನೋವೃತಿಯೇ ರಸಿಕತೆ. ಶೃಂಗಾರ ಚೇಷ್ಟೆಗಳನ್ನು ಕಂಡಾಗೆಲ್ಲ ಕಂಡಲ್ಲೆಲ್ಲ ಹಿಗ್ಗುವ ಜನರೆಲ್ಲರೂ ರಸಿಕರೆನ್ನಬಹುದೇ? ಪ್ರತಿಯೊಂದು ಸ್ಥಾಯೀ ಭಾವವು ಒಂದು ಮಾನವ ಸಾಧಾರಣವಾದ ಸರ್ವ ಸಾಮಾನ್ಯವಾದ ಭಾವನೆ- ಮೂಲ ಪ್ರಕೃತಿಧರ್ಮ ಅದರಲ್ಲಿಯೂ ರತಿಯು ಯಾವ ವಿಶ್ಲೇಷಣ ಮನೋವಿಜ್ಞಾನಿಯೂ ಆಣೆ ತೊಟ್ಟು ಹೇಳುವಂತೆ - ಅತ್ಯಂತ ಮೂಲಭೂತವಾದ ಭಾವನೆ. ಆದ್ದರಿಂದ ಅದರ ವ್ಯಂಜನೆಯು ಯಾರಿಗೂ ಯಾವಾಗಲೂ ವೇದ್ಯವಾಗುವದು ಸ್ವಾಭಾವಿಕ. ಮಿಕ್ಕ ಪ್ರಾಣಿಗಳಿಗೆ ಹಸಿವೆ, ನೀರಡಿಕೆ ಹಾಗೂ ಮೈಥುನಕ್ಕೆ ನಿರ್ದಿಷ್ಟ ಸಮಯವಿರುತ್ತವೆ. ಆದರೆ ಮನುಷ್ಯನೆಂಬ ಪ್ರಾಣಿ ಹಸಿವೆ ಇಲ್ಲದಿರುವಾಗಲೂ ತಿನ್ನುತ್ತಾನೆ. ನೀರಡಿಕೆ ಇಲ್ಲದಾಗಲೂ ಕುಡಿಯುತ್ತಾನೆ. ಯಾವ ಋತುವಿನಲ್ಲಿಯೂ ರತಿಸುಖಕ್ಕೆ ಸಜ್ಜಾಗಿರುತ್ತಾನೆ. ಇವನಿಗೆ ಪ್ರತ್ಯೇಕ ಋತುಕಾಲವೆಂಬುದಿಲ್ಲ. ಆದ್ದರಿಂದ "ರಸರಾಜ" ನಿಗೆ "ಋತುರಾಜ"ನೇ ಜತೆಗೆ ಇರಬೇಕಾಗಿ ಇಲ್ಲ.

ಆದರೆ ಇಷ್ಟು ಮಾತ್ರಕ್ಕೆ ಶೃಂಗಾರವೇ ಎಲ್ಲ ರಸಗಳಲ್ಲಿ ಶ್ರೇಷ್ಠವಾಗಬೇಕೇ? ಹಾಗೆ ನೋಡಿದರೆ ನಮ್ಮ ಸಂತಕವಿಗಳು ಶಾಂತರಸಕ್ಕೆ ಪ್ರಾಧಾನ್ಯ ಕೊಟ್ಟಿಲ್ಲವೇ? ಮಹಾ ಭಾರತದಂಥ ಮಹಾಕಾವ್ಯವು ಅದೇ ರಸ ಆವಾಹನೆಯನ್ನು ಮಾಡುವದಿಲ್ಲವೇ? ರಾಮಾಯಣವು ಕರುಣ ರಸದ ತರಂಗಿಣಿ ಯಲ್ಲವೇ? ಮಹಾಕವಿ ಭವಭೂತಿಯಂತೂ ಕರುಣವೇ ಶ್ರೇಷ್ಠ ರಸವೆಂದ. ಅಲ್ಲ ಅದೊಂದೇ ಮೂಲ ರಸವೆಂದ. "ಏಕೋ ರಸಃ ಕರುಣ ಏವ - " ಕರುಣ ಒಂದೇ ನಿಮಿತ್ತ ಬೇಧದಿಂದ ಹಲವಾರು ರಸಗಳಾಗಿ ಕಾಣುವದೆಂದ. ಇನ್ನು ವೀರಯುಗದಲ್ಲಿ ಬಲ ಪೌರುಷ - ಪರಾಕ್ರಮಗಳೇ ದಿನದ ವಾರ್ತೆಯಾದಾಗಿನ ಸರಂಜಾಮೀ ಅಥವಾ ಮಧ್ಯಯುಗದಲ್ಲಿ ವೀರ ರಸಕ್ಕೇ ಅಗ್ರ ಪಟ್ಟವಾಗಿತ್ತು.

ಇಲ್ಲಿ ಮುಖ್ಯ ಪ್ರಶ್ನೆ ಯಾವ ರಸಕ್ಕೆ ಅಗ್ರಪೂಜೆ ಎಂಬುವದು ಹೀಗೆ ಕೆಲವೊಬ್ಬ ಕವಿಯ ಲಾಕ್ಷಣಿಕನ ವಿಚಾರಲಹರಿಗೆ ಒಪ್ಪಿದ ಸಂಗತಿಯೇ? ಅಥವಾ ಅದಕ್ಕೆ ಒಂದು ಯುಕ್ತಿ ಯುಕ್ತವಾದ ಸ್ವತಂತ್ರವಾದ ನಿಕಷ-ಪ್ರಮಾಣವಿರಬಲ್ಲದೇ?

ನನ್ನ ಮತದಂತೆ ಅಂಥ ಪ್ರಮಾಣವಿರಲೇಬೇಕು. ವೈಯಕ್ತಿಕ ರುಚಿವೈಚಿತ್ರ್ಯವೇ ರಸಗಳ ತಾರತಮ್ಯದ ಅಳತೆಗೋಲು ಆಗಬಾರದು. ಹಾಗಾದರೆ ಅಂಥ ಪ್ರಮಾಣ ಯಾವದು? ಅದನ್ನೇ ಹುಡುಕಿ ಕೊಳ್ಳೋಣ. ರಸದಲ್ಲಿ ತನ್ಮಯರಾಗಿ ಭಾವಸಮಾಧಿಯಲ್ಲಿ ತೇಲಿ ಹೋದವರಿಗೆ ಇಂಥ ಪ್ರಮಾಣದ ಅರಿವು ಪರಿವೆ ಇರಲಾರದು. "ರಸಚಕ್ರೆ ಪ್ರವೃತ್ತೆ ತು, ನಚ ಶಾಸ್ತ್ರಃ ನಚಕ್ರಮಃ" - ಎಂಬುದು ನಿಜ. ಆದರೆ ಆ ಚಕ್ರವ್ಯೂಹಕ್ಕೂ ಒಂದು ಕ್ರಮ, ನೇಮ ಇರಲೇಬೇಕು. ಅದು ಯಾವದು?

ಮೇಲೆ ಹೇಳಿದಂತೆ ರಸವು ಜನಿಸುವದು ರಸಿಕನ ಆಸ್ವಾದ್ಯ ಮಾನತೆಯಲ್ಲಿ. ರಸಿಕತ್ವ

ಒಂದು ಸಹಜ ವೃತ್ತಿ ಅಲ್ಲ. ಅದು ಪ್ರಯತ್ನ ಸಾಧ್ಯ.

ಸಂಸ್ಕಾರ ಜನ್ಯ. ಅಭಿನವ ಗುಪ್ತನೇ ಅನ್ನುವಂತೆ "ಯೇಷಾಂ ಕಾವ್ಯಾನುಶೀಲನಾಭ್ಯಾಸ ವಶಾತ್ ವಿಶದೀ ಭೂತೇ ಮನೋ ಮುಕುರೆ ವರ್ಣನೀಯ ತನ್ಮಯೀ ಭವನಯೋಗ್ಯತಾ ತೇ ಸ್ವಹೃದಯ ಸಂವಾದ ಭಾಜಃ ಸಹೃದಯಾಃ" ಇದು ಅತ್ಯಂತ ಮಾರ್ಮಿಕವಾದ ವ್ಯಾಖ್ಯೆ. ಸಹೃದಯತ್ವ ಸಾಹಿತ್ಯಿಕ ಅರ್ಥದಲ್ಲಿ; "ಕುರಿತೋದವದೆಯಂ" ಬರುವ "ಪರಿಣತಮತಿ" ಅಲ್ಲ ಅದಕ್ಕೆ ೧) ಕಾವ್ಯದ ಅನುಶೀಲನೆ ಅಭ್ಯಾಸ ಅಗತ್ಯ. ಅದರಿಂದಾಗಿ ಮನಸ್ಸು ಕನ್ನಡಿಯಂತೆ ತಿಳಿಯಾಗಬೇಕು. ಇವೆರಡೂ ಸಾಧಿಸಿದಾಗಲೇ ವರ್ಣ್ಯ ವಸ್ತುವಿನೊಂದಿಗೆ ತನ್ಮಯವಾಗುವ ಯೋಗ್ಯತೆ ಹುಟ್ಟಿ ಆತ ಸಹೃದಯನಾಗುತ್ತಾನೆ. ಸಹೃದಯನೆಂದರೆ ಬರೇ ಹೃದಯವುಳ್ಳವನೆಂದಲ್ಲ; ಕವಿಯೊಂದಿಗೆ ಹೃದಯ ಸಂವಾದವನ್ನು ಸ್ಥಾಪಿಸ ಬಲ್ಲ ಸಮಾನ ಹೃದಯವುಳ್ಳವನೇ ಸಹೃದಯ. 'ಮಮ ಚ. ಕೋಪಿ ಸಮಾನ ಧರ್ಮಃ' ಸಹೃದಯನೂ ಮೂಕ ಕವಿ. ಕವಿಯೂ ಮೂರ್ಖ ರಸಿಕ. ರಸಿಕತ್ವದಿಂದಲೇ ಇವೆರಡು ಪ್ರತಿಭೆಗಳು ಹುಟ್ಟುತ್ತವೆ. ರಾಜಶೇಖರ ಕವಿಯದು "ಕಾರಯತ್ರೀ ಪ್ರತಿಭೆ" ಎನ್ನುತ್ತಾನೆ. ಸಹೃದಯನದು "ಭಾವಯತ್ತೀ ಪ್ರತಿಭೆ" ಎನ್ನುತ್ತಾನೆ.

ಅಂದಾಗ ರಸನಿಷ್ಪತ್ತಿಯ ಹಿನ್ನೆಲೆಯಾಗಿ ಒಂದು ವಿಶಿಷ್ಟ ಸಂಸ್ಕಾರ ಹೊಂದಿದ ಮನೋವೃತ್ತಿ ಇರಬೇಕೆಂದಾಯಿತು - ಅದು ಕಂಡದ್ದಕ್ಕೆ ಕೆರಳುವ ಮನಸ್ಸು ಅಲ್ಲ. ರಸಿಕನ ಮನಸ್ಸು ಒಣ ಕಟ್ಟಿಗೆಯಂತೆ ಕಾವ್ಯದ ಭಾವವು ಬೆಂಕಿಯಂತೆ ಅದನ್ನು ವ್ಯಾಪಿಸಿ ಜ್ವಾಲೆಯಲ್ಲಿ ಒಂದಾಗಿಸುವದು "ಯೋಽರ್ಥಃ".

ಹೃದಯ ಸಂವಾದೀ ತಸ್ಯ ಭಾವೋ ರಸೋದ್ಭವಃ! ಶರೀರಂ ವ್ಯಾಪ್ಯತೆ ತೇನ ಶುಷ್ಕಂ ಕಾಷ್ಠಮಿವಾಗ್ನಿನಾ" - ಎನ್ನುತ್ತಾನೆ ಅಭಿನವಗುಪ್ತ.

ಈ ಶುಷ್ಕತೆ ಹೇಗೆ ಸಾಧ್ಯ? ರಸಿಕನು ಶುದ್ಧ ಶುಂಠನೇ? ಅಲ್ಲ. ಆತನ ಹೃದಯ ಹಿಂದೆ ಬಣ್ಣಿಸಿದಂತೆ ತಿಳಿಗನ್ನಡಿಯಾಗಬೇಕು. ಅದು ಹೇಗೆ? ಕವಿಗೂ ರಸಿಕನಿಗೂ ಇರುವ ಮೂಲದ ಸಾಧರ್ಮ್ಯವೇ ಇದು. ಜಗತ್ತನ್ನೂ ಜೀವನವನ್ನೂ ಸಾಕ್ಷಿಯಾಗಿ, ಕನ್ನಡಿಯಂತೆ ನೋಡುವ ಮನೋಧರ್ಮ. ಇದಕ್ಕೆ ತಾಟಸ್ಥ್ಯವೆನ್ನುತ್ತಾರೆ. ಅಭಿನಯಿಸುವ ನಟನಿಗೆ ರಂಗದ ಹಿಂದು ಮುಂದು ಸುಳಿದಾಡುವ ಸ್ಟೇಜ್ ಕೆಲಸಗಾರನಿಗೆ ನಾಟಕ ತಿಳಿಯದು. ಅದು ಮುಂದೆ ಕೂತ ಪ್ರೇಕ್ಷಕನಿಗೇ ಗೊತ್ತು. ಅದು ಆತ ನಾಟಕ ನೋಡಲಿಕ್ಕೆಂತಲೇ ಬಂದು ಕೂತಿರಬೇಕು. ಬೇರೆ ವ್ಯಪದೇಶ ಉದ್ದೇಶ ಇರಕೂಡದು. ಅಂದರೆ ಮೋಹ, ಲೋಭ, ಸ್ವಾರ್ಥ ಮುಂತಾದ ವಿಕಾರಗಳಿಂದ ಮನಸ್ಸು ನಿರ್ಲಿಪ್ತವಾಗಿರಬೇಕು, ನಿಶ್ಚಿಂತ ನಿಚ್ಚಳವಾಗಿರಬೇಕು. ಕಾವ್ಯದ ರೂಪಕರ ವರ್ಣ್ಯ ವಸ್ತುವನ್ನು ಪ್ರತ್ಯೇಕವಾಗಿ ಪೃಥಗಾತ್ಮಿಕತೆಯಿಂದ ನೋಡುವ ಹದ ಸಾಧಿಸಿದವನಿಗೇ ರಸಾಸ್ವಾದ. ಆತನೇ ರಸಿಕ.

ಈ ತಟಸ್ಥತೆಯೇ ಎಲ್ಲ ಬಗೆಯ ಕಲಾದೃಷ್ಟಿಗೆ ಅದಿಷ್ಠಾನ. ಪ್ರತಿಯೊಂದು ರಸವು ತಟಸ್ಥತೆಯ ಭಿತ್ತಿಯ ಮೇಲೆಯೇ ರೂಪಗೊಳ್ಳುತ್ತದೆ. ಇದನ್ನು ನೆನಪಿಟ್ಟುಕೊಂಡರೆ ಯಾವ ರಸದ ನಿರ್ಮಿತಿಗೆ

ತಾಟಸ್ಥ್ಯವು ಎಲ್ಲೂ ಸಾಧ್ಯವೇ. ರಸಾನುಭವ ಮುಗಿಯುವನಕವೂ ಸಾಧ್ಯವೋ-ಆ ರಸವೇ ಶ್ರೇಷ್ಠವೆನ್ನಬೇಕು. ಶೃಂಗಾರ ಕರುಣ ರಸಗಳು ಕೂಡಲೆ ಮನಸ್ಸನ್ನು ಕರಗಿಸುತ್ತವೆ. ಮನಸ್ಸು ಕರಗಿಸುವ ಗುಣ "ಮಾಧುರ್ಯ" ವೀರ, ರೌದ್ರ ಭಯಾನಕ ಮುಂತಾದವು ಹಾಗೆಯೇ. ಕೂಡಲೆ ಮನಸ್ಸನ್ನು ದೀಪ್ತ ಗೊಳಿಸುತ್ತವೆ. ಉತ್ತೇಜಿತವಾಗಿಸುತ್ತವೆ, ಬಿರುಸು ಮಾಡುತ್ತವೆ. ಈ ಆವೇಶಕಾರಿಗುಣ "ಓಜಸ್ಸು" ಇವುಗಳಿಂದಾಗಿ ರಸ ಉಂಟಾಗುವಾಗಿನ ತಾಟಸ್ಥ್ಯ ಮುಂದೆ ತನ್ಮಯ ಭವನದಲ್ಲಿ ಮಾಯವಾಗಿ ಬಿಡುತ್ತದೆ.

ಆದರೆ ಕಾವ್ಯ-ನಾಟಕಗಳನ್ನು ಓದುವಾಗ - ನೋಡುವಾಗ ಹೇಗೋ ಹಾಗೆಯೇ ನಿತ್ಯದ ಲೋಕಚರಿತವನ್ನು ನೋಡುವಾಗಲೂ ನಾವು ಸವಿಯಬಲ್ಲ ಒಂದೇ ರಸ ಹಾಸ್ಯ. ಅದಕ್ಕೆ ತಾಟಸ್ಥ್ಯ ಎಲ್ಲೂ ಸಾಧ್ಯ. (ಯಾರಿಗೂ ಸಾಧ್ಯವಲ್ಲ ಮತ್ತೆ!) ಬುದ್ಧನ ಮಂದಸ್ಮಿತದಿಂದ ಹಿಡಿದು ಅಪ್ರಬುದ್ಧನ ವಿಕಟ ಅಟ್ಟಹಾಸದವರೆಗೂ ತಟಸ್ಥ ವೃತ್ತಿಯೇ ವಿನೋದಕ್ಕೆ ಕಾರಣವಾಗಿಯೇ ಉಳಿದು ರಸಾನುಭೂತಿ ಪೂರ್ತಿ ಸಾಧ್ಯ. ಬೇರೆ ಯಾವದೇ ರಸಕ್ಕಿಂತ ಹೆಚ್ಚಾಗಿ ಹಾಸ್ಯರಸದ ಪ್ರಸಂಗದಲ್ಲಿ ಮನುಷ್ಯ ಸಾಕ್ಷಿಯಾಗಿ ತಟಸ್ಥನಾಗಿಯೇ ಉಳಿಯುತ್ತಾನೆ. ಪರವಶನಾಗುವದಿಲ್ಲ. ಅಲ್ಲದೆ ಕಾವ್ಯದಷ್ಟೇ, ನಾಟಕರೂಪಕಾದಿಗಳಷ್ಟೇ ನಿರ್ಭರವಾದ ರಸಾನುಭವವನ್ನು ವ್ಯವಹಾರದ ಪ್ರಪಂಚದಲ್ಲಿಯೂ ಪ್ರತ್ಯಕ್ಷ ಜೀವನದಲ್ಲಿಯೂ ಹಾಸ್ಯದ ಎಲ್ಲ ಆಕಾರ ಪ್ರಕಾರಗಳಿಗೂ ಶಕ್ಯ. ಅದಕ್ಕೆ ವಿಭಾವಾನುಭಾವಾದಿ ನೈಪಥ್ಯಿಕ ನೈಮಿತ್ತಿಕ ವಿಧಾನ ವಿಕ್ಷೇಪಗಳೂ ಅಷ್ಟು ಆಗ್ಯವಿರುವದಿಲ್ಲ. ಹೀಗೆ ಸಾಹಿತ್ಯದಲ್ಲಿಯೂ ಸಂಸಾರದಲ್ಲಿಯೂ ಆವಿಷ್ಕಾರ ಆಸ್ವಾದಗಳು ಸಾಧ್ಯವಿದ್ದ ರಸ ಹಾಸ್ಯರಸ. ಹಾಸ್ಯ ಪ್ರಸಂಗದಿದುರು ಎಂಥ ಕಲುಷಿತ ಕದಡಿದ ಮನಸ್ಸೂ ತಿಳಿಯಾಗುತ್ತದೆ. ಮನುಷ್ಯನ ಮೂಲದ ಬೌದ್ಧಿಕತೆಗೆ ಹಾಸ್ಯಕ್ಷಮತೆಯೆಂದೇ ಸಾಮಾನ್ಯ ದ್ಯೋತಕ. ವಿಕಾರಗೆಟ್ಟಾಗ ಹಾಸ್ಯಕ್ಕೆ ವಿನೋದಕ್ಕೆ ಎಡೆಇಲ್ಲ. ವಿಚಾರವಂತನಿಗೆ ಅಂಥವರು ಹಾಸ್ಯಕ್ಕೆ ಆಸ್ಪದ ಆಲಂಬರಾಗಬಹುದು! ಹೀಗೆ ತಾಟಸ್ಥ್ಯ ರಸಿಕತೆಯ ಒರೆಗೆ ಹಾಸ್ಯವೇ ರಸರಾಜವಾಗಬಹುದೇ?

●

('ಶೃಂಗಾರ' ೧೯೬೬)

# ಅಪಕ್ಷ ಪ್ರಜಾಪ್ರತಿನಿಧಿಗಳ ಸಟ್ಟಾ ಬಾಜಾರು

ಕಳೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಬೇರೆ ಬೇರೆ ರಾಜಕೀಯ ಪಕ್ಷಗಳ ರಕ್ತ ಪರೀಕ್ಷೆ ಆಯಿತು. ಜತೆಗೆ ಮತದಾನ ಪದ್ಧತಿಯ ಚುನಾವಣೆಯ ವ್ಯವಸ್ಥೆಯ ಸತ್ವ ಪರೀಕ್ಷೆಯೂ ಆಯಿತು. ಆದರೆ ಇವೆರಡಕ್ಕಿಂತ ಹೆಚ್ಚು ಗಂಭೀರವಾದ ಅಷ್ಟೇ ಗಮನಕ್ಕೆ ಬಾರದೆ ಹೋದ ಅಂಶವೆಂದರೆ ಈ ಮಹಾ ಪರ್ವಣಿಯಲ್ಲಿ ನಮ್ಮ ಸಂವಿಧಾನದ ರಾಜ್ಯಘಟನೆಯ ಅಗ್ನಿಪರೀಕ್ಷೆಯೂ ಆಯಿತು.

## 'ಅಪಕ್ಷ' ಹುರಿಯಾಳುಗಳು

ನಮ್ಮ ಸಂವಿಧಾನದಲ್ಲಿ ಅನೇಕ ದೋಷಗಳಿವೆ. ಅವುಗಳನ್ನು ಆಗಾಗ್ಗೆ ಯಥಾವಕಾಶ ತಿದ್ದಿಕೊಳ್ಳಲೂ ಆಗುತ್ತದೆ. ಇಂಥ ದೋಷಗಳಲ್ಲಿ ಈ ಸಲದ ಚುನಾವಣೆಗಳಿಂದ ಬೆಳಕಿಗೆ ಬಂದ ದೊಡ್ಡ ದೋಷವೆಂದರೆ ನಮ್ಮಲ್ಲಿಯ 'ಅಪಕ್ಷ' ಹುರಿಯಾಳುಗಳು ಆಯ್ಕೆಯಾಗಿ ಬರುವ ಸಂಪ್ರದಾಯ. ಈ 'ಅಪಕ್ಷ' ಸದಸ್ಯರ ತೊಡಕಿನ ಬಗೆಗೆ ಹಿಂದೊಮ್ಮೆ ಈ ಪುಟದಲ್ಲಿ ಬರೆದಿದೆ. ಆ ಪ್ರಶ್ನೆಯನ್ನು ಇಲ್ಲಿ ಇನ್ನೊಮ್ಮೆ ಘಟನಾತ್ಮಕ ದೃಷ್ಟಿಯಿಂದ ಪರಿಶೀಲಿಸಲಾಗಿದೆ.

## ಸಂವಿಧಾನದಲ್ಲಿ ಇಲ್ಲದ್ದು

ನಮ್ಮ ಸಂವಿಧಾನದಲ್ಲಿ ರಾಜಕೀಯ ಪಕ್ಷಗಳ ಪ್ರಸ್ತಾವನೆ ಇಲ್ಲ. ನಿರ್ವಿವಾದ ಬಹುಮತವನ್ನು ಗಳಿಸಿದ ಪಕ್ಷದ ನಾಯಕರು ಸರಕಾರವನ್ನು ರಚಿಸುವಂತೆ ರಾಜ್ಯಪಾಲರೋ ರಾಷ್ಟ್ರಾಧ್ಯಕ್ಷರೋ ಆಮಂತ್ರಿಸಬೇಕೆಂಬ ಪ್ರಸ್ತಾಪವೂ ಘಟನೆಯಲ್ಲಿ ಇಲ್ಲ. ಪಕ್ಷಗಳ ಉಲ್ಲೇಖವೇ ಇಲ್ಲದಿರುವಾಗ, ಅಂಥ ಪಕ್ಷಗಳ ಸಂಯುಕ್ತ-ವಿಯುಕ್ತ, ನಿಯುಕ್ತ-ರಂಗಗಳ ಅಥವಾ ಯಾವ ಪಕ್ಷಕ್ಕೂ ಸೇರದ ಬಿಡಿಗೈ ಬಂಟರಾದ ಸ್ವತಂತ್ರ- ಅಂದರೆ ಅತಂತ್ರ-ಸದಸ್ಯರುಗಳ ಉಲ್ಲೇಖ ಸಂವಿಧಾನದಲ್ಲಿ ಬರುವ ಬಗೆಯೇ ಇಲ್ಲ.

ಸ್ವತಂತ್ರವಾಗಿ ನಿಲ್ಲುವ ಈ ಅಪಕ್ಷ ಹುರಿಯಾಳುಗಳಲ್ಲಿ, ಸಾಮಾನ್ಯವಾಗಿ ನೂರಕ್ಕೆ ೯೦ರಷ್ಟು ಮಂದಿ ಚುನಾವಣೆಗಳಲ್ಲಿ ಸೋಲುತ್ತಾರೆ; ಅಥವಾ ಇಡಗಂಟು ಕಳೆದುಕೊಳ್ಳುತ್ತಾರೆ. ಹೀಗಿದ್ದರೂ ಪ್ರತಿಯೊಂದು ರಾಜ್ಯದಲ್ಲಿ ಕೆಲವು ಪ್ರಬಲರಾದ ಅಪಕ್ಷ ಹುರಿಯಾಳುಗಳು ತಮ್ಮದೇ ಸತ್ವದಿಂದ ಅಥವಾ ಹಿನ್ನೆಲೆಯಲ್ಲಿಯೇ ನಿಲ್ಲುವ ಒಂದೆರಡು ಪಕ್ಷಗಳ ಬೆಂಬಲದಿಂದ ಚುನಾವಣೆಗಳನ್ನು ಗೆದ್ದು ಬರುತ್ತಾರೆ.

## ತಾರಿ ದಾಟದ ಮೇಲೆ

ಇಂಥವರಲ್ಲಿ ಪಕ್ಷಗಳಿಂದ ಪ್ರೋತ್ಸಾಹಿತ (sponsered) ರಾದ ಅಪಕ್ಷ ಪ್ರತಿನಿಧಿಗಳಿಗೆ ಚುನಾವಣೆ ಗೆದ್ದ ಮೇಲೆ ವಿಚಿತ್ರ ಪರಿಸ್ಥಿತಿಯಲ್ಲಿ ಸಿಲುಕಬೇಕಾಗುತ್ತದೆ. ಕಾಂಗ್ರೆಸ್ಸಿನಂಥ ಮಹಾಪಕ್ಷವೊಂದನ್ನು ಸರ್ವ ಪ್ರಯತ್ನದಿಂದ ಸದೆಬಡಿಯಬೇಕೆಂಬ ಒಂದೇ ನಕಾರಾತ್ಮಕ ನೀತಿಯಿಂದ ಒಟ್ಟಾದ ಪಕ್ಷಗಳು ಇಂಥ ಸಮರ್ಥ ಅಪಕ್ಷರನ್ನು ಚುನಾಯಿಸಿ ತಂದ ಮೇಲೆ ಇಂಥ ಗಾಳಿಪಟಗಳನ್ನು ಹಾರಾಡಿಸಲಿಕ್ಕೆ ಒಂದಕ್ಕಿಂತ ಹೆಚ್ಚು ಹುರಿಗಳು ಅವುಗಳನ್ನು ಕುಣಿಸಲು ಹಲವಾರು ಕೈಗಳು

ಮೇಲಾಟಕ್ಕೆ ನಿಲ್ಲುತ್ತವೆ. ಈ ಹುರಿಯಾಳು ಯಾರ ಹುರಿಗೆ ಕುಣಿಯುವ ಆಳು?- ಖಚಿತವಾಗುವದಿಲ್ಲ. ಇದು ಎಲ್ಲರಿಗೂ ಗೊಂದಲಕ್ಕೆ ತೊಂದರೆಗೆ ಕಾರಣವಾಗುತ್ತದೆ. ಆಗ ತಾರಿ ದಾಟಿದ ಆ ಹುರಿಯಾಳು ಅಂಬಿಗರ ಹಂಗಿಲ್ಲವೆಂದು ತಿಳಿದು ತಾನು ಯಾವ ಪಕ್ಷದವನೂ ಅಲ್ಲ ಯಾರೂ ತನ್ನನ್ನು dictate ಮಾಡಲಾರರು- ಎಂದು ಘೋಷಿಸಿ ಮೋಕ್ಷ ಪಡೆಯುತ್ತಾನೆ!

## ವ್ಯಾಪಾರಿಗಳು

ಇಂಥ ಒಬ್ಬಿಬ್ಬರನ್ನು ಬಿಟ್ಟರೂ ಪ್ರತಿಯೊಂದು ವಿಧಾನಸಭೆಯಲ್ಲಿಯೂ ತನ್ನದೆ ಬಲದಿಂದ, ಸಾರ್ವಜನಿಕ ಕಾರ್ಯದ ಸಾಂಪ್ರದಾಯಿಕ ಮುಂದಾಳುತನದ ಬಲದಿಂದ ಹೇಗೋ ಆಯ್ಕೆಗೊಂಡ ಅಪಕ್ಷ ಸದಸ್ಯರು ೧೦-೧೫ ಆದರೂ ಇದ್ದೇ ಇರುತ್ತಾರೆ. ಮತ್ತು ಬಹಳ ಸಲ ಎರಡು ಸಮಬಲವಾದ ಬಲಿಷ್ಠ ಪಕ್ಷಗಳ- ಅಥವಾ ಪಕ್ಷರಂಗಗಳ-ನಡುವೆ ವಿಧಾನಸಭೆಯಲ್ಲಿ ಸತ್ತೆಯ ಅಧಿಕಾರದ ತಕ್ಕಡಿಯ ಮುಳ್ಳು ಆಚೆ ಈಚೆ ತೂಗಾಡಿಸಲಿಕ್ಕೆ, ಒಲಿಸಲಿಕ್ಕೆ ಈ ಅಪಕ್ಷರ ತಂಡಕ್ಕೆ ಸಾಕಷ್ಟು ಸಾಮರ್ಥ್ಯವೂ ಆ ಮೂಲಕ ಆಯಕಟ್ಟಿನ ಮಹತ್ವವೂ ಬಂದು ಬಿಡುತ್ತದೆ.

ಕಳೆದ ಚುನಾವಣೆಗಳಲ್ಲಿ ಎಲ್ಲ ವಿಧಾನ ಸಭೆಗಳಲ್ಲಿ ಕೂಡಿ ಈ ಅಪಕ್ಷ ಸದಸ್ಯರಿಗೆ ಒಟ್ಟೂ ಮತದಾನದ ನೂರಕ್ಕೆ ೧೫ರಷ್ಟು ಮತಗಳು ಬಿದ್ದಿವೆ! ಅಂದರೆ ಕಾಂಗ್ರೆಸ್ಸಿನ ನಂತರ ಈ ಬಿಡಿಬಂಟರಿಗೇ ಹೆಚ್ಚು ಮತಗಳು ಬಿದ್ದಿವೆ. (ಕಾಂಗ್ರೆಸ್ ಪಕ್ಷಕ್ಕೆ ಒಟ್ಟು ನೂರಕ್ಕೆ ೩೮ರಷ್ಟು!) ಈ ಮೂಲಕ ಈ ಬಂಟರ ತುಂಟತನದ ತೂಕ ಹೆಚ್ಚಿದೆ. ಹಿಂದೆ ಪಾಳೆಯಗಾರಿಕೆಯ ಯುಗದಲ್ಲಿ ತಮ್ಮ ತಮ್ಮ ಕುದುರೆ ಕತ್ತಿ ಡಾಲುಗಳನ್ನಿಟ್ಟುಕೊಂಡು ಪಾಳೆಯಗಾರನಿಂದ ಪಾಳೆಯಗಾರನಲ್ಲಿಗೆ ಹೋಗಿ ತಮ್ಮ ಸ್ವಾಮಿನಿಷ್ಠೆಯನ್ನು ಯೋಗ್ಯ ಬೆಲೆಗೆ ಮಾರಿ ಕಾಳಗ ಕಟ್ಟುವ ದೈವದ ಪಾಯಿಕ (soldiers of fortune)ರಿದ್ದರು. ಅಪಕ್ಷ ಸದಸ್ಯರು ಆ ಜಾತಿಯ ಜನ. ಅವರನ್ನು ಖರೀದಿ ಮಾಡುವ ಸಾಟೆಯನ್ನು ಪಕ್ಷಗಳು ಕಟ್ಟುತ್ತವೆ. ದಿನಕರ ದೇಸಾಯಿಯವರು ಹೇಳುವಂತೆ ಇಂದು "ರಾಜಕಾರಣವಾಯ್ತು ಸಗಟು ವ್ಯಾಪಾರ" ಈ ವ್ಯಾಪಾರದಲ್ಲಿ ಈ ಸದಸ್ಯರಿಗೆ ಭಾರಿ ಬೆಲೆ. ಇವರಿಂದಲೆ ಇಂದಿನ ಮಂತ್ರಿಮಂಡಳ ನಾಳೆಗೆ ಉರುಳುತ್ತದೆ. ನಿನ್ನೆಯ ವಿರೋಧಿ ಗುಂಪು ಇಂದು ಮಂತ್ರಿಮಂಡಳವನ್ನು ರಚಿಸುತ್ತದೆ.

ಹೀಗೆ ನಮ್ಮಲ್ಲಿಯ ಅಪಕ್ಷ ಅಧಿಕಾರ ಲೋಲುಪ ರಾಜಕೀಯ ರಂಗದಲ್ಲಿ ಅಪಕ್ಷ ಸದಸ್ಯತ್ವ ಒಂದು ಸಾರ್ವಜನಿಕ ರಂಗದಲ್ಲಿಯ ಖಾಸಗೀ ಉದ್ದಿಮೆಯಾಗಿದೆ! ಅದೂ ಒಳ್ಳೆಯ ಮುನಾಫೆಯ ಧಂದೆ!

## ಮಂತ್ರಿಗಳ ನೇಮಕ

ಮಂತ್ರಿಮಂಡಳಗಳನ್ನು ಕಟ್ಟಲು ಕೆಡಿಸಲು ಈ ಸದಸ್ಯರು ಕಾರಣವಾಗುವದೇಕೆ? ಸಂವಿಧಾನದಲ್ಲಿ ಪಕ್ಷವೆಂಬುದಕ್ಕೆ ಸ್ಥಾನವಿಲ್ಲ. ಮಂತ್ರಿಮಂಡಳವು ಶಾಸನ ಸಭೆಯ- ಅಂದರೆ ಅಲ್ಲಿಯ ಬಹುಸಂಖ್ಯ ಸದಸ್ಯರ- ವಿಶ್ವಾಸಕ್ಕೆ ಪಾತ್ರವಾಗಿರಬೇಕು. (ಇನ್ನು ಬಹುಸಂಖ್ಯೆಯನ್ನು ಸ್ಥಾಯಿಯಾಗಿ ಕಾಪಾಡಿಕೊಳ್ಳುವ ಒಂದು ವಿಧಾನ, 'ಪಕ್ಷ') ಅಂದಾಗ ಅಪಕ್ಷ ಸದಸ್ಯನ ಮತವು ಪಕ್ಷೀಯ ಸದಸ್ಯನ ಮತದಷ್ಟೇ ರಾಜಕೀಯ ಅಥವಾ ಸರಕಾರೀ ಮಹತ್ವದ್ದಾಗಿದೆ.

ರಾಜ್ಯಪಾಲನು, ಸಂವಿಧಾನದ ೧೬೪ನೆಯ ಕಲಮಿನಂತೆ, ಮುಖ್ಯಮಂತ್ರಿಯನ್ನು "ನೇಮಿಸು"ತ್ತಾನೆ. ಮತ್ತು ಇತರ ಮಂತ್ರಿಗಳನ್ನು ಈ ಮುಖ್ಯಮಂತ್ರಿಯು ಒಪ್ಪಿಸಿದ ಸೂಚಿ (ಯಾದಿ)ಯಂತೆ ನೇಮಿಸುತ್ತಾನೆ. ಪಕ್ಷದ ಒಳಕಟ್ಟು ಅದರ ಬಹುಮತದ ಬೆಂಬಲ ಇವುಗಳ ಉಸಾಬರಿ ಮುಖ್ಯ ಅಥವಾ ಪ್ರಧಾನ ಮಂತ್ರಿಗೆ ಹೊರತು, ರಾಜ್ಯಪಾಲನಿಗೆ (ಅಥವಾ ರಾಷ್ಟ್ರಾಧ್ಯಕ್ಷನಿಗೆ) ಇರುವದಿಲ್ಲ.

## ಅಪಕ್ಷೀಯರದ್ದೇ ಮೇಲ್ಮೈ

ಸ್ವಾರಸ್ಯದ ಸಂಗತಿಯೇನೆಂದರೆ, ರಾಜ್ಯಪಾಲನು ಯಾರನ್ನು ಮುಖ್ಯಮುಂತ್ರಿಯಾಗಿ ನೇಮಿಸತಕ್ಕದ್ದೆಂಬ ಕುರಿತು ಯಾವದೆ ನಿಯಮ ಅಥವಾ ಬಂಧನ ಸಂವಿಧಾನದಲ್ಲಿ ಹಾಕಿ ಕೊಟ್ಟದ್ದಿಲ್ಲ! ಆ ಕೆಲಸ ಕೇವಲ ರಾಜ್ಯಪಾಲನ ಸಾರಸಾರ ವಿವೇಕಕ್ಕೆ (ಡಿಸ್‌ಕ್ರಿಶನ್) ಒಪ್ಪಿದ್ದು. ಮತ್ತು ಸಂವಿಧಾನದ ೧೬೩(೨) ಕಲಮಿನನ್ವಯ ರಾಜ್ಯಪಾಲನು ತನ್ನ ಈ ಡಿಸ್‌ಕ್ರಿಶನ್ನಿಗೆ ಅನುಗುಣವಾಗಿ ನೀಡಿದ ನಿರ್ಣಯ ಮಾಡಿದ ಕಾರ್ಯ ಅಂತಿಮವಾದದ್ದು. ಅದನ್ನು ರಾಷ್ಟ್ರಪತಿಯೂ ಬದಲಿಸಲಾರನು! ಚುನಾವಣೆಗೆ ನಿಲ್ಲದ ಆರಿಸಿ ಬಾರದ ವ್ಯಕ್ತಿಯನ್ನೂ ರಾಜ್ಯಪಾಲನು ಮುಖ್ಯಮಂತ್ರಿಯಾಗಿ ಮಾಡಿಕೊಳ್ಳಬಲ್ಲನು. ಆದರೆ ಆನಂತರ ೬ ತಿಂಗಳೊಳಗಾಗಿ ಆತ ಆರಿಸಿ ಬರಬೇಕು. ಇಲ್ಲವಾದರೆ ಅವನ ಮಂತ್ರಿತ್ವ ಉಳಿಯುವದಿಲ್ಲ.

ಇದರಿಂದ ಸಿದ್ಧವಾಗುವದೇನೆಂದರೆ ಪಕ್ಷೀಯ ಪ್ರಜಾಪ್ರಭುತ್ವದ ಪದ್ಧತಿಯು ರೂಢಿಯಾಗಿ ಬಂದಿದ್ದರೂ ಸಂಸದೀಯವಾಗಿ ಅಪಕ್ಷೀಯ ಸದಸ್ಯನಿಗೇ ಪ್ರಭುತ್ವ ಸ್ವತಃ ಸಿದ್ಧ. ಇನ್ನು ಇಂಥವರಿಂದ ರಚಿಸಿದ ಸರಕಾರವನ್ನು ಶಾಸನ ಸಭೆಯು ಅವಿಶ್ವಾಸ ಗೊತ್ತುವಳಿಯಿಂದ ತಳ್ಳಿಹಾಕಬಹುದು.

## ಉದಾಹರಣೆಗಳು

ರಾಜ್ಯಸ್ಥಾನದಲ್ಲಿ ಈ ಅಪಕ್ಷರೇ ೧೫ ಮಂದಿ ರಾಜಕೀಯ ಬಿಕ್ಕಟ್ಟಿಗೆ ಕಾರಣರಾದರು. ಮೊನ್ನೆ ಪಂಜಾಬದಲ್ಲಿಯ ಕಾಂಗ್ರೆಸ್ಸೇತರ ಸರಕಾರದ ಪಕ್ಷದಲ್ಲಿ ಸೇರಿದ್ದ ೫ ಮಂದಿ ಅಪಕ್ಷ ಸದಸ್ಯರು ಭಾಷಾವಿಷಯಕ ಗೊತ್ತುವಳಿಯ ಮೇಲೆ ವಿರೋಧೀ ಪಕ್ಷ (ಕಾಂಗ್ರೆಸ್)ದೊಂದಿಗೆ ಮತದಾನ ಮಾಡಿದರು. ಆಗ ಸರಕಾರೀ ಗೊತ್ತುವಳಿ ಬಿದ್ದು ಹೋಯಿತು. ಇದು ಸರಕಾರದ್ದೇ ಸೋಲಾಯಿತೆಂದು ವಿರೋಧಿಗಳ ಆಗ್ರಹ.

ಆ ಆಗ್ರಹದ ಬಿಕ್ಕಟ್ಟನ್ನು ಮುಂದೆ ದೂಡಲು ಮುಖ್ಯಮಂತ್ರಿ ಶ್ರೀ ಗುರುನಾಮ ಸಿಂಗರು ವಿಧಾನಸಭೆಯನ್ನೆ ಮುಂದೂಡಿದರು. ಮತದಾನಕ್ಕೆ ತಾನು ಸ್ವಾತಂತ್ರ್ಯ ನೀಡಿದ್ದರಿಂದ ಅಪಕ್ಷರು ವಿಪಕ್ಷಕ್ಕೆ ಮತ ನೀಡಿದ್ದು ಸರಕಾರದ ವಿರುದ್ಧ ಅವಿಶ್ವಾಸವಲ್ಲ. ಮುಂದೆ ಮೇ ಕೊನೆಯ ಅಥವಾ ಜೂನ್ ಮೊದಲನೆಯ ವಾರದಲ್ಲಿ ವಿಧಾನಸಭೆ ಸೇರಿದಾಗ ಅವಿಶ್ವಾಸ ಗೊತ್ತುವಳಿಯನ್ನೆ ತಂದು ಸಂಯುಕ್ತ ರಂಗದ ಸರಕಾರವನ್ನು ತಳ್ಳಬಹುದು. ಆಗ ಸರಕಾರದ ಒಂದಾದರೂ ಆರ್ಥಿಕ ಬೇಡಿಕೆಯನ್ನು ಸಭೆಯು ತಳ್ಳಿದರೆ ತಾವು ಸರಕಾರ ಬಿಟ್ಟುಕೊಡುವದಾಗಿ ಶ್ರೀ ಗುರುನಾಮ ಸಿಂಗರು ಹೇಳಿಕೆ ಇತ್ತದ್ದು ಗಮನೀಯವಾಗಿದೆ.

## ನಾಟಕ ಮತ್ತು ನಟರು

ಇಲ್ಲಿ ಅವರ ಸಾಧನೆ ಏನೆಂದರೆ ಅಪಕ್ಷರು ಒಂದು ಪ್ರಶ್ನೆಯ ಕುರಿತು ಕಾಂಗ್ರೆಸ್ಸಿಗೆ ಪರವಾಗಿ ಮತ ನೀಡಿದ್ದರೂ ಅವರು ಆ ಪಕ್ಷಕ್ಕೆ ದಾಟಿ ಹೋಗಿಲ್ಲ. ಸಂಯುಕ್ತ ರಂಗಕ್ಕೇ ವಿಧೇಯರಿದ್ದಾರೆ. ಅಲ್ಲದೆ ಕಾಂಗ್ರೆಸ್ ಪಕ್ಷದ ಇನ್ನಿಬ್ಬರು ತಮ್ಮ ರಂಗದಲ್ಲಿ ಪ್ರವೇಶ ಮಾಡಿದ್ದಾರೆ.

ಅಂದರೆ ಅಪಕ್ಷ ಸದಸ್ಯರಂತೆಯೇ ಈ ಚಂಚಲವೃತ್ತಿಯ ಪಕ್ಷ ಸದಸ್ಯರೂ ಸಂಸದೀಯ ಪ್ರಜಾಪ್ರಭುತ್ವದ ಸ್ಥಿರತೆಗೆ ಮಾರಕವಾಗಿದ್ದಾರೆ. ಅಧಿಕಾರ ಪ್ರಾಪ್ತಿಯ ಪಾಲಿಗಾಗಿ ಅತ್ತ-ಇತ್ತ ಉರುಳುವ ಇಂಥ ಸದಸ್ಯರಿಗೆ ಯಾವ ನಿಷ್ಠೆಯೂ ಇರುವದಿಲ್ಲ. ನಾಟಕ ಕಂಪನಿಗಳು ನಟರನ್ನು ಓಡಿಸಿಕೊಂಡು ಹೋಗುವಂತೆ ಈ ಪಕ್ಷಗಳ ಹಗರಣ ನಡೆಯುತ್ತದೆ.

ಹಾಗಾದರೆ ಇಂಥ ಭ್ರಷ್ಟಾಚಾರಕ್ಕೆ ಮದ್ದು ಯಾವದು? "ಮೂರ್ಖಸ್ಯ ಸಾಪ್ತ್ಯಾಷಧರ್" ಆದರೆ ಧೂರ್ತರಿಗೆ? ಸಂವಿಧಾನದಲ್ಲಿ ಪಕ್ಷೀಯ ಪರಿಭಾಷೆಯನ್ನು ಸೇರಿಸಬೇಕೇ? ಪಕ್ಷಗಾರಿಕೆಯ ರಾಜಕಾರಣವನ್ನೇ ಬಿಟ್ಟುಕೊಡಬೇಕೇ? ದಿವಂಗತ ಮಾನವೇಂದ್ರನಾಥ ರಾಯರು ಹೀಗೆ "ಪಾರ್ಟಿ ಪೊಲಿಟಿಕ್ಸ್"ದ ವಿರುದ್ಧ ವೈಚಾರಿಕ ಬಂಡು ಹೂಡಿದ್ದರು. ಪ್ರಜೆ ಮತ್ತು ಪ್ರಭುತ್ವ ಇವುಗಳ ನಡುವೆ ಈ ಪಕ್ಷವೆಂಬ ಬಕಾಸುರ ಒಲಿದು ನಿಂತಿದ್ದಾನೆ. ಅವನ ವಧೆ ಆಗಬೇಕು-ಎಂದು ಕಹಳೆ ಊದಿದರು. ಅದನ್ನೇ ಜೀವನದಾನೀ ಶ್ರೀ ಜಯಪ್ರಕಾಶ ನಾರಾಯಣರು ಇಂದು ಪ್ರತಿಧ್ವನಿಸುತ್ತಿದ್ದಾರೆ.

ಆದರೆ ಇದು ಆದರ್ಶವಾದದ ಸ್ವಪ್ನದರ್ಶಿಗಳ ಮಾರ್ಗವೆನಿಸಬಹುದು. ಆದ್ದರಿಂದ ಸಂವಿಧಾನದಲ್ಲಿ ಪಕ್ಷಗಾರಿಕೆಯನ್ನು ಪ್ರಸ್ತಾಪಿಸುವದಕ್ಕಿಂತ ಶಾಸನಸಭೆಯ ಕಾರ್ಯಕಲಾಪಗಳ ನಿಯಮಾವಲಿಯಲ್ಲಿ ಹೀಗೆ ತಿದ್ದುಪಡಿಯಾಗಲಿ.

೧. ಅಪಕ್ಷರೆಂದು ಚುನಾಯಿತರಾದ ಹುರಿಯಾಳುಗಳು ಯಾವಾಗಲೂ ಅಪಕ್ಷವಾಗಿಯೇ ಉಳಿಯತಕ್ಕದ್ದು (ಆ ಸಭೆಯ ಅವಧಿಯಲ್ಲಿ).

೨. ಅಥವಾ ಪಕ್ಷವೊಂದನ್ನು ಸೇರುವುದಾದರೆ ಮಂತ್ರಿಮಂಡಳದ ರಚನೆಯ ಮೊದಲಿಗೇ ಸೇರಿ ಬಿಡತಕ್ಕದ್ದು. ಆಮೇಲೆ ಮತ್ತೆ ಪಕ್ಷಾಂತರ ಮಾಡತಕ್ಕದ್ದಲ್ಲ.

೩. ಅದೇ ರೀತಿ, ಒಂದು ಪಕ್ಷದ ತಿಕೇಟಿನ ಮೇಲೆ ಅದರ ಧ್ಯೇಯಧೋರಣೆ ಕಾರ್ಯಕ್ರಮಗಳನ್ನು ಒಪ್ಪಿ ಮತದಾರರನ್ನೂ ಅದಕ್ಕೆ ಒಪ್ಪಿಸಿ ಆರಿಸ ಹೋದ ಸದಸ್ಯ ಇನ್ನೊಂದು ಪಕ್ಷವನ್ನು ಸೇರತಕ್ಕದ್ದಲ್ಲ. ಬೇರೆ ಪಕ್ಷ ಸೇರಲಿಕ್ಕೆ ಅವನಿಗೆ ಅವನ ಮತದಾರ ಸಂಘವು ಆದೇಶವಿತ್ತದ್ದಲ್ಲ. ಹಾಗೆ ಪಕ್ಷಾಂತರ ಮಾಡುವ ಮುಂಚೆ ಆತ ಸದಸ್ಯತ್ವವನ್ನು ಬಿಟ್ಟುಕೊಟ್ಟು ಮತ್ತೆ ಹೊಸ ಪಕ್ಷದ ಹೆಸರಿನಲ್ಲಿ ಮತಗಳನ್ನು ಬೇಡಬೇಕು. ಇಲ್ಲಿ ೩ನೆಯ ವಿಧಾನ ಆದರ್ಶಪ್ರಾಯವೆನಿಸಿದರೂ ೧, ೨, ಶೀಘ್ರ ಆಚರಣೆಯಲ್ಲಿ ಬರಬಾರದೇಕೆ?

●

('ಜನಸೇವಕ' ೧೯೬೭)

# ಅರ್ಥಶಾಸ್ತ್ರಜ್ಞನ ಶಾಸ್ತ್ರಾರ್ಥ....

ಕೌಟಿಲ್ಯನು 'ಅರ್ಥಶಾಸ್ತ್ರ'ವನ್ನು ಬರೆದಾಗ ಇಟ್ಟುಕೊಂಡ ಉದ್ದೇಶ ರಾಜ್ಯ ವ್ಯವಸ್ಥೆಯ ಹಾಗೂ ಸಮಾಜ ರಚನೆಯ ಪ್ರಶ್ನೆಗಳ ಇತ್ಯರ್ಥವೇ ಆಗಿತ್ತೇ ಹೊರತು, ಕೇವಲ ಹಣಕಾಸಿನ ಸಂಪನ್ಮೂಲಗಳ, ಧನದ ಉತ್ಪಾದನೆ-ವಿತರಣೆಗಳ ನಿಯಮ-ನಿಯಮಗಳ ಚರ್ಚೆ ಅಲ್ಲ. ಸಮಾಜ ಶಾಸ್ತ್ರದ ಬುಡಕ್ಕೆ ಆರ್ಥಿಕ ಉತ್ಪಾದನೆಯ ಸಾಧನಗಳ ಒಡೆತನದ ಏರು ಪೇರುಗಳು ಇರುತ್ತವೆಂಬುದು ನಿಜ. ಈ ಆರ್ಥಿಕ ಹಂದರವೆ ರಾಜಕೀಯದ ಇಟ್ಟಳೆ ಕಟ್ಟಳೆಗಳನ್ನು ಬಹುಮಟ್ಟಿಗೆ ರೂಪಿಸುತ್ತ ವೆಂಬುದೂ ನಿಜ. ಆದರೆ ಅಷ್ಟೇ ನಿಜವಾದ ಇನ್ನೊಂದು ಅಂಶವೆಂದರೆ ದೇಶದ ಅಥವಾ ಜನಾಂಗದ ಆರ್ಥಿಕ ಅಭಿವೃದ್ಧಿ ವಿಕಾಸದ ಪವಾಡ ಕೇವಲ ಅರ್ಥ ಶಾಸ್ತ್ರದಿಂದ ಅಥವಾ ಅರ್ಥ ಶಾಸ್ತ್ರಜ್ಞರಿಂದ ಒದಗಿ ಬರುವದಿಲ್ಲ, ಸತ್ತೆಯ ಬುಡಕಟ್ಟು ಸಮತೋಲ ರಾಜಕೀಯ ಪಕ್ಷ-ಪದ್ಧತಿಗಳ ಸಂದರ್ಭ ಇವೆಲ್ಲವೂ ಒಂದು ಸಮಾಜದ ಆರ್ಥಿಕ ಅಭ್ಯುದಯಕ್ಕೆ ಆಸ್ಕರವನ್ನೂ ಆಕಾರವನ್ನೂ ಕಲ್ಪಿಸಿಕೊಡುತ್ತದೆ. ನದಿಯ ವೇಗಕ್ಕೆ ಗಾತ್ರಕ್ಕೆ ಅದರ ಉಗಮದ ಸ್ಥಿತಿಗತಿ ಕಾರಣವಾಗುವದು. ಆದರೂ, ಅದರ ದಿಕ್ಕಿಗೆ ಪಾತ್ರಕ್ಕೆ ರೂಪ ಕೊಡುವದು ದಂಡೆಗಳ ಹಾಗೂ ಅದು ಹರಿದು ಬರುವ ನೆಲದ ಪಾತಳಿಯ ಇತಿಮಿತಿಗಳೇ ಸರಿ.

ಅಂದರೆ ನಮ್ಮ ದೇಶದಲ್ಲಿ ಕಂಡು ಬರುವ ಒದಗಿ ಬರಬೇಕಾದ ಆರ್ಥಿಕ ಅಭಿವೃದ್ಧಿಯ ವಿಕಾಸದಲ್ಲಿ ಅರ್ಥ ಶಾಸ್ತ್ರಜ್ಞರ ಸ್ಥಾನವೇನು? ಪಾತ್ರವೇನು? ಈ ಪ್ರಶ್ನೆಯ ಉತ್ತರ ತುಂಬ ಸೋಜಿಗವಾಗಿದೆ- ಅದು ಅರ್ಥ ಶಾಸ್ತ್ರಜ್ಞನ ಆತ್ಮಾಸಂಭಾವನೆಗೆ ಸಾಕಷ್ಟು ಬೇಸರದ್ದೂ ಆಗಿದೆ.

೧೦-೧೫ ವರ್ಷಗಳ ಹಿಂದೆ, ೧೯೬೦ರವರೆಗೂ ನಮ್ಮ ಅಭಿವೃದ್ಧಿಯ ಕನಸು ಕಾಣುವವರೆಲ್ಲ ಅರ್ಥಶಾಸ್ತ್ರಜ್ಞರಲ್ಲಿ ಅತೀವ ಶ್ರದ್ಧೆಯನ್ನು ಇಟ್ಟಿದ್ದರು. ಸರಕಾರಗಳ ಸಂತೆಯಲ್ಲಿ ಆರ್ಥಿಕ ತಜ್ಞನ ಬೆಲೆ ತುಂಬ ಏರಿ ನಿಂತಿತ್ತು. ಆದರೆ ರೂಪಾಯಿಯ ಮೌಲ್ಯವಿಚ್ಛೇದನೆಯೊಂದಿಗೆ ಅರ್ಥಶಾಸ್ತ್ರಿಯದೂ ಮೌಲ್ಯ ತಿಳಿದು ಬಿಟ್ಟಿದೆ. ಹಾಗೆ ಆಗಲು ಕಾರಣವೇನು?

ಆರಂಭದಲ್ಲಿ ಸ್ವಾತಂತ್ರ್ಯ ಪ್ರಾಪ್ತಿಯ ನಂತರದ ನಮ್ಮ ಕಿಶೋರಾವಸ್ಥೆಯಲ್ಲಿ ಎರಡು ಸಂಗತಿಗಳು ಈ ಅರ್ಥ ಶಾಸ್ತ್ರಜ್ಞರ ಅತ್ಯಂತಿಕ ಮಹತ್ವಕ್ಕೆ ಇಂಬುಗೊಟ್ಟವು. ಒಂದು ಅಂದಿನ ನಮ್ಮ ಪ್ರಧಾನಿಗಳ ಪ್ರವೃತ್ತಿ. ಇನ್ನೊಂದು ನಮ್ಮ ರಾಜಕೀಯ ಮುಗ್ಧತೆ. ಜವಾಹರಲಾಲ ನೆಹರು ಯಾವಾಗಲೂ ಸಾಹಿತ್ಯಪ್ರೇಮಿ ಶಿಕ್ಷಣ ಪ್ರೇಮಿ ಉಚ್ಚ ಬೌದ್ಧಿಕ ವಿಚಾರಸರಣಿಗೆ ತಜ್ಞರ ಪ್ರಾಜ್ಞರ ಲೇಖನ ಭಾಷಣಗಳಿಗೆ ಮೋಹಿತರು. ಅಂದಾಗ ಅವರ ಸುತ್ತಲೂ ಪಂಡಿತರ ಶಾಸ್ತ್ರಜ್ಞರ ಹಾಗೂ ವಿಶಿಷ್ಟ ತಜ್ಞರ ವಲಯ ಉಂಟಾಗುವದು ಸ್ವಾಭಾವಿಕ. ದೇಶೀ ವಿದೇಶೀ ಆರ್ಥಿಕ ತಜ್ಞರು ಈಗ ಆಗಾಗ್ಗೆ ಹೊಸ ದಿಲ್ಲಿಗೆ ಬಂದು ಹೋಗುತ್ತಿದ್ದರು. ಅಲ್ಲಿ ಅವರನ್ನು ಕೇಂದ್ರ ಸರಕಾರ ಆಗ್ರಹದಿಂದ ಬರಮಾಡಿಕೊಳ್ಳುತಿತ್ತು. ಅವರು ನಮ್ಮ ದೇಶದ ಆರ್ಥಿಕ ಬೆಳವಣಿಗೆಯ ಸೊತ್ತು ಗುರಿ ಅದರ ಗತ್ತು-ಕುತ್ತುಗಳನ್ನು ಅಭ್ಯಸಿಸಿ ಸರಕಾರಕ್ಕೂ ಸಾರ್ವಜನಿಕರಿಗೂ ಧಾರಾಳವಾಗಿ ತತ್ವಬೋಧನೆ ಮಾಡುತಿದ್ದರು.

ವಿದೇಶೀ ಆರ್ಥಿಕತಜ್ಞರಿಗೆ ಪ್ರಪಂಚದಲ್ಲಿ ಇಲ್ಲಿಯಷ್ಟು ಇನ್ನೆಲ್ಲಿಯೂ ಭಕ್ತಿ ಶ್ರದ್ಧೆಯಿಂದ

ಶ್ರವಣ ಸ್ವಾಗತಸಿಗುತ್ತಿರಲಿಲ್ಲ. ಅನೇಕ ಸಲ ಬರಿಯ ಕೇಂದ್ರ ಮಂತ್ರಿ ಮಂಡಳವೇ ಇಂಥ ತಜ್ಞರ ಭಾಷಣಗಳ ವಿಶೇಷ ಚಿಕಿತ್ಸೆಗೆ ಗುರಿ ಆಗುತಿತ್ತು. ಧನ ವಿನಿಯೋಗದ ಯುಕ್ತಿ ಕ್ರಮ, ಅಥವಾ ನ್ಯಾಯ್ಯ ಉಳಿತಾಯ ದೇವ್ಯಾಟಗಳ ತತ್ವ-ಮುಂತಾದ ಶುದ್ಧ ಶಾಸ್ತ್ರೀಯ ಮೀಮಾಂಸೆಯನ್ನು ಬಡ ಮಂತ್ರಿ-ಉಪಮಂತ್ರಿಗಳು ಭಾವಿಕತನದಿಂದ ಕೇಳುತಿದ್ದರು. ವಿದೇಶೀ ತಜ್ಞರು ಬೆಟ್ಟಿ ಕೊಡದಿದ್ದ ಪ್ರಸಂಗದಲ್ಲಿ ದೇಶೀತಜ್ಞರು ಈ ಪುಣ್ಯ ಕಾರ್ಯವನ್ನು ಈಡೇರಿಸುತಿದ್ದರು.

ಪ್ರಧಾನಿಗಳೊಂದಿಗೆ ಚರ್ಚಿಸುವದೇನು ಯೋಜನಾಯೋಗಕ್ಕೆ ತಮ್ಮ ಸಲಹೆ ಸೂಚನೆಗಳನ್ನು ನೀಡುವದೇನು, ರಾಜ್ಯ ಸರಕಾರಗಳನ್ನು ಸುದ್ದಿಸಂದರ್ಶನಗಳಲ್ಲಿ ಟೀಕಿಸುವದೇನು. ರಾಜಕೀಯ ಪಕ್ಷಗಳಿಗೆ ಉಪದೇಶಿಸುವದೇನು ವಿಮಾಮಗಳಲ್ಲಿಯೇ ಬಂದಿಳಿದು ವಿಮಾನಗಳಲ್ಲಿಯೇ ತಿರುಗಿ ಹೋಗುವದೇನು-ಮರು ವರ್ಷ ಮತ್ತೆ ಬರುವದೇನು? ಬೆಳವಣಿಗೆಗೆ ಸಂಬಂಧಪಟ್ಟ ಅರ್ಥಶಾಸ್ತ್ರ ಒಂದು ಬೆಳೆದು ಬಂದಿತು. ಪಾಶ್ಚಾತ್ಯ ಪಂಡಿತರು ಗ್ರಂಥಗಳನ್ನು ಬರೆದರು. ನಾವು ಅವನ್ನು ಚರ್ವಣ ಮಾಡಿದೆವು. ಅಲ್ಲಿಂದ ಬಂದುಹೋದ ಪಂಡಿತ ಪ್ರಮುಖರ ಸಲಹೆ ಸೂಚನೆ ಅನುಪಾನ ಉಪಚಾರ ಪತ್ರಿಕೆಗಳನ್ನೆಲ್ಲ ನಮ್ಮ ರಾಜಕಾರಣಿಗಳು ರಾಮನಾಜ್ಞೆಯಂತೆ ಶಿರಸಾವಹಿಸಿ ಹನುಮನಂತೆ ಶತಯೋಜನಾ ಬದ್ಧ ಸಮುದ್ರವನ್ನು ದಾಟಲು ಹಾರಿದೆವು!

ಆದರೆ ಒಂದು ಮರ್ಮದ ಮಾತನ್ನು ಮರೆತೆವು. ಈ ಬರಹದ ಆರಂಭದಲ್ಲಿ ಬರೆದ ಮಾತದು. ಕೇವಲ ಅರ್ಥಶಾಸ್ತ್ರಜ್ಞರನ್ನು ದೇಶದಾದ್ಯಂತ ನಮ್ಮ ಕೇವಲ ತಾಂತ್ರಿಕ ತಜ್ಞತೆಯ ದೃಷ್ಟಿಯಿಂದ ಈ ಸಮಸ್ಯೆಯನ್ನು ನೋಡಿ, ಸೆಮಿನಾರು-ಸಿಂಪೋಜಿಯಂಗಳ ವಿಚಾರ ಸಂಕಿರಣವೆಂಬ ಸಂಕೀರ್ಣ ಸಂಭ್ರಮದಲ್ಲಿ ಚರ್ಚೆ ನಡೆಯಿಸಿ ದೇಶದ ಅಭಿವೃದ್ಧಿ ಭರದಿಂದ ಸಾಗುವದೆಂಬ ಭ್ರಮೆಯಲ್ಲಿ ಆರ್ಥಿಕ ಬೆಳವಣಿಗೆ ರಾಜಕೀಯ ವಿಕಾಸ ಕ್ರಮದ ಫಲವೆಂಬುದನ್ನು ಪೂರ್ತಿ ಮರೆತೆವು. ಸಮಾಜ ಶಾಸ್ತ್ರದ ಒಂದು ಅಂಗವಾದ ರಾಜಕಾರಣವು ಪ್ರಚಲಿತ ಹಾಗೂ ಪ್ರತಿಷ್ಠಿತ ಅರ್ಥವ್ಯವಸ್ಥೆಯ ನಿಯಮನ ನಿಯಂತ್ರಣಗಳಂತೆ ಅದರ ನವ ನಿರ್ಮಾಣಕ್ಕೂ ಒಂದು ಆ ಪ್ರೇರಕ ಶಕ್ತಿ ಎಂಬುದನ್ನು ಕಡೆಗಣಿಸಿದೆವು.

ಈ ಭ್ರಾಂತಿಗೂ ಮರವಿಗೂ ೧೯೫೫ರ ನಮ್ಮ ಆಹಾರ ಧಾನ್ಯದ ಉತ್ತಮ ಬೆಳೆಯ ಈ ಸಂತೃಪ್ತಿಯೂ ಸಹಾಯಕವಾಯಿತು. ನಮ್ಮ ಆಗಿನ ಸ್ವಾಸ್ಥ್ಯವನ್ನು ಕಂಡು ಅನೇಕ ವಿದೇಶೀ ಸರಕಾರಗಳು ನಮಗೆ ನೆರವು ನೀಡಲು ಮುಂದೆ ಬಂದವು. ಅದು ನಮಗೆ ಹೊನ್ನಿನ ಶೂಲವಾಯಿತು.

ಗ್ರಾಂಥಿಕ ಸನ್ನಿವಾತದಿಂದ ಪೀಡಿತರಾದ ನಮ್ಮ ಅಧಿಕೃತ ಅರ್ಥಶಾಸ್ತ್ರಜ್ಞರೂ ಸಲಹೆಗಾರರೂ, ವಿದೇಶೀ ಧನ ಸಹಾಯದಿಂದ ಸ್ವದೇಶೀ ಉಳಿತಾಯಕ್ಕೆ ಹೆಚ್ಚಿನ ಪೋಷಣೆ. ಅದರಿಂದ ಸರಾಸರಿ ತಲಾ-ವರಮಾನವು ಹೆಚ್ಚುವುದಕ್ಕೆ ಅನುಕೂಲ,-ಆ ಮೂಲಕ ಕ್ರಮೇಣ ವಿದೇಶೀ ನೆರವಿನ ಬೇಡಿಕೆ ಕಡಿಮೆ ಆಗಿ ಅದು ಬೇಡವಾಗುವದು-ಹೀಗೆಲ್ಲ ರೋಗಿಯಾದ ಮಿತ್ರನ ಭೆಟ್ಟಿಗೆ ಹೋದ "ಹಿತೋಪದೇಶದ" ಮೂರ್ಖ ಕಿವುಡನಂತೆ ಲೆಕ್ಕ ಹಾಕಿದರು. ಅಂದಾಜು ಕಟ್ಟಿದರು.

ಆದರೆ ಯಾರು ಇಂಥ ಪ್ರಪಂಚ ಹಾಗೂ ಅಖಂಡ ವಿದೇಶಿ ಧನಧಾನ್ಯ ಸಹಾಯದಿಂದ ದೇಶದಲ್ಲಿ ಹುಟ್ಟಬಹುದಾದ ಹಬ್ಬ ಬಹುದಾದ ಮಾನಸಿಕ ಸಾಮಾಜಿಕ ರಂಗಗಳನ್ನು ಊಹಿಸಲೇ ಇಲ್ಲ. ದೇಶದ ಆರ್ಥಿಕ ಅರ್ಜನೆಯ ಉತ್ಪಾದನೆಯ ಕಾರ್ಯ ಕ್ರಮದಲ್ಲಿ ಸೇರಿಕೊಳ್ಳುವ ಆಲಸ್ಯ

ಶೈಥಿಲ್ಯ, ಅಲಕ್ಷ್ಯ, ಪರಾವಲಂಬನ ಹಾಗೂ ತಾತ್ಕಾಲಿಕ ದಿನಗೂಡುವ, ಲಾಭಗಟ್ಟಿಸಿಕೊಳ್ಳುವ ಪ್ರವೃತ್ತಿ-ಇವುಗಳ ಕಲ್ಪನೆ ಮಾಡಿ ಕೊಳ್ಳಲೇ ಇಲ್ಲ. ಈ ದೋಷಗಳು ದೇಶದ ರಕ್ತದಲ್ಲಿ ವಿಷದಂತೆ ಬೆಳೆದು ಬೆರೆತು ಬೇರೂರಿದವು. ಇದನ್ನು ನಿರಕ್ಷಿಸಲಾರದವರು ನಿವಾರಿಸಬಲ್ಲರೇ? ನಿವಾರಿಸ ಲಾರದವರು ಪರಿಹರಿಸ ಬಲ್ಲರೇ?

ನಮ್ಮ ಅರ್ಥಶಾಸ್ತ್ರಜ್ಞರು ನಮ್ಮ ರಾಜ ಕಾರಣಗಳಂತೆ ದೇಶದ ಒಂದು ಸಣ್ಣ ಆತ್ಮಸಂತುಷ್ಟ ಆತ್ಮಸಂಭಾವಿತ ವರ್ಗದಿಂದ ಬಂದವರು. ಅವರು ಹೆಚ್ಚೆಂನರೆ ಯಾವ ಸಮಸ್ಯೆಗೂ ವಿವರವಾಗಿ ವಿಶಾದವಾಗಿ ಲಲಿತವಾಗಿ ಸ್ಪಷ್ಟೀಕರಣ ಕೊಡಬಲ್ಲವರು. ಇವರಲ್ಲಿ ಅನೇಕರು ವ್ಯಾವಸಾಯಿಕ ಅರ್ಥ ತಜ್ಞರು ಪ್ರಾಧ್ಯಾಪಕರು-ಪಠ್ಯಪುಸ್ತಕ ಲೇಖಕರು. ಇನ್ನು ಕೆಲವು ಹಿರಿಯ ಉದ್ದಿಮೆಗಳಲ್ಲಿ ಬೆಳಗಿ ಬುದ್ಧಿ ಕಲಿತ ವ್ಯಾವಹಾರಿಕ ಅರ್ಥ ತಜ್ಞರು. ರಾಜಕಾರಣಿಗಳು ಸಮಸ್ಯೆ ಉಂಟುಮಾಡುವವರು. ವ್ಯಾವಸಾಯಿಕ ಅರ್ಥತಜ್ಞರು ಸಮಸ್ಯೆಗೆ ಭಾಷ್ಯ ಬರೆಯುವವರು. ವ್ಯಾವಹಾರಿಕ ಧೂರ್ತರು ಟೀಕಿಸುವವರು! ಪರಿಹಾರದ ಪಾಡು ಬಯಲನ್ನೇ ಕೇಳುವಂತಾಯಿತು.

ಆದರೆ ಇಂಥ ಹಗುರಾದ ಗ್ರಾಂಥಿಕ ಸ್ವರೂಪದ ಶಬ್ದಜಾಲದಲ್ಲಿ ಉಯ್ಯಾಲೆಆಡುವ ನಮ್ಮ ಆರ್ಥಿಕ ಪ್ರಜ್ಞೆಗೆ ಭೂತದ ಪೆಟ್ಟು ಬಿದ್ದದ್ದೂ ೧೯೬೨ರಲ್ಲಿ! ಅತ್ತ ಹಿಮಾಲಯದಲ್ಲಿ ಚೀನೀಯರು ನಮ್ಮ ಹೆಮ್ಮೆಯನ್ನು ಜಜ್ಜುತ್ತಿದ್ದಾಗ, ಇತ್ತ ೧೯೪೭ರಿಂದ ೬೮ ರವರೆಗಿನ ನಮ್ಮ ಆರ್ಥಿಕ ಪ್ರಗತಿ ಎಂಬುದರಲ್ಲಿ ಸತ್ಯಕ್ಕಿಂತ ಸ್ವಪ್ನವೇ ಹೆಚ್ಚಾಗಿತ್ತೆಂದು ಫಕ್ಕನೆ ಕಂಡು ಬಂದಿತು! ನಮ್ಮ ಹೇಳ ಹೆಸರಿನ ಆರ್ಥಿಕ ಪ್ರಗತಿಯು ಆ ವರ್ಷ ಒಮ್ಮೆಲೇ ಭಾರವಾಗಿ ಬೆಳೆದ ಸಂರಕ್ಷಣೆಯ ವೆಚ್ಚವನ್ನು ಹೊರದಾಯಿತು. ಅತಿ ವ್ಯವಹಾರಕ್ಕೆ ರಾಷ್ಟ್ರೀಯ ಹೆದ್ದಾರಿ ತೆರೆಯಿತು. ಅನಾವೃಷ್ಟಿ, ಬರಗಾಲ, ಪೈರು ಗ್ರೇಡುಗಳ ಪರಂಪರೆಯನ್ನು ಅದು ಇದುರಿಸದಾಯಿತು. ಇಷ್ಟೇ ಅಲ್ಲ. ಮೂಲ ಅಂದಾಜೇ ತಪ್ಪಿತು. ವಿದೇಶೀ ಧನ ಸಹಾಯ ಹೆಚ್ಚಿದಂತೆ ದೇಶದಲ್ಲಿಯ ಉಳಿತಾಯ ಹೆಚ್ಚಲೇ ಇಲ್ಲ. ಅದು ತಿರುಗಿ ಕಡಿಮೆ ಆಯಿತು. ಇದರೊಂದಿಗೆ ವಿದೇಶೀ ಧನಸಹಾಯವೂ ಒಂದೇ ಮಟ್ಟದಲ್ಲಿ ಒಂದೇ ಮೊತ್ತದಲ್ಲಿ ಬರುತ್ತ ಉಳಿಯಲಿಲ್ಲ. ಅದೂ ಅಂತರ್ ರಾಷ್ಟ್ರೀಯ ರಾಜಕೀಯದ ಅಡ್ಡಗಾಳಿಗಳಿಗೆ ನಮ್ಮ ತೂಗುಯ್ಯಾಲೆಯಂಥ ತಾಟಸ್ಥ್ಯ ನೀತಿಯ ಜೀಕಿಗೆ ಒಡ್ಡಿದ ದೀಪವಾಯಿತು. ವಿಯಟ್‌ನಾಮದ ಯುದ್ಧ, ಅರಬ ರಾಷ್ಟ್ರೀಯಗಳ ಕುರಿತ ನಿಲುಮೆ, ಶೀತಲ ಯುದ್ಧದ ಹವಾಮಾನ ಇವೆಲ್ಲವೂ ನಮ್ಮ ವಿದೇಶೀ ಋಣಾನುಬಂಧಗಳಿಗೆ ತೊಡಕಾದವು.

ಅದೇರೀತಿ ಯೋಜನಾ ಆಯೋಗದ ಯಾವ ಧೀರ ಗಂಭೀರ ಘೋಷಣೆಯೂ ಈಡೇರಲಿಲ್ಲ. ದೇಶದಲ್ಲಿಯ ಆರ್ಥಿಕ ವಿಷಮತೆ ತಗ್ಗಲಿಲ್ಲ. ಸಾಮಾಜಿಕ ದ್ವೇಷ ಕುಗ್ಗಲಿಲ್ಲ. ಕರಭಾರ ಬೆಳೆಯುತ್ತಲೇ ಹೋಯಿತು. ಅತ್ತ ಕರತಪ್ಪಿಸಿದ ಬಾಕಿಯ ಭಾರವೂ ಎಷ್ಟೋ ಕೋಟಿಗೆ ಮುಟ್ಟಿತು.

ಇದಕ್ಕೆಲ್ಲ ರಾಮಬಾಣವೆಂಬಂತೆ ಗೊನೆಗೊಮ್ಮೆ ತಾಳ್ಮೆಗೆಟ್ಟ ಅರ್ಥ ಶಾಸ್ತ್ರಜ್ಞರು ಒಂದು "ಸೂತ ಶಿಖರ ಮಾತ್ರೆ" ಯನ್ನು ತೇದಿಕೊಟ್ಟರು-ರೂಪಾಯಿಯ ಮೂಲ್ಯ ವಿಚ್ಛೇದನೆ. ಇಲ್ಲಿಯೂ ರಾಜಕಾರಣಿ ಈ ಅರ್ಥಶಾಸ್ತ್ರ ವಿಶಾರದರ ಕೈಯ ಗೊಂಬೆಯಾದನು. ಈ ಮೂಲ್ಯ ವಿಚ್ಛೇದನೆ ಅಪೇಕ್ಷಿತ ಫಲವನ್ನು ಕೊಡುವ ಬದಲು, ಹದ್ದು ಮೀರಿದ ಜಡ್ಡಿಗೆ ಹದ ಮೀರಿದ ಮದ್ದಿನಂತೆ ವಿಷವಾಗಿಯೇ ಪರಿಣಮಿಸಿತು? ಯೋಜನೆಗಳ ಎಲ್ಲ ಸಂದಿಗ್ಧ ಶ್ರೇಯಸ್ಸುಗಳನ್ನು ನುಂಗುವಾಗ

ಈ ಹೊಸ ಹಬ್ಬವು ನಮ್ಮ ಆರ್ಥಿಕ ತಜ್ಞರ ಪ್ರತಿಷ್ಠೆಯನ್ನು ಬಲಿ ತೆಗೆದುಕೊಂಡಿತು!

ದುರ್ದೈವದ ಚಕ್ರ ಒಂದು ಸುತ್ತು ಪೂರ್ತಿ ಮುಗಿಸಿತು. ೨ನೆಯ ಮಹಾಯುದ್ಧಕ್ಕೂ ಮುಂಚೆ ಈ ದೇಶದ ಧೋರಣೆಗಳ ರೂಪಣದಲ್ಲಿ ಅರ್ಥ ಶಾಸ್ತ್ರಜ್ಞನಿಗೆ ಯಾವ ಸ್ಥಾನವೂ ಇದ್ದಿಲ್ಲ. ಇಂದು ಹೆಚ್ಚು ಕಡಿಮೆ ಅದೇ ಸ್ಥಾನವನ್ನು ಆ ಮಹಾಶಯನು ಮತ್ತೆ ಪಡೆದಂತಿದೆ. ಡಾ ಸಿ. ಡಿ. ದೇಶಮುಖ, ಪ್ರಾ. ಮಹಲೊಬಿನವಿಸ್, ಶ್ರೀ ಅಶೋಕ ಮೆಹತಾ, ಡಾ. ವಿ.ಕೆ. ಆರ್. ವಿ. ರಾವ್, - ಇಂಥ ಅತಿರಥಿ ಮಹಾರಥಿಗಳು. ಅರ್ಥಶಾಸ್ತ್ರವನ್ನು ಅರೆದು ಕುಡಿದು ಅರಗಿಸಿ ಕೊಂಡ ಪ್ರಾಜ್ಞರು. ಕೇಂದ್ರ ಸರಕಾರಕ್ಕೆ ಯೋಜನಾ ಆಯೋಗಕ್ಕೆ ನೆರವು ನೀಡಿದರು. ಇದೀಗ ಡಾ. ಧನಂಜಯ ಗಾಡಗೀಳರು ದೇಶದ ಆರ್ಥಿಕ ಉದ್ಧಾರದ ಮಹತ್ಕಾರ್ಯದ ಅಧ್ವರ್ಯುಗಳಾಗಿ ಯೋಜನಾ ಆಯೋಗದ ಧುರಹೊತ್ತಿದ್ದಾರೆ. ಆದರೇನು?-ಮೊಸಳೆಯನ್ನು ನೀರಿನೆಂದೆತ್ತಿ/ಗುಡ್ಡದ ತುದಿಗೆ ಇಟ್ಟಂತೆ!- ಇವರೆಲ್ಲರ ಪರಾಕ್ರಮ!

ಅಂದರೇನು? ನಮ್ಮ ದೇಶದಲ್ಲಿ ಅರ್ಥ ಶಾಸ್ತ್ರಜ್ಞರ ಕೊರತೆ ಎಂದೂ ಬೀಳಲಿಲ್ಲ. ಜಾಗತಿಕ ಖ್ಯಾತಿಯ ಅಂತರ್ ರಾಷ್ಟ್ರೀಯ ಮನ್ನಣೆಯ ಆರ್ಥಿಕ ತಜ್ಞರು ನಮ್ಮಲ್ಲಿ ಇದ್ದಾರೆ. ಆದರೆ ಇಂದಿನ ಸತ್ತಾ ರಾಜಕೀಯದ ರಾಜಸೂಯದಲ್ಲಿ, ಮೂಲ್ಯಗಳೇ ಬುಡ ಮೇಲಾಗಿ ಕಾಣುವ ಮಹಾಸಭೆಯಲ್ಲಿ ದುಃಶಾಸನದ ಲೀಲೆಯನ್ನು ಕಂಡೂ ಕಾಣದಂತೆ ಬಾಯಿದ್ದರೂ ಮೂಕರಂತೆ ಅವರೆಲ್ಲರೂ ನಿರ್ವೀರ್ಯ ನಿರ್ವಿಣ್ಣರಾಗಿದ್ದಾರೆ. ಹೆಚ್ಚೆಂದರೆ ಈ ತಜ್ಞರು ಮಂತ್ರಿಗಳಿಗೂ ಉಚ್ಚ ಅಧಿಕಾರಿಗಳಿಗೂ ರಾಜಕೀಯ ಶ್ರೇಷ್ಠಿಗಳಿಗೂ ಅವರ ಅಪ್ರಬುದ್ಧ ಅಭಿಪ್ರಾಯಗಳಿಗೆ ಬುದ್ಧಿವಂತಿಕೆಯ ಬಣ್ಣ ಬಳಿಯಲಿಕ್ಕೆ, ಆ ತಜ್ಞ ಧೋರಣೆಗಳಿಗೆ ತರ್ಕದ ಒಪ್ಪೆಹಾಕಲಿಕ್ಕೆ ತಮ್ಮ ತಲೆಯನ್ನು ಲೆಕ್ಕಣಿಕೆಯನ್ನು ಸವೆಯಿಸುತ್ತಿದ್ದಾರೆ. ವಿದೇಶೀ ಅರ್ಥ ಶಾಸ್ತ್ರಜ್ಞರು ನಮಗೆ ಬುದ್ಧಿ ಹೇಳಲು ಇಲ್ಲಿ ಬರುವದನ್ನೆ ಬಿಟ್ಟು ಕೊಟ್ಟಂತಿದೆ!

ಇದು ಹೀಗೆ ಏಕೆ ಆಯಿತು? ನಮ್ಮ ಅರ್ಥಶಾಸ್ತ್ರಜ್ಞ ಬರೆ ತಾಂತ್ರಿಕ ತಜ್ಞನಂತೆ ವರ್ತಿಸಿದ ಅಥವಾ ಗ್ರಾಂಥಿಕ ಪಂಡಿತನಂತೆ ವ್ಯಾಖ್ಯಾನಿಸಿದ. ಇಂದಿನ ಜೀವನದ ಬಹುಮುಖ ಸಂಕೀರ್ಣತೆಯು ಅವನ ಕಣ್ಣ ತೆಕ್ಕೆಯಿಂದ ತಪ್ಪಿತು. ಬದುಕಿನ ಸಮಸ್ಯೆಗಳಿಗೆ ಬಹಳಷ್ಟು ಮಗ್ಗಲು. ಅಭ್ಯಾಸಕ್ಕೆ ಅವನ್ನು ತಾತ್ವಿಕವಾಗಿ ವಿಂಗಡಿಸಿದರೂ, ವ್ಯವಹಾರದಲ್ಲಿ ಸಾತ್ವಿಕವಾಗಿ ಅವನ್ನು ಒಟ್ಟಾಗಿಯೇ ಅಳವಡಿಸಬೇಕಾಗುತ್ತದೆ. ಅರ್ಥ ಕಾರಣ ಮರೆತ ರಾಜಕಾರಣವು ಹೇಗೆ ಅನರ್ಥಕಾರಿಯೋ ಹಾಗೆಯೇ ರಾಜಕಾರಣವನ್ನು ಲೆಕ್ಕಿಸದ ಅರ್ಥಕಾರಣವೂ ವ್ಯರ್ಥ.

ಗ್ರಾಮ ಪಂಚಾಯಿತಿಯಿಂದ ಈ ಸಂಸತ್ತಿನವರೆಗೂ ಈ ಮಾತು ಸತ್ಯ. ಅಲ್ಲ. ಅಖಿಲ ಭಾರತೀಯ ಮಟ್ಟದಲ್ಲಿ ತಾತ್ವಿಕ ವಿಂಗಡಣೆ ಸಾಧ್ಯವಿರಬಹುದು. ಆದರೆ ಕೆಳಗೆ ರಾಜ್ಯ-ಜಿಲ್ಲೆ ಹಳ್ಳಿಯ ಮಟ್ಟಕ್ಕೆ ಇಳಿದಂತೆ ಆರ್ಥಿಕ ಪ್ರಶ್ನೆಯು ಅಲ್ಲಲ್ಲಿಯ ಸ್ಥಾನಿಕ ರಾಜಕೀಯ ಸಾಮಾಜಿಕ ಸಂದರ್ಭದಿಂದ ವಿಂಗಡಿಸಿ ವಿಚಾರಿಸುವದು ಕಷ್ಟವಾಗುತ್ತದೆ. "ಕಷ್ಟದ ಕೆಲಸ"ವೂ ಆಗುವದುಂಟು!

●

('ರಾಯಭಾರಿ' ೧೯೬೮)

# ಪ್ರಜೆ ಮತ್ತು ಪ್ರಭು

ಪ್ರಜಾಪ್ರಭುತ್ವದಲ್ಲಿ ಬೇರೆ ಏನೇ ಇಲ್ಲದಿದ್ದರೂ ಪ್ರಜೆಗೂ ಪ್ರಭುತ್ವಕ್ಕೂ ನಿಕಟವಾದ ಸಂಪರ್ಕವಿರತಕ್ಕದ್ದು. ಪ್ರಜೆಗಳ ಆಶೆ-ಆಕಾಂಕ್ಷೆಗಳನ್ನು ರೂಪಿಸುವ ಪ್ರಭುತ್ವ ಅವರ ನೋವು-ಕಾವುಗಳಿಗೂ ಬೇಕು-ಬೇಡಿಕೆಗಳಿಗೂ ಕಿವಿಗೊಡುತ್ತಿರಬೇಕು. ಮುಖ್ಯ ಮಾತೆಂದರೆ, ಪ್ರಜೆಗೆ ಸಾಮಾನ್ಯ ಜನತೆಗೆ ತಮ್ಮದೇ ಎಂಬ ಸರಕಾರ ತನ್ನ ಹೇಳಿಕೆಗೆ ಕಿವಿಗೊಡುತ್ತದೆ. ಸಂತೈಕೆಯ ಭರವಸೆ ನೀಡುತ್ತದೆ ಎಂಬ ಮನವರಿಕೆ ಮನವಾರೆ ಆಗಬೇಕು.

### ಜನ ವಿಶ್ವಾಸ ಅತಿ ಮುಖ್ಯ

ಆಡಳಿತಗಾರ, ಸರಕಾರೀ ವರಿಷ್ಠ, ಮಂತ್ರಿ ಅಥವಾ ಮತ್ತಾವನೇ ಶ್ರೇಷ್ಠಿಯು ಜನತೆಗೆ ಒಳಿತು ಮಾಡಿದರೆ ಸಾಲದು. ಆತ ಒಳಿತು ಮಾಡಿದ್ದಾನೆಂಬ ತಿಳುವಳಿಕೆ ಆತ ಒಳ್ಳೆಯವನೆಂಬ ತಿಳುವಳಿಕೆ ಜನತೆಗೆ ಮಾಡಿಕೊಡಬೇಕು.

ಈ ದೃಷ್ಟಿಯಿಂದ ಬ್ರಿಟಿಶ್ ಸರಕಾರದ ಕಾಲಮಾನದಲ್ಲಿ ಬಿಳಿಯ ದೊರೆ ಅಥವಾ ಅವನ ಮಾದರಿಯಲ್ಲಿ ನಡೆಯುತ್ತಿದ್ದ ದೇಶೀ ದೊರೆ (ಸಾಹೇಬ) ಸರ್ಕೀಟಿನಲ್ಲಿ ಇರುವಾಗ ಡಾಕ್ ಬಂಗಲೆಗಳಲ್ಲಿ ತಂಗಿದಾಗ, ಅಲ್ಲಲ್ಲಿಯ ಸ್ಥಾನಿಕ ಕೀಟಲೆ-ಕೊಟಲೆಗಳ ದೂರುಗಳನ್ನು ಅಸ್ಥೆಯಿಂದ ಕೇಳಿಕೊಳ್ಳುತ್ತಿದ್ದ. ನೇರವಾಗಿ ಬ್ರಿಟಿಷ್ ಹಿತಾಸಕ್ತಿಗಳಿಗೆ ಬಾಧೆ ಬಾರದಿದ್ದಲ್ಲಿ ಆತ ಆದಷ್ಟು ನ್ಯಾಯವಾದ ನಿಸ್ಪೃಹವಾದ ನೀತಿ ನಿಷ್ಠುರವಾದ ನಿರ್ಣಯವನ್ನೇ ನಯ ವಿನಯವನ್ನು ಬಿಡದೆ ನೀಡುತ್ತಿದ್ದನು.

### ನಿಂತ ಮೆಟ್ಟಗೆ ನಿರ್ಣಯ

ಈ ರೀತಿ ಪ್ರಜೆಗಳ ಬೇಡಿಕೆ ಬಿನ್ನಹಗಳನ್ನು ಮುಖಾಮುಖಿ ಕೇಳಿಕೊಂಡು ನಿಂತ ಮೆಟ್ಟಿಗೇ ತೀರ್ಮಾನ ಹೇಳುವ ದಕ್ಷತೆಯ ವಾಡಿಕೆ ನಮ್ಮ ಜನಗಳಿಗೆ ಹಿಂದಿನಿಂದ - ಹಿಂದೂ ಅಥವಾ ಮುಸಲ್ಮಾನ ರಾಜರುಗಳ ಕಾಲದಿಂದ ಒಗ್ಗಿ ಬಂದಿದ್ದು. ಈಗ ಪ್ರಜೆಯೇ ಪ್ರಭುವೆಂಬ ಮಾತ್ರಕ್ಕೆ ಸರಕಾರೀ ಅಧಿಕಾರಿಗಳೇ ಪ್ರಜೆಗೇ ವಿಧೇಯವಾಗಿ, ದೂರ ನಿಂತು ನಿರ್ಲಿಪ್ತರಾಗಿ ವರ್ತಿಸಬೇಕೆಂಬ ಹೊಸ ಪರಿಪಾಠ ಪ್ರಜಾಭಿಪ್ರಾಯಕ್ಕೆ ಇನ್ನೂ ಸೇರದು, ಸರಿಹೋಗದು.

ಶ್ರೀ ನವರತ್ನ ರಾಮರಾಯರ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ ಪ್ರಭೃತಿಗಳ ಅನೇಕ ನೆನಹುಗಳಿಂದ ಕಳೆದ ತಲೆಮಾರಿನ ಆಡಳಿತಗಾರ, ಸರಕಾರೀ ಅಧಿಕಾರಿಯ ಉತ್ತಮ ಮಾದರಿಯು ಯಾವ ರೀತಿ ಜನತೆಯ ಆಗುಹೋಗುಗಳೊಂದಿಗೆ ಆತ್ಮೀಯ ಪ್ರಜ್ಞೆ ಇಟ್ಟುಕೊಳ್ಳುವಂತಿತ್ತು-ಎಂಬುದು ಮನೋಜ್ಞವಾಗಿ ಪ್ರಕಟವಾಗುತ್ತದೆ.

### ಬದಲಾದ 'ಜಮಾನೆ'

ಆದರೆ ಇಂದು ಆ 'ಜಮಾನೆ' ಬದಲಾಗಿದೆ. ಇಂದಿನ ಜಿಲ್ಲಾಧಿಕಾರಿ ಅಥವಾ ಇತರ

ವರಿಷ್ಠ ಅಧಿಕಾರಿ ಹೋದಲ್ಲಿ ಬಂದಲ್ಲಿ ಹಿರಿ ಕಿರಿ ಸಭೆ-ಸಮಾರಂಭಗಳಲ್ಲಿ ಉದ್ದ ಅಗಲ ಭಾಷಣಗಳನ್ನು ಬಿಗಿಯಬಲ್ಲವನಾದರೆ ಗೆದ್ದ, ಇಲ್ಲವಾದರೆ ಸಾರ್ವಜನಿಕ ಪ್ರತಿಷ್ಠೆಯ ರಂಗದಲ್ಲಿ ಆತ ಬಿದ್ದ! ಅಧಿಕಾರಿಯು ತನ್ನ ಕಾರ್ಯಾಂತರದಲ್ಲಿ ಕ್ಯಾಂಪು ಮಾಡಿದ ಊರಿನಲ್ಲಿಯ ಸಂಬಂಧಪಟ್ಟ ಜನರಿಂದ ಅವರವರ ತೊಡಕು ತೊಂದರೆಗಳನ್ನು ಕರೆದು ಕೇಳಿ ತಿಳಿದು ಬಗೆಹರಿಕೆಯನ್ನು ಆದಷ್ಟು ಅಲ್ಲಿಯೇ ಒದಗಿಸುವ ದಕ್ಷತೆ ಕಾಣಿಸುವದು ಅಪವಾದಾತ್ಮಕವೇ! ಅಲ್ಲ ಹಾಗೆ ನೇರವಾಗಿ ಜನಸಂಪರ್ಕವಿಟ್ಟುಕೊಂಡರೆ ಸ್ಥಾನಿಕ ಜನನಾಯಕರುಗಳಿಂದ ಅಪವಾದಾಸ್ಪದನೂ ಆಗಬಹುದು.

### ಕಾಲಾತೀತ ಒಡ್ಡೋಲಗ!

ಏನೇ ಇರಲಿ ಒಟ್ಟಾರೆ ಸ್ವತಂತ್ರ ಭಾರತದ ಸ್ವರಾಜ್ಯದ ಆಡಳಿತಗಾರ ಪ್ರಜೆಯ ಗ್ರಾಮೀಣ ಪ್ರಜೆಯ-ದುಃಖ ಕಷ್ಟಗಳ ಬಗೆಗೆ ಉದಾಸೀನನಾಗಿರುತ್ತಾನೆ. ಇದು ನಿಜವಾಗಿಯೂ ಶೋಚನೀಯ.

ಇನ್ನು ಕೆಲ ಸಲ ಹೊಸತಾಗಿ ಅಧಿಕಾರಕ್ಕೇರಿದ ರಾಷ್ಟ್ರಪತಿಯೋ, ರಾಜ್ಯಪಾಲನೋ ಪ್ರಧಾನಿಯೋ ಮುಖ್ಯಮಂತ್ರಿಯೋ ದಿನಕ್ಕೆ ಇಂತಿಷ್ಟು ವೇಳೆ ಪ್ರಜೆಯ ನೇರ ಸಂಪರ್ಕಕ್ಕಾಗಿ ಮೀಸಲಿಡುವ ಘೋಷಣೆ ಮಾಡುವದುಂಟು. ಹಾಗೆ ಅವರ ಒಡ್ಡೋಲಗ ಎಷ್ಟು ತಿಂಗಳು ಸರಾಗವಾಗಿ ಸಾಗುವದೋ ದೇವರೇ ಬಲ್ಲ.

### ಬ್ರಹ್ಮಾನಂದರ ದಾರಿ

ಇತ್ತೀಚೆಗೆ ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಬ್ರಹ್ಮಾನಂದ ರೆಡ್ಡಿ ಇಂತಹದೇ ಹೊಸದೊಂದು ಉಪಕ್ರಮ ಆರಂಭಿಸಿದ್ದಾರೆಂದು ಸುದ್ದಿ. ವಿಶಾಖಾಪಟ್ಟಣ ಜಿಲ್ಲೆಯಲ್ಲಿ ಸಂಚಾರ ಕೈಕೊಂಡಾಗ ಸದ್ಯದಲ್ಲಿಯೇ ಶ್ರೀ ರೆಡ್ಡಿಯವರು ಹೋದಲ್ಲೆಲ್ಲ ಭಾಷಣ 'ಬಿಗಿ'ಯಲಿಲ್ಲ ಮಾತುಕತೆಗಳಲ್ಲಿ ನಾಲಿಗೆ ಸಡಿಲಿಸಿದರು ಸಭೆಗೆ ಬಂದ ಜನರಿಗೆ ಅವರವರ ಸಮಸ್ಯೆಗಳನ್ನು ತೋಡಿಕೊಳ್ಳುವಂತೆ ಮುಖ್ಯಮಂತ್ರಿ ಕೇಳಿಕೊಂಡರು. ಜನರೂ ಬಿಚ್ಚು ಮನಸ್ಸಿನಿಂದ ತಮ್ಮ ಬವಣೆಗಳನ್ನು ಅರಿಕೆ ಮಾಡಿದರು. ಒಂದು ಹಳ್ಳಿಯಲ್ಲಿ ದೊರಕುವ ಅಕ್ಕಿ ಕಿಲೋಕ್ಕೆ ೧.೨೫ ರೂ.ಗೆ ಮಾರುತ್ತಾರೆಂದು ದೂರು ಬಂದಿತು. ಕಂಟ್ರೋಲ್ ಧಾರಣೆ ೭೫ ಪೈಸೆ! ಮುಖ್ಯಮಂತ್ರಿಗಳು ಅಪ್ಪಣೆ ಕೊಡಿಸಿದರು-ಅಕ್ಕಿಯನ್ನು ಕಂಟ್ರೋಲ್ ದರಕ್ಕೆ ಮಾರಬೇಕೆಂದು.

ಇನ್ನೊಂದು ಹಳ್ಳಿಯಲ್ಲಿ ಗಿರಿಜನರ ಕಾರ್ಪೋರೇಶನ್ ಸರಿಯಾಗಿ ಕೆಲಸ ಮಾಡುವದಿಲ್ಲ, ಅದು ನಿಷ್ಪ್ರಯೋಜಕವೆಂಬ ದೂರು ಬಂದಿತು. ಹಾಗಾದರೆ ಆ ಮಂಡಲವನ್ನೇ ಮುಚ್ಚಿಬಿಡುವೆನೆಂದು ಶ್ರೀ ರೆಡ್ಡಿ ಆಶ್ವಾಸನೆ ಕೊಟ್ಟರು. (ಆದರೆ ಹಾಗೆ ಮಾಡಬಾರದೆಂದು ಒಡಂಬಡಿಕೆ ಆಯಿತು.)

ಹೀಗೆ ಪ್ರಜೆಗಳ ದುಃಖ ಕಷ್ಟಗಳನ್ನು ಅವರ ಬಾಯಿಯಿಂದಲೇ ಕೇಳುವದು, ತಮ್ಮ ಬಾಯಿ ಚಾಪಲ್ಯ ತೀರಿಸಿಕೊಳ್ಳುವದಕ್ಕಿಂತ ಹೆಚ್ಚಿನ ಜನತಾ ಸೇವೆ ಎಂದು ಶ್ರೀ ಬ್ರಹ್ಮಾನಂದ ರೆಡ್ಡಿ ಮನಗಂಡರು. ಇನ್ನುಮುಂದೆ ಇದೇ ಪರಿಪಾಠವನ್ನು ತನ್ನ ಸಂಚಾರಗಳಲ್ಲಿ ಮುಂದರಿಸುವ ನಿರ್ಧಾರವನ್ನು ಅವರು ಮಾಡಿದರಂತೆ.

## ತೀರ್ಪು ಸರಿ; ಕಾರ್ಯಾಚರಣೆ?

ಇದೇ ರೀತಿ ಕೆಲವು ಡೆಪ್ಯುಟಿ ಕಮಿಶನರರೂ ಕೆಲವು ಮಂತ್ರಿಗಳೂ ವಾರದಲ್ಲಿ ಕೆಲವು ತಾಸು ಪ್ರಜೆಗಳ ದೂರುಗಳನ್ನು ಕೇಳಿ ಅವನ್ನು ದೂರ ಮಾಡಲು ಮೀಸಲಾಗಿ ಇಟ್ಟಿರುವರೆಂದೂ ವಾರ್ತೆ ಇದೆ.

ಆದರೆ ಇದು ಕೇವಲ ಉಪಚಾರದ, ಪ್ರತೀಕಾತ್ಮಕ ಅಭಿನಯವಾಗಬಾರದು. ಪ್ರಜೆಗಳಿಗೂ ತಮ್ಮ ಪ್ರಶ್ನೆಗಳನ್ನು ಹೇಗೆ ಮಂಡಿಸಬೇಕೆಂಬ ತರಬೇತಿ ಇಲ್ಲ; ಅವರ ಪರವಾಗಿ ಯಾರಾದರೂ "ಮುಖಂಡ" ಮುಂದೆ ಬರಬಹುದು. ಅಷ್ಟೇ ಅಲ್ಲ, ನಿಂತಮೆಟ್ಟಿಗೆ ಅಧಿಕಾರಿ ತೀರ್ಪು ಹೇಳಿ ಹೋದರೂ ಮುಂದೆ ಹಲವು ಪ್ರಸಂಗಗಳಲ್ಲಿ ಆ ತೀರ್ಪಿನ ಕಾರ್ಯಾಚರಣೆಗೆ ಕಾಲಹರಣ ಕಾಲ್ತೊಡಕು ಉಂಟಾಗಬಹುದು. ಇವೆಲ್ಲ ಅಡೆ ತಡೆಗಳನ್ನು ಕಡೆಗಣಿಸುವಂತೆ ಇಲ್ಲ.

## ಬ್ರಹ್ಮ ಗಂಟು ಸಡಿಲಾಗಲಿ

ಏನೇ ಇದ್ದರೂ ನಮ್ಮ ಜಿಲ್ಲಾ ಮಟ್ಟದ ವಿವಿಧ ಅಧಿಕಾರಿಗಳು ತಮ್ಮ ಸಂಚಾರದಲ್ಲಿ ಜನತೆಯ ಸ್ಥಾನಿಕ ಕಷ್ಟ ನಷ್ಟಗಳ ಬಗೆಗೆ ನೇರವಾಗಿ ನಯದಿಂದ ಚೌಕಶಿ ಮಾಡಿ ಕೆಂಪು ಟೇಪಿನ ಬ್ರಹ್ಮಗಂಟನ್ನು ಅಲ್ಲಿಯೇ ಬಿಡಿಸಲು ಅಥವಾ ಕತ್ತರಿಸಲು ಯತ್ನ ಮಾಡಬಹುದೇ?

ನಿಜವಾಗಿ ನೋಡಿದರೆ ಯೋಜನಾ ಬದ್ಧ ಅಭಿವೃದ್ಧಿ ವಿಕಾಸವೆಂಬುದು ಶಾಸನಯಂತ್ರದ ಸಂಚಾಲನೆಯಲ್ಲಿ ಸಂಘಟನೆಯಿಂದ ಒದಗಿ ಬರಬೇಕಾದ ಕ್ರಾಂತಿ. ಅದಕ್ಕೆ ಹಿರಿಕಿರಿ ಆಡಳಿತಗಾರರೆಲ್ಲ ಕ್ರಾಂತಿಕಾರಿ ಕಾರ್ಯ ಧುರೀಣರೇ ಸರಿ.

## ಹಳೇ ಪ್ರವೃತ್ತಿ ಬದಲಾಗಿಲ್ಲ

ದುರ್ದೈವಕ್ಕೆ ನಮ್ಮ ಆಡಳಿತಗಾರಿಕೆಯ ಸಿಬ್ಬಂದಿಗಳು ಇಂದಿನ ಮನ್ವಂತರದಲ್ಲಿ ತಾವು ನಿರ್ವಹಿಸಬೇಕಾದ ಈ ಕ್ರಾಂತಿಕಾರಿ ಭೂಮಿಕೆಯ ಮಹತ್ವ ಗುರುತ್ವಗಳನ್ನು ಮನಗಂಡಂತೆ ಇಲ್ಲ. ಸ್ಥಿತಿಸ್ಥಾಪಕ ವೃತ್ತಿಯಲ್ಲಿಯೇ ತಮ್ಮ ಭತ್ತೆ ಡಾಯರಿ ತುಂಬುವದರಲ್ಲಿಯೇ ಸೀನಿಯಾರಿಟಿ ಪಟ್ಟಿಯ ಮೇಲೆ ಕಣ್ಣಿಟ್ಟು ಕಣ್ಣ ಪಟ್ಟಿಯ ಜಟಕಾ ಕುದುರೆಯಂತೆ ದಿನದೂಡುವ ಅಮಲದಾರಿಕೆ ಇಂದಿನ ಸಂಕ್ರಮಣಾವಸ್ಥೆಗೆ ಎಂದೆಂದಿಗೂ ಸರಿಹೋಗದು. ಆದರೆ ಇದರ ಮನವರಿಕೆ ನಮ್ಮ ಬಹುಸಂಖ್ಯ ಅಧಿಕಾರಿಗಳಿಗೆ ಮಾಡಿಕೊಡುವದು ಹೇಗೆ ಮತ್ತೆ ಯಾರು?

●

('ಜನಸೇವಕ' ೧೯೬೮)

# ದಕ್ಷ ಆಡಳಿತ ಸ್ವಯಂಸಿದ್ಧವಲ್ಲ

ಶಕ್ತಿಪೂಜೆಯಲ್ಲಿ ಐದು "ಮ"ಕಾರಗಳಿಗೆ ಮಹತ್ವವಿದೆ-ಮದ್ಯ, ಮಾಂಸ, ಮೀನ, ಮೈಥುನ ಮತ್ತು ಮುದ್ರೆ. ಇವುಗಳಲ್ಲಿ ಯಾವದಕ್ಕೆ ಎಷ್ಟು ಪ್ರಾಶಸ್ತ್ಯವೋ ವಾಮಾಚಾರಿಗಳಿಗೇ ಗೊತ್ತು. ಆದರೆ ಇಂದು ದೇಶದ ಅಭಿವೃದ್ಧಿಯ ಆರಾಧನೆಯಲ್ಲಿ ರಾಷ್ಟ್ರದೇವತೆಯ ಶಕ್ತಿಪೂಜೆಯಲ್ಲಿ ಜೀವಾಳದ ಮಹತ್ವ ಬೇರೆ ಪಂಚ 'ಮ'ಕಾರಗಳಿಗೆ. ಅವು Men, Money, Machine, Material ಮತ್ತು Management. Money-ಮ ಕಾರವು ಮುಂದಿನ ಎರಡನ್ನು - Machine ಮತ್ತು Material ಕೊಂಡು ಪಡೆಯಬಹುದು. ಆದರೆ Management ಎಂಬ ಮ ಕಾರ ಮೂಲದ Men ಎಂಬುದರಿಂದಲೇ ತಯಾರಾಗಿ ಬರಬೇಕಾದ ವಸ್ತು.

## ಅಪಯಶಸ್ಸಿನ ಮೂಲ

ಇಂದು ನಮ್ಮ ಆಡಳಿತದ ಅವ್ಯವಸ್ಥೆಗೆ, ಯೋಜನಾ ಕಾರ್ಯದ ಅ ಯಶಸ್ಸಿಗೆ ಮೂಲವೆಂದರೆ ಆಯಾ ಕ್ಷೇತ್ರದಲ್ಲಿಯ ತಜ್ಞ, ದಕ್ಷ, ಮತ್ತು ಯೋಗ್ಯ ಆಡಳಿತದ ಘನವಾದ, ಘೋರವಾದ ಕೊರತೆ. ಮನುಷ್ಯ ಶಕ್ತಿ (Man power) ಯನ್ನು ಅಳವಡಿಸಿಕೊಳ್ಳುವ, ಯೋಜನಾ ಕಾರ್ಯಕ್ಕೆ ಅಲ್ಲಲ್ಲಿಯ ಸ್ಥಾನಿಕ ಜನತೆಯ ದುಡಿಮೆಯನ್ನು ಉಪಯೋಗಿಸಿಕೊಳ್ಳುವ ಆಲೋಚನೆ-ಆ ಯೋಜನೆ ನಮ್ಮ ಸರಕಾರಗಳು ದೊಡ್ಡ ಪ್ರಮಾಣದಲ್ಲಿ ಕಾರ್ಯಗತ ಮಾಡಿವೆ, ಮಾಡುತ್ತಿವೆ.

ಆದರೆ ಇದು ಈ ಕಾರ್ಯಶ್ರೇಣಿಯ ಒಂದು ತುದಿ ಆಯಿತು. ಮಾನವ ಶಕ್ತಿಯೂ material ದಂತೆ ಒಂದು ಅಸಿದ್ಧ ಸರಕು 'ಕಚ್ಚಾಮಾಲು'. ಕಚ್ಚಾಮಾಲು 'ಪಕ್ಕಾ' ಆಗಬೇಕಾದರೆ, ಅದು Machine ಅಥವಾ ಯಂತ್ರ ಶಕ್ತಿಗೆ ವಶವಾಗಬೇಕು ಒಳಗಾಗಬೇಕು. ಅದೇ ರೀತಿಯಲ್ಲಿ Man Power ಎಂಬ ಇಚ್ಛಾ ಮಾಲು Management, ಆಡಳಿತ ವ್ಯವಸ್ಥಾಪನೆ ಎಂಬ ತಜ್ಞತೆಯ ಶಕ್ತಿಗೆ ಅಧೀನವಾಗಬೇಕು.

## ನಮ್ಮ ನಿಜವಾದ ದಾರಿದ್ರ್ಯ

ಯಾವದೇ ಜೀವನರಂಗವಿರಲಿ, ನಮಗೆ ದ್ರವ್ಯ, ಗುಣ, ಅನುಕೂಲ, ಸೌಕರ್ಯಗಳ ಅಭಾವ ಅಷ್ಟೊಂದು ಕಾಡುವದಿಲ್ಲ. "ಯೋಜಕಃ ತತ್ರ ದುರ್ಲಭಃ". ಈ ಎಲ್ಲ ಸಂಗತಿಗಳನ್ನು ಸರಿಯಾಗಿ ಹೊಂದಿಸಿ ಅವುಗಳನ್ನು ಯೋಗ್ಯ ಸಂಕಲ್ಪಕ್ಕೆ ಹೂಡಿ ಸಾಧನಗಳನ್ನೂ ಸಾಧ್ಯಕ್ಕೆ ಒಯ್ದು ಸಿದ್ಧಿಯನ್ನು ಸಂಪಾದಿಸುವ ಪ್ರಭುಶಕ್ತಿ ನಿಜವಾದ ಐಶ್ವರ್ಯ ನಮ್ಮ ದೇಶದಲ್ಲಿ-ಆದೇ ರೀತಿ ಅನಭಿವೃದ್ಧವಾಗಿ ಹಿಂದುಳಿದ ಇತರ ದೇಶಗಳಲ್ಲಿ ಇಲ್ಲವಾಗಿದೆ. ಇದುವೆ ಭಾರತದ ಮಿಗಿಲಾದ ದಾರಿದ್ರ್ಯ.

ಈ ವರೆಗೂ ನಮ್ಮ ಉದ್ದಿಮೆಗಾರಿಕೆಯನ್ನು ಆಳುವ ಆಡಳಿತಗಾರರು ಹುಟ್ಟ ಆ ಪ್ರವೃತ್ತಿಯವರಾಗಿದ್ದರು. ಕವಿಯಂತೆ ಆಡಳಿತಗಾರನೂ ಹುಟ್ಟಿಯೇ ಬರಬೇಕು. ಅವನನ್ನು ಉಂಟು ಮಾಡುವದು ಹೇಳಿ ಮಾಡಿಸುವದು ಅಸಾಧ್ಯ ಎಂದು ನಮ್ಮ ಭಾವನೆ ಆಗಿತ್ತು. ಹೀಗಾಗಿ ನಮ್ಮಲ್ಲಿ

ಔದ್ಯೋಗಿಕ ಅಭಿವೃದ್ಧಿಯು ಟಾಟಾ, ಬಿರ್ಲಾ, ಸಾರಾಭಾಯಿ, ವಾಲಚಂದ, ಕಿರ್ಲೋಸ್ಕರ ಇಂಥ ಕೆಲವೊಂದೇ ಮನೆತನಗಳ ವಿಶೇಷ ಪ್ರತಿಭೆಯ ಸೊತ್ತಾಗಿ ಬೆಳೆಯಿತು. ಉದ್ದಿಮೆಗಾರಿಕೆ ಇಂಥ ಮಾಲಕ-ಚಾಲಕರ 'ಚಲಾಕಿ'ಯ ವಿಷಯವೆಂದು ಸಾರ್ವತ್ರಿಕ ಭಾವನೆ ರೂಢವಾಯಿತು.

### ಪ್ರತಿಭೆಗೆ ಅವಕಾಶ

ಆದರೆ ಇದೊಂದು ದಂತ ಕಥೆ. ಮೇಲೆ ಹೇಳಿದ ಮನೆತನಗಳೂ ತಮ್ಮಸದಸ್ಯರನ್ನೂ ತಮ್ಮಲ್ಲಿಯ ವ್ಯವಸ್ಥಾಪಕರನ್ನೂ ವಿಶೇಷ ತರಬೇತಿಗೆ ಒಳಪಡಿಸಲು ತಪ್ಪುತ್ತಿರಲಿಲ್ಲ. ಇಂದು ದೇಶದಲ್ಲಿ ಏನಾದರೂ ವಿಧಾಯಕ ಪ್ರತಿಭೆ, ಸಾಹಿತ್ಯ ಕಲೆಗಳ ಹೊರಗೆ ಮೆರೆಯಬಲ್ಲ ಉನ್ನತ ಬುದ್ಧಿಮತ್ತೆ ಊರ್ಜಿತವಾಗಿದ್ದರೆ ಅದು ಶಾಲೆ-ಕಾಲೇಜುಗಳಲ್ಲಿ ಅಲ್ಲ, ವಿಶೇಷವಾಗಿ ಈ ಔದ್ಯಮಿಕ ಕುಲ (Industrial Houses) ಗಳಲ್ಲಿ! ಈಗಲೂ ಸರಕಾರದಿಂದ ಉಚ್ಚಮಟ್ಟದಿಂದ ನಿವೃತ್ತರಾಗುವ I.C.S. I.A.S. ಅಧಿಕಾರಿಗಳನ್ನೂ ಈ ಔದ್ಯಮಿಕ ಸಂಸ್ಥೆಗಳು ಕೂಡಲೆ ತಮ್ಮಲ್ಲಿ ನೇಮಿಸಿಕೊಳ್ಳುವದನ್ನು ನಾವು ಕಾಣಬಹುದು.

### ವೃತ್ತಿ ತರಬೇತಿ ಪದ್ಧತಿ

ಪರಂಪರಾಗತ ಕಸಬುಗಳಲ್ಲಿ, ತಂದೆಯಿಂದ ಮಗ ಬಂಧುವಿಂದ ಬಳಗದವ ಉಮೇದುವಾರಿಕೆಯಿಂದ ಆಯಾ ಉದ್ಯೋಗದ ಅನುಭವ, ಅನುಭವದಿಂದ ತರಬೇತಿ ಪಡೆಯುತ್ತಿದ್ದ. ನಮ್ಮಲ್ಲಿಯ ಕೇವಲ ಗುಣಕರ್ಮ ವಿಭಾಗದಿಂದ ಸೃಷ್ಟಿಯಾದ ಚಾತುರ್ವರ್ಣ್ಯವು ನಷ್ಟವಾಗಿ ಸ್ಥಿರಬದ್ಧ ಜನ್ಮಮಾತ್ರದಿಂದ ಜಾತಿ ವ್ಯವಸ್ಥೆ ಹುಟ್ಟಿ ರೂಢವಾಗಲು ಈ ಕುಲಪರಂಪರೆಯ ವೃತ್ತಿ ತರಬೇತಿಯ ಪದ್ಧತಿಯೂ ಒಂದು ಮಹತ್ವದ ಕಾರಣ.

### ಇಝುಂಗಳ ಉದ್ದೇಶ

ಆದರೆ ಇಂದು ಇದೊಂದೆ ಕುಲಕ್ರಮಾಗತ ರೀತಿ ಸಾಲದು. ಇಂದು ಉದ್ದಿಮೆ, ಬೇಸಾಯ, ರಾಜ್ಯಕಾರಭಾರ-ಇವೆಲ್ಲ ಕ್ಷೇತ್ರಗಳಲ್ಲಿಯೂ ತಜ್ಞ, ದಕ್ಷ ಹಾಗೂ ಯೋಗ್ಯ ಆಡಳಿತದ ಅಗತ್ಯ ಹೇಳತೀರದಷ್ಟೂ ಬೆಳೆದಿದೆ. ಇಂದಿನ ಆರ್ಥಿಕ ಸಾಮಾಜಿಕ ಕ್ರಾಂತಿಯ ಬೆನ್ನೆಲುಬೇ ಔದ್ಯೋಗಿಕ ಕ್ರಾಂತಿ. ಅದಕ್ಕೆ ಮುಖ್ಯ ಪ್ರಾಣ ಆಡಳಿತಾತ್ಮಕ ವ್ಯವಸ್ಥಾಪನೆಯ ಕ್ರಾಂತಿ. Managerial Revolution, ಸೋಶಾಲಿಝುಂ ಅನ್ನಿ ಕಮ್ಯುನಿಝುಂ ಅನ್ನಿ. ಕ್ಯಾಪಿಟ್ಯಾಲಿಝುಂ ಅನ್ನಿ. ಕೊನೆಗೂ ಅವು ಸ್ಥಾಪಿಸುವ ಹೊಸ ಸಮಾಜ ಹೊಸ ಸಂಸಾರ ಅವು ಅಳವಡಿಸುವ ಆಡಳಿತದ ಹೊಸ ತಂತ್ರ ವಿಧಾನವನ್ನೇ ಹೊಂದಿಕೊಂಡಿದೆ.

ಹೀಗೆ ನಮ್ಮ ದೇಶದ ನಿಜವಾದ ಕ್ರಾಂತಿ ಸುವ್ಯವಸ್ಥಿತವಾಗಿ ಒದಗಿ ಬರಲು ರಾಜಕೀಯ ವಾದಗಳು 'ನನ್ನಿಝುಂ ನಿನ್ನಿಝುಂ' ಗಳು ಕೇವಲ ಸ್ಫೂರ್ತಿಯನ್ನು ಇನ್ನೂ ಹೆಚ್ಚೆಂದರೆ ಹೊಸ ಸಮಾಜ ಸಂಘಟನೆಯ ನೀಲ ನಕ್ಷೆಯನ್ನು ಒದಗಿಸಬಹುದು. ಆದರೆ ಆ ಮೇರೆಗೆ ಹೊಸ ಬದುಕನ್ನು ರೂಪಿಸುವ ಕೆಲಸ ಅದರ ಕಸಬು ಒದಗಿಸುವದು ಹೊಸ ಮಾದರಿಯ Management. ಆಡಳಿತವೇ ಸರಿ.

## ಪರಿಶೀಲನೆಯ ಫಲಿತಾಂಶ

ಇತ್ತೀಚೆಗೆ ಫೋರ್ಡ್ ಫೌಂಡೇಶನ್ ಸಂಸ್ಥೆಯು ನಡೆಯಿಸಿದ ಪರಿಶೀಲನೆಯ ಮೇರೆಗೆ, ನಮ್ಮ ದೇಶದ ವಿವಿಧ ಔದ್ಯೋಗಿಕ, ವ್ಯಾವಸಾಯಿಕ ವ್ಯಾಪಾರ ವಿಷಯಕ ಕಾರ್ಯರಂಗಗಳಲ್ಲಿ ಪ್ರತಿ ವರ್ಷ ೪,೦೦೦ಕ್ಕೂ ಹೆಚ್ಚು ಮೆನೇಜರುಗಳ ಬೇಡಿಕೆ ಇದೆ! ಅದೂ ಮಾಲಿಕನ ಮಗ, ಭಾವ, ಮೈದುನ, ಅಳಿಯನೆಂಬ ಯೋಗ್ಯತೆ (?) ಯವರಲ್ಲ! ನಿಜವಾದ ತರಬೇತಿಯ ತಜ್ಞತೆಯ ತಕ್ಕ ತಿಳುವಳಿಕೆಯುಳ್ಳ ದಕ್ಷರೂ ಕಾರ್ಯಕ್ಷಮರೂ ಆದ ಆಡಳಿತಗಾರರ ಬೇಡಿಕೆ ಇದೆ.

ಆದರೆ ಇಂಥ ವ್ಯವಸ್ಥಾಪನೆಯನ್ನು ಒಂದು ವಿದ್ಯೆಯಾಗಿ ಕಲಿಸುವ ಪಳಗಿಸುವ ಕೇಂದ್ರಗಳು ನಮ್ಮಲ್ಲಿ ಎಲ್ಲಿವೆ? ಎಷ್ಟಿವೆ? ಬರೆ ಎರಡು, ಒಂದು ಅಹಮದಾಬಾದಿನಲ್ಲಿ ಇನ್ನೊಂದು ಕಲಕತ್ತೆಯಲ್ಲಿ. ಅವು ಪ್ರತಿ ವರ್ಷ ತರಬೇತಿ ಇತ್ತು ಹೊರಗೆ ಹಾಕುವ ಪದವೀಧರ ವ್ಯವಸ್ಥಾಪಕ-ಆಡಳಿತಗಾರರ ಸಂಖ್ಯೆ ಬರೆ ೨೦೦!

## ಕೊರತೆಗೆ ಕಾರಣ

ಈ ಸಂಖ್ಯೆ ಇಷ್ಟು ಕಡಿಮೆ ಏಕೆಂದರೆ ಈ ಕ್ಷೇತ್ರದಲ್ಲಿ ಶಾಸ್ತ್ರಶುದ್ಧ ತರಬೇತಿಯ ಅವಶ್ಯಕತೆಯನ್ನ ನಮ್ಮ ಉದ್ದಿಮೆಗಾರರೂ ಇತರ ವ್ಯಾವಸಾಯಿಕರೂ ಮನವಾರೆ ಅರಿತಿಲ್ಲ. ತರಬೇತಿಗೆ ತಕ್ಕ ಪ್ರೋತ್ಸಾಹ ದೊರೆಯುತಿಲ್ಲ. ನಮ್ಮ ಸರಕಾರಿ ಆಡಳಿತಗಾರಿಕೆಯಲ್ಲಿಯೂ 'ಜ್ಯೇಷ್ಠತೆ' (ಸೀನಿಯೊರಿಟಿ) ಒಂದೇ ಸದ್ಗುಣವೆಂದು ಇಂದಿಗೂ ಪರಿಗಣಿಸಲಾಗುತ್ತದೆ! ಈ "ಜ್ಯೇಷ್ಠಾಲಕ್ಷ್ಮಿ" ಯ ಶಾಪದಿಂದ ನಮ್ಮ ರಾಜ್ಯ ಲಕ್ಷ್ಮಿಗೆ ಎಂದು ಬಿಡುಗಡೆಯೋ!

"ತರಬೇತಿಗೆ ಕಳಿಸಲು ನಮ್ಮಲ್ಲಿ ಆಡಳಿತಗಾರರೇ ಸಿಗುವದಿಲ್ಲ." "We cant spare them" ಎನ್ನುವದೊಂದೇ ತಕರಾರು! ನಿಜವಾಗಿಯೂ ಹೀಗೆ spare ಮಾಡಲು ಬರುವ ಆಡಳಿತಗಾರರಿಗೆ ಯಾವ ತರಬೇತಿಯೂ ಉಪಯೋಗದ್ದಲ್ಲ. ಅವರು ಅವಧೂತರು! ಅಂಥ ನಿರುಪಯೋಗಿಗಳನ್ನೆ ತರಬೇತಿಗೆ ಕಳುಹಿಸಲಾಗುತ್ತದೆ! ಇದಕ್ಕೇನು ಮಾಡಬೇಕು?

●

('ಜನಸೇವಕ' ೧೯೬೮)

# ಪ್ರಜೆ, ಪಕ್ಷ ಮತ್ತು ಪ್ರಭುತ್ವ

ನಮ್ಮ ಪ್ರಜಾಪ್ರಭುತ್ವವು ಹೇಗಾದರೆ ಉಳಿದೀತು? ಈ ಪ್ರಶ್ನೆಗೆ ಇನ್ನೊಂದು ಪ್ರಶ್ನೆಯೇ ಉತ್ತರ. ಇತಿಹಾಸದಲ್ಲಿ ಅನೇಕ ಸಲ ಒಂದು ಪ್ರಶ್ನೆಗೆ ಇನ್ನೊಂದು ಪ್ರಶ್ನೆಯೇ ಉತ್ತರವಾಗುತ್ತದೆ. ಇದೂ ಆದೇ ಮಾದರಿಯ ಪ್ರಶ್ನೋತ್ತರ.

ಉತ್ತರದಲ್ಲಿ ಪ್ರತಿಪ್ರಶ್ನೆಯಾಗಿ ಏಳುವ ಅಂಶಗಳು ಈ ರೀತಿಯವು:-

ನಮ್ಮ ಪ್ರಜಾಪ್ರಭುತ್ವಕ್ಕೆ ಅಳಿವು-ಉಳಿವಿನ ಗಂಡಾಂತರ ಒದಗಿದೆಯೆ? ಒದಗಲಿದೆಯೆ? ಅಲ್ಲದೆ, "ಹೇಗಾದರೆ?" ಎಂದಾಗ, ನಮ್ಮ ಪ್ರಜಾಪ್ರಭುತ್ವಕ್ಕೆ ಬೇರೆ ಹೇಗಾದರೂ ಸಿಗಬಹುದಾದ ಪ್ರಮೇಯವಿದೆಯೇ? ಅಂದರೆ, ನಮ್ಮ ಪ್ರಜಾಪ್ರಭುತ್ವ ಬೇರೆ ಸ್ವರೂಪ ತಾಳಿಯೂ ನಿಜವಾದ ಅರ್ಥದಲ್ಲಿ ಪ್ರಜಾಪ್ರಭುತ್ವವೇ ಆಗಿ ಉಳಿಯುವ ಸಂಭವವಿರುತ್ತದೆಯೇ?

ಪ್ರಪಂಚದ ಇತಿಹಾಸವು ಉದಾಹರಿಸುವ ದೃಶ್ಯವೇನು? ಅನೇಕ ದೇಶಗಳಲ್ಲಿ ಪ್ರಜಾ ಪ್ರಭುತ್ವಕ್ಕೆ ಗಂಡಾಂತರವೆದ್ದಾಗ, ಈ ದೇಶವನ್ನೋ ರಾಷ್ಟ್ರವನ್ನೋ ಉಳಿಸಲಿಕ್ಕೆ ಪ್ರಜಾಪ್ರಭುತ್ವವನ್ನೇ ಕೈಬಿಟ್ಟ ಬಲಿಗೊಟ್ಟ ದಾಖಲೆಗಳು ಉಂಟು. ಪ್ರಜಾಪ್ರಭುತ್ವವನ್ನು ಉಳಿಸುವ ಬದಲು ಪ್ರಜೆಯನ್ನೇ ಉಳಿಸಲು ಪ್ರಭುತ್ವದ ಸ್ವರೂಪವನ್ನೇ ಬದಲಿಸಿದ್ದು ಉಂಟು. ಇಂಥ ಬೇರ್ಪಾಟ ಮಾರ್ಪಾಟಗಳಿಂದ ನಾವು ಕಲಿಯಬಹುದಾದ ಪಾಠವೇನು? ಪ್ರಜಾಪ್ರಭುತ್ವವನ್ನು ಇದ್ದಕ್ಕೆ ಇದ್ದಂತೆ ಸೇರ್ಪಡಿಸುವದು, ಬೇರ್ಪಡಿಸಿದ್ದು ಅಪರೂಪದ ಅನುಭವ.

"ಡೆಮೊಕ್ರೆಸಿ"ಯು "ಮೀಡಿಯೋಕ್ರೆಸಿಯ" ಆಡಳಿತ. ಎರಡನೆಯ ತರಗತಿಯ ಧುರೀಣರ ಪ್ರಭುತ್ವ. ಅದರಲ್ಲಿ ಕೆಲವಂಶ "ಬ್ಯೂರೋಕ್ರೆಸಿ" ಉಳಿದದ್ದೆಲ್ಲ "ಹಿಪ್ರೋಕ್ರೆಸಿ" ಕೊನೆಗೂ ಜನತೆ ತನ್ನ ಹಡಂಗಕ್ಕೆ ತಕ್ಕಂತೆಯೇ ಸರಕಾರವನ್ನು ಪಡೆಯುತ್ತದೆ. ಹೀಗೆಲ್ಲ ಪ್ರಜಾಪ್ರಭುತ್ವದ ಕುರಿತು ಅನೇಕ ಸು(?)ಭಾಷಿತಗಳು ಪ್ರಚಾರದಲ್ಲಿ ಇವೆ. ಅತ್ತ ಒಳಿತೂ ಅಲ್ಲ ಇತ್ತ ಕೆಡುಕೂ ಅಲ್ಲದಂಥ ನಿರ್ಗುಣ ಮಾಧ್ಯಮತೆಯೇ "ಮೀಡಿಯೋಕ್ರೆಸಿ" ಇದು ನೌಕರಶಾಹಿಯ ಆಧಾರದಿಂದ ಆಳುತ್ತಾ ಬರೇ ಡಂಭಾಚಾರವನ್ನು ನಡೆಯಿಸುತ್ತದೆ. ಶ್ರೀಸಾಮಾನ್ಯನ ಸಾಮಾನ್ಯ ಶ್ರೀಯ ಪಾತಳಿಗೂ ಮೀರಿದ ನಾಯಕತ್ವ ಅಥವಾ ಪ್ರಭುತ್ವ ಈ ಪ್ರಜಾಪ್ರಾತಿನಿಧ್ಯದ ಆಡಳಿತದಲ್ಲಿ ಒಟ್ಟಾರೆ ಅಶಕ್ಯ. ಈ ಅಶಕ್ಯತೆಯಲ್ಲಿಯೆ ಅದರ ಅಶಕ್ತತೆ ಬೇರೂರಿದೆಯೆಂದರೆ ತಪ್ಪಾಗದು.

ಪ್ರಜಾಪ್ರಭುತ್ವವು ಶಿಥಿಲವಾದಾಗ, ಅದು ಅನವಸ್ಥೆಗೆ ಇಳಿದಾಗ ಈ ಕೋಲಾಹಲ ದೊಳಗಿಂದ ಸಶಸ್ತ್ರ ಬಂಡಾಯವೋ ಸೈನಿಕ ಕ್ರಾಂತಿಯೋ ಆಗಿ ಫ್ಯಾಸಿಸ್ಟ್, ಕಮ್ಯುನಿಸ್ಟ್, ನಾಝೀ ಅಥವಾ ಇನ್ನಿತರ ಮಾದರಿಯ ಸರ್ವಾಧಿಕಾರತ್ವವು ಎದ್ದು ನಿಲ್ಲುತ್ತದೆ. ಇಂಥ ಒಂದೇ ಪಕ್ಷದ, ಪ್ರಜಾಪ್ರಭುತ್ವದಲ್ಲಿ ನಂಬಿಗೆಯೇ ಇಲ್ಲದ ಪಕ್ಷದ ಕಪಿಮುಷ್ಠಿಯಲ್ಲಿ ಪ್ರಜೆ ತಮ್ಮ ಆಶೋತ್ತರಗಳನ್ನೂ ಭಾಗ್ಯಭವಿಷ್ಯವನ್ನೂ ತೆಪ್ಪಗೆ ಒಪ್ಪಿಸುತ್ತದೆ.

ಮತ್ತು ಇಲ್ಲಿಯ ಸೋಜಿಗವೆಂದರೆ ಇಂಥ ಪ್ರಜಾಪ್ರಭುತ್ವ ವಿರೋಧೀ ಸರ್ವಾಧಿಕಾರಿಯು ಪ್ರಜಾಪ್ರಭುತ್ವದ ಸಮ್ಮತಿಯಿಂದಲೇ ಸಮರ್ಥನೆಯಿಂದಲೆ ಪ್ರಜೆಯ ಬೆನ್ನೇರಿ ಕೂತದ್ದು ನಾವು ಕಾಣುತ್ತೇವೆ. ಪ್ರತಿಯೊಂದು ಸರ್ವಾಧಿಕಾರಿಯೂ ಪ್ರಚಂಡ ಜನಪ್ರಿಯತೆಯ ತೆರೆಯನ್ನೇರಿಯೇ ಅಧಿಕಾರದ ಗದ್ದುಗೆಗೆ ತೇಲಿಬಂದು ತಲ್ಪುತ್ತಾನೆ! ಬೆನಿಟೊ ಮುಸ್‌ಲೋನಿ, ಅಡಾಲ್ಫ್‌ಹಿಟ್ಲರ್ ತಮ್ಮ ದೇಶದ ಸಂಸದೀಯ ಬಹುಮತದ ಬಲದಿಂದಲೇ ಸರ್ವಾಧಿಕಾರಕ್ಕೆ ಏರಿದರು. ಇದನ್ನು ನಾವು ಮರೆಯುವಂತಿಲ್ಲ. ಪ್ರಜಾ ಪ್ರತಿನಿಧಿ ಸರಕಾರಗಳನ್ನು ವಿಸರ್ಜನೆ ಮಂತ್ರಿಮಂಡಲವನ್ನು ಸೆರೆಯಲ್ಲಿಟ್ಟು ಅಧಿಕಾರವನ್ನು ವಿಕ್ರಮಿಸಿದ ಸೇನಾಪತಿಗಳೂ ಒಟ್ಟಾರೆ ಪ್ರಜೆಯನ್ನು ರಾಜಕೀಯ ಬಿಕ್ಕಟ್ಟಿನಿಂದ, ಅಸ್ಥಿರತೆ, ಅಸ್ತಿತ್ವತೆಗಳ ಆತಂಕದಿಂದ ಪಾರು ಮಾಡಲಿಕ್ಕೆ ಬಂಧವಿಮೋಚಕರಾಗಿ ಕಾಣಿಸಿಕೊಳ್ಳುತ್ತಾರೆ. ಸುಭದ್ರ ಸರಕಾರದ ಶಾಂತಿ ಸುವ್ಯವಸ್ಥೆಗಳ ಭರವಸೆ ನೀಡುತ್ತಾರೆ ಮತ್ತು ಹುಲಿಯ ಬೆನ್ನೇರಿ ಕೂಡುತ್ತಾರೆ. ಮುಂದೆ ಮಾತ್ರ ಈ ಹುಲಿ ಸವಾರರಿಗೆ ಹುಲಿಯ ಬೆನ್ನಿನಿಂದ ಇಳಿಸುವುದಿಲ್ಲ. ಇಳಿದರೆ ಉಳಿಗಾಲವಿಲ್ಲ. ಹುಲಿಯ ಸವಾರಿ ಸಾಗುತ್ತಲೆ ಇರಬೇಕು. ಬೆನ್ನಿನಿಂದ ಕೆಳಗೆ ಬಂದರೆ ಹುಲಿಯ ಹೊಟ್ಟೆಯಲ್ಲಿಯೆ ಬಡಪಾಯಿಗಳಿಗೆ ಕೊನೆಯ ಆಶ್ರಯ!

ಇಲ್ಲಿ ಗಮನಿಸಬೇಕಾದ ಅಂಶವಿಷ್ಟೆ- ಪ್ರಜಾಪ್ರಭುತ್ವವನ್ನು ಉಳಿಸಲಿಕ್ಕೆ ಅದಕ್ಕೆ ಬೇರೆ ಯಾವ ಸ್ವರೂಪವನ್ನು ಕೊಡುವಂತೆ ಇಲ್ಲ. ಡೆಮೋಕ್ರೆಸಿಗೆ ಗೈಡೆಡ್, ಲಿಮಿಟೆಡ್ ಯಾವ ವಿಶೇಷಣವೂ ಅನ್ವಯಿಸುವಂತೆ ಇಲ್ಲ. ಸರ್ವಾಧಿಕಾರ ಒಂದೇ ಅದಕ್ಕೆ ಪರ್ಯಾಯವಾದದ್ದು ನಾವು ಕಾಣುತ್ತೇವೆ- ರಾಜಸತ್ತೆಯೊಂದನ್ನು ಬಿಟ್ಟರೆ ಈ ಸರ್ವಾಧಿಕಾರವೂ ಶಾಸನಸಭೆಯ ಸಮ್ಮತಿಯಿಂದಲೇ, ಅಥವಾ ಸಾರ್ವಜನಿಕರ ಅನುಮತಿಯಿಂದಲೆ ಪಟ್ಟಕ್ಕೆ ಬರುತ್ತದೆ.

ಅಂದರೆ ಸರ್ವಾಧಿಕಾರವೇ ಇರಲಿ. ಪ್ರಜಾಪ್ರಭುತ್ವವೇ ಇರಲಿ, ಏಕಸತ್ತ ಆಗಲಿ ಲೋಕಸತ್ತೆಯಾಗಲಿ, ಅದು ಅವರ ಪ್ರಭುತ್ವ ಸತ್ತೆಗಳು ಭದ್ರವಾಗಬೇಕಾದರೆ, ಸ್ಥಿರವಾಗಬೇಕಾದರೆ, ಅದಕ್ಕೆ ಪ್ರಜೆಯ ಸಮ್ಮತಿ, ಸಂತೋಷ, ಇಲ್ಲವೆ ಸಹನೆ ಅಗತ್ಯ ಅರ್ಥಾತ್ ಸರಕಾರದ ಸ್ವರೂಪವೇನೇ ಇರಲಿ ಅದು ಕೊನೆಗೂ ಪ್ರಜೆಯದೇ ಸಾರ್ವಭೌಮತ್ವದ ಒಂದು ಆಕಾರ-ಅವಿಷ್ಕಾರ.

ಇಷ್ಟಾಯಿತು ತತ್ವ ವಿಚಾರತೆ ಇನ್ನು ತಪಶೀಲಿಗೆ ಬರೋಣ. ನಮ್ಮ ಪ್ರಜಾಪ್ರಭುತ್ವವು ಹೇಗಾದರೆ ಉಳಿಯುವುದೆಂಬುದಕ್ಕೆ ಪೂರ್ವಭಾವಿಯಾಗಿ ನಮ್ಮ ಪ್ರಜಾಪ್ರಭುತ್ವದ ಕೆಲವು ಮಾನವೀಯ ಲಕ್ಷಣಗಳನ್ನು ಇಲ್ಲಿ ಗುರುತು ಹಾಕಿಕೊಳ್ಳೋಣ.

೧. ನಮ್ಮ ಪ್ರಜಾಪ್ರಭುತ್ವ ಅಸೇತು ಹಿಮಾಚಲ ಅಖಂಡ ಏಕಮೇವ ಪ್ರಜಾರಾಜ್ಯ ವಿರುವದಿಲ್ಲ. ಅನೇಕ ಒಳಮನೆಯಿದ್ದ ಮದುಮನೆಯಿದು. ಒಂದೊಂದು ರಾಜ್ಯಕ್ಕೂ ಒಂದೊಂದು ಸ್ವಯಂಭೂತ, ಕೆಲಮಟ್ಟಿಗೆ ಸ್ವಯಂಪೂರ್ಣ ಪ್ರಜಾರಾಜ್ಯವಿದೆ. ರಾಜ್ಯ ರಾಜ್ಯಗಳ ಈ ಸ್ವಾಯತ್ತತೆ ಅಖಿಲ ಭಾರತೀಯ ಪ್ರಜಾರಾಜ್ಯದ ಒಂದು ಶಾಖೆ-ಅವಯವ-ಅಥವಾ ಅಂಗ ಘಟಕದಂತೆ ಅಲ್ಲ. ಕೇಂದ್ರ ಸತ್ತೆಯ ಪ್ರಜಾಪ್ರಾತಿನಿಧ್ಯ ರಾಜ್ಯಗಳಿಂದ ಬೇರೆ-ಒಂದು ಸಮಾಂತರವಾದ ಕಟ್ಟಡ. ಇನ್ನು ಈ ಕೇಂದ್ರದ ಪ್ರಜಾರಾಜ್ಯ ಹಾಗೂ ರಾಜ್ಯಗಳ ಪ್ರಜಾಪ್ರಭುತ್ವ ಇವುಗಳ ನಡುವೆ ಹಲವಾರು ಹೊಂದಾಣಿಕೆಗಳನ್ನು ನಮ್ಮ ಸಂವಿಧಾನವು ಕಲ್ಪಿಸಿಕೊಟ್ಟು ಭಾರತದ ಫೆಡರೇಷನ್ನಿನ ಅಖಂಡತೆಯನ್ನು

ಕಾಯ್ದುಕೊಂಡಿದೆ. ಆದಾಗೂ ನಮ್ಮ ಈ ಗಣರಾಜ್ಯದಲ್ಲಿ ಅನೇಕ ಪ್ರಾದೇಶಿಕ ಪ್ರಜಾಪ್ರಭುತ್ವಗಳ ವಿಶಿಷ್ಟ ಒತ್ತಡಗಳು ಒಂದನ್ನೊಂದು ಹೇಗೋ ಬೇಧಿಸಿ ನಿಲ್ಲುವಷ್ಟು ಮಟ್ಟಿಗೆ ಒಟ್ಟು ಭದ್ರತೆಯಲ್ಲಿ ಭಾಗಿಯಾಗುತ್ತವೆ.

೨. ಈ ಪ್ರಜಾಪ್ರಭುತ್ವದಲ್ಲಿ ಪ್ರಭುತ್ವ ವಹಿಸುವ ಪ್ರಜಾ ಪ್ರಾತಿನಿಧ್ಯದ ತಳಹದಿಯು ಪ್ರೌಢ ಮತಾಧಿಕಾರ. ಇತರ ದೇಶಗಳಲ್ಲಿ ಶತಮಾನಗಳ ಹೋರಾಟದಲ್ಲಿ ಜನತೆ ಕಾದು ಕಾದಾಡಿ ಪಳಗಿ ಹದಗೊಂಡು ಗಳಿಸಿದ ಈ ಪ್ರೌಢ ಮತಾಧಿಕಾರ ನಮ್ಮ ಪ್ರಜೆಗೆ ಒಮ್ಮೆಲೆ ೧೯೫೧ರ ಜನವರಿಯ ೨೬ರ ಮುಂಜಾವಿಗೆ ಕೈಗೆ ಬಂದುಬಿಟ್ಟಿತು. ಅಧಿಕಾರ ಬಂದರೂ ಅದಕ್ಕೆ ಬೇಕಾದ ಅರ್ಹತೆ ಇನ್ನೂ ದೂರವಿದೆ. ಪ್ರಾಯ ಬಂದವರಿಗೆಲ್ಲ ಅಭಿಪ್ರಾಯ ಬಂದೇ ಬರುತ್ತದೆಂಬ ಎಣಿಕೆ ಈ ಅಧಿಕಾರದಾನದ ಹಿಂದಿದೆ. ಪ್ರಜಾಪ್ರಭುತ್ವ ಯಶಸ್ವಿಯಾಗಿ ಉಳಿಯಲು, ಮತದಾನಕ್ಕೆ ಯೋಗ್ಯ ಅರ್ಥ, ಪ್ರಯೋಜನ, ಅಥವಾ ವಿವೇಕ ಒದಗಿ ಬರಬೇಕು. ಅದಕ್ಕೆ ಹಿನ್ನೆಲೆಯಾಗಿ ಬೇಕಾದ ರಾಜಕೀಯ ಪ್ರವೃತ್ತಿ ಸಾರ್ವಜನಿಕ ಪ್ರಜ್ಞೆ ನಾಗರಿಕ ಪ್ರೌಢಿಮೆ ನಮ್ಮ ಪ್ರೌಢರೆಂಬ ಮತದಾರನಿಗೆ ಬಂದಿರುವದೆ?

೩. ತನ್ನ ಇದ್ದ ಬದ್ದ ಪ್ರಜ್ಞೆ ಮತ್ತು ವಿವೇಕಗಳಿಂದ ಮತದಾನ ಮಾಡಲು ಹೊರಟ ಪ್ರೌಢ ಮತಾಧಿಕಾರಿಯು ಎರಡು ಹುಲ್ಲು ಹೊರೆಗಳ ನಡುವೆ ನಿಂತು ಯಾವುದಕ್ಕೆ ಮೊದಲು ಬಾಯಿ ಹಾಕಬೇಕೆಂಬುದೇ ತಿಳಿಯದೆ ಉಪವಾಸ ಸತ್ತ "ಕತ್ತೆಯ ಸತ್ ಸ್ವರೂಪ"ಕ್ಕೆ ಮಾದರಿಯಾಗಿದ್ದಾನೆ. ಆದರೆ ಈ ಮತದಾರನ ಅವಸ್ಥೆ ಈ ಕತ್ತೆಗಿಂತಲೂ ಹೆಚ್ಚು ಶೋಚನೀಯ. ಏಕೆಂದರೆ ಇವರನ್ನು ಇದಿರಿಸುವದು ಎರಡಲ್ಲ. ಅನೇಕ ಹುಲ್ಲು ಹೊರೆಗಳನ್ನು. ಒಂದೊಂದು ಪಕ್ಷವು ಇಂಥ ಒಂದು ಹುಲ್ಲು ಹೊರೆ. ನಮ್ಮ ಸಾರ್ವತ್ರಿಕ ಚುನಾವಣೆಗಳಲ್ಲಿ ಮತದಾರನ ಮತದಾನ ಒಂದು ಸೋಡತಿಯ ಟಿಕೇಟು ತೆಗೆದಂತೆ. ಈ ಚುನಾವಣೆಗಳಲ್ಲಿ ಹಲವಾರು ಪಕ್ಷಗಳು ಪ್ರಾದೇಶಿಕ ಮತ್ತು ಅಖಿಲ ಭಾರತೀಯ ಪಾತಳಿಯಿಂದ ಒಮ್ಮೆಲೆ ಪೈಪೋಟಿ ನಡೆಯಿಸಿ ನಡುವೆ ಬಡ ಮತದಾರನ ಬೇಟೆ ಆಡುತ್ತವೆ. ಪ್ರಚಾರದ ಢೋಲು ದೊಡ್ಡದಿದ್ದಷ್ಟೂ, ಪ್ರಲೋಭನೆಯ ಜೇಬು ಉದ್ದವಿದ್ದಷ್ಟು ಮತದಾರ ಅತ್ತ ಕಡೆಗೆ ಹೊರಳುತ್ತಾನೆ. ಒಲಿಯುತ್ತಾನೆ. ಅಂದರೆ ನಮ್ಮಲ್ಲಿಯ ಪಕ್ಷೋಪಪಕ್ಷಗಳ ಸಂಕೀರ್ಣ ಸಂದರ್ಭವು ಪರಿಶುದ್ಧ ಮತದಾನವನ್ನು ಅದಕ್ಕೆ ಬೇಕಾದ ಸಂಸದೀಯ ಹಿತಾಸಕ್ತಿಯನ್ನು ಕ್ಲಿಷ್ಟಗೊಳಿಸುತ್ತದೆ.

೪. ಸಾಮಾನ್ಯ ಭಾರತೀಯನ-ನೂರಕ್ಕೆ ೪೮ರಷ್ಟು ಭಾರತೀಯರ ದಿನದ ವರಮಾನ ೧ ರೂಪಾಯಿಗಿಂತ ಕಡಿಮೆ. ೪ ತಿಂಗಳ ವರಮಾನ ೧೯ ರೂ.ಗಿಂತಲೂ ಕಡಿಮೆ.

೫. ಇಂದಿಗೂ- ಸ್ವಾತಂತ್ರ್ಯ ಬಂದು ೨೨ ವರ್ಷಗಳ ನಂತರವೂ ನಮ್ಮಲ್ಲಿ ನೂರಕ್ಕೆ ೨೦ ಜನರು ಮಾತ್ರ ಸಾಕ್ಷರರು.

೬. ನಮ್ಮ ರಾಜಕೀಯದ ಎಲ್ಲ ಬಣ್ಣವನ್ನು ನುಂಗುವ ಮಸಿ ಜಾತೀಯ ಕೋಮುವಾರಿನ ಮನೋಭಾವ. ಅಲ್ಲ, ಮನೋಗಂಡ. ಪ್ರಜಾಪ್ರಭುತ್ವವು ಬಹುಮತದವರ ಗಳಿಕೆ. ಇತರ ದೇಶಗಳಲ್ಲಿ

ಇತರ ಅರ್ಧ ರಾಜಕೀಯ ಬಹುಮತ. ಈ ಮತವು ಪ್ರಚಾರದಿಂದ ಪ್ರಯತ್ನದಿಂದ ಪರಿವರ್ತನೀಯ. ಇಂದಿನ ಬಹುಮತ ನಾಳೆಗೆ ಅಲ್ಪಮತವಾಗುವ ಶಕ್ಯತೆ ಮತ್ತು ಭರವಸೆ ಇಂದಿನ ಅಲ್ಪ ಮತದವರಿಗೆ ಕಾಣುತ್ತದೆ. ಆರಂಭವೇರ್ಪಟ್ಟ, ಲಿಬರಲ್, ಲೇಬರ್, ಸೋಶಲಿಸ್ಟ್, ಡೆಮೋಕ್ರೆಟಿಕ್, ರಿಪಬ್ಲಿಕನ್, ಕಮ್ಯುನಿಸ್ಟ್, ಫ್ಯಾಸಿಸ್ಟ್, ನಾಝೀ ಎಂಥ ಪಕ್ಷವೇ ಇರಲಿ ಅದು ಮುಖ್ಯತಃ ರಾಜಕೀಯದ ವಿಶಿಷ್ಟ ತತ್ವ ತತ್ವಪ್ರಣಬಯ. ವಿಚಾರಸರಣಿಯ ದ್ಯೋತಕ ಮತ್ತು ಘಟಕ ಆದ್ದರಿಂದ ಅಲ್ಲಿ ಮತಪರಿವರ್ತನೆ ಈ ಮೂಲಕ ಪಕ್ಷಗಳ ಬಲಾಬಲ ಬದಲಾವಣೆ ಸಾಧ್ಯ.

ಆದರೆ ನಮ್ಮಲ್ಲಿ ಹಾಗಿಲ್ಲ. ನಮ್ಮಲ್ಲಿ ರಾಜಕೀಯ ಪಕ್ಷ ಸಂಘಟನೆ ಒಂದು ಮಯಸಭೆ. ಇಲ್ಲಿ ನೀರು ನೀರಲ್ಲ, ನೆಲವು ನೆಲವಲ್ಲ. ಅದನ್ನು ಬಲ್ಲವನೇ ಬಲ್ಲ. ಎಂಥ ಧೂರ್ತ ದುರ್ಯೋಧನನೂ ಜಾರಿಬಿದ್ದು ಇಲ್ಲಿ ನಗೆಗೀಡಾಗುವುದೇ ಸರಿ. ಅಂದಾಗ ಅಂಥ ಪಕ್ಷಗಳ ರಂಗವು ಒಂದು ದ್ಯೂತ ಸಭೆ ಈಗದಿದ್ದರೇನೆ, ಈಶಾರ್ಯ. ಅಲ್ಲಿ ದುಃಶಾಸನ ರಾಜ್ಯಲಕ್ಷ್ಮಿಯ ವಸ್ತ್ರಾಪಹಾರಕ್ಕೆ ದುಡುಕದಿದ್ದರೆ ಸೋಜಿಗವಲ್ಲ! ಇಲ್ಲಿ ಯಾವುದೇ ಪಕ್ಷದ ಧೋರಣೆ ಘೋಷಣೆ ಏನೇ ಇದ್ದರೂ, ಮತಗಟ್ಟೆಯಲ್ಲಿ ಅದರ ಗತ್ತುಗಾರಿಕೆ ಗೆಲುವುಗಳ ಗಂಟು ಕಂಡುಬರುವುದು-ಅದರ ಜಾತೀಯ ಆಹ್ವಾನ ಮತ್ತು ಕೋಮುವಾರಿನ ಆಕರ್ಷಣೆಯಲ್ಲಿಯೇ. ಕೊನೆಗೂ ಹುರಿಯಾಳು ಹುರಿದುಂಬುವುದು ತನ್ನ ಜಾತಿಬಾಂಧವರ ಮತದಾನದ ಬಲದಿಂದಲೇ. "ಸ್ವಧರ್ಮ"ಕ್ಕಿಂತ ಕುರುಕ್ಷೇತ್ರದ ಈ ಅರ್ಜುನನಿಗೆ "ಸ್ವಜನ ಮೋಹ" ಹೆಚ್ಚು!

ಅಂದಾಗ ಇಲ್ಲಿ ಬಹುಮತ ಅಲ್ಪಮತಗಳು ಜಾತೀಯವಾಗಿವೆ. ಒಂದೇ ಪಕ್ಷದಲ್ಲಿಯೂ ಜಾತೀಯ ಗುಂಪುಗಾರಿಕೆ ದೃಢಮೂಲವಾಗಿ ಪಡೆಗಟ್ಟುತ್ತದೆ. ಆದ್ದರಿಂದ ನಮ್ಮ ಪ್ರಜಾಪ್ರಭುತ್ವದಲ್ಲಿ ಬಹುಮತ ಅಲ್ಪಮತಗಳು ಸ್ಥಿರಬದ್ಧ ಹೊರತು ಪರಿವರ್ತನೀಯವಲ್ಲ.

ಈ "ಷಡ್ದುರ್ಗೈಶ್ವರ್ಯ"ವನ್ನು ಗಮನಿಸಿದಾಗಲೇ ಗೊತ್ತಾಗುತ್ತದೆ. ನಮ್ಮ ಪ್ರಜಾಪ್ರಭುತ್ವದ ಉಳಿಗಾಲವೆಂತು ಎಂಬುದು. ದಾರಿದ್ರ್ಯ, ದೈನ್ಯ, ಅಜ್ಞಾನ, ಪಕ್ಷಬಾಹುಲ್ಯ, ನಿಷ್ಠೆಯ ದೌರ್ಬಲ್ಯ, ಪ್ರಜಾಪ್ರಭುತ್ವದ ಪ್ರಚಂಡತೆ, - ಇವೆಲ್ಲವುಗಳನ್ನೂ ಮುತ್ತಿ ಮಿಕ್ಕಿ ನಿಂತ ಶಾಪ ಈ ಜಾತೀಯ ಋಣಾನುಬಂಧದ್ದು; ಅಥವಾ ಈ ಜಾತೀಯ ಭಾವನೆಯನ್ನು ರಾಜಕೀಯವಾಗಿ ಬೆಳೆಸಿ ಬಳಸಿಕೊಂಡು ಅದರ ಉರಿಯ ಮೇಲೆ ತಮ್ಮ ಬೇಳೆ ಬೇಯಿಸಿಕೊಳ್ಳುವ ಪಕ್ಷೋಪಪಕ್ಷಗಳದು- ಈ ಸ್ವಾತಂತ್ರ್ಯೋತ್ತರ ಯುಗದ ಜನಸಾಮಾನ್ಯರಲ್ಲಿ. ನಮ್ಮ ಮತದಾರ ವರ್ಗಗಳಲ್ಲಿ ಜಾತೀಯತೆಯು ಸಾಮಾಜಿಕವಾಗಿ ಹಿಂಜರಿಯಹತ್ತಿದೆ. ಆದರೆ ಅದು ಅಧಿಕಾರಕ್ಕೆ ರಾಜಕೀಯವಾಗಿ ಮುಂದೆ ಬರಹತ್ತಿದೆ. ಇದುವೆ ನಮ್ಮ ಪ್ರಜಾಪ್ರಭುತ್ವಕ್ಕೆ ಒಳಕುತ್ತು.

ಅಂದರೆ- ಪ್ರಜಾಪ್ರಭುತ್ವವು ಉಳಿಯಬೇಕಾದರೆ- ಹೇಗೋ ಬದುಕುಳಿಯುವದಲ್ಲ, ವರ್ಚಸ್ವಿಯಾಗಿ ಊರ್ಜಸ್ವಿಯಾಗಿ ಬದುಕುಳಿಯ ಬೇಕಾದರೆ, - ವಿರುದ್ಧ ಲೌಕಿಕ ಪ್ರಜ್ಞೆಯ ರಾಜಕೀಯ ವಾತಾವರಣ ಉಂಟಾಗಬೇಕು, ಉಸಿರಾಡಬೇಕು. ಅದಕ್ಕೆ ಒಂದೇ ದಾರಿ- ಜಾತೀಯತೆಯ ಭಾವ ದೌರ್ಬಲ್ಯದ ಬೇಟೆಯಾಡುವ ಪಕ್ಷಗಳು ಇಲ್ಲವಾಗಬೇಕು. ಇದ್ದ ಪಕ್ಷಗಳಲ್ಲಿ

ಈ ಮೋಹ ಹೋಗಬೇಕು. ಈ ಮೋಹಕ್ಕೆ ಕನಿಷ್ಠ ಪಕ್ಷಕ್ಕೆ ಆದಷ್ಟು ಕಡಿಮೆ ಅವಕಾಶ ಸಿಗುವಂತೆ. ಈ ಪಕ್ಷಗಳೇ ಆದಷ್ಟು ಕಡಿಮೆಯಾಗಬೇಕು. ಇದಕ್ಕೆ ಪೋಷಕವಾಗಿ ಕೇವಲ ಆರ್ಥಿಕ ವಿಚಾರಸರಣಿಯ ಅಭಿವೃದ್ಧಿ ವಿಕಾಸ ಧೋರಣೆಯ ಕಾರ್ಯಕ್ರಮವೇ ಪಕ್ಷ ಸಂಘಟನೆಯ ಬಲವಾಗಬೇಕು. ಅನ್ನಬ್ರಹ್ಮನ ದೇಗುಲದಲ್ಲಿ ಅಭಾವದ ಗಂಟೆ ಬಾರಿಸಿಕೊಳ್ಳುತ್ತಿರುವಾಗ ಜಾತೀಯತೆಯ ಬೇತಾಳ ಬಹುಕಾಲ ಬಾಳುವದಿಲ್ಲ. ಈ ಗಂಟೆಯ ಸದ್ದು ಹೆಚ್ಚಾಗಬೇಕು.

ಇದಕ್ಕೂ ಮೂಲಕ್ಕೆ ಹೋಗಿ ನೋಡುವದಾದರೆ ನಮಗೆ ಮನವರಿಕೆಯಾಗುವ ಕಟುಸತ್ಯವೆಂದರೆ, ಪ್ರಜಾಪ್ರಭುತ್ವಕ್ಕೆ ರಾಜಕೀಯ ಪಕ್ಷ ಪದ್ಧತಿನೇ ಒಂದು ಶಾಪ. ಈ ಪಕ್ಷ ಪದ್ಧತಿಯನ್ನು ನಾವು ಎತ್ತಿ ಕೊಂಡದ್ದು ಇಂಗ್ಲೆಂಡಿನ ಮಾದರಿಯಿಂದ. ಬ್ರಿಟಿಶ್ ಪಾರ್ಲಿಮೆಂಟು ಪ್ರಪಂಚದ ಪಾರ್ಲಿಮೆಂಟುಗಳಿಗೆಲ್ಲ ಮಾಹಾಮಾತೆ. ಆ ಹಿರಿಯಕ್ಕನ ಚಾಳಿ ಉಳಿದ ಮನೆಮಂದಿಗೆ ಬಂದಿದೆ. ಅಲ್ಲಿಯೂ ಕೆಲವು ಶತಮಾನಗಳಿಂದಲೇ ಈ ಪಕ್ಷಗಾರಿಕೆಯು ಹುಟ್ಟಿ ರೂಪಗೊಂಡಿತು. ಸಂಸತ್ತಿನಲ್ಲಿ ಬಹುಮತವು ಆಯಾ ಪಕ್ಷಗಳ ಪ್ರಾತಿನಿಧ್ಯದ ಬಲದಿಂದ ಅಳೆಯುವಂತೆ ಆಯಿತು. ವಿಶಿಷ್ಟ ಮತದ ಬಾಹುಲ್ಯವೆಂಬುದು ಈ ಮತದವರೆಂಬುದರ ಪಕ್ಷದ ಬಹುಸಂಖ್ಯೆಯೆಂದಾಯಿತು.

ಇದಕ್ಕೆ ಕಾರಣ ಪ್ರಜಾಪ್ರಭುತ್ವದಲ್ಲಿ ಪ್ರಜೆಗೂ ಪ್ರಭುತ್ವಕ್ಕೂ ನಡುವೆ ಪ್ರಾತಿನಿಧ್ಯ ತಲೆಯೆತ್ತಬೇಕಾದದ್ದೇ. ಈ ಪ್ರತಿನಿಧಿಗಳಿಗೆ ಪಕ್ಷ ಪದ್ಧತಿಯ ಅತ್ತೆತನ ಒಪ್ಪಬೇಕಾಗಿ ಬಂದದ್ದೂ ಕೇವಲ ಒಂದು ರೂಢಿ. ಬ್ರಿಟಿಶ್ ರಾಜ್ಯ ಘಟನೆಯಾಗಲಿ, ನಮ್ಮ ಸಂವಿಧಾನವಾಗಲಿ ರಾಜಕೀಯ ಪಕ್ಷಗಳನ್ನು ಗಮನಿಸುವುದಿಲ್ಲ. ವಕ್ರಗಾರಿಕೆಗೆ ಸಂವಿಧಾನದಲ್ಲಿ ಸ್ಥಾನ ಇಲ್ಲ. ಅಮೇರಿಕೆಯ ಜಗತ್ಪಸಿದ್ಧ ಅಧ್ಯಕ್ಷರೂ ಪ್ರಜಾಪ್ರಭುತ್ವವಾದೀ ಮಹಾ ಪುರುಷರಲ್ಲಿ ಒಬ್ಬರೂ ಆದ ಅಬ್ರಾಹಂ ಲಿಂಕನ್ ಅವರ ಖ್ಯಾತಿವೆತ್ತ ಗೆಟ್ಸ್ ಬರ್ಗ್ ಭಾಷಣದಲ್ಲಿಯೂ ಒಂದು ಮಾತು ಪ್ರಜಾಪ್ರಭುತ್ವದ ಒಂದು ಪ್ರಮಾಣ ಭೂತ ಸೂತ್ರವಾಗಿದೆ "ಡೆಮೋಕ್ರಸಿ ಈಜ್‌ದ ಗವರ್ನಮೆಂಟ್ ಈಜ್‌ದ ಪೀಪಲ್, ಬಾಯ್ ದ ಪೀಪಲ್ ಎಂಡ್ ಫಾರ್ ದ ಪೀಪಲ್" ಈ ಮಹಾ ವಾಕ್ಯದ ಕೊನೆಯ ಅಂಶದಲ್ಲಿಯೇ ಇದರ ದಂಶವಿದೆ.

ಜನತೆಯು ಜನತೆಯಿಂದ, ಆದರೆ ಜನತೆಯ ಪರವಾಗಿ? ಇದೂ ಕೆಲ ಮಟ್ಟಿಗೆ ಯೋಗ್ಯ ಆ ಕೆಲಮಟ್ಟಿಗೆ ಯೋಗ್ಯ ಅಥವಾ ಅನಿವಾರ್ಯವಾಗಿ ಆಳಲಾರದು. ತೀರ ಚಿಕ್ಕ ಸಮುದಾಯಗಳ ರಾಜ್ಯವಿಲ್ಲದಿರುವಾಗ ಆದ್ದರಿಂದ ಜನತೆಯಿಂದ ಎಂದಾಗ್ಯೂ ಅದು ಅವರ ಪ್ರತಿನಿಧಿಗಳಿಂದ ಎಂದೇ ಭಾವಿಸಬೇಕಾಗುವದು. ಆದರೆ ಮುಂದೆ ಈ "ಫಾರ್ ದ ಪೀಪಲ್" ಎಂಬ ಕಲ್ಪನೆಯ ಪ್ರಜೆಯನ್ನು ಕೈಕಾಲು ಕಣ್ಣು ಪಟ್ಟಿಕಟ್ಟಿ ಪಕ್ಷಗಳ ವಶಕ್ಕೆ ಕೊಟ್ಟಿತು. ಗವರ್ನಮೆಂಟ್ ಬಾಯ್ ಡೆಲಿಸೇಶನ್ ಅಧಿಕಾರದ ವರ್ಗಾಸಂತರ ಆರಂಭವಾಯಿತು.

ಆ ಪ್ರಜೆಗೆ ಇದ್ದ ನಿರ್ವಾಚನದ ಅಧಿಕಾರವು ಪರಿಮಿತವಾಯಿತು. ಪ್ರತಿನಿಧಿಯು ಯಾರು ಏಕೆ ಸಿಗಬೇಕೆಂಬುದರ ಆಯ್ಕೆ ಅವರ ಪರವಾಗಿ ಮುಂಗಡವಾಗಿಯೇ ಒಂದು ರಾಜಕೀಯ ಪಕ್ಷವು ಮಾಡಿ, ಅವರು ಮುಂದಿಟ್ಟ ಹುರಿಯಾಳುಗಳಲ್ಲಿ ಒಬ್ಬನನ್ನು ಆಯ್ದು ಕೊಡುವಂತೆ ಪ್ರಜೆಯ ಅಧಿಕಾರವಾಗಿ ಉಳಿಯಿತು. ಮುಂದೆ ಇನ್ನೊಂದು ಚುನಾವಣೆ ಬರುವ ತನಕ ಈ ಪ್ರತಿನಿಧಿ,

ತನ್ನನ್ನು ಚುನಾಯಿಸಿ ತಂದ ಮತದಾರರಿಗಿಂತ ಹೆಚ್ಚಾಗಿ ಚುನಾವಣೆಗೆ ನಿಲ್ಲಿಸಿ ಚುನಾಯಿಸಿ ತರಿಸಿದ ಪಕ್ಷಕ್ಕೆ ಹೆಚ್ಚು ವಿಧೇಯ ವಿನೀತವಾಗಿ ನಡೆಯುವ ಸಂಪ್ರದಾಯ ರೂಢವಾಯಿತು. ಆಯಾ ಪಕ್ಷಗಳೂ, ಪಕ್ಷಾಂತರರ್ಗತ ಗುಂಪುಗಳು ಮುಂದಿನ ಸರಕಾರ ತಮ್ಮದಾಗುವಂತೆ ಮುಂದೆ ಮಂತ್ರಿಮಂಡಲ ಕಟ್ಟಲು ಜನ ಬೆಂಬಲ ಅನುಕೂಲವಾಗುವ ದೃಷ್ಟಿಯಿಂದಲೇ ಹುರಿಯಾಳುಗಳನ್ನು ನಿಲ್ಲಿಸುವದು ಪಕ್ಷಪದ್ಧತಿ ಆಯಿತು.

ಹೀಗೆ ಅವರಿದಾರ್ಯವಾಗಿ ಪಕ್ಷೀಯ ರಾಜಕಾರಣವು ಪ್ರಭುತ್ವದ ರಾಜ್ಯಸತ್ತೆಯ "ಪಾವರ ಪೊಲಿಟಕ್ಸ್" ಆಯಿತು. ಅದರಲ್ಲಿ ಮತದಾನದ ಮಟ್ಟಿಗೆ ಮಾತ್ರ ಪ್ರಜೆಯ ಸಂಪರ್ಕ ಉಳಿಯಿತು. ಪಕ್ಷದ ನೀತಿ-ಧೋರಣೆ ಕಾರ್ಯಕ್ರಮಗಳಿಗಾಗಿ ಅಧಿಕಾರಸತ್ತೆ ಅಗತ್ಯ. ಆದರೆ ಕ್ರಮೇಣ ಅಧಿಕಾರಸತ್ತೆ ವಶಪಡಿಸಿಕೊಳ್ಳುವದಕ್ಕಾಗಿಯೇ ಪಕ್ಷದ ಪ್ರಚಂಡ ಯಂತ್ರ ಕೆಲಸ ಮಾಡುವಂತಾಯಿತು. ಪಕ್ಷದ ಶ್ರೇಷಗಳಿಗೂ ಅವರ ಅನುಚರರಿಗೂ ಸರಕಾರದಲ್ಲಿ ಹಿರಿಕಿರಿ ಸ್ಥಾನಗಳನ್ನು ಕಟ್ಟಿಕೊಡುವ ಮಟ್ಟಿಗೆ ಮತದಾನದ ಅದರ ಬಹುಸಂಖ್ಯೆಯ ಮಹತ್ವ ಅಗತ್ಯ ಉಳಿಯಿತು. ಪ್ರಜಾಪ್ರಭುತ್ವ ಹೋಗಿ ಪಕ್ಷಪ್ರಭುತ್ವ,- ಪಕ್ಷದಿಂದ ಪಕ್ಷದ ಪ್ರಭುತ್ವ ಪ್ರಜೆಯ ಹೆಸರಿನಿಂದ ಆರಂಭವಾಯಿತು. ಇಲ್ಲಿಯೆ ಕಾಲೂ ಪ್ರವೇಶವಾಯಿತು. ರಾಜಕಾರಣದಲ್ಲಿ!

ಪ್ರಜೆಯ ಹಿತಕ್ಕಿಂತ ಅವರ ಮತಕ್ಕೆ ಪ್ರಾಶಸ್ತ್ಯ ಸಿಕ್ಕಾಗ, ಪಕ್ಷದ ಪ್ರಚಾರಕ್ಕೆ ಪ್ರಜೆಯ ಮಿದುಳು ತೊಳೆಯುವ ಕೆಲಸ ವಹಿಸುವಂತಾಯಿತು. ಇದು ಒಂದು ರೀತಿ ರಾಜಕೀಯ ವಿಶ್ವಸ್ತ ಪದ್ಧತಿ (ಟ್ರಷ್ಟಿಶಿಪ್)ಯ ವಿಡಂಬನೆ. ಪ್ರಜೆಯ ಹಿತಾಹಿತಾವನ್ನು ಪಕ್ಷದ ಕದೀಮರೇ ನಿರ್ಣಯಿಸ ಹತ್ತಿದಾಗ ಇನ್ನೇನು ಆಗಬೇಕು? ಚುನಾವಣೆಯಿಂದ ಚುನಾವಣೆಯ ತನಕ ನಡುವೆ ಪ್ರಜಾಪ್ರಭುಗಳಿಂದು ವಿಧಾನಸಭೆ-ಲೋಕಸಭೆಗಳಲ್ಲಿ ಮೆರೆದಾಡುವ ಈ ಪಕ್ಷದ ಕೈಗೊಂಬೆಗಳ ಕೈಹಿಡಿಯುವವರು ತಡೆಯುವವರು ಯಾರು? ಮುಂದಿನ ಚುನಾವಣೆ ಬಂದಾಗಲೂ ಏನು ಕೈಯಲಿದ್ದ ವರ್ಚಸ್ಸಿನಿಂದ ಪ್ರತ್ಯಕ್ಷ ಅಪ್ರತ್ಯಕ್ಷ ಲಾಭ ಲೋಭಗಳ ಪ್ರಭಾವದಿಂದ ಪ್ರಜೆಯನ್ನು ಮೋಹದಲ್ಲಿ ಸಿಲುಕಿಸಿ "ಕುರುಡು ಕಾಂಚಾಣದ ಕುಣಿತ"ಕ್ಕೆ ಜಾಲಾಡಿಸಿ ಅವರ "ಅಮೂಲ್ಯ" ಮತಗಳನ್ನು ಮತದಾರ ಕ್ಷೇತ್ರದಲ್ಲಿ ಆಳುವ ಪಕ್ಷಕ್ಕೆ ಪಳಗಿದ ಕೈಚಳಕವಾಗಿದೆ.

ಚುನಾವಣೆಗಳು ಎಷ್ಟೇ ಸ್ವತಂತ್ರ ಅನಿರ್ಬಂಧವೆಂದರೂ ಪ್ರಜೆಗೆ, ಒಂದೇ ಆಳುವ ಪಕ್ಷವನ್ನು ಇಲ್ಲವೆ ಅದನ್ನು ಉರುಳಿಸುವಂತೇ ಆಳಬೇಕೆಂಬ ಪಕ್ಷವನ್ನು ತನ್ನ ಬೆನ್ನಿಗೇರಿಸಿಕೊಳ್ಳುವದು ಅದರ ಕಡಿವಾಣಕ್ಕೆ ತನ್ನ ಬಾಯಿ ಕಳೆದು ಕೊಡುವುದೊಂದೆ ದಾರಿ ತೆರೆದಿರುತ್ತದೆ.

ಈ ರೀತಿ ಪ್ರಜೆ ಮತ್ತು ಪ್ರಭುತ್ವಗಳ ನಡುವೆ ಈ ಪಕ್ಷ ಪದ್ಧತಿಯ ಪೆಡಂಭೂತ ಬೆಳೆದು ನಿಂತು ತನ್ನ ವಿರಾಧ ಬಾಹುಗಳಲ್ಲಿ ಸಾರ್ವಜನಿಕ ಜೀವನವನ್ನೂ ರಾಜಕೀಯ ಆಶೋತ್ತರಗಳನ್ನು ಅವಚಿ ಹಿಚುಕಿ ಬಿಡುತ್ತಿದೆ.

ಇತ್ತ ಆರಿಸಿಹೋದ ಪ್ರತಿನಿಧಿಗೂ ಉಭಯ ಸಂಕಟ. ಆತ ಯಾರ ಹಿತಕ್ಕೆ ಹೊಣೆಗಾರ -ಮತದಾರರಿಗೋ ತನ್ನನ್ನು ಆರಿಸಿ ತರಿಸಿದ ಪಕ್ಷದ ಖದೀಮರಿಗೋ? ಒಂದು ಕೇಂದ್ರವಲ್ಲಿ

ಸರಕಾರ ಕಟ್ಟಿದ ಕಾಂಗ್ರೆಸ್ಸಿನ ಸಂಸತ್ ಪಕ್ಷಕ್ಕೂ ಹೊರಗಿನ ಸಂಘಟನೆಗೂ ನಡುವೆ ಎದ್ದ ಸಂಘರ್ಷದ ಮೂಲವು ಇದೇ ಸಂಕಟದಲ್ಲಿದೆ. ಆದ್ದರಿಂದ ಪ್ರಜಾಪ್ರಭುತ್ವ ಉಳಿಯಬೇಕಾದರೆ ಈ ರಾಜಕೀಯ ಪಕ್ಷಗಳ ಭಂಡಾಟ, ಪುಂಡಾಟಗಳಿಗೆ ತೀವ್ರವಾದ ತಡೆ ಬೀಳಬೇಕು. ಅದು ಹೇಗೆ?

ಪಕ್ಷದ್ರೋಹಿ ಸದಸ್ಯನಿಗೆ, ಮತದಾರ ಕ್ಷೇತ್ರಕ್ಕೆ ಸೇವೆ ಸಲ್ಲಿಸದ ಸದಸ್ಯನಿಗೆ ತಿರುಗಿ ಕರೆಯಿಸಿಕೊಳ್ಳುವ ಹಕ್ಕು ಮತದಾರರಿಗೆ ಇರತಕ್ಕದ್ದು.

ಇದ್ದ ಅನೇಕಾನೇಕ ಪಕ್ಷಗಳು ವಿಲೀನವಾಗಿ ದೇಶದಲ್ಲಿ ಹೆಚ್ಚೆಂದರೆ ಮೂರು ಮಹಾಪಕ್ಷಗಳೇ ಉಳಿಯತಕ್ಕದ್ದು. (ಪಕ್ಷದ ಪ್ರಾದೇಶಿಕತೆ, ರಾಗದ್ವೇಷಗಳ ಒತ್ತಡಗಳು ಕಡಿಮೆ ಆಗಲಿಕ್ಕೆ ಅವು ಅಖಿಲ ಭಾರತೀಯ ಸ್ವರೂಪವನ್ನು ತಾಳುವುದೇ ಮೊದಲ ಹೆಜ್ಜೆ) ಬಂಡವಾಳ, ಮುಕ್ತಪೇಟೆ, ಸ್ವತಂತ್ರ, ಖಾಸಗಿ ರಂಗಗಳನ್ನು ನಂಬಿದವರಿಗೊಂದು: ಯೋಜನಾಬದ್ಧ ಅಭಿವೃದ್ಧಿವಿಕಾಸ ಸಾರ್ವಜನಿಕರಂಗ, ಸಮಾಜವಾದಗಳನ್ನು ನಂಬಿರುವದು ಇನ್ನೊಂದು- ಇವೆರಡು ಪ್ರಜಾಪ್ರಭುತ್ವ ವನ್ನು ನೆಚ್ಚಿದವರ ಪಕ್ಷಗಳು. ಹಾಗೆಯೇ ವಿಪ್ಲವವಾದೀ ಕಮ್ಯುನಿಸ್ಟರದು ಮತ್ತೊಂದು. ಹೀಗೆ ಮೂರು ಮಹಾಪಕ್ಷಗಳಿರತಕ್ಕದ್ದು.

ಪಕ್ಷ ನಿರಪೇಕ್ಷ ಪ್ರಜಾಪ್ರಭುತ್ವವೇ ನಮ್ಮ ಗುರಿಯಾಗತಕ್ಕದ್ದು. ಎಂ.ಎನ್. ರಾಯ್ ಅದನ್ನೆ ಹೇಳಿದರು. ಇಂದು ಪೂಜ್ಯ ವಿನೋಬ, ಜಯಪ್ರಕಾಶ ನಾರಾಯಣರು ಅದನ್ನೇ ಹೇಳುತ್ತಿದ್ದಾರೆ.

ಅನಭಿವೃದ್ಧಿ ಅಥವಾ ಅಭಿವೃದ್ಧಿಯ ಯೋಜನಾ ಕಾರ್ಯದ ವೇಳಾಪಟ್ಟಿಕೆಗೆ ಬದ್ಧವಾದ ದೇಶಕ್ಕೆ ರಾಷ್ಟ್ರಕ್ಕೆ ಪ್ರಜೆಗೆ ಈ ಪಕ್ಷಪ್ರತಿಪಕ್ಷಗಳ ಪೈಪೋಟಿ ಒಳತೋಟಿಗಳು ಒಂದು ತಲೆಭಾರದ ವಿಲಾಸಭೋಗ, ಅಥವಾ ಶಕ್ತಿಪಾಟ. ಇಂದಿನ ಈ ಅನೇಕ ಪಕ್ಷೀಯ ಕೋಲಾಹಲಕ್ಕಿಂತ ಏಕಪಕ್ಷೀಯ ಹಾಲಾಹಲವನ್ನಾದರೂ ಕುಡಿದು ಮೃತ್ಯುಂಜಯರಾಗಬೇಕೆಂದು ಅನಿಸಿದರೆ ಅದು ಕ್ಷಮ್ಯವೇ ಸರಿ.

ಆತನಕ ನಾವು ಸಾಧಿಸಬೇಕಾದುದು ಚುನಾವಣೆಯ ಬೇರೊಂದು ವಿಧಾನ. ಆದಷ್ಟು ಅಪ್ರತ್ಯಕ್ಷವಾಗಿ ನಡೆದರೆ ಹಳ್ಳಿಯ ಪಂಚಾಯತದಿಂದ ದಿಲ್ಲಿಯ ಪಾರ್ಲಿಮೆಂಟಿನ ತನಕವೂ ಒಂದು ಏಕ ಸೂತ್ರವಾದ ಪ್ರಜಾಪ್ರಭುತ್ವವು ಶಂಕಾಕೃತಿಯಂತೆ ರೂಪಗೊಳ್ಳಬಹುದು. ಈಗ ಪ್ರತಿಯೊಬ್ಬರೂ ಬೇರೆ ಬೇರೆಯಾಗಿ ತಮ್ಮ ಶಂಖ ಊದುತ್ತಿದ್ದಾರೆ. ಪ್ರಾಥಮಿಕ ಚುನಾವಣೆಗಳೊಮ್ಮೆ ಗ್ರಾಮದ ಪಾತಳಿಯಲ್ಲಿ ಆದರೆ ಮುಂದೆಲ್ಲ ಅಪ್ರತ್ಯಕ್ಷವಾಗಿಯೇ ರಾಜ್ಯ ವಿಧಾನಸಭೆಗಳ ಆಯ್ಕೆ ನಡೆದರೆ ಏನೇನೂ ಸಾಧ್ಯವಿಲ್ಲ. ಕೇಂದ್ರಕ್ಕಾಗಿ ಬೇಕಾದರೆ ನೇರವಾಗಿ ಬೇರೆ ಸಾರ್ವತ್ರಿಕ ಚುನಾವಣೆಗಳು ನಡೆಯಲಿ. ಅಲ್ಲಿಯ ಸಮಸ್ಯೆಗಳೇ ಬೇರೆ.

ಇದೆಲ್ಲ ವಿವರವಾಗಿ ಚರ್ಚಿಸಲಿಕ್ಕೆ ಇಲ್ಲಿ ಅವಕಾಶವೂ ಇಲ್ಲ ಅಗತ್ಯವೂ ಇಲ್ಲ. ಈ ನಿಟ್ಟಿನಲ್ಲಿ ನಮ್ಮ ಪ್ರಜ್ಞೆ ಕೆರಳಿದರೆ ಈ ಬರಹ ಬರಡಾಗದಂತೆ ಎಂದು ಭಾವಿಸಿದ್ದೇನೆ.

●

('ಜನಪ್ರಗತಿ' ೧೯೬೯)

# ಪಕ್ಷ ರಾಜಕಾರಣದ ವ್ಯಾಕರಣ

ಸಮಾಜದ, ಜನತೆಯ, ಅಥವಾ ದೇಶದ ಹಿತವನ್ನು ಮಾಡುವ ರೀತಿಗಳು ಮುಖ್ಯವಾಗಿ ಎರಡು. ಒಂದು ವೈಯಕ್ತಿಕ; ಇನ್ನೊಂದು ಸಾರ್ವಜನಿಕ. ಇಲ್ಲವೆ ಸಾಮುದಾಯಿಕ, ವೈಯಕ್ತಿಕ ರೀತಿಯೆಂದರೆ, ತನಗೆ ಯುಕ್ತ ಕಂಡ ರೀತಿಯಲ್ಲಿ ಇಷ್ಟವೆನಿಸಿದ ಧ್ಯೇಯದಂತೆ ಏಕಾಕಿಯಾಗಿ ಇಲ್ಲವೆ ತನ್ನಂತೆಯೇ ಧ್ಯೇಯ ಧೋರಣೆಗಳುಳ್ಳ ಇನ್ನೂ ಕೆಲವರ ಗುಂಪು ಕಟ್ಟಿಕೊಂಡು - ಅದನ್ನೇ ಸಂಘವೆನ್ನಿ ಸಂಸ್ಥೆ ಎನ್ನಿ ದಲವೆನ್ನಿ ಜನಹಿತದ ಕಾರ್ಯಕ್ಕಾಗಿ ದುಡಿಯುವುದು ಇದು ಸೇವೆಯ ಮಾರ್ಗ.

## "ಸಾರ್ವಜನಿಕ'ದ ವ್ಯಾಖ್ಯೆ

ಸಾರ್ವಜನಿಕವೆಂದರೆ ಒಟ್ಟು ಜನತೆಯ ಆದಷ್ಟು ಹೆಚ್ಚು ಸಂಖ್ಯೆಯ ಹಿತವನ್ನು ಆದಷ್ಟು ಶೀಘ್ರವಾಗಿ ತೀವ್ರವಾಗಿ ಸಾಮೂಹಿಕವಾಗಿ ಸಾಧಿಸಬೇಕೆಂದು ಅದರ ನಿಶ್ಚಿತ ಕಾರ್ಯಯೋಜನೆಯನ್ನು ಕಣ್ಣಮುಂದೆ ಇಟ್ಟುಕೊಂಡು ಶಕ್ಯವಿದ್ದಷ್ಟು ಬಹುಸಂಖ್ಯ ಜನರನ್ನು ಧೋರಣೆಗೆ ಒಲಿಸಿ ಅದರ ಒತ್ತಾಯಕ್ಕೆ ಒಡಂಬಡಿಸಿ ಎಲ್ಲರ ಸಾಹಸ ಸಹಕಾರ ಹಾಗೂ ಸಾಧನೆಯಿಂದ ದೇಶದ ಆಡಳಿತವನ್ನೇ ವಶಪಡಿಸಿಕೊಂಡು ಅದರ ಮುಖಾಂತರ ವ್ಯಾಪಕವಾಗಿ ತನ್ನ ಉದ್ದೇಶವನ್ನು ಆಚರಣೆಗೆ ತರುವದು. ಇದು ಸತ್ತೆಯ ಮಾರ್ಗ.

## 'ಪಕ್ಷ'ಗಳ ಹುಟ್ಟು

ರಾಜಕೀಯ ಪಕ್ಷ ಹುಟ್ಟುವದೂ ಬೆಳೆಯುವದೂ ಈ ಮಾರ್ಗದಲ್ಲಿ. ರಾಜಕೀಯ ಚಟುವಟಿಕೆಯೆಂದರೆ ಸತ್ತೆಗಾಗಿ ಅಧಿಕಾರಕ್ಕಾಗಿ ನಡೆಯಿಸಿದ ಇಲ್ಲವೆ ನಡೆಯುವ ವಿಶಿಷ್ಟ ಮಾದರಿಯ ಚಟುವಟಿಕೆ. ಇದಕ್ಕೆ ವೈಯಕ್ತಿಕ ಅಂಗವಿಲ್ಲ, 'ಖಾಸಗೀ ರಂಗ' ವಿಲ್ಲ. ವ್ಯಕ್ತಿಗತ ಗುಣದೋಷಗಳ ಹೇತು-ಹೇವಗಳ, ರಾಗ-ದ್ವೇಷಗಳ ಸ್ಪರ್ಶವಿಲ್ಲ, ಲಕ್ಷ್ಯವಿಲ್ಲ.

ಅಂದರೆ ರಾಜಕಾರಣಕ್ಕೆ ಅದೂ ಪಕ್ಷೀಯ ರಾಜಕೀಯಕ್ಕೆ ಸತ್ತೆಯೊಂದೇ ಗುರಿ. "power politics" ಎಂಬ ಮಾತೇ ಒಂದು ರೀತಿ ಪುನರುಕ್ತಿ. All politics is for power. ರಾಜಕಾರಣವೆಲ್ಲ ರಾಜ್ಯಸತ್ತೆಗಾಗಿಯೇ, ಆದರೆ ಇಲ್ಲಿ ಒಂದು ವಿವೇಕವೆಂದರೆ, ಈ ಸತ್ತೆ ಒಂದು ತಾತ್ಕಾಲಿಕ ಸಾಧ್ಯ, ಅನಂತರದ ಸಾಧನ-ಜನತೆಯ ಕಲ್ಯಾಣಕ್ಕಾಗಿ.

## ಎಲ್ಲರೂ 'ಪತಿ'ಗಳಾಗರು!

ಒಂದು ಪಕ್ಷವೆಂದರೇನು? ಪಕ್ಷವೆಂದರೆ ಡಚ್ ಸೈನ್ಯದಂತೆ ಎಲ್ಲರೂಸೇನಾಪತಿಗಳು- ಯಾರೂ ಸೈನಿಕರಲ್ಲ-ಎಂಬಂತೆ ಅಲ್ಲ. ಬಹುಸಂಖ್ಯ ಸದಸ್ಯರು ಕೂಡಿದರೆ ಕೂಡಿದಾಗಲೆ ಅದೊಂದು ಪಕ್ಷ. ಆ ಪಕ್ಷದ ತತ್ವಪ್ರಣಾಲಿಯಲ್ಲಿ ಕಾರ್ಯಕ್ರಮದಲ್ಲಿ ಸಾಧ್ಯ-ಸಾಧನಗಳ ಹೊಂದಾಣಿಕೆಯಲ್ಲಿ ಮತ್ತು ಒಟ್ಟು ಸಾಧನೆಯ ಸಮರ್ಪಕತೆಯಲ್ಲಿ ನಂಬಿಗೆ ಇರುವ ಇಡುವ ಪ್ರೌಢರೆಲ್ಲರೂ ಒಂದಾಗಿ

ಕೂಡಿ ಮುಂದಾಗಿ ಮಾಡಿದ ಸಂಘಟನೆ. ಈ ಸಂಘಟನೆಗಾಗಿ ಸದಸ್ಯರೋ? ಸದಸ್ಯರಿಗಾಗಿ ಸಂಘಟನೆಯೋ? ಇದನ್ನು ಸಂದರ್ಭೋಚಿತವಾಗಿಯೇ ನಿರ್ಣಯಿಸಬೇಕಾಗುತ್ತದೆ. ಅನೇಕ ಸಲ ತಾನು ಸಾಧಿಸಲು ಹೊರಟ ಧ್ಯೇಯಕ್ಕೆ ತಕ್ಕ ಧೋರಣೆ ಪಕ್ಷದ ಕೈಗೆ ಮೀರಿದ ಸಾಹಸವಾಗುತ್ತದೆ. ರಾಷ್ಟ್ರದ ಬಾಳಿನ ಒತ್ತಾಯ ಐತಿಹಾಸಕ ಅನಿವಾರ್ಯತೆ ಭರದಿಂದ ಸಾಗಿ ಅದರ ದಾಪಿಗೆ ತಕ್ಕ ಹೆಜ್ಜೆ ಹೊಂದಿಸಿಕೊಳ್ಳಲು ಪಕ್ಷದ ಮುಖಂಡರಿಗೋ ಕೆಲವೊಂದು ಗುಂಪುಗಳಿಗೋ ಶಕ್ಯವಾಗದೆ ಇಷ್ಟವಾಗದೇ ಹೋಗಬಹುದು.

### ಕಾಂಗ್ರೆಸ್ಸಿನ ಸ್ಥಿತ್ಯಂತರ

ಉದಾಹರಣೆಗೆ ಡೇವ್ಹಿಡ್‌ಹ್ಯೂಮ್ ಸ್ಥಾಪನೆ ಮಾಡಿದ ಕಾಂಗ್ರೆಸ್ಸಿನ ಗುರಿ ದಾರಿಗಳು ಯಾವವಿದ್ದವು? ಲೋಕಮಾನ್ಯರ ಕಾಲದಲ್ಲಿ ಅವು ಏನಾದವು, ಗಾಂಧೀಜಿಯ ಯುಗದಲ್ಲಿ ಈ ಪಕ್ಷದ ಸ್ವರೂಪವೇನಾಯಿತು? ನೆಹರೂ ಪರ್ವದಲ್ಲಿ ಯಾವದು, ಈಗ ೧೯೬೭ರ ಮಹಾ ಚುನಾವಣೆಗಳ ನಂತರದ ಸಂದರ್ಭದಲ್ಲಿ ಅದರ ನೋಟ-ನಿಟ್ಟು ನಡೆ ನಂಬಿಕೆಗಳೇನಾಗಿವೆ?

ಪಕ್ಷ ಒಂದು ಪ್ರವಾಹ. ಅದು ಒಂದೇ ಕಂಡರೂ ಅಲ್ಲಲ್ಲಿ ಅದರ ತಿರುವು ಮುರುವು ಆಳ ಅಗಲ. ವೇಗ ಓಘ ಎಲ್ಲ ಬೇರೆ. ಅಲ್ಲಿ ಪ್ರತಿ ಕ್ಷಣಕ್ಕೂ ಅದರ ನೀರೇ ಬೇರೆ. ಆದರೂ ಅದೊಂದು ಪ್ರವಾಹ. ಹಾಗೆಯೇ ಒಂದು ಪಕ್ಷ.

### ಸಿಡುಕು-ಒಡಕು

ಸುರತ ಕಾಂಗ್ರೆಸ್ಸಿನಲ್ಲಿ ಕಾಂಗ್ರೆಸ್ಸು ಇಬ್ಭಾಗವಾಯಿತು. ರೋಷಾವೇಷದ ವಿಕಾರಗೆಟ್ಟ ಪ್ರಸಂಗಗಳು ಬಹಳವಾದವು. ಅಧ್ಯಕ್ಷ ಸರ್ ಸುರೇಂದ್ರನಾಥ ಬ್ಯಾನರ್ಜಿಯು ವೇದಿಕೆಯಲ್ಲಿ ನಿಂತಾಗ ಅವರ ಕಡೆಗೆ ಚಪ್ಪಲಿಗಳನ್ನೂ ಕೊಳೆತ ತತ್ತಿಗಳನ್ನೂ ಎಸೆದರು. ತಿಲಕರ ಗುಂಪು ಕಾಂಗ್ರೆಸ್ಸನ್ನು ಒಡೆಯಿತು. ತೀವ್ರವಾದಿಗಳು ಬೇರೆ ಆದರು. ಮಂದಗಾಮಿಗಳು ಹಿಂದೆ ಬಿದ್ದರು. ಮರುವರ್ಷ ತೀವ್ರವಾದಿಗಳೇ ಕಾಂಗ್ರೆಸ್ಸನ್ನು ವಶಪಡಿಸಿಕೊಂಡರು. ಕಾಂಗ್ರೆಸ್ಸು ಒಡೆದರೂ ಬಲಶಾಲಿಯಾಗಿ ಬೆಳೆದು ಒಡೆತನವನ್ನೇ ಪಡೆಯಿತು.

ಮುಂದೆ ತಿಲಕರ ಗುಂಪು-ತಿಲಕರ ನಂತರ- ಹಿಂದೆ ಬಿದ್ದಿತು. ಗಾಂಧೀಜಿಯ ಕೈಯಲ್ಲಿ ಕಾಂಗ್ರೆಸ್ಸಿನ ಸೂತ್ರಗಳು ಬಂದವು. ಹಳಬರೆಲ್ಲ ಹಾಹಾಕಾರ ಮಾಡಿದರು. ತಿಲಕ ಪಂಥಿಗಳು ಹೊಸ ಪಕ್ಷದ ಪಂಥ ತೊಟ್ಟರು. ಆದರೆ ಕಾಂಗ್ರೆಸ್ಸು ಉತ್ತರೋತ್ತರ ಶಕ್ತಿಯಲ್ಲಿಯೂ ವ್ಯಾಪ್ತಿಯಲ್ಲಿಯೂ ಪ್ರಚಂಡವಾಗಿಯೇ ಬೆಳೆಯಿತು.

### ನೆಹರೂ ಯುಗದಲ್ಲಿ

ಮುಂದೆ ನೆಹರೂಜಿ ಲಾಹೋರ ಕಾಂಗ್ರೆಸ್ಸಿನ ಅಧ್ಯಕ್ಷರಾದರು. ಆತನಕ ಗುರಿ ವಸಾಹತು ಸ್ವರಾಜ್ಯವಿತ್ತು. ನೆಹರು ರಿಪೋರ್ಟನ್ನೂ 'ಸ್ವರಾಜ್ಯ ಪಕ್ಷ' ದವರು ಸಿದ್ಧಮಾಡಿದ್ದರು. ಆದರೆ ಅಂದಿನ 'ತರುಣ ತುರ್ಕ' ನೆಹರೂ, ಸುಭಾಸ ಪ್ರಭೃತಿಗಳು ಒಪ್ಪಲಿಲ್ಲ. ಕಾಂಗ್ರೆಸ್ ಆಗಲೂ

ಇಬ್ಭಾಗವಾಗುವದರಲ್ಲಿ ಇತ್ತು. ಆದರೆ ಗಾಂಧೀಜಿ ತುಂಬ ದೂರದರ್ಶಿಗಳು. ಅವರು ಮೋತಿಲಾಲರಿಗೆ ಪತ್ರ ಬರೆದರು-ನಮ್ಮ ಕಾಲ ಮುಗಿಯುತ್ತ ಬಂದಿದೆ. ತರುಣರ ದಾರಿಯಲ್ಲಿ ನಾವು ತೊಡಕಾಗುವದು ಬೇಡ. ಕೊನೆಗೂ ದೇಶ ಅವರದು. ಅವರ ಮುಂದಾಳುತನಕ್ಕೆ ಮಾರ್ಗ ಮಾಡಿಕೊಡೋಣ. ಆಯಿತು ಅಂದಿನಿಂದ ಪೂರ್ಣ ಸ್ವರಾಜ್ಯ ನಮ್ಮ ಗುರಿ ಆಯಿತು. ಮುಂದೆ ಗಾಂಧೀಜಿಯ ಉತ್ತರಾಧಿಕಾರಿ ಯಾರು? ರಾಜಾಜಿಯೋ ನೆಹರೂಜಿಯೋ? ಎಂಬ ಪ್ರಶ್ನೆ ಎದ್ದಾಗ ಗಾಂಧೀಜಿಯವರೇ ನಿಸ್ಸಂದಿಗ್ಧ ಉತ್ತರವಿತ್ತರು.- ರಾಜಾಜಿ ಅಲ್ಲ ನೆಹರೂಜಿ ಎಂದು.

### ಹಳೆಯದರ ಬದಲು....

ಈ ಕೆಲವು ಮೈಲುಗಲ್ಲುಗಳತ್ತ ಬೆರಳಿಟ್ಟು ತೋರಿಸಿದ್ದೇಕೆ? ಬೆಳೆಯುವ ಪಕ್ಷ ಬಲಿಯುತ್ತದೆ, ಒಳ ಒತ್ತಡಕ್ಕೆ ಬಿರಿಯುತ್ತದೆ. ಅದರಿಂದ ಶಕ್ತಿ ಸಂವರ್ಧನೆಯೇ ಆಗುತ್ತದೆ-ತಾತ್ಕಾಲಿಕವಾಗಿ ಭಂಗವೋ ಭಯವೋ ಸೋಲು ನೋವುಗಳೋ ಏನೇನೋ ಅನುಭವಕ್ಕೆ ಬಂದಾಗ್ಯೂ.

"Old order changeth
Yielding place to new
And God fulfills Himself in many ways
Lest one good Custom should corrupt the world." ಅಂದಿಲ್ಲವೇ ಮಹಾ ಕವಿ ಟೆನಿಸನ್? ದೈವೇಚ್ಛೆ ಈಶ ಸಂಕೇತ ಹಲವು ಪರಿಯಾಗಿ ಪೂರೈಸಲ್ಪಡುವದುಂಟು. ಒಂದು ಒಳ್ಳೆಯ ಸಂಪ್ರದಾಯವಾದರೂ ಬದಲಾಗದಿದ್ದರೆ ಅದರಿಂದ ಹಾನಿ ಹಾಳೇ ಆಗುತ್ತದೆ. ಆದ್ದರಿಂದ ಹಳೆಯ ವ್ಯವಸ್ಥೆ ಸಂಘಟನೆ ಹೋಗಿ ಹೊಸತು ಬರುತ್ತದೆ-ಬಂದರೆ ಅದು ಅನಾಹುತವಲ್ಲ.

### ಸತ್ತೆ ಗುರಿಯ ಸಾಧನೆಗೆ

ಕೆಲವು ಜೀವಾಣುಗಳು ಇಬ್ಭಾಗವಾಗಿಯೇ ವೃದ್ಧಿ ಹೊಂದುತ್ತವೆ.

ಕೆಲವು ಪ್ರಚಂಡ ರಾಜಕೀಯ ಪಕ್ಷಗಳೂ ಹಾಗೆಯೇ ಸರಿ.

ಒಂದು ಪಕ್ಷದ ಮುಂದಾಳು ವರ್ಗಸತ್ತೆಗಾಗಿಯೇ ಹೋರಾಡುತ್ತದೆ. ಬಹುಮತದಿಂದ ಸರಕಾರ ಕಟ್ಟುತ್ತದೆ-ಸರಕಾರದ ಬಲದಿಂದ ತನ್ನ ಯೋಜನೆ ಕಾರ್ಯಗತಗೊಳಿಸಲಿಕ್ಕೆ. ಸತ್ತೆಗಾಗಿ ಅದರ ಪಾಲುಗಾರಿಕೆಗಾಗಿ ಹೆಣಗಾಡುವದು ಯಾವ ಪಾಪವೂ ಅಲ್ಲ. ಆದರೆ ಅದರ ಗುರಿ ದಾರಿ ಅದರ ಜವಾಬು ದಾರಿ ಇವು ಮಹತ್ವದವು.

### ಎಲ್ಲರಿಗೂ ಒಂದೇ ತಾರೆ

ಜಾನ್ ಕೆನೆಡಿ ಅಮೆರಿಕೆಯ ಅಧ್ಯಕ್ಷನಾಗಲು ಹೆಣಗಾಡಿದನು. ಅವನಿಗೆ ಯಾರೋ ಕೇಳಿದರು. "ನೀನು ಶ್ವೇತಭವನಕ್ಕೆ ಹೋಗಲು ಯಾಕೆ ಬಯಸುತ್ತೀ?" ಆತ ಒಂದೇ ಮಾತಿನಲ್ಲಿ ಉತ್ತರವಿತ್ತನು. "There is power there" (ಅಲ್ಲಿ ಅಧಿಕಾರ ಸತ್ತೆ ಇದೆ!) ಅಂದಾಗ ಕಾಂಗ್ರೆಸ್ ಏನು, ಜನಸಂಘವೇನು, ಕಮ್ಯುನಿಸ್ಟರೇನು ಸೋಶಲಿಸ್ಟರೇನು. ಯಾವ ನಿಷ್ಠರೇನು- ಎಲ್ಲರೂ

ಕಣ್ಣಿಟ್ಟ ಧ್ರುವತಾರೆ ಅಧಿಕಾರ ಸತ್ತೆ. ತಾನು ಅದನ್ನು ಬಯಸುವದು ಸೇವೆಗಾಗಿ, ತನ್ನ ಇದಿರಾಳಿ ಬಯಸುವದೋ- ಛೇ ಅದು ಅಧಿಕಾರ ಲಾಲಸೆ! ಇಷ್ಟೇ ವ್ಯತ್ಯಾಸ!

## ಜನೇಚ್ಛೆಗೆ ಒಡ್ಡು ಸಲ್ಲ

ಜನತೆ ಒಂದು ವಿಚಾರ ಮನದಟ್ಟು ಮಾಡಿಕೊಳ್ಳಬೇಕು. ಒಂದು ಪಕ್ಷದ ಸ್ವಾರ್ಥ-ಅದರ ಅಧಿಕಾರ ಪ್ರಯೋಜನದ ಕಲ್ಪನೆ - ದೇಶದ ಬಹುಸಂಖ್ಯ ಪ್ರಜೆಗೆ ಅಥವಾ ವರ್ಚಸ್ವಿಯಾದ ವರ್ಗಕ್ಕೆ ಹಿತಕಾರಿ ಆಗುವನಕ ಆ ಪಕ್ಷವನ್ನು ಆ ವರ್ಗಕ್ಕೆ ಆ ಪ್ರಜೆ ಎತ್ತಿ ಹಿಡಿದು ಹಿಂಬಾಲಿಸುತ್ತದೆ. ಆದರೆ ಪಕ್ಷದ ಮೂಲಕ ಒಂದು ವರ್ಗದ ಹಿತ ತೃಪ್ತಿ ಆದೊಡನೆ ಆ ವರ್ಗ ಹಿಂದೆ ಬೀಳುತ್ತದೆ. ಹಾಗೆಯೇ ಪಕ್ಷದ ಪ್ರಯೋಜನ ಮುಗಿದು ಅದೂ ಕಾಲನ ಕಸದ ಬುಟ್ಟಿಯನ್ನು ಸೇರುತ್ತದೆ. ಆಗ ಅತೃಪ್ತ ಜನತೆ ಇನ್ನೊಂದು, ತನ್ನ ಆಶೋತ್ತರಗಳಿಗೆ ಸಮರಸವಾಗಬಹುದೆಂದು ಭಾವಿಸಿದ ಪಕ್ಷವನ್ನು ಎತ್ತಿ ಹಿಡಿಯುತ್ತದೆ.

## 'ನಾಯಕತ್ವ' ಏನು?

ಒಂದು ಪಕ್ಷದಲ್ಲಿಯೂ ಹಾಗೆಯೇ ಅದರ ಕೈಗೆ ಸತ್ತೆ ಬಂದಾಗ ಈ ಸತ್ತೆಯ ವಿನಿಯೋಗದ ಬಗೆಗೆ ಮತಭೇದ ಬಿದ್ದು ಪಕ್ಷದಲ್ಲಿ ಪಂಗಡಗಳು ಏಳುತ್ತವೆ. ಆಗ ಒಂದು ಪಂಗಡದ ನಾಯಕತ್ವದ ವೈಯಕ್ತಿಕ ಸ್ವಾರ್ಥವೇನೇ ಇದ್ದರೂ, ಅದರ ಒಟ್ಟು ನಿಲುಮೆ ಪಕ್ಷದ ಬಹುಸಂಖ್ಯರಿಗೆ ಅವರು ಪ್ರತಿನಿಧಿಸುವ ಜನತೆಗೆ ಪ್ರಗತಿಪರವೆಂದೂ ತಮ್ಮ ಕಲ್ಯಾಣದ್ದೆಂದೂ ಅನಿಸಿದರೆ ಅವರೆಲ್ಲ ದೊಡ್ಡ ಪ್ರಮಾಣದಲ್ಲಿ ಈ ನಾಯಕತ್ವಕ್ಕೆ ಅನುಯಾಯಿಯಾಗುತ್ತಾರೆ-ಇನ್ನೊಂದು ಪಂಗಡದ ನಾಯಕರು ವ್ಯಕ್ತಿಶಃ ಎಷ್ಟೇ ಜ್ಯೇಷರಾಗಿದ್ದರೂ!

## ಧರ್ಮಕ್ಕೆ ವಿಚಿತ್ರ ಮೂಲ

ಇಂಗ್ಲೆಂಡದಲ್ಲಿ ಹಿಂದೆ ೮ನೆಯ ಹೆನ್ರಿ ಎಂಬ ಕಾಮುಕ ರಾಜನು ಕುಲೀನಳಲ್ಲದ ಒಬ್ಬ ದಾಸಿಯನ್ನ ಮದುವೆ ಆಗುವ ಹಟಕ್ಕೆ ಬಿದ್ದು ಪೋಪನೊಡನೆ ಜಗಳಾಡಿ ಅದರ ರೊಚ್ಚಿನಲ್ಲಿ ಇಂಗ್ಲಂಡಕ್ಕೆ ಪೋಪನ ಸತ್ತೆ ಇರದ ಪ್ರೊಟೆಸ್ಟಂಟ್ ಪಂಥ ಜಾರಿಗೆ ತಂದನು. ಅವನ ಖಾಸಗಿ 'ಸ್ವಂಟು' ಈ ರಾಷ್ಟ್ರಕ್ಕೆ ಧರ್ಮಕ್ರಾಂತಿಯನ್ನೇ ತಂದು ಇತಿಹಾಸದ ಹೊಸ ಅಧ್ಯಾಯಕ್ಕೆ ಆರಂಭ ಮಾಡಿಕೊಟ್ಟಿತು.

●

('ಜನಸೇವಕ' ೧೯೬೯)

# ರಾಜಕಾರಣದಲ್ಲಿ 'ಆತ್ಮಸಾಕ್ಷಿ'ಯ ಇತಿಮಿತಿ!

ಯುದ್ಧವೆದ್ದಾಗ ಸತ್ಯಕ್ಕೆ ಮೊದಲನೆಯ ಗುಂಡಂತೆ. ಹಾಗೆಯೇ ಸದ್ಯದ ಕಾಂಗ್ರೆಸ್ಸಿನ ಯಾದವೀ ಕಲಹದಲ್ಲಿ ಕುಲಕ್ಕೆ ಕೇಡಾಗಿ ಹುಟ್ಟಿ ಹೊರಬಿದ್ದ ಒನಕೆ - ಆತ್ಮಸಾಕ್ಷಿ ಯಾನೇ ಮನಸ್ಸಾಕ್ಷಿ!

### ಆತ್ಮ ರಾಜಕೀಯಕ್ಕೆ ವೈರಿ

ಆತ್ಮಸಾಕ್ಷಿಯ ಇತಿಮಿತಿಗಳೇನು? ರಾಜಕೀಯದಲ್ಲಿ - ಅದೂ ಪಕ್ಷೀಯ ರಾಜಕಾರಣದಲ್ಲಿ ಆತ್ಮಸಾಕ್ಷಿಗೆ ಅಂತಃಕರಣಕ್ಕೆ ಅವಕಾಶವಿದೆಯೇ? ಇರಬೇಕೆ? ಶ್ರೀ ನಿಜಲಿಂಗಪ್ಪನವರು ಈ ಯಾದವೀ ಕಲಹದ ರಣಕಹಳೆ ಊದಿದಾಗಲೆ ಹೇಳಿದ್ದರು. "Conscience has no place in politics." ರಾಜಕಾರಣದಲ್ಲಿ ಆತ್ಮಸಾಕ್ಷಿಗೆ ಸ್ಥಾನವೇ ಇಲ್ಲ! ಎಂಥ ಭಯಾನಕವಾದ ಮಾತಿದು!

ಕಾಂಗ್ರೆಸ್ಸಿನಲ್ಲಿ ಗಾಂಧೀ ಯುಗ ಆರಂಭವಾದ್ದದೇ ಊರ್ಜಿತ ಹೊಂದಿದ್ದೇ ಆತ್ಮಸಾಕ್ಷಿಯ ದೀಕ್ಷೆ ಆ ಮಹಾತ್ಮನು ನಮ್ಮ ರಾಜಕಾರಣಕ್ಕೆ ಕೊಟ್ಟಿದ್ದರಿಂದ. ಆತನೆಕ-ಅನಂತರವೂ-ರಾಜಕಾರಣಿಯೆಂದರೆ ನೆಹರೂಜೀ ಒಂದೆಡೆಗೆ ಹೇಳಿದಂತೆ a peculiar species of opportunist. ಸಂಧಿಸಾಧಕತನ ಒಂದು ವಿಶಿಷ್ಟ ಜಾತಿ. ಈ ಜಾತಿಗೆ expediency ಉಪಾಯಗಾರಿಕೆಯೊಂದೇ ತತ್ವ. ಇಂಥವರ ಆತ್ಮಸಾಕ್ಷಿ ಜೇಬಿನಲ್ಲಿ - ಸ್ವಂತ ಜೇಬಿನಲ್ಲಿ ಅಲ್ಲ ಇವರಿಗೆ ಇವರ ಪಕ್ಷಕ್ಕೆ ರಾಜಕೀಯ ಹಗರಣಕ್ಕಾಗಿ ಹಣ ಕೊಡುವವರ ವಿಶಾಲವಾದ ಜೇಬಿನಲ್ಲಿ.

### ಗೋಖಲೆ ದೀಕ್ಷೆ

ಆದರೆ ಗಾಂಧೀಜಿ ಅವರ ಗುರು ಗೋಖಲೆಯವರಿಂದ ಕಲಿತು ಕಾಂಗ್ರೆಸ್ಸಿಗೆ ಕಲಿಸಲು ಬಂದದ್ದೇನು? "To spiritualise politics" ರಾಜಕಾರಣಕ್ಕೆ ಆಧ್ಯಾತ್ಮಿಕ ರೂಪವನ್ನು ಕೊಡಲಿಕ್ಕೆ. ಅಂದರೆ ಇದರ ನೆಲೆಯೇ ಆತ್ಮ ಸಾಕ್ಷಿ. ಇದು ಮಿಡಿಯುವ ಜೀವಶ್ರುತಿಯೇ 'ಒಳದನಿ'. (Inner voice)

ಆದರೆ ನಮ್ಮ ನಿಜಲಿಂಗಪ್ಪನವರು ಅಂತರಂಗ ಶುದ್ಧಿ ಬಹಿರಂಗ ಶುದ್ಧಿಯನ್ನು ಶೋಧಿಸಿದ ಶ್ರೀ ಬಸವೇಶ್ವರನ ಪರಮ ಅನುಯಾಯಿಗಳು- ಹೇಳಿಬಿಟ್ಟರು ರಾಜಕಾರಣದಲ್ಲಿ ಆತ್ಮಸಾಕ್ಷಿಗೆ ಸ್ಥಾನವೇ ಇಲ್ಲವೆಂದು. ಅಂದರೆ ರಾಜಕಾರಣವೆಂಬುದು ಧೂರ್ತರ ವಂಚಕರ ಆಡುಂಬೊಲ ವೆಂದಾಯಿತು!

### ಆತ್ಮಕ್ಕೆ ಅಪರಾಧ ಸಾಧುವೆ?

ಆದರೆ ಒಂದು ಮಾತು ಸತ್ಯ. ಆತ್ಮಸಾಕ್ಷಿಗೆ ಎಲ್ಲೆಲ್ಲಿಯೂ ಸಾರ್ವಭೌಮ ಪಟ್ಟವಿದ್ದರೂ ಅದು ಇದ್ದಲ್ಲಿ ಅದೊಂದೇ ಆಳತಕ್ಕದ್ದು. ಒಂದು ಶಾಸನ ಒಂದು ಶಿಸ್ತು ಒಂದು ಶಿಷ್ಯತ್ವ ಅಥವಾ ಒಂದು ಸಂಪ್ರದಾಯವನ್ನು ಒಪ್ಪಿಕೊಳ್ಳುವಾಗಲೂ ಆತ್ಮಸಾಕ್ಷಿಯನ್ನು ಮನ್ನಿಸಿಯೇ ಒಪ್ಪಿಕೊಳ್ಳಬೇಕು. ಒಪ್ಪಿಕೊಂಡ ಮೇಲೆ ಆತ್ಮ ಒಪ್ಪಿಕೊಂಡಿರುವತನಕವೂ ನಿಷ್ಠೆಯೊಂದಿಗೆ ನೇಮದೊಂದಿಗೆ ವ್ಯಭಿಚಾರ

ಮಾಡಕೂಡದು. ಅದಕ್ಕೆ ದ್ರೋಹ ಅಪಚಾರ ಬಗೆಯಬಾರದು.

ಆದರೆ ಒಂದೊಮ್ಮೆ ಆ ಶಿಸ್ತು-ಶಾಸನಗಳು ಒಪ್ಪಿಗೆ ಆಗದಿದ್ದರೆ? ಈಗಲೂ ಆತ್ಮಸಾಕ್ಷಿಯನ್ನು ಹತ್ತಿಕ್ಕಿ ಅದಕ್ಕೆ (ತಲೆ ಬಾಗಬೇಕೇ?) ಎಂದೆಂದಿಗೂ ಇಲ್ಲ. ಆಗ ಒಂದೇ ಒಂದು ಕರ್ತವ್ಯ- ಆತ್ಮ ಸಾಕ್ಷಿಯನ್ನು ಒಪ್ಪಿಕೊಂಡು ಆ ನಿಷ್ಠೆಗೆ ಶರಣು ಹೊಡೆದು ಹೊರಬೀಳುವದು.

## ಸ್ವಾರ್ಥಕ್ಕೂ ಆತ್ಮಸಾಕ್ಷಿ

ಅಂದರೆ ಇತ್ತ ಆತ್ಮಸಾಕ್ಷಿಯೂ ಬೇಕು. ಅತ್ತ ಅದೊಂದು ಅಂಶ ಬಿಟ್ಟು ಉಳಿದ ವಿಷಯಗಳಲ್ಲಿ ಪಕ್ಷದ ಶಾಸನದ ಲಾಭವೂ ಬೇಕು - ಇಂಥ ಧೂರ್ತಧೋರಣ ಉಪಯೋಗದ್ದಲ್ಲ. ಇದು ಆತ್ಮ ಸಾಕ್ಷಿಯ ನೆವದಲ್ಲಿ ಮನಬಂದಂತೆ ನಡೆದು ಯಾವ ರೀತಿಯಿಂದಾದರೂ ತನ್ನ ಸ್ವಾರ್ಥವನ್ನು ಸಾಧಿಸುವ ಹೊಂಚಾಗುತ್ತದೆ.

ಏನೇ ಇರಲಿ. ನಮ್ಮ ಈ ಕಾಂಗ್ರೆಸ್ಸಿನ ಕದನ ಕೋಲಾಹಲದಲ್ಲಿ ಆತ್ಮಸಾಕ್ಷಿಯ ದನಿ ಹೊರಟದ್ದು ಹೇಗೆ? ಯಾವಾಗ? ಅದರ ಪ್ರಸ್ತಾಪವೆತ್ತದ್ದು? ಕೆಲವು ಕಾಂಗ್ರೆಸ್ಸಿಗರು ರಾಷ್ಟ್ರಪತಿ ಚುನಾವಣೆಯಲ್ಲಿ ಮತದಾನಕ್ಕೆ ಆತ್ಮ ಸ್ವಾತಂತ್ರ್ಯವನ್ನು ಕಾಂಗ್ರೆಸ್ ಅಧ್ಯಕ್ಷರಿಂದ ಬೇಡಿದಾಗ.

## 'ಕಾಂಗ್ರೆಸ್' ಆತ್ಮಸಾಕ್ಷಿ!

ಈ ಬೇಡಿಕೆಯ ಹಿನ್ನೆಲೆ ಏನು? ಕಾಂಗ್ರೆಸ್ಸು ತನ್ನ ಹುರಿಯಾಳನ್ನು ನಿಲ್ಲಿಸಿತು. ಅತ್ತ ಶ್ರೀಮಾನ್ ಗಿರಿಯವರೂ ಸ್ವತಂತ್ರ ಹುರಿಯಾಳಾಗಿ ನಿಂತರು- ಕಾಂಗ್ರೆಸ್ಸಿನಿಂದ ಹೊರಬಿದ್ದು (ಮುಂದೆ ಅವರನ್ನು ಕಮ್ಯುನಿಷ್ಟರೂ ಮುಸ್ಲಿಮರೂ ಬೆಂಬಲ ಕೊಟ್ಟಿರಲಿ. ಆ ಮಾತ್ರಕ್ಕೆ ಅವರ ನಿಷ್ಪಕ್ಷ ಹುರಿಯಾಳೆಂಬುದನ್ನು ಅಲ್ಲಗಳೆದಂತೆ ಅಲ್ಲ) ಹಾಗೆಯೇ ಸ್ವತಂತ್ರ ಜನಸಂಘ ಪಕ್ಷಗಳು ಡಾ॥ ದೇಶಮುಖರನ್ನು ನಿಲ್ಲಿಸಿದರು.

ಇವೆಲ್ಲ ಸರಿ. ಆದರೆ ಮುಂದೆ ಮಾತ್ರ ಮತಗಳನ್ನು ಬೇಡಲು ಎದ್ದಾಗ ಕಾಂಗ್ರೆಸ್ ಶ್ರೇಷ್ಠಿಗಳು ಬೇಲಿ ಹಾರಿದರೆಂದು ಪ್ರಸಿದ್ಧವಾಯಿತು. ತಮ್ಮ ಹುರಿಯಾಳಿಗೆ ವಿರುದ್ಧ ಪಕ್ಷದವರ ದ್ವಿತೀಯ ಪ್ರಾಶಸ್ತ್ಯದ ಮತಗಳನ್ನು ಬೇಡಲು ಹೋದರು. ಮೊದಲೆ ಈ ಹುರಿಯಾಳು ಅಷ್ಟೇನು ಪರಿಶುದ್ಧನಿದ್ದಿಲ್ಲ (ಅವನ ಮೇಲೆ ಸುಪ್ರೀಮ್ ಕೋರ್ಟಿನ ನಿಷ್ಠುರವಾದ ಟೀಕೆ ಆಗಿತ್ತು. ಆ ಮೂಲಕ ಆತ ತನ್ನ ಮುಖ್ಯ ಮಂತ್ರಿ ಪದವಿಯನ್ನು ಬಿಟ್ಟುಕೊಡಬೇಕಾಗಿ ಬಂದಿತ್ತು) ಆದಾಗ್ಯೂ ಪಕ್ಷದ ಶಿಸ್ತಿಗಾಗಿ ಪ್ರಧಾನಿ ಪ್ರಭೃತಿಯೇ ಅವನಿಗೆ ಆರಂಭದಲ್ಲಿ ಎತ್ತಿಹಿಡಿದರು.

## ರಾಷ್ಟ್ರಪತಿ ಹುದ್ದೆಗೇ ಅಪಮಾನ

ಆದರೆ ಅವನಿಗಾಗಿ ವಿರೋಧೀ ಪಕ್ಷಗಳಲ್ಲಿ - ಅವರ ಸ್ವಂತ ಹುರಿಯಾಳು ಇರುವಾಗ, ಅವರು ಕಾಂಗ್ರೆಸ್ಸಿನ ನೀತಿ ನಿಲುಮೆಗಳನ್ನು ಉಗ್ರವಾಗಿ ಬಹಿರಂಗವಾಗಿ ವಿರೋಧಿಸುತ್ತಿರುವಾಗ- ಮತಗಳ ಯಾಚನೆಗಾಗಿ ಕಾಂಗ್ರೆಸ್ ಯಜಮಾನರು ಮುಂದಾದಾಗ ಅನೇಕ ನಿಷ್ಠಾವಂತ ಕಾಂಗ್ರೆಸ್ ಧುರೀಣರಿಗೆ ಇದು ಅಸಹ್ಯವೆನಿಸಿತು.

ಆಗ ಆತ್ಮಸಾಕ್ಷಿಯ ಬೇಡಿಕೆ ಮುಂದೆ ಬಂದಿತು. ಸಾಮಾನ್ಯವಾಗಿ ಒಟ್ಟಾಭಿಪ್ರಾಯದಿಂದಲೆ ರಾಷ್ಟ್ರಾಧ್ಯಕ್ಷನಂಥ ಅತ್ಯುನ್ನತ ಪದಾಧಿಕಾರಿಯನ್ನು ಆಯ್ಕೆ ಮಾಡುವದು ಯೋಗ್ಯ. ಆದಷ್ಟು ಅದು ಪಕ್ಷಾತೀತವಾಗಬೇಕು. ಅದರ ಅರ್ಹತೆ ಸಂಶಯಾತೀತವಿರಬೇಕು. ಅಂದಲ್ಲಿ ಕಾಂಗ್ರೆಸ್ ಹುರಿಯಾಳಿನ ಈ ಮೂಲ್ಯ ವಿಚ್ಛೇದನೆ ಆಗದಿದ್ದರೂ, ತಾತ್ವಿಕವಾಗಿ ಆತ್ಮಸಾಕ್ಷಿಯಂತೆಯೇ ಇಂಥ ಚುನಾವಣೆಗಳಲ್ಲಿ ಮತದಾನವಾದರೆ ಅದು ಕ್ಷೇಮಕರವೇ ಸರಿ. ಇಲ್ಲಿಯಂತೂ ಪ್ರಾಮಾಣಿಕ ವಾಗಿಯೂ ಆತ್ಮಸಾಕ್ಷಿಯ ಬೇಡಿಕೆ ಮಾಡಿದವರ ದೃಷ್ಟಿಯಲ್ಲಿ ಆಗ ಕಾಂಗ್ರೆಸ್ ಹುರಿಯಾಳು ಪಕ್ಷದ ಹುರಿಯಾಳಾಗಿ ಉಳಿದಿದ್ದಿಲ್ಲ. ಯಾರಿಂದಲೂ ಮತ ಗಿಟ್ಟಿಸಿಕೊಳ್ಳಲು ಹೊರಟ ಬಿಡಿ ಹುರಿಯಾಳಾಗಿಬಿಟ್ಟಿದ್ದನು.

## ರಾಷ್ಟ್ರಾಧ್ಯಕ್ಷ ಪಕ್ಷಾತೀತ

ಈ ಮಹತ್ವದ ಆಯಕಟ್ಟಿನ ಬದಲಾವಣೆಯ ಹಿನ್ನೆಲೆಯಲ್ಲಿ ಆತ್ಮಸಾಕ್ಷಿಯ ಪ್ರಶ್ನೆ ಬಂದಿತು. - ರಾಷ್ಟ್ರಾಧ್ಯಕ್ಷರ ಚುನಾವಣೆಗಳಲ್ಲಿ ಪಕ್ಷ - ಪ್ರತಿಪಕ್ಷಗಳ ಅಡ್ಡ-ಉದ್ದ ಗೆರೆಗಳು ಅಷ್ಟೊಂದು ತೀವ್ರವಾಗಿ ಎಳೆಯಬೇಕಾಗಿ ಇದ್ದಿಲ್ಲ. ಅವು ಹಾಗೆ ಇದ್ದದ್ದು ಇಲ್ಲವೆಂಬುದು ಚುನಾವಣೆಯ ಫಲಿತಾಂಶದಲ್ಲಿ ಕಂಡು ಬಂದಿತು.

ಹೀಗೆ ಅಧ್ಯಕ್ಷೀಯ ಚುನಾವಣೆಯ ಒಂದು ವೈಕಲ್ಪಿಕ (exceptional) ಸಂದರ್ಭದಲ್ಲಿ ಮಾಡಿದ ಬೇಡಿಕೆ ನಡೆದ ಭೂಮಿಕೆ ಎಲ್ಲೆಡೆಗಳಲ್ಲಿ ಸಲ್ಲಬೇಕೆಂದರೆ ಹೇಗೆ? ಸಾಮಾನ್ಯ ಪಕ್ಷೀಯ ನಿರ್ಣಯಗಳ ಬಗೆಗೂ- ಸಂಸತ್ತಿನಲ್ಲಿ ಇರಲಿ, ಸಂಘಟನೆಯಲ್ಲಿ ಇರಲಿ - ವಿಶಿಷ್ಟ ಪ್ರಶ್ನೆಗಳ ಕುರಿತು ಮತಗಣನೆಯ ಅಗತ್ಯ ಬಿದ್ದಾಗ ಪಕ್ಷದ ಪ್ರತೋದ (whip) ನು ಹೇಳಿದಂತೆ ಸದಸ್ಯರು ತೆಪ್ಪಗೆ ಮತದಾನ ಮಾಡಲೇಬೇಕು.

## ಹಿಂದಿನ ಒಂದು ಘಟನೆ

ಇನ್ನು ಅಂಥಲ್ಲಿಯೂ ಕೆಲವು ಸಲ ಸ್ವಪಕ್ಷಕ್ಕೂ ಪಕ್ಷಧುರೀಣರು ಆತ್ಮ ಸ್ವಾತಂತ್ರ್ಯ ಕೊಡುವದುಂಟು. ಉದಾಹರಣೆಗೆ 'ಹಿಂದೂ ಕೋಡ್' ಬಿಲ್ಲಿನ ಕುರಿತು ಮತದಾನದ ಸಮಯ ಕಾಂಗ್ರೆಸ್ ಪಾರ್ಲಿಮೆಂಟರಿ ಸದಸ್ಯರಿಗೆ ಅಂಥ ಸ್ವಾತಂತ್ರ್ಯ ಕೊಡಲಾಗಿತ್ತು. ಏಕೆಂದರೆ ಅದೂ ಒಂದು ವಿಶಿಷ್ಟ ಪಕ್ಷಾತೀತ ಪರಿಣಾಮದ ಪ್ರಶ್ನೆಯ ಸಂದರ್ಭವಾಗಿತ್ತು.

ಅಂದರೆ ಪಕ್ಷಾಂತರ್ಗತ ಸಂದರ್ಭಗಳಲ್ಲಿಯೂ ವಿಶೇಷ ಪ್ರಸಂಗಗಳಲ್ಲಿ ಆತ್ಮಸಾಕ್ಷಿಗೆ ಮನ್ನಣೆ ಸಿಗುವದುಂಟು. ಪಕ್ಷಾತೀತ ಸಂದರ್ಭಗಳಲ್ಲಿಂತೂ ಆತ್ಮಸಾಕ್ಷಿಯೊಂದೇ ಕ್ಷೇಮದ ದಾರಿ.

## ಇಮ್ಮೊಗದ ಇಕ್ಕಟ್ಟು ಬೇಡ

ಇವೆರಡು ಇತಿಮಿತಿಗಳನ್ನು ನೆನಪಿಟ್ಟುಕೊಂಡರೆ ಆತ್ಮಸಾಕ್ಷಿಯಿಂದ ಯಾವ ಹಾನಿಯೂ ಇಲ್ಲ. ಇನ್ನು ಪಕ್ಷದ ವಿಶಿಷ್ಟ ನಿಲುಮೆಗೆ ಮನಸ್ಸು ಒಪ್ಪದಿದ್ದರೆ ಆಗಲೂ ಆತ್ಮಸಾಕ್ಷಿಯ ಕರೆಗೆ ಒಗೊಟ್ಟು ನಡೆಯುವದು ಕರ್ತವ್ಯವೇ ಸರಿ - ಆದರೆ ಈಗ ಪಕ್ಷದಿಂದಲೇ ಹೊರಬಿದ್ದು ನಡೆಯಬೇಕು.

ಬೇಟೆಯಲ್ಲಿ ಅತ್ತ ಮೊಲದೊಂದಿಗೂ ಓಡು, ಇತ್ತ ನಾಯಿಯೊಂದಿಗೂ ಓಡು - ಹೀಗೆ ಇಮ್ಮೊಗದ ಇಕ್ಕಟ್ಟು ಗಂಡಾಂತರದ್ದು. ಮನಬಂದಂತೆ ಮತದಾನ ಮಾಡಿಯೂ ತಾನು ಅದೇ ಪಕ್ಷದಲ್ಲಿ ಉಳಿಯುವೆನೆಂದರೆ ಅದು ಆತ್ಮಸಾಕ್ಷಿ ಅಲ್ಲ - ಶುದ್ಧ ಸಂಧಿಸಾಧಕ ಬಕಪಕ್ಷಿ!

ಸಿಂಡಿಕೇಟಿನ ರಾಯಸ ಲೆಕ್ಕಿಸದೆ ಇಂಡಿಕೇಟಿನ ಹಿಂದೆ ಹೋದವರ ದೃಷ್ಟಿಯಿಂದ ನಿಜವಾದ ಪಕ್ಷ ಈ ಕಡೆಗೆ ಇದೆ. ಇದುವೆ ಪಕ್ಷದ ಬಹುಸಂಖ್ಯೆಯ ಆವ್ಹಾನ ಎನಿಸಿದೆ, ಅಂದಾಗ ಅದು ಆತ್ಮಸಾಕ್ಷಿಯ ಹಗರಣವಲ್ಲ. ಪಕ್ಷನಿಷ್ಠೆಯದೇ ಶಿಸ್ತುಪಾಲನ. ಆದರೆ ಇದನ್ನು ಒಪ್ಪುವರಾರು?

●

('ಜನಸೇವಕ' ೧೯೬೯)

# ಹಿಂದೂ ವಿಶ್ವ ಮತ್ತು ವಿಶ್ವ ಹಿಂದೂ ಪರಿಷತ್ತು

ವಿಶ್ವ ಹಿಂದೂ ಪರಿಷತ್ತಿನ ಕರ್ನಾಟಕ ಸಮ್ಮೇಳನ ಡಿಸೆಂಬರ್ ೧೩.೧೪ರ ಎರಡು ದಿನ ಕನ್ನಡ ಕರಾವಳಿಯ ಮಹಾಕ್ಷೇತ್ರವಾದ, ಉಡುಪಿಯಲ್ಲಿ, ಕುಲಕೋಟಿ ಜಾತಿ ಮತ ಪಂಥಗಳನ್ನೆಲ್ಲ ಭಾಗವತ ಸಂಪ್ರದಾಯದಲ್ಲಿ ಸಮರಸಗೊಳಿಸಿ ಹಿಂದೂ ಸಮಾಜವನ್ನು ಉದ್ಧರಿಸಲು ಹೊರಟ ಶ್ರೀಕೃಷ್ಣನ ಸನ್ನಿಧಿಯಲ್ಲಿ ನೆರೆಯಲಿದೆ. ಉಡುಪಿ ವೈಷ್ಣವರ ಮಾಧ್ವ ಸಮಾಜದವರ ಸನಾತನ ನಗರಿ. ವಿಶ್ವದ ಕ್ಯಾಥೊಲಿಕ್ ಕ್ರೈಸ್ತರಿಗೆ ಪೋಪನ ವ್ಯಾಟಿಕನ್ ಜಗದ್ಗುರು ಪೀಠವಿದ್ದ Eternal City ರೋಮದಂತೆ.

### ಪ್ರಚಾರ-ಸಂಚಾರ

ಆ ಸನ್ನಿವೇಶದಲ್ಲಿ ಈ ಪರಿಷತ್ತಿನ ಅಧಿವೇಶನ ಒಂದು ರೀತಿ ತುಂಬ ಔಚಿತ್ಯಪೂರ್ಣವೇ ಸರಿ. ಅಧಿವೇಶನಕ್ಕೆ ಪೂರ್ವಭಾವಿಯಾಗಿ ಜಾಗೃತಿ ಉಂಟುಮಾಡಲು ಇತ್ತೀಚೆಗೆ ಕುಮಟಾ, ಅಂಕೋಲಾ, ಕಾರವಾರಗಳಲ್ಲಿ ಪರಿಷತ್ತಿನ ಸ್ವಾಗತ ಸಮಿತಿಯ ಕಾರ್ಯದರ್ಶಿ ಶ್ರೀ ಕೃ.ಸೂರ್ಯ ನಾರಾಯಣ ರಾವ್ ಅವರು ಸಂಚಾರ ಮುಗಿಸಿ ಹೋದರು. ಅವರ ಪ್ರಾಜ್ಞತೆ ವಾಗ್ಮಿತೆಗಳು ಈ ಸಮ್ಮೇಲನದ ಯಶಸ್ವಿಗೆ ಒಂದು ಪ್ರಾಭಾವಿಯಾದ ಪ್ರಹರಣವಾಗುವದರಲ್ಲಿ ಸಂದೇಹವಿಲ್ಲ.

ಆ ಸಂದರ್ಭದಲ್ಲಿ ಈ ಪರಿಷತ್ತಿನ ತತ್ವಪ್ರಣಾಲಿ ಮತ್ತು ಉದ್ದೇಶ ಸಾಧನೆಗಳ ಕುರಿತು ತುಸು ಚಿಂತನ-ಮಂಥನ ಅಪ್ರಸ್ತುತವಾಗಲಾರದು.

### ವಿಶ್ವ ಏನು? ಹಿಂದು ಯಾರು?

ಇದು ಬರೆ ಹಿಂದೂ ಪರಿಷತ್ತು ಅಲ್ಲ. ವಿಶ್ವ ಹಿಂದೂ ಪರಿಷತ್ತು. ಇಲ್ಲಿ ವಿಶ್ವ ಹಿಂದೂ ಅಂದರೆ ಯಾರು? ಎಂದು ಹುಬ್ಬು ಏರಿಸಬೇಕಾಗಿಲ್ಲ. "ರಾಷ್ಟ್ರೀಯ ಮಲೇರಿಯಾ ನಿವಾರಣೆ"ಯ ಸಂಘಟನೆಯವರಿಗೆ "ರಾಷ್ಟ್ರೀಯ ಮಲೇರಿಯಾ" ಅಂದರೇನೆಂದು ಕೇಳುವಷ್ಟೇ ಹಾಸ್ಯಾಸ್ಪದವಾದೀತು. ವಿಶ್ವ ಹಿಂದುವಿನ ಬಗೆಗೆ ಪ್ರಶ್ನೆ ಎತ್ತಿದರೆ, ಇದು ಹಿಂದುಗಳ ವಿಶ್ವ ಪರಿಷತ್ತು.

ಈ ಪರಿಷತ್ತಿನ ಮೂರನೆಯ ಉದ್ದೇಶವಿದು-"ವಿದೇಶಗಳಲ್ಲಿ ನೆಲಸಿರುವ ಹಿಂದುಗಳೊಡನೆ ಸ್ನೇಹ ಸಂಪರ್ಕ ಬೆಳೆಸಿ ಹಿಂದೂ ಧರ್ಮದ ಆಚರಣೆಯಲ್ಲಿ ಅವರಿಗೆ ನೆರವಾಗುವದು." ಪರಿಷತ್ತಿಗೆ ಹೆಸರು ಬಂದುದು ಈ ಉದ್ದೇಶದ ಅನ್ವರ್ಥಕತೆಗಾಗಿ.

ಪರಿಷತ್ತಿನ ಉಳಿದ ಎರಡು ಉದ್ದೇಶಗಳಿಗಿಂತ ಇದನ್ನೇ ಮೊದಲು ಚರ್ಚಿಸಲಿಕ್ಕೆ ಎತ್ತಿಕೊಂಡ ಕಾರಣವು ಅದರ ಇದೇ ವೈಶಿಷ್ಟ್ಯಕ್ಕಾಗಿ.

### ವಿಶ್ವದಲ್ಲಿ ಹಿಂದುಗಳು

ಇಲ್ಲಿ ಪ್ರಶ್ನೆ ಹೀಗೆ: ವಿದೇಶದಲ್ಲಿ ನೆಲಸಿರುವ ಹಿಂದುಗಳು ಅಂದರೆ ಯಾರು? ಕಳೆದ

ಒಂದೆರಡು ಶತಮಾನಗಳಲ್ಲಿ ಸಾವಿರಾರು ಹಿಂದೂ ಕುಟುಂಬಗಳು ದಕ್ಷಿಣ ಆಫ್ರಿಕಾ, ಮೋರಿಶಸ್, ಸಿಂಗಾಪುರ- ಜಾವಾ, - ಇಂಡೋನೇಶಿಯಾ ಪ್ರಭೃತಿ ಆಗ್ನೇಯ ಏಶಿಯಾದ ದೇಶಗಳಲ್ಲಿ ಕಾಲ ಕಾಲಕ್ಕೆ ಹೋಗಿ ವಸತಿ ವಸಾಹತು ಮಾಡಿದ್ದುಂಟು. ಅವರು ಎಲ್ಲೇ ಇರಲಿ ಎಂತೇ ಇರಲಿ ಹಿಂದೂ ಸಮಾಜ-ಸಂಸ್ಕೃತಿಯ ಜನ, ಅವರ ಸಂಸ್ಕಾರ, ನೇಮನಿಷ್ಠೆ, ದೇವ ದೈವತಗಳು ಹಿಂದೂ ಸಂಪ್ರದಾಯಗಳಿಗೆ ಒಳಪಟ್ಟವು. (ಉದಾಹರಣೆಗೆ ನಮ್ಮ ಸಾರಸ್ವತ ಸಮಾಜದ ಜನ ಲಂಡನ್, ಸಿಂಗಾಪುರ, ರಂಗೂನ ಎಲ್ಲೇ ಇರಲಿ ಅವರು ಗೋವೆಯಲ್ಲಿಯ ತಮ್ಮ ಕುಲದೈವತಗಳಿಗೂ ಶಿರಾಲಿಯಲ್ಲಿಯ ತಮ್ಮ ಗುರುಮಠಕ್ಕೂ ಅವ್ಯಾಹತ ನಿಷ್ಠೆಯಿಂದ ನಡೆದುಕೊಳ್ಳುತ್ತ ಬಂದಿರುತ್ತಾರೆ.)

## ಹಿಂದೂ ಸಂಸ್ಕೃತಿ ಪ್ರಸಾರ

ಅಂದಾಗ ಈ ಭಾರತೇತರ (ವಿಶಾಲ ಭಾರತ?) ಹಿಂದೂ ವಸಾಹತುಗಳೊಂದಿಗೆ ಸ್ನೇಹ ಸಂಪರ್ಕ ಬೆಳೆಸಿಕೊಳ್ಳುವ ಹೊಸ ಅಗತ್ಯವೇನು ಬಂದಿದೆ? ಅವರು ನಮ್ಮನ್ನೋ ನಾವು ಅವರನ್ನೋ ಎಂದು ಹೇಗೆ ಏಕೆ ಉಪೇಕ್ಷಿಸಿದ್ದುಂಟು? ಕಳೆದ ವರ್ಷ ಶ್ರೀ ಹರಿಭಕ್ತ ಪಾರಾಯಣ ಶ್ರೀಭದ್ರಗಿರಿ ಕೇಶವದಾಸರು ವಿಠಲ ಮಂದಿರವನ್ನ ವಾಶಿಂಗ್‌ಟನ್‌ನಲ್ಲಿ ಸ್ಥಾಪಿಸಿದರು. ಯೂರೋಪ ಅಮೇರಿಕೆಗಳಲ್ಲಿ ಹಿಂದೂ-ಧರ್ಮ, ವೇದಾಂತ-ಸಂಸ್ಕೃತಿಗಳ ಪ್ರಸಾರದ ಪ್ರಯತ್ನಗಳೂ ಅದಕ್ಕಾಗಿ ಸಂಘ-ಸಂಸ್ಥೆಗಳೂ ವೇದಾಂತ ಕೇಸರೀ ಸ್ವಾಮೀ ವಿವೇಕಾನಂದ, ಸ್ವಾಮೀ ರಾಮತೀರ್ಥರ ಕಾಲದಿಂದಲೇ ನೆಲೆಗೊಂಡು ಶ್ರೇಯಸ್ಸಿನಿಂದ ನಡೆದು ಬಂದಿವೆ.

## ಕೆಲಸ ನಡೆದೇ ಇದೆ

ಅಂದಾಗ "ಹಿಂದೂ ಧರ್ಮಾಚರಣೆಯಲ್ಲಿ ಅವರಿಗೆ ನೆರವಾಗುವ ಪ್ರಮೇಯ ಎಲ್ಲಿಂದ ಉದ್ಭೂತವಾಗಿದೆ? ವಿದೇಶಗಳಲ್ಲಿ ವಸತಿ ಮಾಡಿದ ಹಿಂದುಗಳು ಅಂಥ ನೆರವನ್ನು ಕೋರಿರುವರೇ? ಅಥವಾ ನಾವಾಗಿಯೇ ಅವರ ನೆರವಿಗೆ ಧಾವಿಸಲು ಹೊರಟಿರುವೆವೆ?" "ನೀತಿ ಆಧ್ಯಾತ್ಮಗಳಿಗೆ ಸಂಬಂಧಪಟ್ಟ ಹಿಂದೂ ಜೀವನಾದರ್ಶಗಳನ್ನು ಪುನರುಜ್ಜೀವನಗೊಳಿಸುವದೂ ಮತ್ತು ಪ್ರಸಾರ ಮಾಡುವದೂ ಈ ಪರಿಷತ್ತಿನ ಎರಡನೆಯ ಉದ್ದೇಶ. ವಿದೇಶಗಳ ಮಟ್ಟಿಗೆ, ಸ್ವಾಮೀ ವಿವೇಕಾನಂದರಿಂದ ಶ್ರೀ ಕೇಶವದಾಸರವರೆಗೂ, ಡಾ॥ ರಾಧಾಕೃಷ್ಣನ್‌ರಿಂದ ಶ್ರೀ ಜಯಚಾಮರಾಜ ಒಡೆಯರ್ ಬಹಾದ್ದೂರರ ವರೆಗೂ ಈವರೆಗೆ ನಡೆದ ಕಾರ್ಯ ಈ ಪುನರುಜ್ಜೀವನ ಪ್ರಸಾರವಲ್ಲದೆ ಬೇರೆ ಏನು?

## ಮಿಶನ್ ಕೆಲಸ ಸಾಲದೆ?

ರಾಮಕೃಷ್ಣ ಮಿಶನ್, ಚಿನ್ಮಯ ಮಿಶನ್, ಯಗೋಡಾ ಯೋಗ ಸಂಸ್ಥೆ, ಶಿವಾನಂದಾಶ್ರಮ, ಅರವಿಂದ ಯೋಗಾಶ್ರಮ-ಇತ್ಯಾದಿ ಹೆಚ್ಚು ಕಡಿಮೆ ಅಂತರ್‌ರಾಷ್ಟ್ರೀಯ ಸಂಘಟನೆಗಳು ಸಾಧಿಸುತ್ತಿರುವ ಸ್ತುತ್ಯ ಕಾರ್ಯಕ್ಕೂ ಹೊರತಾಗಿ ಹೆಚ್ಚಾಗಿ ಈ ಪರಿಷತ್ತು ಪ್ರತ್ಯೇಕವಾಗಿ, ವಿಶಿಷ್ಟವಾಗಿ ಏನನ್ನು ಸಾಧಿಸಿದೆ, ಸಾಧಿಸಲಿದೆ?

"ಕೃಣ್ವಂತೋ ವಿಶ್ವಮಾರ್ಯಂ" ಎಂಬುದೊಂದು ನಮ್ಮ ಪ್ರಾಚೀನ ಆರ್ಯರ ವೀರ ಘೋಷಣೆಯಾಗಿತ್ತು. ವಿಶ್ವವನ್ನೇ ಆರ್ಯರನ್ನಾಗಿ ಮಾರ್ಪಡಿಸುವ ಈ ಘೋಷಣೆಯನ್ನೂ ಈಗ ಪುನರುಜ್ಜೀವನಗೊಳಿಸುವದಿದೆಯೇ? (ಹಿಟ್ಲರನು ಹೀಗೆ ಆರ್ಯವಂಶದ ಊರ್ಜನೆಗಾಗಿ ವಿಶ್ವಮೇಧವನ್ನೇ ಮಾಡಿ ಅದರಲ್ಲಿ ತಾನೇ ಆಹುತಿಯಾದನು!)

### ಪಲ್ಲಟಿಸಿದ ಧ್ವಜಗೀತ

ನಮ್ಮ ರಾಷ್ಟ್ರೀಯ ಧ್ವಜಗೀತದಲ್ಲಿ ಒಂದು ನುಡಿಯನ್ನು ಹಿಂದೆಲ್ಲ ಹಾಡಲಾಗುತ್ತಿತ್ತು.

"ವಿಶ್ವ ವಿಜಯ ಕರಕೇ ದಿಖಲಾಯೇಂ ತಬಹೋವೆ ಪ್ರಣಪೂರ್ಣ ಹಮಾರಾ"

"ಝುಂಡಾ ಊಂಚಾ ರಹೇ ಹಮಾರಾ!"

ಆದರೆ ಸ್ವಾತಂತ್ರ್ಯ ಬಂದ ನಂತರ ಈ ವಿಶ್ವವಿಜಯವನ್ನು ಮಾಡಿ ಕಾಣಿಸುವ ಪ್ರತಿಜ್ಞೆಯನ್ನು ಬಿಟ್ಟುಕೊಡಲಾಯಿತು. ಆ ಪ್ರತಿಜ್ಞಾಪೂರ್ತಿಗೆ ಈ ಪರಿಷತ್ತು ಮತ್ತೆ ಕಂಕಣ ಕಟ್ಟಿಕೊಂಡಿದೆಯೇ?

### ಕಾಂಗ್ರೆಸ್ ಚರಿತ್ರೆಯಲ್ಲಿ!

ಏಕೆಂದರೆ ಯಾವ ಸಂಘಟನೆಗೂ ಒಂದು ಗಮ್ಯ ಗಂತವ್ಯವಿರಲಿಕ್ಕೇ ಬೇಕು. ಅದನ್ನು ಕಾಲಮಾನ ಪರಿಸ್ಥಿತಿಯಿಂದಾಗಿ ಗತ್ತುಗಾರಿಕೆಗಾಗಿ ಪ್ರಕಟವೋ ಗುಪ್ತವೋ ಆಗಿರಬಹುದು. ಹಿಂದೆ ಸ್ವಾತಂತ್ರ್ಯ ಒಂದೇ ಗುರಿಯಿದ್ದಾಗ ಲಾಹೋರ ಕಾಂಗ್ರೆಸ್ಸಿನಲ್ಲಿ ಪಂಡಿತ ಜವಾಹರಲಾಲ ನೆಹರೂ ಸಮಾಜವಾದದ ಕಹಳೆ ಮೊತ್ತ ಮೊದಲು ಊದಿದರು. ಆಗ ಕೂಡಲೆ ದೇಶದಲ್ಲಿಯ ಟಾಟಾ, ಬಿರ್ಲಾ ಪ್ರಭೃತಿ ೨೨ ಉದ್ದಿಮೆಗಾರರೂ, ಬಾಬೂ ರಾಜೇಂದ್ರ ಪ್ರಸಾದ, ರಾಜಾಜಿ ಮುಂತಾದ ಕಾಂಗ್ರೆಸ್ಸಿನ ಕುಲವೃದ್ಧರೂ ತೀವ್ರವಾಗಿ ವಿರೋಧ ಪ್ರಕಟಿಸಿದರು. ಸ್ವಾತಂತ್ರ್ಯ ಬರುವ ಮುಂಚೆಯೇ ಸ್ವರಾಜ್ಯದ ಚಿತ್ರವನ್ನು ಮುಂದಿಡುವದು ಒಂದು ಅಚಾತುರ್ಯವೆನಿಸಿತು. ಆದರೂ ಆಗ ಸ್ವಾತಂತ್ರ್ಯದ ಸಂಘರ್ಷದಲ್ಲಿ ಹೋರಾಡಿದ ವರ್ಗಗಳಿಗೆಲ್ಲ ತಮತಮಗೊಪ್ಪಿದ ಒಂದು ಸ್ವರಾಜ್ಯದ ಕಲ್ಪನೆ ಇದ್ದೇ ಇತ್ತು. ಆದರೆ ಅದನ್ನು ಆ ಮಟ್ಟಿಗೆ ಬಹಿರಂಗಪಡಿಸಿದ್ದಿಲ್ಲ.

ಹಾಗೆಯೇ ನಮ್ಮಲ್ಲಿಯ ಹಿಂದೂ ಸಮಾಜದ ಸಂಘಟಕರು ಈ ವಿಶ್ವಪರಿಷತ್ತಿನಲ್ಲಿ ವಿದೇಶದಲ್ಲಿಯ ಹಿಂದುಗಳ ಸಂಪರ್ಕದ ಭಾಷೆಯನ್ನು ಆಡುವಾಗ ಯಾವ ನಿಚ್ಚಳ ನಿಲುಮೆ ನೋಟ ಇಟ್ಟುಕೊಂಡಿದ್ದಾರೆ?

### ವಿದೇಶೀ ನಿಷ್ಠೆಯಾದೀತು

ಇಂದು ನಾವು ಕಮ್ಯುನಿಷ್ಟರಿಗೆ Extra territoral ದೇಶ ಬಾಹಿರವಾದ ನಿಷ್ಠೆಯುಳ್ಳವರೆಂದು ದೂಷಿಸುತ್ತೇವೆ. ಕಮ್ಯುನಿಸ್ಟ್ ಎಲ್ಲಿಯೇ ಇರಲಿ ಮಾಸ್ಕೋ ಕಡೆಗೆ ಕಣ್ಣಿಡುತ್ತಾನೆ. ಚೀನೀ ಇಸಮು ಎಲ್ಲಿಯೇ ಇರಲಿ ಪೆಕಿಂಗ್ ಸರಕಾರದ ಹಸ್ತಕನಾಗಿರುತ್ತಾನೆ ಎಂದು ನಮ್ಮ ಗ್ರಹಿಕೆ. ಅದೇ ನೀತಿ ವಿದೇಶಗಳಲ್ಲಿ ನೆಲಸಿದ ಹಿಂದುಗಳು ಅಲ್ಲಲ್ಲಿಯ ಜನತೆಯೊಂದಿಗೆ ಸಮರಸವಾಗಿ ತಾವು ಬದುಕುವ ರಾಷ್ಟ್ರದ ಭಾಗ್ಯಭವಿತವ್ಯಗಳೊಂದಿಗೆ ತಾದಾತ್ಮ್ಯವನ್ನು ಸಾಧಿಸುವ

ಬದಲು ಹೀಗೆ ಸಾಮುದಾಯಿಕವಾಗಿ ಸಾರ್ವಜನಿಕವಾಗಿ ಭಾರತದ ಹಿಂದೂ ಸಂಘಟನೆಯೊಂದಿಗೆ ಜಾಗೃತ ಮತ್ತು ನಿಕಟ ಸಂಪರ್ಕ ಕಟ್ಟಿಕೊಂಡರೆ, ಅಂಥ ಸಂಪರ್ಕದ ಪ್ರಸಾರವನ್ನು ನಾವು ಉದ್ದೇಶಪೂರ್ವಕವಾಗಿ ಮಾಡುವ ಧ್ಯೇಯ-ಧೋರಣೆಗಳನ್ನು ಇಟ್ಟುಕೊಂಡರೆ ಅದು ಪರ್ಯಾಯವಾಗಿ ಅಲ್ಲಲ್ಲಿಯ ರಾಷ್ಟ್ರೀಯ ಜೀವನಕ್ಕೆ ಹೊರತಾದ-ನಾವು ಇತರರಿಗೆ ಆರೋಪಿಸುವ-ನಿಷ್ಠಾಬುದ್ಧಿ ಭೇದವನ್ನೇ ನಾವು ಬೋಧಿಸಿದಂತೆ ಆಗಲಾರದೇ?

## ಹೀಗೆ ಮಾಡೋಣ

ದೇಶದಲ್ಲಿಯ ಹಿಂದೂ ಸಮಾಜವನ್ನು ಅಖಂಡವಾಗಿ ಅಭೇದ್ಯವಾಗಿ ಆಧುನಿಕವಾಗಿ ಪುರೋಗಾಮಿಯಾಗಿ ಏಕಾತ್ಮಕವಾಗಿ ಕಟ್ಟಲು, ಮತ-ಮತಾಂತರಗಳ ಜಾತಿ ಪಂಥಗಳ 'ರೋಟೀ-ಬೇಟೀ ಬಂದಿ'ಯ ವಿಘಟಕ ವಿಘಾತಕ ವಿಧಿನಿಷೇಧಗಳ ಉಚ್ಚಾಟನೆಯ ಕಾರ್ಯ ಕುಂಬಳಕಾಯಿಯಷ್ಟು ಕಾಲಬುಡಕ್ಕೆ ಬಿದ್ದಿದೆ. ಅದನ್ನು ಮೊದಲು ತೀವ್ರವಾಗಿ ಶೀಘ್ರವಾಗಿ ಗಮನಿಸಿ ಆಮೇಲೆ ವಿಶ್ವ ಹಿಂದೂ-ಸಂಘಟನೆಯ ಶತಯೋಜನ ವಿಸ್ತೀರ್ಣವಾದ ಸೇತುಬಂಧನಕ್ಕೆ ಕೈಹಾಕುವದು ಉಭಯ ಕ್ಷೇಮಕರವಲ್ಲವೆ?

●

('ಜನಸೇವಕ' ೧೯೬೯)

# ಗಾಂಧಿಯೆಂಬ ಸತ್ಯ

ಗಾಂಧೀಜಿಯಿಂದ ನಾವು ಕಲಿಯಬೇಕಾದದ್ದು ಏನು? ಅವರಂತೆ ಅರೆಬತ್ತಲೆ ತಿರುಗುವದಲ್ಲ. ಅವರಂತೆ ಆರಂಭದಲ್ಲಿ ಅತಿ ಕಾಮಿಯಾಗಿ ಕೌಟುಂಬಿಕ ಬಾಳು ಬದುಕಿ ಅನಂತರ ಪಶ್ಚಾತ್ತಾಪಪಟ್ಟು ಆಮರಣ ಬ್ರಹ್ಮಚರ್ಯ ಪಾಲಿಸುವದಲ್ಲ. ಒಂದು ಅತಿರೇಕದಿಂದ ಇನ್ನೊಂದು ಅತಿರೇಕಕ್ಕೆ ಹಾಯುವದಲ್ಲ. ಅವರಂತೆ ಆಹಾರ, ಆರೋಗ್ಯ, ಚಿಕಿತ್ಸೆ, ಮೌನಾಚರಣೆ, ಉಪವಾಸ ಮುಂತಾದ ಸತ್ಯಗಳ ವಿವಿಧ ಪ್ರಯೋಗಗಳಲ್ಲಿ ತೊಡಗಿ ತನಗೂ ತನ್ನ ಸುತ್ತಲಿನವರಿಗೂ ಚಿಂತೆ ತೊಂದರೆ ಉಂಟುಮಾಡುವದಲ್ಲ. ಅವರಂತೆ ಬುದ್ಧಿಪೂರ್ವಕವಾಗಿ ಮಹಾತ್ಮತ್ವದ ಸಾಧನೆಯಲ್ಲಿ, ಇನ್ನೊಬ್ಬ 'ಸಾಬರಮತಿಯ ಸಂತ'ರಾಗಲು ಹೆಣಗಾಡುವದಲ್ಲ.

**ಕಷ್ಟವೇ ಸಾಧ್ಯ ಏಕಾಗದು?**

ಗಾಂಧೀ ಜೀವನದ ಬಹಳಷ್ಟು ಅಂಶಗಳು ಸಾಮಾನ್ಯ ಸಂಸಾರಿಕರಿಗೆ ಕೈ ಮೀರಿದ ಹಣ್ಣು. ಅದನ್ನು ಹುಳಿಯೆಂದು ಬಿಟ್ಟುಕೊಡಬೇಕೆಂದಲ್ಲ. ಅದು ಕಷ್ಟ ಸಾಧ್ಯ- ನಮ ನಿಮಗೆ ಅದರಿಂದ ಕಷ್ಟವೇ ಸಾಧ್ಯವೆಂದು, ಮತ್ತು ಅಂಥ ಅನೇಕ ಚಾರಿತ್ರಿಕ ಅಂಶಗಳು ಅವರ ಚಾರಿತ್ರ್ಯಕ್ಕೆ ಆಗಂತುಕ, ನೈಮಿತ್ತಿಕ ಮೂಲಭೂತ ಗಾಂಧೀತ್ವಕ್ಕೆ ಹೊರತಾದವು-ಎಂದು.

ತಿಲಕರಂಥ, ಗೋಖಲೆಯಂಥ, ನೆಹರೂಜಿಯಂಥ ಸಾವಿರಾರು ಜನರನ್ನು ನಾವು ಕಲ್ಪಿಸಬಹುದು. ಸಮಾಜದಲ್ಲಿ ಅವರು ಹೆಚ್ಚಾಗಿ ಕಂಡು ಬರಬಹುದೆಂದು ಅಪೇಕ್ಷಿಸಲೂ ಬಹುದು. ಆದರೆ ಗಾಂಧೀಜಿ? ಕನ್ನಡಕ್ಕೊಬ್ಬನೇ ಕೈಲಾಸಂ, ಕಾರಂತ ಅಥವಾ ದಿನಕರನೋ ಎಂಬಂತೆ ಭಾರತಕ್ಕೆ - ಅಲ್ಲ ಲೋಕಕ್ಕೆ ಒಬ್ಬನೆ ಬಾಪೂಜಿ! ಹೆಚ್ಚೆಂದರೆ ಅವರಂತೆ ಇನ್ನೊಬ್ಬ ವಿನೋಬಾ ಅಥವಾ ನಮ್ಮ ಜಿಲ್ಲೆಯಲ್ಲಿ ಪೂಜ್ಯ ತಿ. ಶ್ರೀ. ನಾಯಕರು (ನಾಯಕ ಮಾಸ್ತರಜೀ), ಇನ್ನು ಅತ್ತೊಬ್ಬ ಕಾರಖಾನೀಸ್, ಇತ್ತೊಬ್ಬ ಹೊದಿಕೆ ಇಷ್ಟಿದ್ದರೆ ಸಾಕು.

**ಮನ್ನಣೆ ಬೇರೆ, ಆಚರಣೆ ಬೇರೆ**

ಇವರು ಗಾಂಧೀಯಾನದ ಚಿರ ಪಥಿಕರು. ಉಳಿದಂತ ನಮನಿಮಗೆ ಒಂದು ಅಳತೆಗೋಲು. ಎಲ್ಲರೂ ಇವರಂತೆ ಆದರೆ? "Oh! life would be dull." ಬಾಳು ಸಪ್ಪಗಾದೀತು. "ಸಪ್ಪೆ ಬಾಳಿಗಿಂತ ಉಪ್ಪನೀರೂ ಲೇಸು" ಅಂದಿಲ್ಲವೆ, ಅಂಬಿಕಾತನಯರು?

ಗಾಂಧೀಜಿಯ ವಿಧವೆಯರನ್ನು ಅವರ ಪ್ರತೀಕಗಳಾಗಿ ಸ್ಮಾರಕಗಳಾಗಿ ನಾವು ಮಮತೆಯಿಂದ ಮನ್ನಿಸುವದು ಬೇರೆ, ಗಾಂಧೀ ಆದರ್ಶಗಳನ್ನೂ ಅವರ ಜೀವನ ಮೂಲ್ಯಗಳನ್ನೂ ಆಯ್ದು ಆಯುಷ್ಯದಲ್ಲಿ ಆಚರಣೆಗೆ ತರುವುದು ಬೇರೆ. ಈ ವಿವೇಕವನ್ನು ಇಂದು ಅವರ ಶತಾಬ್ದಿಯ ವರ್ಷವಾದರೂ ನಾವು ಮನದಟ್ಟು ಮಾಡಿಕೊಳ್ಳಬೇಕು.

## ಗಾಂಧಿತ್ವಕ್ಕೆ ಚೌಕಟ್ಟಲ್ಲ

ಗಾಂಧಿಯೆಂಬ ಸತ್ಯವನ್ನು ನಾವು ಇಂದು ಅರಗಿಸಿಕೊಳ್ಳಬೇಕು. ಅವರ ಸತ್ವ ನಮ್ಮದಾಗಬೇಕು- ವೇಷ ಭೂಷೆ, ಭಾಸ-ಭಾಷೆ ಮುಖ್ಯವಲ್ಲ. ಆಶ್ರಮದ ದಿನಚರಿ ಪ್ರಾರ್ಥನೆ. ಸಾಂಕೇತಿಕ ನೂಲು, ಸಫಾಯಿ, ಇವೆಲ್ಲ ಗಾಂಧೀತ್ವದ ಹುರುಳಲ್ಲ. ಇವಕ್ಕೆ ಅತಿಯಾದ ಮಹತ್ವ ಕೊಡುತ್ತ ಬಂದದ್ದು ನಮ್ಮ ರಾಷ್ಟ್ರೀಯ ರಾಜಕಾರಣಿಗಳ ಧೂರ್ತತನ ಮತ್ತು ಭಾವಿಕ ಗಾಂಧೀ ಭಕ್ತರ ಮೂರ್ಖತನ.

ಇಂದು ನಾವು ಗಾಂಧೀಜಿಯನ್ನು ಇವೆರಡೂ ಮಾದರಿಯ ಗುಂಪುಗಳ ಕೈಯಿಂದ ಪಾರುಮಾಡಬೇಕಾಗಿದೆ. ಗಾಂಧೀ-ಗಾಂಧೀವಾದ ಒಂದು ಉನ್ನತ ಆದರ್ಶ ಆದರೆ ಅದೆಲ್ಲಿ ನಮಗೆ ವ್ಯವಹಾರ್ಯ? ಅದನ್ನು ವರ್ಷಕ್ಕೆ ಒಂದು ದಿನ ಹಬ್ಬದ ಮಡಿಬಟ್ಟೆಯಂತೆ ಹೊರ ತೆಗೆದು ಮೆರೆದಾಡಿಸಿ ಮತ್ತೆ ಬಚ್ಚಿಟ್ಟುಬಿಡುವುದೊಂದೇ ನಮ್ಮ ಪಾಲಿನ ಕರ್ತವ್ಯ-ಎಂಬ ಭಾವನೆ. ಇಂದಿನಿಂದಲೇ ಇದು ಮಾಯವಾಗಬೇಕು.

## ಮೂರ್ತಿ ಪೆಟ್ಟಿಗೆಯಲ್ಲಿಡುವುದೆ?

ಅವರ ತತ್ವವನ್ನೂ ತಂತ್ರವನ್ನೂ ಇಲ್ಲಿ ಇಂದು ಆಧುನಿಕ ಪ್ರಪಂಚಕ್ಕೆ ಅದರ ನೈತಿಕ ಸಾಮಾಜಿಕ ವೈಯಕ್ತಿಕ ಸಮಸ್ಯೆಗಳಿಗೆ ಅನ್ವಯಿಸಲು ನಾವು ಆರಂಭಿಸಬೇಕು. ಗಾಂಧೀ ಸತ್ಯದ ಮುಖವು ಚಿನ್ನದ ಪಾತ್ರದಿಂದ ಮುಚ್ಚಿದೆ. ಆ ಮುಚ್ಚಳ ತೆಗೆಯಬೇಕು. ಗಾಂಧೀವಾದಿಗಳು, ಆಶ್ರಮ ಭಜನಾ ಮಂಡಳಿಯವರು ಗಾಂಧೀಜಿಯನ್ನು ferish ಪೂಜೆಯ ಮೂರ್ತಿಯಾಗಿ ಮಾಡಿದ್ದಾರೆ. ಪೂಜೆ ಮುಗಿಸಿ ದೇವರ ಕರಡಿಗೆಯಲ್ಲಿ ಕಟ್ಟಿಟ್ಟರೆ ಮುಗಿಯಿತೆಂದು ಅವರ ಭಾವನೆ. ಆ ಭಾವನೆಯ "ಭಂಗಿ ಮುಕ್ತಿ" ಆಗಬೇಕು.

ಗಾಂಧೀ ಸತ್ಯವನ್ನು ಗಾಂಧೀಯವರ ಕಾಲದಲ್ಲಿಯೇ ನಾವು ಆಚರಿಸಲಿಲ್ಲ. ನಮ್ಮ ಕಾಂಗ್ರೆಸ್ಸು ಗಾಂಧೀಜಿಯನ್ನೂ ಅವರ ನಾಮದ ಬಲವನ್ನೂ ಆಗಲೂ ಈಗಲೂ ಕೇವಲ ತನ್ನ ರಾಜಕೀಯಕ್ಕೆ ಬಳಸಿಕೊಂಡಿತು - ಅದೂ ತನಗೆ ಅನುಕೂಲ ಕಂಡಾಗ.

## ಗಾಂಧಿ ಕಾಂಗ್ರೆಸ್ ಬಿಟ್ಟರು

ಗಾಂಧೀಜಿಯ 'ರಾಮರಾಜ್ಯ' ಕಾಂಗ್ರೆಸ್ಸಿನ ಗುರಿ ಎಂದೂ ಇದ್ದಿರಲಿಲ್ಲ. ಇಂದಿನ 'ಗ್ರಾಮರಾಜ್ಯ' 'ಪಂಚಾಯತ ರಾಜ್ಯ' ಈ ಗುರಿಯ ಪ್ರತಿಬಿಂಬವಲ್ಲ. ೧೯೨೪ರಲ್ಲಿ ಗಾಂಧೀಜಿ ಬೆಳಗಾಂವ ಕಾಂಗ್ರೆಸ್ಸಿಗೆ ಅಧ್ಯಕ್ಷರಾಧರು. ಆದರೆ ಅಧ್ಯಕ್ಷರ ಆದೇಶವನ್ನಲ್ಲ ಅವರ ಆಶೀರ್ವಾದವನ್ನೂ ಪಡೆದು ಮೋತೀಲಾಲ ಪ್ರಭೃತಿಗಳು ಅಸಹಕಾರ ಆಂದೋಲನದ ಶಸ್ತ್ರಾಸ್ತ್ರಗಳನ್ನು ಶಮೀವೃಕ್ಷಕ್ಕೆ ಕಟ್ಟಿಟ್ಟು ಸ್ವರಾಜ್ಯ ಪಾರ್ಟಿಯನ್ನು ನಿರ್ಮಿಸಿ ಎಸೆಂಬ್ಲಿ ಪ್ರವೇಶ ಮಾಡಿದರು.

೧೯೩೪ರಲ್ಲಿ ಗಾಂಧೀಜಿ ಕಾಂಗ್ರೆಸ್ಸಿನ ತತ್ವ (creed) ಸತ್ಯ ಮತ್ತು ಅಹಿಂಸಾತ್ಮಕ ವಿಧಾನವಾಗಬೇಕೆಂದು ವರ್ಲಿ ಕಾಂಗ್ರೆಸ್ಸಿನಲ್ಲಿ ಬಹಳ ಹೆಣಗಾಡಿದರು. ಆದರೆ ಕಾಂಗ್ರೆಸ್ ಶ್ರೇಷ್ಠಿಗಳು

ಕೇಳಲಿಲ್ಲ. ಕಾಂಗ್ರೆಸ್ ಸದಸ್ಯನ ಪ್ರತಿಜ್ಞೆ "ಶಾಂತಿ ಮತ್ತು ಕಾಯಿದೆಗಳಿಂದ ಮುಕ್ತವಾದ" ವಿಧಾನವೇ ಉಳಿಯಿತು. ಆದ್ದರಿಂದ ಅಂದು ಗಾಂಧೀಜಿ ಕಾಂಗ್ರೆಸ್ ಬಿಟ್ಟರು. ಹರಿಜನ ಕಾರ್ಯಕ್ಕೆ ತನ್ನನ್ನು ಅರ್ಪಿಸಿಕೊಂಡರು.

### ಇಂದಿನ ಹತ್ಯಾಕಾಂಡ

ಗಾಂಧೀಜಿ ಹಿಂದೂ ಮುಸ್ಲಿಂ ಐಕ್ಯಕ್ಕಾಗಿ ಬಾಂಧವ್ಯಕ್ಕಾಗಿ ಜೀವಮಾನವೆಲ್ಲ ಹೋರಾಡಿ ಅದಕ್ಕಾಗಿಯೇ ಪ್ರಾಣ ತೆತ್ತರು. ಆದರೆ ಅವರ ಕಣ್ಣೆದುರಿಗೇ ಅವರ ಇಚ್ಛೆಗೆ ವಿರುದ್ಧವಾಗಿಯೇ ರಾಷ್ಟ್ರದ ವಿಭಜನೆ ಆಯಿತು. ಇಂದು ಅವರ ಶತಾಬ್ದಿಯ ಸಂದರ್ಭದಲ್ಲಿಯೇ ೨೦ ವರ್ಷ ಅವರ ಆಚಾರ-ಪ್ರಚಾರಗಳ ಕೇಂದ್ರವಾಗಿದ್ದ ಅಹಮದಾಬಾದದಲ್ಲಿ ಮುಸ್ಲಿಮರ ಹಾಡೇ ಹಗಲ ಹತ್ಯಾಕಾಂಡ ನಡೆಯಿತು! ಸಾಬರಮತಿ ಆಶ್ರಮದ ಮೇಲೆಯೇ ಪುಂಡರ ದಾಳಿ! ಅಲ್ಲಿ ೫೦ ವರ್ಷ ಕಾಲ ಗಾಂಧೀಜಿಯೊಂದಿಗೆ ಕೆಲಸ ಮಾಡುತ್ತಿದ್ದ ಶ್ರೀ ಬರಕತ ಆಲಿ ಅವರ ಕೊಲೆಗಾಗಿ ಸಾವಿರಗಟ್ಟಲೆ ಮತಾಂಧರು ಏರಿ ಬಂದರು. ಆದರೆ ಆಶ್ರಮವಾಸಿಗಳು ಬರಕತ ಆಲಿಯನ್ನು ಸುತ್ತುಗಟ್ಟಿ ನಿಂತು ತಾವು ಸಾಯಲು ಸಿದ್ಧರಾದರು. ಜನಜಂಗುಳಿ ನಾಚಿ ಹಿಂಜರಿಯಿತು. ಇದೂ ಒಂದು ರೀತಿ ಗಾಂಧೀ ತತ್ವದ ವಿಜಯವಾಯಿತು.

### ಗಾಂಧೀ ಸತ್ಯದ ಆವ್ಹಾನ

ಆದರೆ ಗಾಂಧೀಜಿಯನ್ನು ನಾವು ತಲೆಗೇರಿಸಿಕೊಂಡೆವೇ ಹೊರತು ತಲೆಯಲ್ಲಿ ಇಟ್ಟುಕೊಳ್ಳಲಿಲ್ಲ. ಅವರನ್ನು ನಮ್ಮ ಪಾಲಿಗೆ ೧೧ನೆಯ ಅವತಾರವಾಗಿ ಮಾಡಿದೆವು. ಆದರೆ ಅವರ ಸಾಧನೆ ಅವರ ಅವತಾರ ಕಾರ್ಯ ಒಟ್ಟೂ ಒಂದು ಹಿರಿಯ Himalayan Blunder ಆಗುವಂತೆ ನಡೆದುಕೊಂಡೆವು.

ಈ ಕುರಿತು ಇಂದು ನಮ್ಮಲ್ಲಿ ಹೃದಯ ಶೋಧನೆ ನಡೆಯಬೇಕು. ಅವರಿಂದ ನಾವು ಕಲಿಯಬೇಕಾದದ್ದು ಅವರಂತೆಯೇ ನಾವು ನಂಬಿದ ನೆಚ್ಚಿದ ನೇಮವಾಗಿಟ್ಟುಕೊಂಡ ಸತ್ಯಕ್ಕೆ ತ್ರಿಕರಣ ಪೂರ್ವಕವಾಗಿಯೂ ಅಂಟಿಕೊಂಡು ದುಡಿಯುವದು - ಅದಕ್ಕಾಗಿ ಮಡಿಯುವದು. ಇದು ಗಾಂಧೀ ಸತ್ಯದ ಮೂಲ ಆವ್ಹಾನ.

●

('ಜನಸೇವಕ' ೧೯೬೯)

# ಪಕ್ಷಾಂತರದ ಪಕ್ಷಪಾತಕ್ಕೆ ಯಾವ ಮದ್ದು?

ಏಪ್ರಿಲ್ ೨೧ನೆಯ ತಾರೀಖಿಗೆ ಕೇಂದ್ರ ಸರಕಾರದ ಉಪಪ್ರಧಾನಿ ಶ್ರೀ ಮುರಾರಜಿ ದೇಸಾಯಿ ಅವರು ಡಾ॥ ಸುಭಾಷ ಕಾಶ್ಯಪ ಇವರ "ಪಕ್ಷಾಂತರದ ರಾಜಕಾರಣ" ಎಂಬ ಒಂದು ಹೊಸ ಗ್ರಂಥವನ್ನು ಉದ್ಘಾಟನೆ ಮಾಡಿದರು. "ಇನ್‌ಸ್ಟ್ಯೂಟ್ ಆಫ್ ಕಾನ್‌ಸ್ಟಿಟ್ಯುಶನಲ್ ಎಂಡ್ ಪಾರ್ಲಿಮೆಂಟರಿ ಸ್ಟಡೀಜ್"-ಎಂಬ ಸಂವಿಧಾನ ಸಂಸದೀಯ ಸಂಶೋಧನೆಯ ಸಂಸ್ಥೆಯಿಂದ ಈ ಗ್ರಂಥವು ಪ್ರಕಟವಾಗಿದೆ. ಇದು ಅತ್ಯಂತ ಸಾಮಾಯಿಕವಾದ ಪ್ರಕಟಣೆ-ಅರ್ಥಾತ್ ಈ ಕುರಿತು ದೇಶದ ಪ್ರಜಾಪ್ರಭುತ್ವದ ಭವಿತವ್ಯದ ಕುರಿತು ಮತ್ತು ರಾಷ್ಟ್ರದ ರಾಜಕೀಯದ ಸ್ವಾಸ್ಥ್ಯದ ಕುರಿತು ತುಂಬ ಮಹತ್ವದ್ದಾಗಿದೆ. ಏಕೆಂದರೆ ಶಾಸನಸಭೆಗಳಿಗೆ ಒಂದು ಪಕ್ಷದ ಧ್ಯೇಯ-ಧೋರಣೆಗಳನ್ನು ಒಪ್ಪಿ ಆ ಬಗೆಗೇ ತನ್ನ ಮತದಾರ ಸಂಘದ ಸಮ್ಮತಿಯನ್ನು ಪಡೆದು ಅದಕ್ಕಾಗಿಯೇ ಅವರ ಪ್ರಾತಿನಿಧ್ಯದ ಅಧಿಕಾರ ಗಳಿಸಿ ಹೋದ ಸದಸ್ಯ ಮುಂದೆ ಲಹರಿ ಬಂದಂತೆ ಲಾಭ ಹೇತುವಿನಿಂದ ಬೇರೊಂದು ಪಕ್ಷ ಸೇರಿ ತನ್ನ ರಾಜಕೀಯ ಭವಿಷ್ಯದ ಹುಂಡಿಯನ್ನು ಮುರಿಸಿಕೊಂಡು ಸ್ವಾರ್ಥ ಸಾಧಿಸುವ ಪ್ರವೃತ್ತಿ ಇಂದು ನಮ್ಮಲ್ಲಿ ಸೋಂಕುರೋಗದಂತೆ ಹಬ್ಬಿದೆ. ಇದರಿಂದ ನಮ್ಮ ಪ್ರಜಾಪ್ರಭುತ್ವಕ್ಕೆ ದೊಡ್ಡ ಕುತ್ತು. ಸರಕಾರಗಳ ಭದ್ರತೆಗೆ ಹಾಕಿಟ್ಟ ಸುರಂಗ.

**ಗ್ರಂಥಸ್ತ ವಿವರಗಳು**

ಡಾ॥ ಕಾಶ್ಯಪರ ಗ್ರಂಥದಲ್ಲಿಯ ಅಭಿಪ್ರಾಯವನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಈ ಗ್ರಂಥದ ಗಾತ್ರ ೬೦೦ ಪುಟ. ಗ್ರಂಥದಲ್ಲಿ ಬೆಳಕಿಗೆ ಇಟ್ಟ ಕೆಲವು ಸ್ವಾರಸ್ಯದ ವಿವರಗಳು ಇಂತಿವೆ:-

ಎಲ್ಲ ರಾಜ್ಯಗಳಲ್ಲಿ ರಾಜಸ್ತಾನವು ಪಕ್ಷಾಂತರದ ಹಿರಿಯ ಹುತ್ತ. ಈ ರೋಗದ ಉಲ್ಬಣ ಅಲ್ಲಿಯಷ್ಟು ಇನ್ನೆಲ್ಲೂ ಹೆಚ್ಚಿಲ್ಲ.

೧೯೬೭ರ ಸಾರ್ವತ್ರಿಕ ಚುನಾವಣೆಗಳ ನಂತರ, ಸರಾಸರಿಯಲ್ಲಿ ಒಬ್ಬರಿಗಿಂತ ಹೆಚ್ಚು ಶಾಸನ ಸಭಾಸದಸ್ಯ ಪ್ರತಿದಿನಕ್ಕೆ ಒಮ್ಮೆ ಪಕ್ಷಾಂತರ ಮಾಡಿದಂತಿದೆ. ಅದೇ ರೀತಿ ಪ್ರತಿ ತಿಂಗಳಿಗೆ ಒಂದು ರಾಜ್ಯ ಸರಕಾರವು ಮೊದಲ ೧೬ ತಿಂಗಳಲ್ಲಿ ಉರುಳಿಸಲಾಗಿದೆ! ಈ ಉರುಳುವಿಕೆ ಪಕ್ಷಾಂತರದ್ದೇ ಫಲವಾಗಿದೆ.

**ಪಕ್ಷ ಪಾತಿ ಸದಸ್ಯರು**

ಹರಿಯಾನಾ, ಪಂಜಾಬ, ಬಿಹಾರ, ಉ. ಪ್ರದೇಶ, ಪ.ಬಂಗಾಲ, ಮ. ಪ್ರದೇಶ ಮತ್ತು ರಾಜಸ್ತಾನ ಈ ೭ ರಾಜ್ಯಗಳಲ್ಲಿ ನೂರಕ್ಕೆ ೨೫ರಷ್ಟು - ಪ್ರತಿ ನಾಲ್ಕರಲ್ಲಿ ಒಬ್ಬ ಎಮ್.ಎಲ್.ಎ. ಒಮ್ಮೆಯಾದರೂ ತನ್ನ ನಿಷ್ಠೆ ಬದಲಿಸಿದ್ದಾನೆ ಪಕ್ಷದ ಪಾತ ಮಾಡಿದ್ದಾನೆ!

ಎಲ್ಲ ರಾಜ್ಯಗಳಲ್ಲಿ ಕೂಡಿ ಸ್ಥೂಲವಾಗಿ ಒಟ್ಟು ೧,೦೦೦ ಪಕ್ಷಾಂತರಗಳೂ ಪ್ರತಿ ಪಕ್ಷಾಂತರಗಳೂ ಜರುಗಿರುತ್ತವೆ. ಈ ರೀತಿ ಪಕ್ಷಾಂತರ ನ್ಯಾಸದಲ್ಲಿ ತೊಡಗಿದ ಸದಸ್ಯರುಗಳ

ಸಂಖ್ಯೆ ಸುಮಾರು ೫೫೦. ಇವರಲ್ಲಿ ಕೆಲವು ಖದೀಮರು ೫ ಸಲ ಅತ್ತಿಂದಿತ್ತ ಇತ್ತಿಂದತ್ತ ಹಾಯ್ದಾಡಿದ್ದುಂಟು. ಒಬ್ಬ ವೀರ ೭ ಸಲ ಪಕ್ಷಾಂತರ ಮಾಡಿ ವಿಕ್ರಮ ಸಾಧಿಸಿದ್ದಾನೆ!

ಇನ್ನೊಬ್ಬ ಎಂ.ಎಲ್.ಎ. ಬರೆ ೫ ದಿನ ಮಂತ್ರಿಪದವಿಯನ್ನು ಭೋಗಿಸುವದಕ್ಕಾಗಿ ೫ ಸಲ ಪಕ್ಷಾಂತರ ಮಾಡಿದನು.

**ಪಕ್ಷಾಂತರ ಕೇಸುಗಳು**

೧೯೫೭ರಿಂದ ೬೭ರ ತನಕ ಒಟ್ಟು ೫೪೨ ಪಕ್ಷಾಂತರದ "ಕೇಸು"ಗಳು ಆದವು. ಆಗ ಇವೆಲ್ಲವುಗಳ ಒಟ್ಟಾರೆ ಲಾಭ ಕಾಂಗ್ರೆಸ್ಸಿಗೇ ಆಯಿತು. (ಇಲ್ಲಿ ಒಂದು ಮೋಜು. ಕಾಂಗೆಸ್ಸು ಬಿಟ್ಟು ಬೇರೆ ಪಕ್ಷ ಸೇರಿದರೆ ಅದು ಪಕ್ಷಾಂತರದ ಪಾಪ. ಅದೇ ಬೇರೆ ಪಕ್ಷ ಬಿಟ್ಟು ಕಾಂಗ್ರೆಸ್ಸಿಗೆ ಬಂದರೆ ಅದು ಕೇವಲ ಮನ ಪರಿವರ್ತನೆ-ಸರಿದಾರಿಗೆ ಬಂದಂತೆ ಎಂದು ಕಾಂಗ್ರೆಸ್ಸಿಗರ ಸಂಬಿಕೆ!)

೧೯೬೭ರ ನಂತರ ಒಂದು ವರ್ಷದಲ್ಲಿಯೇ ೧,೦೦೦ ಪಕ್ಷಾಂತರಗಳು ನಡೆದವು! ಈ ರಾಜಕಾರಣ ತಂತ್ರದಲ್ಲಿ ಹಿಂದಿನ ೧೦ ವರ್ಷಗಳಲ್ಲಿ ಆಗದಿದ್ದಷ್ಟು ಅದ್ಭುತ 'ಪ್ರಗತಿ' ಈ ೧ ವರ್ಷದಲ್ಲಿ ನಡೆಯಿತು! ಈ ಪಕ್ಷಾಂತರಿತ ಭೂಪತಿಗಳಲ್ಲಿ ೧೧೫ ಮಂದಿಗೆ ಮಂತ್ರಿಪದವಿಗಳ ಪುರಸ್ಕಾರ ಸಿಕ್ಕಿತು. ಹೀಗೆ ಮಂತ್ರಿ ಪದವಿ ನೀಡಿದ ಸರಕಾರಗಳಲ್ಲಿ ಪಕ್ಷಭೇದವಿಲ್ಲ. ಕಾಂಗ್ರೆಸ್ಸೇತರ ಕಾಂಗ್ರೆಸ್ ಪ್ರೋತ್ಸಾಹದ ಅಥವಾ ಶುದ್ಧ ಕಾಂಗ್ರೆಸ್ಸಿನ ಸರಕಾರಗಳೇ ಈ ಆಯಾರಾಮ ಗಯಾರಾಮರಿಗೆ ರಾಮರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿರುತ್ತವೆ.

ಕೇಂದ್ರದಲ್ಲಿ ೧೯೪೭ರಲ್ಲಿ ೧೪ ಮಂತ್ರಿಗಳಿದ್ದರು. ಈಗ ಅವರ ಸಂಖ್ಯೆ ೫೪!

**ಮತದಾರರಿಗೂ ದ್ರೋಹ**

ಪಕ್ಷಾಂತರ ಮಾಡುವದು ಮತದಾರರಿಗೆ ದ್ರೋಹ ಮಾಡಿದಂತೆ - ಎಂದು ನಾವು ಆಕ್ಷೇಪಿಸುತ್ತೇವೆ. ಆದರೆ ಇದು ಮತದಾರರಿಗೆ ಗೊತ್ತೇ ಇಲ್ಲ! ತಮ್ಮ ಪ್ರತಿನಿಧಿ ಪಕ್ಷಾಂತರ ಮಾಡಿದ ಕುರಿತು ಮತದಾರ ಪರಿವೆ ಮಾಡುವದೇ ಇಲ್ಲ. ಇಂಥ ಪಕ್ಷಾಂತರದ ಹುರಿಯಾಳುಗಳು ಒಟ್ಟಾಗಿ ಹಿಡಿದರೆ, ತಾವು ಸ್ಪರ್ಧಿಸಿದ ಸ್ಥಳಗಳಲ್ಲಿ ನೂರಕ್ಕೆ ೩೨ರಷ್ಟು ಗೆದ್ದಿದ್ದಾರೆ. ಅದೇ ಕಾಂಗ್ರೆಸ್ ಹುರಿಯಾಳುಗಳ ಶೇಕಡಾ ಪ್ರಮಾಣ ೫೯, ಜನಸಂಘದ್ದು ೬ % ಮತ್ತು ಸ್ವತಂತ್ರ ಪಕ್ಷದವರದು ೧೬%.

ಈ ಒಲವು ಈ ನಡುಗಾಲ ಚುನಾವಣೆಗಳಲ್ಲಿ ಉ. ಪ್ರದೇಶ, ಬಿಹಾರಗಳಲ್ಲಿಯೆ ವಿಶೇಷ ಸ್ಪಷ್ಟವಾಗಿದೆ. ಬಿಹಾರದಲ್ಲಿ ಪ್ರಮುಖ ಪಕ್ಷಾಂತರಿತ ಪ್ರತಿನಿಧಿಗಳೆಲ್ಲರೂ ತಿರುಗಿ ಚುನಾಯಿತರಾದರು. ಮತ್ತು ಉ. ಪ್ರದೇಶದಲ್ಲಿ ಕಾಂಗ್ರೆಸಿನಿಂದ ಹೊರಬಿದ್ದವರದೆ ಎರಡನೆಯ ದೊಡ್ಡ ಪಕ್ಷವಾಯಿತು ಶ್ರೀ ಚರಣಸಿಂಗರ ನೇತೃತ್ವದಲ್ಲಿ.

**ಎಲ್ಲಾ ಲಾಭಕ್ಕಾಗಿ!**

ಇಂಥ ಪಕ್ಷತ್ಯಾಗಿಗಳಿಗೆ ಅನೇಕ ಪುರಸ್ಕಾರಗಳು ಸಿಗುತ್ತವೆ. ಅನೇಕ ಸಲ ಅವರಲ್ಲದಿದ್ದರೂ ಅವರು ಸೂಚಿಸಿದವರೂ ಅಥವಾ ಅವರ ಹೆಂಡಂದಿರೂ ಮಂತ್ರಿಗಳಾಗುತ್ತಾರೆ ಅಥವಾ ಹಣ ಸಹಾಯ, ರಾಜಕೀಯ ಲಾಭಾಂಶ ಗಿಟ್ಟಿಸಿಕೊಳ್ಳುತ್ತಾರೆ. ಇಲ್ಲಿಯೂ ಪಕ್ಷಾಂತರಕ್ಕೆ ಯೋಗ್ಯ(?) ಬೆಲೆ ಧಾರಣೆ ಇದೆ! ಅದು ಕನಿಷ್ಠ ೩೦,೦೦೦ ರೂಪಾಯಿ; ಅಲ್ಲಿಂದ ಮೇಲೇರಿಕೆ ಅವರವರ ಮಹತ್ವ ಅಗತ್ಯಗಳ ಆಯಕಟ್ಟಿಗೆ ತಕ್ಕಂತೆ!

**ಎಷ್ಟು ಕಾಲದ ಸಂಕ್ರಮಣ?**

ಹಾಗಾದರೆ ಈ ರೋಗಕ್ಕೆ ಚಿಕಿತ್ಸೆ? ನಿವಾರಣೆ? ಡಾ॥ ಕಾಶ್ಯಪರ ಅಂಬೋಣವೆಂದರೆ ಈ ಬಗೆಯ ರಾಜಕೀಯ ಸಂಧಿಸಾಧನೆ ಸಂಕ್ರಮಣಾವಸ್ಥೆಯಲ್ಲಿ ಅನಿವಾರ್ಯ. ಆದರೆಈ ಸಂಕ್ರಮಣಾವಸ್ಥೆ ಎಷ್ಟು ಕಾಲದ ಅನಿರ್ವಾಹ?

ಮತದಾರರಲ್ಲಿ ರಾಜಕೀಯ ಪ್ರಜ್ಞೆ ಕಡಿಮೆ. ಕೋಮು-ಜಾತಿ-ಬಣಗಳ ಸೆಳೆತ ಹೆಚ್ಚು. ಆದ್ದರಿಂದ ಆ ಪಕ್ಷ ಈ ಪಕ್ಷವೆಂಬ ಪರಿಭೇದದ ಪರಿವೆ ಮತದಾರರಿಗೆ ವಿಶೇಷ ಕಾಡುವದಿಲ್ಲ. ಅವರು "ತಮ್ಮವರಿಗೆ" ಮತ ಹಾಕುತ್ತಾರೆ. ಪಕ್ಷದ ಪಾಲು ಬರೆ "ತಿಕೀಟು" ಚುನಾವಣೆಯ ರಂಗಪ್ರವೇಶಕ್ಕೆ! ತಿಕೀಟು ಇಲ್ಲದೆ ಎಲ್ಲಿಂದೆಲ್ಲಿಗೆ ಪ್ರವಾಸ ಮಾಡುವ ಧೂರ್ತರಿಗೆ ಯಾವ ಸ್ಟೇಶನ್ ಆದರೇನು? ಯಾವ ಕಂಪಾರ್ಟ್‌ಮೆಂಟ್ ಆದರೇನು?

**ನೇಮಪಾಲನೆ ಸಾಧುವೆ?**

ಈ ಗ್ರಂಥವನ್ನು ಉದ್ಘಾಟನೆ ಮಾಡುತ್ತ, ಮಾನ್ಯ ಮುರಾರಜಿಯವರು ಹೀಗೆ ಅಭಿಪ್ರಾಯಪಟ್ಟರು. ನಮ್ಮ ದೇಶದ ರಾಜಕೀಯದಲ್ಲಿಯ ಈ ಪಕ್ಷಾಂತರದ ಸಮಸ್ಯೆಗೆ ಒಂದೇ ಒಂದು ಪರಿಹಾರವೆಂದರೆ ಎಲ್ಲ ಪಕ್ಷಗಳೂ ಇಂಥ ಪ್ರವೃತ್ತಿಯನ್ನು ಹುರಿದುಂಬಿಸದಂತೆ ಒಮ್ಮತಕ್ಕೆ ಬರಬೇಕು. ಆ ನಿರ್ಧಾರವನ್ನು ಅಂಟಿಕೊಂಡು ನೇಮದಿಂದ ಪಥ್ಯದಂತೆ ಪಾಲಿಸಬೇಕು.

ಪಕ್ಷಾಂತರಕ್ಕೆ ಕೇವಲ ಕೊನೆಯೆಂಬುವದಿಲ್ಲ. ಪಾಶ್ಚಾತ್ಯರಲ್ಲಿ ವಿನ್‌ಸ್ಟನ್ ಚರ್ಚಿಲ್ಲರಂಥ ಮಹಾ ಮುತ್ಸದ್ದಿಯೂ ತನ್ನ ಸಂಸದೀಯ ಜೀವನದಲ್ಲಿ ೩ ಸಲ ಪಕ್ಷಾಂತರ ಮಾಡಿದನು. (ಆದರೆ ಒಮ್ಮೆ ಆರಿಸಿ ಹೋದೊಡನೆ ಅದೇ ಅವಧಿಯಲ್ಲಿ "ಸಭಾಂಗಣವನ್ನು ದಾಟಿ"ದನೇ?)

**ಮತದಾರರ ಅಭಿಪ್ರಾಯ**

ಅಮೆರಿಕೆಯಲ್ಲಿ ಪಕ್ಷಾಂತರದ ಅಗತ್ಯ ಬೀಳುವುದಿಲ್ಲ. ಸದಸ್ಯ ಯಾವದೇ ಪಕ್ಷದವನಿರಲಿ, ಸಂಸತ್ತಿನಲ್ಲಿ (ಕಾಂಗ್ರೆಸಿನಲ್ಲಿ) ಚರ್ಚೆಗೆ ಬಂದ ಪ್ರಶ್ನೆಗಳ ಮೇಲೆ ಅವರು ಸ್ವ-ಪರ ಭೇದವಿಲ್ಲದೆ ತಮ್ಮ ಒಲವಿನಂತೆ ಮತ ನೀಡುವ ಸ್ವಾತಂತ್ರ್ಯ ಅವರಿಗೆ ಅಲ್ಲಿ ಇದೆ. (ಆದರೆ ನಮ್ಮಲ್ಲಿ ಪಕ್ಷಾಂತರಕ್ಕೆ ಈ ಪ್ರಾಮಾಣಿಕ ಮತದಾನವು ಪ್ರೇರಣೆ ಅಲ್ಲ. ಅಧಿಕಾರದ ಇತರ ಲಾಭ-ಲೋಭಗಳ ವ್ಯಾಮೋಹವೇ ಮುಖ್ಯ ಪ್ರಚೋದನೆ!)

ಮುಖ್ಯ ಮಾತೆಂದರೆ ಚುನಾಯಿಸಿ ಹೋದ ಒಬ್ಬ ಸದಸ್ಯ ತನ್ನ ಪಕ್ಷ ಬಿಟ್ಟು ಇನ್ನೊಂದು ಪಕ್ಷಕ್ಕೆ ಸೇರುವುದಾದರೆ ಆತ ಪಕ್ಷದೊಂದಿಗೆ ಆ ಪಕ್ಷದ ಹೆಸರಿನಿಂದ ಗಳಿಸಿದ ಶಾಸನಸಭಾ ಸದಸ್ಯತ್ವಕ್ಕೂ ರಾಜಿನಾಮೆ ಕೊಟ್ಟ ಹೊಸ ಪಕ್ಷದ ಹೆಸರಿನಲ್ಲಿ ಮತದಾರರನ್ನು ಇದುರಿಸಬೇಕು. ಅಂಥ ಒತ್ತಾಯವಿರುವಂತೆ ಕಾನೂನು ಆಗಬೇಕು.

**ಅಧಿಕಾರಕ್ಕೆ ಅಡ್ಡ ದಾರಿ**

ಇಂಥ ಕಾನೂನಿನ ಅಗತ್ಯವೇಕೆಂದರೆ, ಪಕ್ಷಾಂತರವನ್ನು ನಿವಾರಿಸಲು ಸರ್ವಪಕ್ಷೀಯ ನಿರ್ಧಾರ ಸದ್ಯ ಸಾಧ್ಯವಿಲ್ಲ. ಮುರಾರಜಿ ದೇಸಾಯಿಯವರ ಅನುಭವವಿದು. ಅವರು ಈ ಕುರಿತು ಕೆಲವು ವಿರೋಧೀ ಪಕ್ಷಗಳ ಧುರೀಣರನ್ನು ಕೇಳಿದರಂತೆ-ಪಕ್ಷಾಂತರ ನಿವಾರಿಸಲು ಒಂದು ಒಡಂಬಡಿಕೆ ಎಲ್ಲರೂ ಒಟ್ಟಾಗಿ ಮಾಡಿಕೊಳ್ಳೋಣವೆಂದು.

ಆದರೆ ಅವರಿಗೆ ಆ ಧುರೀಣರಿತ್ತ ಉತ್ತರವಿದು. "ಕಾಂಗ್ರೆಸ್ ಪಕ್ಷ ನಾಶವಾಗುವನಕವೂ ನಾವು ಪಕ್ಷಾಂತರವನ್ನು ಪ್ರೋತ್ಸಾಹಿಸುವೆವು!" ಇದಕ್ಕೇನನ್ನಬೇಕು.

ಮತದಾರನ ಮನವೊಲಿಸುವದಕ್ಕಿಂತ ಮತದಾನದ ನಂತರ ಚುನಾಯಿತ ಸದಸ್ಯನ ಮನವೊಲಿಸಿ ತಮ್ಮ ಪಕ್ಷದ ಬಲ ಹೆಚ್ಚಿಸುವದು ಇಂದು ಅಧಿಕಾರಕ್ಕೆ ಅಡ್ಡ ದಾರಿ!

●

('ಜನಸೇವಕ' ೧೯೬೯)

# ಶಿಕ್ಷಣದ ಆಡಳಿತದಲ್ಲಿ ವಿದ್ಯಾರ್ಥಿ-ಪಾತ್ರ

## ಗಜೇಂದ್ರಗಡಕರ ಸಮಿತಿಯು ಸಾಧಿಸಿದ್ದೇನು?

ನಿವೃತ್ತ ಹೈಕೋರ್ಟ್ ಜಜ್ಜರೂ ಮುಂಬಯಿ ವಿಶ್ವವಿದ್ಯಾನಿಲಯದ ಉಪಕುಲಪತಿಗಳೂ ಆದ ಶ್ರೀ ಪಿ.ಬಿ. ಗಜೇಂದ್ರಗಡಕರರ ಅಧ್ಯಕ್ಷತೆಯಲ್ಲಿ ಯುನಿವರ್ಸಿಟಿ ಗ್ರಾಂಟ್ಸ್ ಕಮಿಶನ್ನು ೧೯೬೭ರಲ್ಲಿ ಒಂದು ಸಮಿತಿಯನ್ನು ನೇಮಿಸಿತ್ತು - ವಿಶ್ವವಿದ್ಯಾಲಯಗಳ ಮತ್ತು ಕಾಲೇಜುಗಳ ಆಡಳಿತ ನಿಯಂತ್ರಣ ಅಧಿಕಾರ ಮತ್ತು ವಿದ್ಯಾರ್ಥಿಗಳು ಇವುಗಳಲ್ಲಿ ಭಾಗವಹಿಸಬೇಕೋ ಏನೆಂಬ ಪ್ರಶ್ನೆ-ಇತ್ಯಾದಿ ವಿಷಯಗಳನ್ನು ಪರಿಶೀಲಿಸಿ ವರದಿ ಒಪ್ಪಿಸಲಿಕ್ಕೆ.

**ಕಂಡದ್ದನ್ನು ಕಂಡುಹಿಡಿಯಿತೆ?**

ಆ ವರದಿ ಇತ್ತೀಚೆಗೆ ಪ್ರಕಟವಾಗಿದೆ. ಹಿಂದೊಮ್ಮೆ ಗುಡ್ಡಕ್ಕೆ ಹೆರಿಗೆಬೇನೆ ಆಗಿ ಕೊನೆಗೂ ಒಂದು ಹೆಗ್ಗಣ ಹೊರಗೆ ಬಿದ್ದಿತ್ತಂತೆ. ಈ ವರದಿಯ ತೀರ್ಮಾನಗಳೆಲ್ಲ ಅದೇ ಸ್ವರೂಪದವೆಂದು ಅನಿಸುತ್ತದೆ.

ಭಾರತ ಮಾತ್ರವಲ್ಲ ಪ್ರಪಂಚದಲ್ಲೆಲ್ಲ ಯುವ ಜನರು ಅಸ್ವಸ್ಥ ಅಸಂತುಷ್ಟ ಅಶಾಂತ ರಾಗಿದ್ದಾರೆಂಬ ಅಪೂರ್ವ ಶೋಧವನ್ನು ಈ ಸಮಿತಿ ಮಾಡಿದೆ. ಕಂಡದ್ದನ್ನು ಕಂಡುಹಿಡಿಯಲಿಕ್ಕೂ ಒಂದು ಕಮಿಟಿ ಬೇಕು!

ಆದರೆ ಭಾರತದಲ್ಲಿಯ ಅಸಂತೋಷ ಬಡವರದು. ಪಾಶ್ಚಾತ್ಯ ದೇಶಗಳಲ್ಲಿ ಸಿರಿವಂತರದು. ಸಂಪನ್ನ ವರ್ಗಗಳ ತರುಣರೂ ತರಳರೂ ಅಲ್ಲಿ ದೊಂಬಿ ಎಬ್ಬಿಸುತ್ತಾರೆ. ಏನು ಸೂಕ್ಷ್ಮ ಪರಿಶೀಲನೆ!

**ಅಸಂತೋಷಕ್ಕೆ ಮೂಲವೆಲ್ಲಿ?**

ಈ ಅಸಂತೋಷದ ಮೂಲವೆಲ್ಲಿ? ಕೆಲ ಮಟ್ಟಿಗೆ ಸಾಮಾಜಿಕ ರಾಜಕೀಯ ಸಂಗತಿಗಳಲ್ಲಿ, ಇನ್ನೂ ಕೆಲವು ವಿಶ್ವವಿದ್ಯಾಲಯಗಳ ಒಳ ವ್ಯವಸ್ಥೆ ಮತ್ತು ವಾತಾವರಣಗಳಲ್ಲಿ! ಅಸಮಧಾನದ ಉರಿ ಎಲ್ಲೆಡೆಗೆ ಹೊಗೆಯಾಡುತ್ತಿರುವಾಗ ಗುಂಪುಗಾರಿಕೆಯ ಕೋಮುವಾರಿನ ಪುಢಾರಿಗಳು ಅದನ್ನು ಊದಿ ಹೊತ್ತಿಸಿ ಸುಲಭವಾಗಿ ಉಗ್ರರೂಪಕ್ಕೆ ತಂದು ತಮ್ಮ ರಾಜಕೀಯದ ರೊಟ್ಟಿ ಸುಟ್ಟು ಕೊಳ್ಳುತ್ತಾರೆ-ಎಂಬ ಸರ್ವ ಪರಿಚಿತ ಸಂಗತಿಯನ್ನೇ ಆ ಕಮಿಟಿ ಅಧಿಕೃತವಾಗಿ ಮತ್ತೆ ಶೋಧಿಸಿದೆ.

ಸದ್ಯದ ಪ್ರಚಲಿತ ಶಿಕ್ಷಣ ಕ್ರಮಕ್ಕೆ ಸ್ಫುಟವಾದ ಒಂದು ಗುರಿ, ಉದ್ದೇಶ ಏನೂ ಇಲ್ಲ. ಇದೊಂದು ಔಪಚಾರಿಕ ವಿಧಿ. ಇದಕ್ಕೆ ಒಳಸತ್ವವಾಗಲಿ ವಾಸ್ತವತೆಯಾಗಲಿ ಇರುವುದಿಲ್ಲ ಎಂಬ ಮಾತನ್ನೂ ಗಜೇಂದ್ರಗಡಕರ ಸಮಿತಿಯು ಮತ್ತೊಮ್ಮೆ ೨ ವರ್ಷದ ಪ್ರಯಾಸದಿಂದ ಶೋಧ ಮಾಡಿದೆ.

**ಶಿಕ್ಷಣದ ದೋಷವೆ?**

ವಿದ್ಯಾರ್ಥಿಗಳಿಗೂ ಅಧ್ಯಾಪಕರಿಗೂ ಇಂದು ಈ ಗಾಳಿಗೋಪುರದಲ್ಲಿ ದಂತದ ಮಹಡಿಯೊಳಗಿನ ಶಿಕ್ಷಣ ಬೇಕಿಲ್ಲ. ಪಠ್ಯಕ್ರಮ, ಅಭ್ಯಾಸಪತ್ರಿಕೆ, ಪರೀಕ್ಷಾ ಪದ್ಧತಿ, ಬೋಧವಿಧಾನ-ಎಲ್ಲದರಲ್ಲಿಯೂ ಬದಲಾವಣೆ ಅಗತ್ಯ ಎಂದು ಈ ತಜ್ಞರ ತೀರ್ಮಾನ!

ಆದ್ದರಿಂದ "ವಿಶ್ವವಿದ್ಯಾಪೀಠಗಳ ಕಾರ್ಯ ನಿರ್ವಹಣೆಯಲ್ಲಿ ವಿದ್ಯಾರ್ಥಿಗಳೂ ಭಾಗವಹಿಸುವದು ಸಾರಭೂತವಾದ ಅಗತ್ಯ" ಎನ್ನುತ್ತದೆ ಸಮಿತಿ. ಹೀಗೆ ವಿದ್ಯಾರ್ಥಿಗಳು ಭಾಗವಹಿಸದಿದ್ದರೆ ರಾಷ್ಟ್ರೀಯ ಅಭಿವೃದ್ಧಿ ವಿಕಾಸದಲ್ಲಿ ವಿಶ್ವವಿದ್ಯಾಲಯಗಳು ಮುಖ್ಯ ಮತ್ತು ಮಹತ್ವದ ಪಾತ್ರವನ್ನು ವಹಿಸುವದು ಶಕ್ಯವಿಲ್ಲ!

**ಉತ್ಸಾಹ ಕುಗ್ಗಿದ ಕಾರಣ**

ಇನ್ನು ಕೇಂದ್ರ ಹಾಗೂ ರಾಜ್ಯ ಸರಕಾರಗಳು ಶಿಕ್ಷಣರಂಗಕ್ಕೆ ಧನಮೂಲಗಳನ್ನು ಒದಗಿಸುವ ಪ್ರಶ್ನೆಗೆ ವಿಶೇಷ ಆದ್ಯತೆ ಪ್ರಾಶಸ್ತ್ಯ ಕೊಟ್ಟಿಲ್ಲ - ಎಂಬುದನ್ನು ಈ ವರದಿಯು ಟೀಕಿಸುತ್ತದೆ. ಈಗ ಸಲ್ಲುವದಕ್ಕಿಂತ ಹೆಚ್ಚಿನ ಧನ ಸಹಾಯ ಮತ್ತು ವಿನಿಯೋಗವಾಗದಿದ್ದರೆ ಉಚ್ಚ ಶಿಕ್ಷಣದಲ್ಲಿ ಪ್ರಗತಿ ಶಕ್ಯವಿಲ್ಲ ಎಂದು ಇವರ ಅಭಿಪ್ರಾಯ.

ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾಲಯೀನ ಶಿಕ್ಷಣದ ಬಗೆಗೆ ಉತ್ಸಾಹ ಕುಗ್ಗಲು ಮುಖ್ಯ ಕಾರಣ - ತಮ್ಮ ಸಾಮಾಜಿಕ ಅಂತಸ್ತು, ಪ್ರತಿಷ್ಠೆ ಆದಷ್ಟು ಬೇಗ ಎತ್ತರಿಸಬೇಕೆಂದು ಅವರಲ್ಲಿ ಹುರಿಗೊಂಡ ಬಯಕೆ!

**ಎಲ್ಲಿಯೂ ಸಮಾಧಾನವಿಲ್ಲ**

ಕೆಲವು ವಿಶ್ವವಿದ್ಯಾಲಯಗಳು ಕೇವಲ ಗುಣ ಮತ್ತು ಶೈಕ್ಷಣಿಕ ಪ್ರಗತಿಯನ್ನು ಪರೀಕ್ಷಿಸಿ ಕಾಲೇಜುಗಳಿಗೆ ಪ್ರವೇಶನೀಡುವ ಪದ್ಧತಿ ಹಿಂದುಳಿದ ವರ್ಗಗಳ ತರುಣರಿಗೆ ಏನೂ ಮಾನ್ಯವಿಲ್ಲ. ಈ ಪದ್ಧತಿ ತಮ್ಮನ್ನು ದೂರವಿಡಲಿಕ್ಕೇ ಹೂಡಿದ ತಂತ್ರವೆಂದು ಅವರ ಭಾವನೆ ಆಗಿದೆ. ಅಂದರೆ ಶೈಕ್ಷಣಿಕ ಅರ್ಹತೆ ವಿಶಿಷ್ಟತೆಗಳ ವಿಚಾರದಲ್ಲಿಯೂ ಸರ್ವರಿಗೂ ಸಮಾನಸಂಧಿ ಎಂಬ ಪ್ರಜಾಪ್ರಭುತ್ವದ ತತ್ವವನ್ನು ಅನ್ವಯಿಸಬೇಕೆಂದು ಈ ಯುವಜನರ ಆಗ್ರಹ. ಆದ್ದರಿಂದ ಉಚ್ಚ ಶಿಕ್ಷಣದ ವಿಸ್ತರಣೆಯ ಮೇಲೆ ಯಾವ ನಿಯಂತ್ರಣವೂ ಯಶಸ್ವಿಯಾಗುವದಿಲ್ಲ.

**ಎಲ್ಲರಿಗೂ ಉಚ್ಚ ಶಿಕ್ಷಣ ಏಕೆ?**

ಈ ಜೀವಾಳದ ಸಮಸ್ಯೆಗೆ ಮಾತ್ರ ಸಮಿತಿಯು ಒಂದೂ ಪರಿಹಾರವನ್ನು ಸೂಚಿಸಿಲ್ಲ! ಅನರ್ಹರೂ ಅಪಾತ್ರರೂ ಉಚ್ಚ ಶಿಕ್ಷಣಕ್ಕೆ ಮನಸಾ ಪ್ರತಿಕೂಲ ಪ್ರವೃತ್ತಿಯವರೂ ಆದ ಯುವಜನ ಸಮುದಾಯ ಇಂದು ವಿಶ್ವವಿದ್ಯಾಲಯಗಳಲ್ಲಿ ನುಗ್ಗಿ ಅವನ್ನು ಅಶ್ವಲಾಯಗಳನ್ನಾಗಿ ಮಾಡಿರುತ್ತಾರೆ. ಪಾಶ್ಚಾತ್ಯ ದೇಶಗಳಲ್ಲಿ ವಿದ್ಯಾರ್ಥಿಗಳ ನೂರಕ್ಕೆ ೨೪ರಷ್ಟು ಜನ ಮಾತ್ರ ಉಚ್ಚ ಶಿಕ್ಷಣಕ್ಕೆ ಪ್ರವೇಶವನ್ನು ಪಡೆಯುತ್ತಾರೆ. ಉಳಿದ ಯುವಕರು ಇತರ ವೃತ್ತಿ ವ್ಯವಸಾಯಗಳಲ್ಲಿ ತರಬೇತಿಯನ್ನು ಹೊಂದಲು

ಹೋಗುತ್ತಾರೆ. ಇಂಗ್ಲಂಡಿನಲ್ಲಿ F.R.C.S. ದಂಥ ಅತ್ಯುಚ್ಚ ವೈದ್ಯಕೀಯ ಪದವಿಯೂ ವಿಶ್ವವಿದ್ಯಾಲಯದ್ದಲ್ಲ- ಉನ್ನತ ಮಟ್ಟದ ವೈದ್ಯಕೀಯ ಪರಿಷತ್ತಿನದು.

**ಪದವಿಗಳ ಮೋಹ**

ಆದರೆ ನಮ್ಮಲ್ಲಿ ವಿಶ್ವವಿದ್ಯಾಲಯ ಒಂದೇ ಪಾತಳಿಯ ಎಲ್ಲಾ ಮಾದರಿಯ ವಿದ್ಯಾರ್ಥಿಗಳೆಂಬ ಯುವಕರಿಗೆ ಶೈಕ್ಷಣಿಕ ಅರ್ಹತೆಗೂ ಮನ್ನಣೆಗೂ ಮಹಾದ್ವಾರವಾಗಿ ಬಿಟ್ಟಿದೆ. ಆದ್ದರಿಂದ ಅಲ್ಲಿಯೇ ನೂಕುನುಗ್ಗಲು ಹೆಚ್ಚಾಗಿದೆ. ಇದಕ್ಕೆ ಕಾರಣ ಪದವಿ ಡಿಗ್ರಿಗಳ ಅವಾಸ್ತವ ಮತ್ತು ವಿಕೃತವಾದ ಮೋಹ. ಅದಕ್ಕೆ ಕಾರಣ ಅಂಥ ಡಿಗ್ರೀವಾಲರಿಗೇ ಉದ್ಯೋಗ ಸಿಗುವದೆಂಬ ಭಾವಿಕ ನಂಬಿಗೆ. ಡಿಗ್ರಿಯಿಂದಲೆ ಸಾಮಾಜಿಕ ಪ್ರತಿಷ್ಠೆ ಎಂಬ ತಿಳುವಳಿಕೆ.

**ಗಾಂಪರ ಗ್ಯಾರೇಜುಗಳು**

ಕಾಲೇಜುಗಳು ಗಾಂಪರ ಗ್ಯಾರೇಜುಗಳಾದಾಗ ಯುವಜನರ ಅಸಂತೋಷ ಉಲ್ಬಣಗೊಳ್ಳದೆ ಇನ್ನೇನು ಫಲಿತಾಂಶ? ಒಳಗೆ ಪಾಠ ಪ್ರಸಕ್ತಿಗಳಲ್ಲಿ ಯಾವ ಅಭಿರುಚಿ ಆಸಕ್ತಿ ಅಭ್ಯಾಸದ ಚಟ ಏನೂ ಇಲ್ಲ. ಹೊರಗೆ ಪದವಿಪಡೆದ ಮೇಲೂ ನೌಕರಿ ಇಲ್ಲ! ನಿರುತ್ಸಾಹ ನಿರುದ್ಯೋಗಗಳ ಭೀಕರ ಭವಿತವ್ಯ ಕಣ್ಣೆದುರು ಭೂತಕನ್ನಡಿಯಂತೆ ಕಟ್ಟಿ ನಿಂತಾಗ ವಿದ್ಯಾರ್ಥಿ ಸ್ತೋಮ ಕಂಗೆಟ್ಟ ಕೋಲಾಹಲ ಮಾಡದೆ ಇನ್ನೇನು ಮಾಡೀತು-ತನ್ನ ಅಸ್ತಿತ್ವವನ್ನು ಸಮರ್ಥಿಸಿಕೊಳ್ಳಲಿಕ್ಕೆ?

ಆದರೆ ೧೧ ತಜ್ಞರ ಈ ಸಮಿತಿಯು ಈ ಜ್ವಲಂತ ಸಮಸ್ಯೆಯ ಹುತ್ತ ಬಡಿದಿದೆಯೇ ಹೊರತು ಹಾವನ್ನು ಹೊಡೆಯಲಿಲ್ಲ!

●

('ಜನಸೇವಕ' ೧೯೭೦)

# ಸಮಾಜವಾದಿಗಳ ಧೋರಣದಲ್ಲಿ ನಿಖರತೆ ಏಕೆ ಇಲ್ಲ?

ರಾಜಕಾರಣದ ಪ್ರೇರಣೆ ಏನು? ರಾಜ್ಯಸತ್ತೆಯನ್ನು ಸ್ವಾಧೀನಪಡಿಸಿಕೊಳ್ಳುವದು. ಅದಕ್ಕೆ ಯಾವ ಉದ್ದೇಶ? ಜನತೆಯ ಕಲ್ಯಾಣ. ರಾಜಕಾರಣಿಗಳು ಈ ಜನಕಲ್ಯಾಣದ ಕೆಲವೊಂದು ಧ್ಯೇಯಧೋರಣೆಗಳನ್ನೂ ಅದಕ್ಕೆ ಅನುಗುಣವಾದ ಕಾರ್ಯಕ್ರಮಗಳನ್ನೂ ಗೊತ್ತುಪಡಿಸಿಕೊಂಡು ಒಟ್ಟಾಗಿ ಒಪ್ಪಿದ್ದರೆ ಆ ಗುಂಪು ಒಂದು ರಾಜಕೀಯ ಪಕ್ಷವಾಗುವದು. ಈ ಪಕ್ಷವು ತನ್ನ ದಲ-ಬಲ ಸಂವರ್ಧನೆಗಾಗಿ ತತ್ಸಮ ಗುಂಪುಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಬಹುದು. ಕೂಡಿ ಒಂದಾಗಿ ಹೊಸದೊಂದು ದೊಡ್ಡ ಪಕ್ಷವನ್ನು ಕಟ್ಟಬಹುದು.

### ಮೂಲದ ಪ್ರೇರಣೆ ಏನು?

ಆಗ ಈ ಹೊಸ ಪಕ್ಷದ ಸ್ವರೂಪ ಒಂದುಗೂಡಿದ ಗುಂಪುಗಳಲ್ಲಿ ಯಾವದು ದೊಡ್ಡದೋ ಬಲಿಷ್ಠವೋ ಅದನ್ನೆ ಅವಲಂಬಿಸಿ ಇರುತ್ತದೆ. ಏನೇ ಆಗಲಿ ಇಂಥ ಹೊಂದಾಣಿಕೆ ಅಥವಾ ಇನ್ನಿತರ ಬದಲಾವಣೆಗಳ ಮೂಲದ ಪ್ರವೃತ್ತಿ ಪ್ರೇರಣೆ ಒಂದೇ-ಅಧಿಕಾರ-ಸತ್ತೆಯ ಸಂಪಾದನೆ. ಆ ಸಾಧ್ಯಕ್ಕೆ ಇದೆಲ್ಲ ಸಾಧನ. ಆ ಉದ್ವೇಗಕ್ಕೆ ಇದೆಲ್ಲ ಉಪಾಯ.

### ಧ್ಯೇಯ ಸಾಧನೆ ಕೈಗೂಡಿಲ್ಲ

ನಮ್ಮ ದೇಶದಲ್ಲಿ ಸಮಾಜವಾದಿ ಪಕ್ಷ ಹೀಗೆ ಅನೇಕ ಬದಲಾವಣೆಗಳನ್ನು ಹೊಂದುತ್ತ ಕಡಲನ್ನು ಸೇರಲು ಹೊರಟ ಮಲೆನಾಡ ಹೊಳೆಯಂತೆ ಸ್ಥಿತ್ಯಂತರ ಹೊಂದುತ್ತ ಬಂದಿದೆ. ಅಪ್ರತಿಮ ದೇಶಸೇವೆ, ಅಲೌಕಿಕ ತ್ಯಾಗ ಮನಸ್ಸು, ಅಖಂಡ ಆದರ್ಶವಾದ ಇಂತಹ ಅನೇಕ ಸದ್ಗುಣಗಳುಳ್ಳ ಅನೇಕ ಧುರೀಣರನ್ನು ಪಡೆದುಬಂದರೂ ಈ ಮೊತ್ತದ ಒಟ್ಟೂ ಚರ್ಯೆ-ಚರಿತ್ರ ತನ್ನ ಸ್ವಾಯತ್ತ ಸಾಮರ್ಥ್ಯವನ್ನು ಕಾಪಾಡಿಕೊಂಡು ಬರಲು ಈವರೆಗೂ ಸಾಧಕವಾಗಿಲ್ಲ. ಇದುವೆ ದೇಶದ ಸಮಾಜವಾದೀ ಧ್ಯೇಯ ಸಾಧನೆಯ ಹಾದಿಯ ಒಂದು ದೊಡ್ಡ ಆತಂಕವಾಗಿದೆ.

### ಸತ್ತಾಗ್ರಹಣದ ಒತ್ತಾಸೆ

ಇದೀಗ ಪಿ.ಎಸ್.ಪಿ., ಎಸ್.ಎಸ್.ಪಿ ಯೊಂದಿಗೆ ವಿಲೀನವಾಗಿ ಹೊಸ ಸೋಶಲಿಸ್ಟ್ ಪಕ್ಷ ರೂಪುಗೊಂಡಿದೆ. ಎಸ್.ಎಸ್.ಪಿ ಎಂಬುದೇ ಈ ಮೊದಲು ಎಲ್ಲ ಸಮಾಜವಾದೀ ಗುಂಪುಗಳ ಸಂಯುಕ್ತ ಪಕ್ಷವಾಗಿ ಹುಟ್ಟಿದ್ದು. (ಮುಂದೆ ತನ್ನ ಘಟಕ ಪಿ.ಎಸ್.ಪಿ. ಯಿಂದ ಪ್ರತ್ಯೇಕವಾಗಿ ಆ ಹೆಸರನ್ನು ಮಾತ್ರ ಮುಂದುವರಿಸಿಕೊಂಡಿತು!) ಆದರೆ ಕೇರಳದಲ್ಲಿಯ ಪಿ.ಎಸ್.ಪಿ. ಗುಂಪು ಪಕ್ಷದಿಂದ ಸಿಡಿದು ನಿಂತು ಅಲ್ಲಿ ಒಂದು ಸಮ್ಮಿಶ್ರ ಸರಕಾರದಲ್ಲಿ ತನ್ನ ಸ್ಥಾನಕ್ಕೆ ಅಂಟಿಕೊಂಡಿಯೆ ಇದೆ. ಪಕ್ಷೀಯ ರಾಜಕಾರಣದ ಉದ್ದೇಶ ಸತ್ತಾಗ್ರಹಣವೆಂಬುದನ್ನು ಅದು ಸಿದ್ಧಮಾಡಿ ಕಾಣಿಸಿದಂತಿದೆ ಹಾಗೆಯೇ ಬಿಹಾರದಲ್ಲಿಯ ಗುಂಪೂ ಈ ಹೊಸ ವಿಲಿನೀಕರಣಕ್ಕೆ ಒಳಪಡದೆ ಉಳಿದಿದೆ-ಅಂತಹದೇ ಕಾರಣಕ್ಕಾಗಿ!

## ಒಡಿಸ್ಸಾದಲ್ಲಿ ಏನು?

ಇದೀಗ ಓಡಿಸಾದ ಗುಂಪು ಹೊಸ ಕಾಂಗ್ರೆಸ್ಸಿನೊಂದಿಗೆ ಹೊಂದಾಣಿಕೆಯ ಸಂಬಂಧ ಬೆಳೆಸಿದೆ- ಆ ರಾಜ್ಯದಲ್ಲಿ ಒಂದು ಪರ್ಯಾಯ ರಾಜಕೀಯ ಬಲ ಸಂಘಟನೆ ಮಾಡಲಿಕ್ಕೆಂದು. ಅಂದರೆ ಸರಳ ರೂಪ ಕೊಡುವದಾದರೆ ಈ ಮಾತಿನ ಅರ್ಥವಿಷ್ಟೇ - ಓಡಿಸಾದಲ್ಲಿಯ ಸಂಮಿಶ್ರ ಸರಕಾರವನ್ನು ಉರುಳಿಸಲು ಹವಣಿಸಿ ಅಲ್ಲಿ ಇನ್ನೊಂದು ಸಂಯುಕ್ತ ಸರಕಾರವನ್ನು ಅಧಿಕಾರಕ್ಕೆ ತರಲು ನೋಡುವದು!

ಓಡಿಸಾ ಪಿ.ಎಸ್.ಪಿ ಘಟಕದ ಕಾರ್ಯದರ್ಶಿ ಬಾಂಕೆ ಬಿಹಾರಿದಾಸ ಈ ಹೇಳಿಕೆ ಇತ್ತ ಸಂದರ್ಭದಲ್ಲಿಯೆ, ಪಿ.ಎಸ್.ಪಿ.ಯ ಹಿರಿಯ ಧುರೀಣ ಶ್ರೀ ಎಸ್.ಎನ್.ದ್ವಿದೇವಿ ಹೊಸ ಸೋಶಲಿಸ್ಟ್ ಪಕ್ಷದ ಅಡ್‌ಹಾಕ್ ಕಾರ್ಯಕಾರಿಣಿಗೆ ರಾಜಿನಾಮೆ ಇತ್ತು ಹೊರಬಿದ್ದಿದ್ದಾರೆ. ಈ ಮುಂದಿನ ಆಗುಹೋಗುಗಳು ಸದ್ಯದಲ್ಲಿಯೆ ನಡೆಯಲಿರುವ ೪ ಉಪಚುನಾವಣೆಗಳ ಫಲಿತಾಂಶವನ್ನು ಅವಲಂಬಿಸಿವೆ.

## ಗುಜರಾತದಲ್ಲಿ ಪ್ರವಾಹ

ಅತ್ತ ಗುಜರಾತದಲ್ಲಿ ಇದಕ್ಕೂ ಹೆಚ್ಚಾಗಿ ಕಣ್ಣು ತುಂಬುವ ದೃಶ್ಯ ಪರಿವರ್ತನೆ ಅಭಿನಯಿಸಲ್ಪಡುತ್ತಿದೆ. ಇತ್ತೀಚೆಗೆ ಅಲ್ಲಿಯ ಪಿ.ಎಸ್.ಪಿ ಯ ಕಾರ್ಯಕಾರಿಣಿಯ ಬಹು ಸಂಖ್ಯ ಸದಸ್ಯರು ಹೊಸ ಕಾಂಗ್ರೆಸ್ಸನ್ನು ಸೇರಲು ನಿರ್ಧಾರ ಕೈಗೊಂಡಿದ್ದಾರೆ! ಅಂದರೆ ಗುಜರಾತದ ಪಿ.ಎಸ್.ಪಿ ಯ ಹಳೆಯ ಹುಲಿಗಳೆಲ್ಲ ಶ್ರೀ ಸನತ ಮೆಹಥಾ ಅವರ ಧುರೀಣತ್ವದಲ್ಲಿ ಆಡಳಿತ ಕಾಂಗ್ರೆಸ್ಸಿನಲ್ಲಿ ಸಮಾವೇಶಗೊಳ್ಳಲಿದ್ದಾರೆ.

ಇದೆಲ್ಲ ಹೀಗಾಗಲು ಕಾರಣವೇನು? ಅಧಿಕಾರಕ್ಕೆ ಆದಷ್ಟು ಬೇಗ ಬರುವ ಅವಸರ? ಇದೊಂದೇ ಅಲ್ಲ, ಪಕ್ಷಕ್ಕೆ ಒಂದು ಹುರಿಕಟ್ಟಾದ ಧೋರಣೆ, ತಮ್ಮ ಸಮಾಜವಾದವನ್ನು ಪ್ರಜೆಯಲ್ಲಿ ಬಿಂಬಿಸುವದರ ಬಗೆಗೆ ಶಕ್ತಿ, ಶ್ರದ್ಧೆ, ಮತ್ತು ಯೋಗ್ಯ ಪರಿಶ್ರಮ ಇವುಗಳ ಕೊರತೆ.

## ಸಂದಿಗ್ಧತೆಯ ಪರಿಣಾಮ

ಈ ಅಸ್ಪಷ್ಟತೆ ಸಂದಿಗ್ಧತೆಯ ಒಂದು ದ್ಯೋತಕ. ಈ ಹೊಸ ಪಕ್ಷ ಭಾರತ-ಸೊವ್ಹಿಯತ್ ಒಪ್ಪಂದದ ಬಗೆಗೆ ತಾಳಿದ ನಿಲುಮೆ. ಮೊದಲು ವಿಶಾಲ ರಾಷ್ಟ್ರೀಯ ತಳಹದಿಯ ಮೇಲೆ ಈ ಹೊಸ ಪಕ್ಷ ಈ ಹೊಸ ಒಪ್ಪಂದವನ್ನು ಸ್ವಾಗತಿಸಿತು. ಆಮೇಲೆ ಪಿ.ಎಸ್.ಪಿಯ ಹಳೆಯ ನೀತಿಯ ಅಂಗವಾದ ಸೊವ್ಹಿಯತ್ ವಿರೋಧೀ ಪೂರ್ವಗ್ರಹಿಕೆಯು ಮತ್ತೆ ಕಾಣಿಸಿಕೊಂಡಿತು - ಶ್ರೀ ಮಧು ದಂಡವತೆ ಪ್ರಭೃತಿಗಳ ಹೇಳಿಕೆಗಳಲ್ಲಿ. ಹೀಗೆ ಹೊಸ ಸೋಶಲಿಸ್ಟ್ ಪಕ್ಷ ಈ ಚಾರಿತ್ರಿಕ ಒಪ್ಪಂದದ ಬಗೆಗೆ ತೂಗುದಂಡಿಗೆ ಆಯಿತು.

ಇಂಥ ನಿಲುಮೆಯಿಂದ ಜನತೆಯಲ್ಲಿ ಹೊಸ ಪಕ್ಷದ ಬಗೆಗೆ ಭರವಸೆ ಭದ್ರವಾಗುವದಿಲ್ಲ. ಇದಕ್ಕೆ ಪ್ರಧಾನ ಕಾರಣವೇನೆಂದರೆ ಇಂದಿಗೂ ಹೊಸ ಕಾಂಗ್ರೆಸ್ಸೇನು, ಹೊಸ ಕಾಂಗ್ರೆಸ್ ಪಕ್ಷವೇನು,

ಹೆಚ್ಚಾಗಿ ಧುರೀಣರ ವ್ಯಕ್ತಿ ಮಹಾತ್ಮ್ಯ ಮತ್ತು 'ನಾಮದ ಬಲ'ದಿಂದಲೇ ತಮ್ಮ ಬಂಡೆ ತೇಲಿಸಲು ನೋಡುತ್ತಿವೆ. ಮುಂದಾಳುಗಳೆಂದರೇ ಪಕ್ಷವಲ್ಲ. ಪಕ್ಷವೆಂದರೆ ಅದರ ಕಾರ್ಯನೀತಿ ಒಪ್ಪಿಕೊಂಡ ಸಾಮಾನ್ಯ ಸದಸ್ಯರ ಸಂಘಟನೆ ಅಂಥ ವಿಶಾಲವಾದ ಸದಸ್ಯತ್ವ. ಪ್ರಾಮಾಣಿಕ ಸಂಖ್ಯಾಬಲ ಈ ಪಕ್ಷಗಳು ಎಷ್ಟು ಪಡೆದಿವೆ? ಜನತೆಯ ಯಾವ ಯಾವ ಸ್ತರಗಳಲ್ಲಿ ಎಷ್ಟು ವ್ಯಾಪಕವಾಗಿ ಪಡೆದಿದೆ?

### ಮೈಸೂರಿನಲ್ಲಿ ದ್ರೋಹ

ಮೈಸೂರು ರಾಜ್ಯಕ್ಕೆ ಬಂದರೆ ಕಾಣುವದೇನು? ಶಿವಪ್ಪಾದಿಯಾಗಿ ಪಿ.ಎಸ್.ಪಿ ಯ ವಿಧಾನಸಭಾ ಸದಸ್ಯರೆಲ್ಲ ಲೋಕಸಭಾ ಚುನಾವಣೆಗಳಲ್ಲಿ ಸೋತ ಮರುದಿನವೆ ಆಡಳಿತ ಪಕ್ಷವನ್ನು ಸೇರಿಬಿಟ್ಟರು. ಆದರೆ ವಿಧಾನ ಸಭಾ ಪಕ್ಷವೆಂದರೆ ರಾಜ್ಯದ ಪ್ರಜಾ ಸಮಾಜವಾದಿ ಪಕ್ಷವೇ? ಎಂ.ಎಲ್.ಎ.ಗಳ ಹೊರತಾಗಿ ಈ ಪಕ್ಷಕ್ಕೆ ಸದಸ್ಯತ್ವ ಧುರೀಣತ್ವ ಇಲ್ಲವೇ? ಅವರ ಅಭಿಪ್ರಾಯಕ್ಕೆ ಬೆಲೆ ಉಳಿದಿಲ್ಲವೇ? ಅವರೆಲ್ಲರೂ ಕೂಡಿ ಈಗ ಹೊಸ ಸಮಾಜವಾದೀ ಪಕ್ಷವನ್ನು ಸೇರಿದ್ದಾರೆ. ಅವರೇ ನಿಜವಾದ ಪಕ್ಷವೆಂದಾದರೆ ಈ ಶಿವಪ್ಪಾದಿ ಗುಂಪು ಯಾರ ಪ್ರತಿನಿಧಿ? ರಾಜ್ಯ ಮಟ್ಟದ ನಿಜವಾದ ಪಿ.ಎಸ್.ಪಿ. ಪಕ್ಷ ಆಡಳಿತ ಕಾಂಗ್ರೆಸ್ಸಿನಲ್ಲಿ ಸಮಾವೇಶವಾದಂತೆ ಆಯಿತೇ ಅಥವಾ ಈ ಪಿ.ಎಸ್.ಪಿ. ವಿಧಾನಸಭಾ ಸದಸ್ಯರೆಲ್ಲ ತಮ್ಮ ತಾಯಿಪಕ್ಷಕ್ಕೆ ದ್ರೋಹ ಬಗೆದಂತೆ ಆಯಿತೇ?

ಇದೇ ಯಕ್ಷ ಪ್ರಶ್ನೆಯನ್ನು ನಮ್ಮ ಜಿಲ್ಲೆಯ ಪಿ.ಎಸ್.ಪಿ. ರಾಜಕಾರಣಿಗಳೂ ಇದುರಿಸಬೇಕಾಗಿದೆ. ಅವರು ಇದುರಿಸಲಾರದೇ ಹೋದರೆ ನಾಳೆ ವಿಧಾನಸಭಾ ಚುನಾವಣೆಗಳ ಪರ್ವಕಾಲದಲ್ಲಿ ಜಿಲ್ಲೆಯ ಜನತೆ ಈ ಪ್ರಶ್ನೆಗಳಿಗೆ ಸಮರ್ಥ ಹಾಗೂ ಸಮರ್ಪಕ ಉತ್ತರವನ್ನು ತಾನೇ ನೀಡುತ್ತದೆ. ಜನತೆಯನ್ನೂ ಮೀರಿದ ಪಕ್ಷ ಯಾವುದಿದೆ?

●

('ಜನಸೇವಕ' ೧೯೭೦)

# ರಾಜ್ಯಗಳ ಸ್ವಾಯತ್ತತೆಯ ಸವಾಲು

ಡಿ.ಎಂ.ಕೆ. ಪಕ್ಷವು ತಮಿಳು ನಾಡಿಗೆ ಪರ್ಯಾಯವಾಗಿ ರಾಜ್ಯಗಳಿಗೇ ಅನ್ನಿ ಸಂಪೂರ್ಣ ಸ್ವಾಯತ್ತತೆಯನ್ನು ಕೊಡಬೇಕೆಂದು ಪ್ರತಿಪಾದಿಸುತ್ತ ಬಂದಿದೆ. ಕಳೆದ ವರ್ಷ ಈ ಬೇಡಿಕೆಯ ಹಿಂದಿನ ಆಗ್ರಹ ಉಗ್ರತೆ ಹೆಚ್ಚಾಗಿತ್ತು. ಶ್ರೀ ಕರುಣಾನಿಧಿ ತಮ್ಮ ಸರಕಾರಕ್ಕೆ ಪ್ರತ್ಯೇಕ ಒಂದು ಧ್ವಜವು ಬೇಕೆಂದು ಹಕ್ಕು ಹೇಳಹತ್ತಿದ್ದರು. - ಕೇಂದ್ರ ಸರಕಾರಕ್ಕೆ ಆವ್ಹಾನ ಕೊಟ್ಟಂತೆ.

**ಕಾಂಗ್ರೆಸ್ ಕವಲೊಡೆದಾಗ**

ಆದರೆ ಮುಂದೆ ಕಾಂಗ್ರೆಸ್ ಕವಲೊಡೆಯಿತು. ಆಡಳಿತ ಕಾಂಗ್ರೆಸ್ಸಿಗೆ ಡಿ.ಎಂ.ಕೆ.ಯ ಸಂಸದೀಯ ಸದಸ್ಯರ ಬಲವನ್ನು ಅವಲಂಬಿಸಬೇಕಾಗಿ ಬಂದಿತು. ಆ ಮಟ್ಟಿಗೆ ಕೇಂದ್ರ ಸರಕಾರದ ಮೇಲಿನ ತನ್ನ ಹಂಗಿನ ವರ್ಚಸ್ಸನ್ನು ಗಮನಿಸಿ ಶ್ರೀ ಕರುಣಾನಿಧಿ ಪ್ರತ್ಯೇಕ ಪ್ರತಿಭಟನೆಯ ದನಿಯನ್ನು ತಗ್ಗಿಸಿ ನುಣ್ಣಾಗಿದ್ದರು - ನಡುಗಾಲ ಚುನಾವಣೆಗಳ ಫಲಿತಾಂಶ ಹೊರಬೀಳುವನಕ.

**ತಮಿಳುನಾಡಿನ ಹಳೆಯ ಕೂಗು**

ಈಗ ಕೇಂದ್ರ ಸರಕಾರಕ್ಕೆ - ಇಂದಿರಾ ಗಾಂಧಿಯವರಿಗೆ ಸಾಮರ್ಥ್ಯವು ಸ್ವಾಯತ್ತವಾಗಿದೆ. ಲೋಕಸಭೆಯಲ್ಲಿ ಆಡಳಿತ ಕಾಂಗ್ರೆಸ್ಸಿಗೆ ಎರಡು-ಮೂರಾಂಶ ಬಲ ಬಂದಿದೆ. ಇದರಿಂದ ಇನ್ನು ಡಿ.ಎಂ.ಕೆ ಯ ಬೆಂಬಲದ ಅಗತ್ಯ ಉಳಿದಿಲ್ಲ-ಅರ್ಥಾತ್ ವರ್ಚಸ್ಸೂ ಇಳಿದಂತೆ.

ಆದ್ದರಿಂದ ತಮಿಳುನಾಡ ಮುಖ್ಯ ಮಂತ್ರಿಗಳು ರಾಜ್ಯ ಸ್ವಾಯತ್ತತೆಯ ಹಳೆಯ ಕಹಳೆಯನ್ನು ಮತ್ತೆ ಊದಲು ಆರಂಭಿಸಿದ್ದಾರೆ. ಇದಕ್ಕೆ ಶೇಖ ಮುಜಿಬುರ್ ರಹಮಾನರು ರಚಿಸಿದ ಹೊಸ ಇತಿಹಾಸ ಯೋಗ್ಯ ಹಿನ್ನೆಲೆಯಾಗಿ ಒದಗಿತು.

**ಸಮಿತಿ ನೇಮಕದ ಉದ್ದೇಶ**

ಆದಕ್ಕೂ ಹೆಚ್ಚಾಗಿ ರಾಜಮನ್ನಾರ ಕಮಿಟಿಯ ವರದಿಯು ಶ್ರೀ ಕರುಣಾನಿಧಿಗಳ ಬೇಡಿಕೆಗೆ ಪೂರ್ತಿ ಸಮರ್ಥನೆ ನೀಡುತ್ತಿದೆ. ೧೯೬೯ರಲ್ಲಿ ಈ ಕಮಿಟಿಯ ರಚನೆ ತಮಿಳುನಾಡ (ಡಿ.ಎಂ.ಕೆ) ಸರಕಾರವೇ ಮಾಡಿತು. "ರಾಜ್ಯಗಳಿಗೆ ಆದಷ್ಟು ಹೆಚ್ಚು ಸ್ವಾಯತ್ತತೆ ಸಿಗುವಂತೆ ಸಂವಿಧಾನಕ್ಕೆ ತಿದ್ದುಪಡಿಗಳನ್ನು ಸೂಚಿಸಲು, ಗಣ ರಾಜ್ಯದ ಚೌಕಟ್ಟಿನಲ್ಲಿ ಕೇಂದ್ರ-ರಾಜ್ಯಗಳ ಸಂಬಂಧಗಳ ಪ್ರಶ್ನೆಯನ್ನು ಪರಿಶೀಲಿಸುವದು" ಈ ಕಮಿಟಿಯ ಉದ್ದೇಶವಾಗಿತ್ತು. ("to examine the question of Centre - State relationship in a federal set up with a view to suggesting ammendments to the Constitution to secure the utmost autonomy for the States".

**ಸಮಿತಿಯ ಸದಸ್ಯರು**

ಈ ಉದ್ದೇಶವು ಈ ವಾದದ ವ್ಯಾಪಕತೆಯನ್ನು ವ್ಯಕ್ತಮಾಡುತ್ತದೆ. ಕಮಿಟಿಯು ನಿಜವಾಗಿಯೂ ಬಲಿಷ್ಠವಾಗಿತ್ತು. ಮದರಾಸಿನ ನಿವೃತ್ತ ಮುಖ್ಯ ನ್ಯಾಯಾಧೀಶ ಶ್ರೀ ಪಿ.ವಿ ರಾಜಮನ್ನಾರ ಕಮಿಟಿಯ ಅಧ್ಯಕ್ಷರು, ಮದರಾಸ ವಿಶ್ವವಿದ್ಯಾಲಯದ ಹಿಂದಿನ ಕುಲಪತಿಗಳಾದ ಡಾ. ಎ.ಎಲ್. ಮುದಲಿಯಾರ ಮತ್ತು ಆಂಧ್ರ ಹಾಯ್ ಕೋರ್ಟಿನ ನಿವೃತ್ತ ಮುಖ್ಯ ನ್ಯಾಯಾಧೀಶ ಶ್ರೀ ಪಿ. ಚಂದ್ರ ರೆಡ್ಡಿ ಇವರಿಬ್ಬರು ಕಮಿಟಿಯ ಸದಸ್ಯರು.

ಕಮಿಟಿಯ ಪ್ರಚಂಡ ವರದಿ ಮದರಾಸ ಸರಕಾರಕ್ಕೆ ಒಪ್ಪಿಸಲಾಗಿದ್ದು ಅದನ್ನು ಇನ್ನೂ ಸಾರ್ವಜನಿಕರಿಗಾಗಿ ಪ್ರಕಟಿಸಿಲ್ಲ.

ಕಮಿಟಿಯು ಸಂವಿಧಾನದಲ್ಲಿ ಅಪೇಕ್ಷಿತ ಬದಲಾವಣೆಗಳನ್ನು ಮಾಡುವುದಕ್ಕೆ ನಾಲ್ಕು ಸಂಗತಿಗಳಿಗೆ ಆದ್ಯತೆ ಕೊಟ್ಟಿದೆ. ಆ ಆದ್ಯತೆಯ ಅಂಶಗಳು ಇಂತಿವೆ.

**ವರದಿಯ ಮುಖ್ಯಾಂಶಗಳು**

ಮೊದಲನೆಯದಾಗಿ, ಕೇಂದ್ರದ ಅಧಿಕಾರಗಳನ್ನು ಸಂಕ್ಷೇಪಗೊಳಿಸಬೇಕು. ಕೇವಲ ಸಂರಕ್ಷಣೆ, ವಿದೇಶಾಂಗ ನೀತಿ, ಸಾರಿಗೆ ಸಂಪರ್ಕ ಮತ್ತು ನಾಣ್ಯಚಲನ ಇವುಗಳಷ್ಟೇ ಕೇಂದ್ರದ ಕ್ಷೇತ್ರವಾಗಿ ಉಳಿಯಬೇಕು. ಈ ದೃಷ್ಟಿಯಿಂದ ಸಂವಿಧಾನದ ಏಳನೆ ಶೆಡ್ಯೂಲಿನಲ್ಲಿಯ ಸಮವ್ಯಾಪ್ತ (ಕಂಕರಂಟ) ಲಿಸ್ಟಿನ ವಿಷಯಗಳ ಪುನರ್ವಿಮರ್ಶೆಯಾಗಬೇಕು. ಇವುಗಳಲ್ಲಿಯ ಕೆಲಸವನ್ನು ತೆಗೆದು ರಾಜ್ಯದ ಲಿಸ್ಟಿಗೆ ಸೇರಿಸಬೇಕು.

ಎರಡನೆಯದಾಗಿ, ಸಂಪನ್ಮೂಲಗಳನ್ನು ಕೇಂದ್ರದಿಂದ ರಾಜ್ಯಗಳಿಗೆ ವರ್ಗಾಯಿಸುವದರ ಬಗೆಗೆ ಸಂವಿಧಾನದಲ್ಲಿ ನಿಶ್ಚಿತ ಮತ್ತು ಸುಸ್ಪಷ್ಟ ನಿರ್ದೇಶನಗಳನ್ನು ಹಾಕಿಡಬೇಕು. ಈ ದೃಷ್ಟಿಯಿಂದ, ಕೇಂದ್ರದ ಕರಕಂದಾಯಗಳ ಸಂಚಯವನ್ನು ರಾಜ್ಯಗಳಲ್ಲಿ ಹಂಚುವುದಕ್ಕೆ, ಜನಸಂಖ್ಯೆ ಮತ್ತು ಅಭಿವೃದ್ಧಿ ವಿಕಾಸದ ಪ್ರಗತಿ ವೇಗ ಇವೆರಡನ್ನೂ ಗಮನಿಸಿ ಹೊಸ ತತ್ವಗಳನ್ನು ಸೂಚಿಸಿದೆ.

ಮೂರನೆಯದಾಗಿ, ಕಮಿಟಿಯು ಬೇಸಾಯದ ಕರ, ನಿಯತವಾದ ವರಮಾನ ಕರದ ಕೆಲವಂಶ ಮುಂತಾದ ಕೆಲವು ಕೇಂದ್ರೀಯ ಕರಗಳನ್ನೂ, ಕೆಲವು ಸರಕುಗಳ ನಿರ್ಯಾತದ ಉತ್ಪನ್ನವನ್ನೂ ರಾಜ್ಯಗಳಿಗೆ ವರ್ಗಾಯಿಸಬೇಕು. ಈ ಕುರಿತು ಕೇಂದ್ರದೊಂದಿಗೆ ಕೆಲವು ಚಿಕ್ಕ ಪುಟ್ಟ ಹೊಂದಾಣಿಕೆಗಳನ್ನು ಮಾಡಿಕೊಳ್ಳಬೇಕು.

ನಾಲ್ಕನೆಯದಾಗಿ, ಉದ್ದಿಮೆಗಳಿಗೆ ಲೈಸೆನ್ಸು ನೀಡುವ ಅಧಿಕಾರ ಬಹಳಷ್ಟು ಉದ್ದಿಮೆಗಳ ಮಟ್ಟಿಗೆ ರಾಜ್ಯಗಳಿಗೇ ಒಪ್ಪಿಸಬೇಕು.

**ಕಮಿಟಿಯ ಅಭಿಪ್ರಾಯ**

ಕಮಿಟಿಯ ಅಭಿಪ್ರಾಯವೇನೆಂದರೆ, ಭಾರತದ ಸಂವಿಧಾನಕ್ಕೆ ಗಣ ರಾಜ್ಯದ (ಫೆಡರಲ್)

ಬದಲು ಏಕ ಕೇಂದ್ರಕ ('ಯುನಿಟ') ಸ್ವರೂಪವು ಬಂದಂತಿದೆ. ಅದಕ್ಕೆ ಕಾರಣ ೧೯೬೭ರ ವರೆಗೂ ಕೇಂದ್ರ ಮತ್ತು ರಾಜ್ಯಗಳಲ್ಲಿ ಒಂದೇ ಪಕ್ಷದ ಅಧಿಪತ್ಯ ದೀರ್ಘಾವಧಿಯಾಗಿ ನಡೆಯಿತು. ಸಂವಿಧಾನದ ಶಿಲ್ಪಿಗಳು ಫೆಡರಲ್ ಚೌಕಟ್ಟನ್ನು ರೂಪಿಸಿದ್ದರು. ಇಷ್ಟೆಲ್ಲ ವರ್ಷದ ಅದರ ಕಾರ್ಯಾಚರಣೆಯು, ರಾಜ್ಯಗಳ ಹಿತಕ್ಕೆ ಬಾಧೆ ಬರುವಂತೆ ಕೇಂದ್ರದಲ್ಲಿ ಮಹಾ ಮಂಡಳೇಶ್ವರ ಸತ್ತೆ (over lordship) ಬೆಳೆದು ಬರುವಂತಾಗಿತ್ತು.

**ಈ ವರದಿಯ ಬೆಳಕಿನಲ್ಲಿ.....**

ಶಿಕ್ಷಣ, ಆರೋಗ್ಯ ಮತ್ತು ಬೇಸಾಯದಂಥ ವಿಷಯಗಳ ಕ್ಷೇತ್ರದಲ್ಲಿ ರಾಜ್ಯಗಳದೇ ಕೊನೆಯ ಮಾತು ಆದರೆ ಇಲ್ಲಿಯೂ ಸಂವಿಧಾನದ ನಿರ್ದೇಶ ಬದಿಗೆ ಬಿದ್ದು ಕೇಂದ್ರದ ಪಾತ್ರ ಸರ್ವಾಧಿಪತ್ಯ ವಹಿಸಿದಂತೆ ಆಗಿದೆ - ಎಂದು ರಾಜ್ಯಮನ್ನಾರ ಕಮಿಟಿಗೆ ಅನಿಸಿದೆ. (ನಾವು ಶಿಕ್ಷಣವನ್ನೂ ರಾಜ್ಯದ ಲಿಸ್ಟಿನಿಂದ ಕಂಕರಂಟ ಲಿಸ್ಟಿನಲ್ಲಿ ಕೇಂದ್ರದ ಹಿಡಿತಕ್ಕೂ ಒಳಪಡಿಸಬೇಕೆಂದು ಇತ್ತೀಚೆಗೆ ಹೇಳುತ್ತಿದ್ದೇವೆ!)

ರಾಜಮನ್ನಾರ ಕಮಿಟಿಯ ಶಿಫಾರಸುಗಳು ಕೇವಲ ತಮಿಳುನಾಡಿನ ಕುರಿತೇ ಅಲ್ಲ. ಎಲ್ಲ ರಾಜ್ಯಗಳ ಹಾಗೂ ಕೇಂದ್ರ ಸತ್ತೆಯ ಅನ್ಯೋನ್ಯ ಸಂಬಂಧಗಳನ್ನೂ ಪುನರ್ವಿಮರ್ಶಿಸುವ ಅಗತ್ಯವನ್ನು ಸೂಚಿಸುತ್ತವೆ. ಈ ಸೂಚನೆಯನ್ನು ಉಭಯ ಸತ್ತೆಗಳೂ ಗಮನಿಸುವ ಕಾಲ ಸನ್ನಿಹಿತವಾಗಿದೆ.

●

('ಜನಸೇವಕ' ೧೯೭೦)

# ನಾವೇಕೆ ಹಿಂದುಳಿದವರು

ಬಿಂಬಕ್ಕೂ ಪ್ರತಿಬಿಂಬಕ್ಕೂ ಎಷ್ಟು ಅಂತರ? ಕನ್ನಡಿಯಲ್ಲಿ ನೋಡಿದವರಿಗೆ ಈ ಪ್ರಶ್ನೆ ಉಳಿಯುವದೇ ಇಲ್ಲ. ಆದರೆ ಸಂಸ್ಕೃತಿಯ ಪಡಿಯಚ್ಚುಗಳನ್ನು ಅನುಕರಿಸುವಲ್ಲಿ ಈ ಅಂತರ ಗಮನಿಸಬೇಕಾಗುತ್ತದೆ.

## ಹಾಸ್ಯಾಸ್ಪವಾದ ಹಿಂದುಳಿವು

ಪಾಶ್ಚಾತ್ಯ ನಾಗರಿಕತೆ ಮತ್ತು ಸಂಸ್ಕೃತಿಯ ಯಾವುದೇ ಹೊಸ ಹೂಟವನ್ನು, ಹುನ್ನರು-ಹೊಲಬನ್ನು ನಾವು ಎತ್ತಿಕೊಳ್ಳುವಲ್ಲಿಯಂತೂ ಈ ಅಂತರವು ತೀರ ದೊಡ್ಡ ದಾಪಿನದಾಗಿದೆ. ಇದನ್ನೇ ಸಮಾಜ ಶಾಸ್ತ್ರಜ್ಞರು "Cultural lag" (ಸಾಂಸ್ಕೃತಿಕ ಹಿಂದುಳಿವು) ಎಂದು ಕರೆಯುತ್ತಾರೆ. ವೈಯಕ್ತಿಕ ಕ್ಷೇತ್ರಕ್ಕಿಂತ ಸಾಮಾಜಿಕ ಸಾಮೂಹಿಕ ರೀತಿ ರೂಢಿ ರೂಪಾಂತರಗಳ ಅನುಕರಣದಲ್ಲಿ ಈ ಹಿಂದುಳಿವು ಸ್ಪಷ್ಟವಾಗಿ, ಕೆಲಸಲ ಹಾಸ್ಯಾಸ್ಪದವಾಗಿ ವ್ಯಕ್ತವಾಗುತ್ತದೆ.

## ಹಿಂದುಳಿದ ಬ್ರಿಟಿಷರು

ಇಂಗ್ಲೆಂಡು ಸಾಮಾನ್ಯವಾಗಿ ಮಂದಗಾಮಿ. ಪರಂಪರಾಪ್ರಿಯ ಮತ್ತು ಸ್ಥಿತಿಸ್ಥಾಪಕ. ಯೂರೋಪದಲ್ಲಿ ಆದ ಭೌತಿಕ ಪ್ರಗತಿಯನ್ನು ಅನುಸರಿಸುವುದರಲ್ಲಿ ಬ್ರಿಟಿಷರು ನಾಲ್ಕು ಹೆಜ್ಜೆ ಹಿಂದೆಯೇ, ವಿಶೇಷತಃ ರಣತಂತ್ರ ಶಸ್ತ್ರಾಸ್ತ್ರ ಸಜ್ಜಿಕೆಯಲ್ಲಿ. ಅಂತೆಯೇ ವಿನ್‌ಸ್ಟನ್ ಚರ್ಚಿಲ್ ಒಮ್ಮೆ ತಾಳ್ಮೆಗೆಟ್ಟು ಅಂದಿದ್ದರು. 'England always prepares for the last war." (ಬ್ರಿಟನ್ನು ಕಳೆದ ಯುದ್ಧಕ್ಕಾಗಿ ಯಾವಾಗಲೂ ಸಿದ್ಧತೆ ಮಾಡುತ್ತದೆ!)

ಮೊದಲನೆಯ ಮಹಾಯುದ್ಧದಲ್ಲಿ ಕಂದಕದ ಕಾಳಗ (Trench warfare) ನಿಧಾನವಾಗಿ ಕಲಿತು ಸಿದ್ಧವಾಗುವನಕ ಜರ್ಮನ್ನರು ವಿಮಾನದ "ಮಿಂಚಿನ ದಾಳಿ" ಆರಂಭಿಸಿದರು-ಎರಡನೆಯ ಯುದ್ಧದಲ್ಲಿ!

## ನಮ್ಮ ಸ್ಥಿತಿ ಏನು?

ನಮ್ಮ ದೇಶದ ಸ್ಥಿತಿಯೂ ಹಾಗೆಯೇ ಆಗಿದೆ - ಸಾಂಸ್ಕೃತಿಕ ಅಥವಾ ಸಾರ್ವಜನಿಕ ಜೀವನದ ಇತರ ರಂಗಗಳಲ್ಲಿ, ಪಾಶ್ಚಾತ್ಯರು ಮಾಡಿದ ತಪ್ಪುಗಳನ್ನೇ ಮತ್ತೆ ಮಾಡಿ ಅದರಿಂದ ಅವರಂತೆಯೇ ಬುದ್ಧಿ ಕಲಿತು ನಾವು ಮುಂದಿನ ಹೆಜ್ಜೆ ಇಡುವವರು. ಆ ತಪ್ಪನ್ನ ತಪ್ಪಿಸಿಕೊಂಡು, ಅದರ ಅವಸ್ಥೆಗೆ ಅಡ್ಡ ಹಾಯ್ದು ಮುಂದಿನ ಹಂತ ಮುಟ್ಟುವವರಲ್ಲ.

ಪಾಶ್ಚಾತ್ಯರಲ್ಲಿ ಕಲ್ಲಿದ್ದಲಿಯ ರೈಲು ಎಂಜಿನು ತಯಾರಿಸುವದು ಬಿಟ್ಟು ಡೀಜೆಲ್ ಎಂಜಿನ್ನು ಬರುವಾಗ ನಾವು ಕಲ್ಲಿದ್ದಲಿಯ (ಉಗಿಯ ಶಕ್ತಿಯ) ಎಂಜಿನ್ನು ತಯಾರಿಸಲು ಸಿದ್ಧರಾದೆವು. ಆಮೇಲೆ ನಾವೂ ಡಿಜೇಲ್ ಎಂಜಿನ್ ಕಟ್ಟಲು ಕಲಿತೆವು. ಆದರೆ ಯಾವಾಗ? ಅವರು ಡಿಜೇಲು ಬಿಟ್ಟು ವಿದ್ಯುತ್ ಶಕ್ತಿಯ ಬಳಕೆಗೆ ತೊಡಗಿದ ಮೇಲೆ! ಈಗ ನಾವು ನಮ್ಮ ರೈಲು ಸಾರಿಗೆಯನ್ನು

ಮಿಂಚಿನ ಶಕ್ತಿಯ ಅಳವಡಿಕೆಗೆ ಹೂಡಲು ಸಿದ್ಧರಾಗಿ ನಮ್ಮ ಹಳೆಯ ಮಾದರಿಯ ಉಗಿಯ ಮತ್ತು ಡಿಜೆಲು ಎಂಜಿನ್ನುಗಳನ್ನು ಕೊಡಕೊಳ್ಳುವಷ್ಟು ಹಿಂದುಳಿದ ಮಾರುಕಟ್ಟೆಗಳಿಗಾಗಿ ಹುಡುಕಾಡತೊಡಗಿದ್ದೇವೆ!

## ವ್ರತವೋ ವಿಧಿಯೋ?

ವಿದ್ಯುತ್ ಉತ್ಪಾದನೆಯ ದೊಡ್ಡ ಯೋಜನೆಗಳಲ್ಲಿ, ಆಂಟಿಬಾಯೊಟಿಕ್ ರಾಸಾಯನಿಕ ಔಷಧಿಗಳ ದೊಡ್ಡ ಮೊತ್ತದ ಉಪಯೋಗದಲ್ಲಿ, ಎದೆಯ 'ಕ್ಷ' ಕಿರಣದಲ್ಲಿ, ಸ್ಕೂಟರು, ಮೋಟಾರ್ ಕಾರುಗಳ ಹೆಚ್ಚಿನ ಭರದ ಬಳಕೆಯಲ್ಲಿ- ಎತ್ತಿನ ಬಂಡಿಗಳಿಗಾಗಿ ನಿರ್ಮಿಸಿದ ರಸ್ತೆಗಳ ಮೇಲೆ! - ಟೆಲಿವಿಜನ್ ಸೆಟ್ಟುಗಳ ಸಗಟು ಸಾಟೆಯಲ್ಲಿ, ಆಹಾರ ದ್ರವ್ಯಗಳಿಗೆ ಬಣ್ಣ ಹಾಕುವಲ್ಲಿ, ಪಾಶ್ಚಾತ್ಯ ವೇಷಭೂಷೆ ವಿವೇಕವಿಲ್ಲದೆ ಅನುಕರಿಸುವುದರಲ್ಲಿ-ಇಂಥ ಅನೇಕಾನೇಕ ಕ್ಷೇತ್ರಗಳಲ್ಲಿ ನಾವು ಇತರರ ತಪ್ಪುಗಳನ್ನು ಮತ್ತೆ ಮಾಡಿ ನೋಡಿ ಮುಂದರಿಯುತ್ತೇವೆ, -ಅದೊಂದು ವ್ರತವೋ ವಿಧಿಯೋ ಎಂಬಂತೆ!

## ನವ್ಯದಲ್ಲಿ ಸನಾತನೀ ವೃತ್ತಿ

ಈಲಿಯಟ್ ಕವಿ 'ವೇಸ್ಟ್ ಲ್ಯಾಂಡ್' ೧೯೨೨ರಲ್ಲಿಯೆ ಬರೆದನು. ನಮ್ಮ 'ಗೊಂದಲಪುರ' ೧೯೫೨ರ ಸುಮಾರಿಗೆ ಬಂತು. ಇಂಗ್ಲಂಡ್ ಅಮೆರಿಕೆಯಲ್ಲಿ ಹಳೆಯದಾಗುತ್ತಿದ್ದ ಕಾವ್ಯ ಪ್ರಕಾರ ನಮ್ಮಲ್ಲಿ ನವೋನವ್ಯವೆನಿಸಿಕೊಂಡು ಬಂತು!

ನಮ್ಮ ಸುಧಾರಣೆಯಲ್ಲಿಯೂ ಒಂದು ಪರಂಪರಾ ಪ್ರಿಯತೆ ಇದೆ. ನವೀನೀಕರಣದ ಹವ್ಯಾಸದಲ್ಲಿಯೂ ಒಂದು ಸನಾತನೀ ವೃತ್ತಿ ಸೇರಿಕೊಂಡಿದೆ. ಇದಕ್ಕೇನು ಮದ್ದು?

ಈ ಸಾಂಸ್ಕೃತಿಕ ಹಿಂದುಳಿವಿಗೆ ಒಂದು ನಿಯಮವಿದೆಯೆನ್ನಬಹುದು. ಚಿಕಾಗೋ ವಿಶ್ವವಿದ್ಯಾಲಯದ ಡಾ. ಬರ್ಗ್ಬರ್ನ್ ಈ Cultural Lag ದ ಸಿದ್ಧಾಂತವನ್ನು ಹೀಗೆ ಪ್ರತಿಪಾದಿಸುತ್ತಾನೆ.

## ವಿಕಾಸಕ್ಕೆ ಮೂರು ಹಂತ

ಸಂಸ್ಕೃತಿಯ ಉದ್ಯಮ ಮತ್ತು ವಿಕಾಸ ಪ್ರಸಾರದಲ್ಲಿ ಮೂರು ಹಂತಗಳು. ಪ್ರಥಮ ಹಂತದಲ್ಲಿ ಒಂದು ಶೋಧ, ಕಲ್ಪನೆ ಪದ್ಧತಿ ಆರಂಭವಾಗುತ್ತದೆ; ದ್ವಿತೀಯ ಹಂತದಲ್ಲಿ, ಅದು ಮಾನವೀ ಜೀವನವನ್ನು ವರ್ತನೆಯನ್ನು ತನ್ನ ಪ್ರಭಾವಕ್ಕೆ ಒಳಪಡಿಸುತ್ತದೆ; ತೃತೀಯ ಹಂತದಲ್ಲಿ ಸಾಮೂಹಿಕವಾಗಿ ಸಾಮಾಜಿಕವಾಗಿ ಈ ಹೊಸ ಶೋಧ, ಕಲ್ಪನೆ ಅಥವಾ ಪದ್ಧತಿ ಸಂಸ್ಥೆ ಸಂಘಟನೆಗಳಲ್ಲಿ ಸಾರ್ವಜನಿಕ ವಿಶ್ವಾಸದಲ್ಲಿ ಸ್ವೀಕೃತವಾಗುತ್ತದೆ. ಮತ್ತು ಪ್ರಥಮ ಮತ್ತು ತೃತೀಯ ಹಂತಗಳ ನಡುವೆ ಅನಿವಾರ್ಯವಾಗಿ ಅಂತರ ಬೀಳುತ್ತದೆ. ವ್ಯಕ್ತಿಯಿಂದ ಸಮಷ್ಟಿಗೆ ಹಬ್ಬುವನಕ, ಮೂಲದ ವಿಚಾರ, ಕಲ್ಪನೆ ಅಥವಾ ಪದ್ಧತಿಯಲ್ಲಿ ತಿದ್ದುಪಡಿ ಆಗಿರುತ್ತದೆ. ನ್ಯೂಟನ್ನನ ಗತಿ ನಿಯಮವು ಜಡವಸ್ತುಗಳಿಗೆ ಹೇಗೋ ಹಾಗೆಯೇ ಜಡದಿಂದ ಜನ್ಯವಾಗುವ ಜಡದೊಳಗೆ ಉಳಿದು ಬೆಳೆಯುವ ಚೇತನಕ್ಕೂ ಅನ್ವಯಿಸುತ್ತದೆ. ಹಳೆಯ ವಿಚಾರದ ಅಂತೆಯೇ ಆಚಾರದ ರೀತಿಗಳೂ

ಮಾದರಿಗಳೂ ಅವುಗಳ ಪರಿಸ್ಥಿತಿ ಸನ್ನಿವೇಶ ಬದಲಾದರೂ ಹಾಗೆಯೇ ಹಿಂದಿನಂತೆಯೇ ಮುಂದರಿಯುತ್ತವೆ ಈ ಬಗೆಯ ಸ್ಥಿತಿ ಸ್ಥಾಪಕತ್ವ ಅವುಗಳ ಜಾಯಮಾನ. ಅವು ತನ್ನಾರೆ ಬದಲಾಗುವುದಿಲ್ಲ. ಒತ್ತಾಯದಿಂದ - ಅದು ಒಳಗಿನದಿರಲಿ ಹೊರಗಿನದಿರಲಿ - ಅವನ್ನು ಬದಲಿಸಬೇಕಾಗುತ್ತದೆ.

**ಜನರೇಶನ್ ಗ್ಯಾಪ್**

ಹಿಂದಿಗಿಂತ ಹೆಚ್ಚಾಗಿ ಇಂದು ನಮ್ಮಲ್ಲಿ ಹಳಬರ ಹಾಗೂ ಹರಯುದವರ ಮನೋಭೂಮಿಕೆಯಲ್ಲಿ ಆಳವಾದ ಅಗಲವಾದ ಅಂತರ (ಕಂದಕ) ಕಂಡು ಬರುತ್ತದೆ. ಇದನ್ನು ನಾವು "generation gap" ಅನ್ನುತ್ತೇವೆ. ಹೊಸ ಹರಯದ ಮನಸ್ಸಿನ ಹೃದಯದ ಬದುಕಿನ ಮರ್ಮವನ್ನು ತಿಳಿಯಲು ಬೇಕಾದ ಮರ್ಮಸ್ಪರ್ಶಿಯಾದ 'ಅಲೆಯಳತೆ' (wave length) ಅವರ ಹಿರಿಯರಿಗೆ ತಿಳಿಯದಾಗಿದೆ. ಸಿಗದಾಗಿದೆ. ಇಬ್ಬರ ಬಾಳ ಮಿಡಿತಗಳ ಬ್ಯಾಂಡೇ ಬೇರೆ. ಹಿರಿಯರು ಹಳಬರು 'ಮೀಡಿಯಂ' ಅಲೆಯ ಮೇಲೆ ಇದ್ದರೆ ಕಿರಿಯರು ಎಳೆಯರು 'ಶಾರ್ಟ್' ಅಲೆಯ ಮೇಲೆ ಅಲೆದಾಡುತ್ತಿರುತ್ತಾರೆ!

ಅಂದರೆ ಇಂದು ನಮ್ಮ ಹರಿಜನ ಗಿರಿಜನರಷ್ಟೇ ಹಿಂದುಳಿದವರಲ್ಲ. ರಾಷ್ಟ್ರದಲ್ಲಿ ನಮ್ಮ ತಲೆಮಾರುಗಳು ಮನೆ, ಮನೆಯಲ್ಲಿಯ ಮನಸ್ಸುಗಳು ಒಂದೇ ಪಾತಳಿಯಲ್ಲಿ ಕೆಲಸ ಮಾಡುತ್ತಿಲ್ಲ. ಇದಕ್ಕೇನು ಮಾಡಬೇಕು?

●

('ಜನಸೇವಕ' ೧೯೭೦)

# ಚುನಾವಣಾ ವೆಚ್ಚದ ಅಭಿವೃದ್ಧಿ ಯೋಜನೆ

ಕೇಂದ್ರ ಸರಕಾರವು ಒಂದು ನೊಟಿಫಿಕೇಶನ್ ಹೊರಡಿಸಿ ಲೋಕಸಭೆಯ ಚುನಾವಣೆಯಲ್ಲಿ ಹುರಿಯಾಳು ಮಾಡಬಹುದಾದ ವೆಚ್ಚದ ಪರಮಾವಧಿಯನ್ನು ಇನ್ನು ೧೦ ಸಾವಿರ ರೂಪಾಯಿ ಹೆಚ್ಚಿಸಿದೆ. ಇದು ವ್ಯಕ್ತಿತ್ವ ಅಥವಾ ಪಕ್ಷದ ದೃಷ್ಟಿಯಿಂದ ಅನುಕೂಲದ್ದಾಗಿರಬಹುದು. ಆದರೆ ಪ್ರಜಾಪ್ರಭುತ್ವದ ಸಂದರ್ಭದಲ್ಲಿ ಈ ವೆಚ್ಚದ ಪರಮಾವಧಿ ಮಿತಿಯ ಬಗೆಗೆ ತುಸು ಆಲೋಚನೆ ಅಗತ್ಯ.

**ವೆಚ್ಚದ ಮಿತಿ**

ಈ ಸಲ, ಇನ್ನು ಮುಂದೂ ಸರಿ; ಪ್ರತಿಯೊಬ್ಬ ಎಂ.ಪಿ, ಹುರಿಯಾಳು ತನ್ನ ಚುನಾವಣೆಯ ವೆಚ್ಚ ೩೫,೦೦೦ದ ತನಕವೂ ಮಾಡಿದ್ದು ದಾಖಲೆಗಳಲ್ಲಿ ಕಾಣಿಸಲು ಅಡ್ಡಿಯಿಲ್ಲ. ಅಂದರೆ ಪ್ರತ್ಯಕ್ಷ ಅದು ಇನ್ನು ಬಹಳ ದೊಡ್ಡ ಮೊತ್ತದಲ್ಲಿ ಆಗಿರುತ್ತದೆ-ಇದು ಎಲ್ಲರೂ ಬಲ್ಲರು.

ನಾಗಾಲ್ಯಾಂಡ್ ಮತ್ತು ಹಿಮಾಚಲ ಪ್ರದೇಶದಲ್ಲಿ ೧೫,೦೦೦, ಕಾಶ್ಮೀರದಲ್ಲಿ ೨೫,೦೦೦- ಹೀಗೆ ಈ ವೆಚ್ಚದ ಮಿತಿಗೆ ಎರಡು ಅಪವಾದಗಳನ್ನು ಹಾಕಲಾಗಿದೆ. ಇದೇ ಲೋಕಸಭಾ ಚುನಾವಣೆಗಳ ಸಮಯ ಪಶ್ಚಿಮ ಬಂಗಾಲ, ತಮಿಳುನಾಡುಗಳ ವಿಧಾನಸಭಾ ಚುನಾವಣೆಗಳೂ ಇವೆ. ಅವನ್ನು ಅನುಲಕ್ಷಿಸಿ ಕೇಂದ್ರವು ಅಲ್ಲಿಯೂ ಅನುಕ್ರಮವಾಗಿ ೧೦॥ ಮತ್ತು ೧೨ ಸಾವಿರದ ಹೆಚ್ಚಿನ ಮಿತಿ ಹಾಕಿದೆ.

**ಹಿಂದಿನಂತೆ ಈಗಿಲ್ಲ**

ಹಿಂದೆಲ್ಲ ಎರಡು ಚುನಾವಣೆಗಳು ಜತೆಗೆ ನಡೆಯುತ್ತಿದ್ದವು. ಪಕ್ಷದ ರಾಜ್ಯಮಟ್ಟದ ಹುರಿಯಾಳುಗಳೊಂದಿಗೆ ಲೋಕಸಭಾ ಹುರಿಯಾಳು ಈ ವೆಚ್ಚದ ಬಾಬಿನಲ್ಲಿ ಕೆಲವೊಂದು ಸಹಕಾರ್ಯ ಪಡೆಯುವಂತೆ ಇತ್ತು. ಈ ಸಲ ಅದು ಶಕ್ಯವಿಲ್ಲ. ಅಲ್ಲದೆ ಒಟ್ಟು ಜೀವನ ಮಟ್ಟದ ಬೆಲೆಯೇ ಏರಿದೆ. ಆದ್ದರಿಂದ ಈ ಪರಮಾವಧಿಯ ಮಿತಿಯನ್ನು ಹುಟ್ಟಿಸಿದ್ದು- ಎಂದು ಇಲೆಕ್ಶನ್ ಕಮಿಶನರರು ಇದನ್ನು ಸಮರ್ಥಿಸಿಕೊಂಡಿದ್ದಾರೆ. ಹಾಗಿದ್ದರೆ ಸದ್ಯ ಪಶ್ಚಿಮ ಬಂಗಾಲ, ತಮಿಳುನಾಡುಗಳಲ್ಲಿ ಉಭಯ ಹುರಿಯಾಳುಗಳಿಗೂ ಸಹಕಾರ್ಯ ಶಕ್ಯವಿದ್ದು ಅಲ್ಲಿಯ ವೆಚ್ಚದ ಮಿತಿ ಹೆಚ್ಚಿಸಿಕೊಟ್ಟಿದ್ದೇಕೆ? ಬರೆ ಉಪಜೀವಿಕೆಯ ಮಟ್ಟ ಹೆಚ್ಚಿದ್ದರಿಂದಲೋ?

**ನಾಗಾಲ್ಯಾಂಡಿನಲ್ಲಿ**

ನಾಗಾಲ್ಯಾಂಡಿನಲ್ಲಿ ಈ ವೆಚ್ಚ ೨॥ ಸಾವಿರ, ಹರಿಯಾನಾದಲ್ಲಿ ೯ ಸಾವಿರ, ವಿಧಾನಸಭೆಗಳಿಗಾಗಿ ಇದು ತೀರ ಕನಿಷ್ಠ ಮಿತಿ. ಉತ್ತರ ಪ್ರದೇಶದಲ್ಲಿ ಎಲ್ಲಕ್ಕೂ ಹೆಚ್ಚೆಂದರೆ ೧೩॥ ಸಾವಿರದ ಮರ್ಯಾದೆ ಹಾಕಲಾಗಿದೆ ವಿಧಾನಸಭಾ ಚುನಾವಣೆಯ ವೆಚ್ಚಕ್ಕೆ. ಬಿಹಾರ, ಮಹಾರಾಷ್ಟ್ರಗಳಿಗೆ ೧೨ ಸಾವಿರದ ಪರಮಾವಧಿ.

ಕಳೆದ ಸಲ ಲೋಕಸಭೆಯ ೫೨೦ ಸ್ಥಳಗಳಿಗೆ ದೇಶದಲ್ಲಿ ಒಟ್ಟು ೧||-೨ ಸಾವಿರ ಹುರಿಯಾಳು ನಿಂತಿದ್ದರು. ಅಷ್ಟೇ ಮಂದಿ ಈ ಸಲವೂ ನಿಂತರೆ ಅವರ ಒಟ್ಟು ವೆಚ್ಚದ ಅಂಕಿ ೫-೬ ಕೋಟಿ ರೂಪಾಯಿಗೆ ಏರಬಹುದು. ಆದರೆ ಈ ಸಲ ಇನ್ನು ಹೆಚ್ಚು ಹುರಿಯಾಳು ಹುರಿಗೊಂಡಿದ್ದಾರೆ.

**ಇದು ದುಂದುಗಾರಿಕೆ!**

ಈ ಹುರಿಯಾಳುಗಳಾದರೂ ಹೀಗೆ ಕೋಟಿಗಟ್ಟಲೆ ಹಣ ಈ ಚುನಾವಣೆಗಳಲ್ಲಿ ಚೆಲ್ಲುವದೇಕೆ? ಇದು ಬರೆ ದುಂದುಗಾರಿಕೆಯೇ? ಅಲ್ಲ, ಇದೂ ಒಂದು ವ್ಯಾವಸಾಯಿಕ ಧನವಿನಿಯೋಗ (investment). ಇತರ ವ್ಯವಹಾರಕ್ಕಿಂತ ಇಲ್ಲಿ ಜೂಜಿನ ಸ್ವರೂಪ ಹೆಚ್ಚು. ಆದ್ದರಿಂದಲೇ ಆ ಮಟ್ಟಿಗೆ ಇದರ ಆಕರ್ಷಣೆಯೂ ಹೆಚ್ಚು.

ಆರಿಸಿ ಬಂದಮೇಲೆ ತೊಡಗಿಸಿದ ಬಂಡವಾಳ ಬಡ್ಡಿಯೊಂದಿಗೆ ತಿರುಗಿ ಪಡೆಯುವ ಭರವಸೆ ಈ ಹುರಿಯಾಳುಗಳಿಗೆ ಇದ್ದೇ ಇರುತ್ತದೆ. ಪ್ರಜಾಪ್ರಾತಿನಿಧ್ಯದ ಹಗರಣದ ಹೂರಣ ಹೊರಬೀಳುವುದೇ ಈ ಹೊಂಚುಗಾರಿಕೆಯಿಂದ.

ಸಂಸತ್ ಸದಸ್ಯನ ವೇತನ, ಇತರ ನಿತ್ಯ ನೈಮಿತ್ತಿಕ ಭತ್ತೆಗಳು ಕಮಿಟಿಗಳ ವಿಶೇಷ ದ್ರವ್ಯಲಾಭ, ಸ್ವಚ್ಛಂದ ಪುಕ್ಕಟೆ ಸಂಚಾರ, ವೈದ್ಯಕೀಯ ಉಪಚಾರ, ಇತ್ಯಾದಿಗಳಿಂದ ಚುನಾಯಿತ ಹುರಿಯಾಳು ತುಂಬ ಆದಾಯ ಮಾಡಿಕೊಳ್ಳಬಲ್ಲ ಆದರ್ಶವಾದಿಯೂ, ಸರಳಜೀವಿಯೂ, ಸದಾಚಾರಿಯೂ ಅಲ್ಲದಿದ್ದರೆ.

**ತಿಂಡಿಕೇಟಗಳ ಕಾಲ!**

ಇದೂ ಅಲ್ಲದೆ ಹಣ 'ತಿನ್ನು' ವ ತಿಂಡಿಕೇಟಿನವರಿಗಂತೂ ಚುನಾವಣೆಯಲ್ಲಿ ಬಂಡವಾಳ ಹಾಕುವುದು ಒಳ್ಳೆ ಹಯನದ ದನ ಕೊಂಡಂತೆಯೇ! ಇನ್ನು ಈ ಜನರನ್ನು ನಿಲ್ಲಿಸಿ ಆರಿಸಿ ತರುವ ವಿವಿಧ ಪಕ್ಷಗಳ ನಿಧಿಗಳಿಗೆ ಧನ ದಾನ ಮಾಡುವ ಧನಿಕ ವರ್ಗಗಳೂ ತಮ್ಮ ವಿಶಿಷ್ಟ ಉದ್ದಿಷ್ಟ ಸಾಧನೆಗಾಗಿಯೇ ಹಾಗೆ ಸಹಾಯ ಮಾಡುತ್ತಿರುತ್ತಾರೆ.

ಅಲ್ಲದೆ ಆರ್ಥಿಕ ಔದ್ಯಮಿಕ ವಿಷಯಗಳಲ್ಲಿ ತಜ್ಞರೂ ತಮ್ಮ ಕಾರಖಾನೆ ಕಂಪನಿಗಳ ಕುರಿತು ಸದ್ಭಾವನೆಯುಳ್ಳ ಹೊಣೆಗಾರ ವ್ಯಕ್ತಿಗಳೂ ಲೋಕಸಭೆಗೋ ವಿಧಾನಸಭೆಗೋ ಆರಿಸಿಬರುವದು ತಮಗೆ ಶ್ರೇಯಸ್ಕರವೆಂದು ಈ ಬಂಡುವಾಳದಾರ ಉದ್ದಮೆಗಾರ ವರ್ಗಗಳು ತಿಳಿದರೆ ಏನೂ ಸೋಜಿಗವಲ್ಲ. ಇದೂ ಅಲ್ಲದೆ, ಬೇರೆ ಪಕ್ಷಗಳ ಅಸ್ಥಿರ ಸರಕಾರಗಳು ಅಧಿಕಾರಕ್ಕೆ ಏರಿ ಉರುಳುತ್ತಿರುವದಕ್ಕಿಂತ ಒಂದೇ ಪಕ್ಷದ ಸುಭದ್ರ ಸರಕಾರದ ಸ್ಥಾಪನೆ ತಮ್ಮ ವ್ಯವಸಾಯ ವ್ಯವಹಾರಕ್ಕೆ ಯೋಗ್ಯ ವಾತಾವರಣ ಒದಗಿಸಬಲ್ಲದೆಂದು ಈ ದೇಶದ ಪ್ರಮುಖ ಉದ್ಯೋಗ ಪತಿಗಳು ಭಾವಿಸುವದು ಸ್ವಾಭಾವಿಕ.

**ಒಕ್ಕಟ್ಟಿನಲ್ಲಿ ಆಸೆ**

ಆದ್ದರಿಂದಲೆ ಟಾಟಾ ಪ್ರಭೃತಿಗಳು ಇಂಡಿಕೇಟ್ ಸಿಂಡಿಕೇಟ್ ಒಂದುಗೂಡುವ ಪ್ರಯತ್ನ ನಡೆಯಬೇಕೆಂದು ಎಸ್.ಕೆ. ಪಾಟೀಲ, ಬಾಬೂ ಭಾಯಿ ಶಹಾ ಪ್ರಭೃತಿಗಳಿಗೆ ಪ್ರೇರಣೆ ಕೊಟ್ಟದ್ದು. ಅದಕ್ಕಾಗಿಯೆ ನವಲ ಟಾಟಾರಂಥವರು ತಾವೇ ಸಂಸತ್ತಿಗೆ ಸ್ಪರ್ಧಿಸುವದು. ಅದಕ್ಕಾಗಿಯೇ ಕೇಂದ್ರದಲ್ಲಿ ಬಲಿಷ್ಠ ಬಹುಮತದ ಏಕಪಕ್ಷೀಯ ಸರಕಾರ ಬೇಕೆಂದು ಇಂದಿರಾ ಗಾಂಧಿಯೂ ಮತ್ತೆ ಮತ್ತೆ ಸಾರುವದು.

ಇರಲಿ, ಈ ೩೫ ಸಾವಿರದ ಮಿತಿಯೂ ವೆಚ್ಚಕ್ಕೆ ಸಾಲದು- ಎನ್ನುತ್ತಾರೆ ಚುನಾವಣೆಯ "ಲೆಕ್ಕಿಗ ಮಿತಾಕ್ಷರರು", ಮುದ್ರಣ, ಭಿತ್ತಿ ಪತ್ರಿಕೆ, ಮನೆಮನೆ ಪ್ರಚಾರ, ಚಹಾ-ತಿಂಡಿ ಇತ್ಯಾದಿಯಾಗಿ ಯಾವುದಕ್ಕೂ ಈ ರಕಮು ಹರಿದು ಹಂಚಿದರೆ ಏನೂ ಸಾಲದು ಎನ್ನುತ್ತಾರೆ. ಅಂದರೆ ಪ್ರತ್ಯಕ್ಷ ಕೃತಿಯಲ್ಲಿ ಈ ಅದಿಕೃತ ಮಿತಿಯನ್ನು ಮುರಿಯುವುದೆ ಚುನಾವಣಾ ವೆಚ್ಚದ ವಿಧಿಯಾಗಿದೆ.

**ಲೆಕ್ಕ ಬಚ್ಚಿಡುವದು ಸಾಧ್ಯ**

ಇಲ್ಲಿ ಇನ್ನೂ ಒಂದು ಖೂಬಿ ಇದೆ. ಈ ನಿರ್ಬಂಧ ವ್ಯಕ್ತಿಯ ವೆಚ್ಚದ ಮೇಲೆ ಪಕ್ಷದ ವೆಚ್ಚದ ಮೇಲೆ ಅಲ್ಲ. ಹುರಿಯಾಳು ತನ್ನ ಲೆಕ್ಕದಲ್ಲಿ ಕಾಣಿಸಲು ಆಗದ ಬಾರದ ವೆಚ್ಚವನ್ನು ಪಕ್ಷದ ಪಾಲಿಗೆ ಹಾಕುತ್ತಾನೆ! ಇನ್ನು ಅಂಥ ಪಕ್ಷ ಅಂಥದ್ದೇ ಸರಕಾರವಿದ್ದಲ್ಲಿ ಆ ಪಕ್ಷವೂ ಆ ವೆಚ್ಚದ ಕೆಲವು ಪಾಲು ಸರಕಾರೀ ಬೊಕ್ಕಸದ ಮೇಲೆ ಹಾಕಬಹುದು! (ಇಂದಿರಾ ಗಾಂಧಿಯ ವಿಮಾನ, ಮೈಸೂರು ಮಂತ್ರಿಗಳ ಪ್ರವಾಸ ಆಡಳಿತ ಸಿಬ್ಬಂದಿಯ ಉಪಯೋಗ, ಇತ್ಯಾದಿ!)

ರಾಜಕೀಯ ಪಕ್ಷಗಳು ತಮ್ಮ ಚುನಾವಣಾ ನಿಧಿಗಳಿಗೆ ಪಡೆದ ಧನದಾನಗಳು ಎಲ್ಲಿಂದ ಬಂದವೆಂಬುದನ್ನು ಪ್ರಕಟಿಸಬೇಕೆಂದು ವಿಧಿಸಲಾಗಿದೆ. ಆದರೆ ಹಾಗೆ ಮಾಡುವ ಭೂಪತಿಗಳು ಯಾರು? ಕೆಲವು ಪಕ್ಷಗಳಿಗೆ ಗುಪ್ತ ಧನಸಹಾಯವಾಗುತ್ತದೆ. ವಿದೇಶಗಳಿಂದಲೂ ನಮ್ಮಲ್ಲಿಯ ಚುನಾವಣೆಗಳಲ್ಲಿ ಕೆಲವು ಪಕ್ಷಗಳಿಗೆ ಹಣ ಸಿಗುತ್ತದೆಂಬ ಚರ್ಚೆಯೂ ಸಾರ್ವಜನಿಕ ಸುದ್ದಿ. ಇಂಡಿಕೇಟಿಗೆ ರಶಿಯನ್ ರೂಪಾಯಿ (ರೂಬಲ್ ?) ಆದರೆ, ಸಿಂಡಿಕೇಟಿಗೆ ಅಮೆರಿಕನ್ ಡಾಲರು! ಯಾವದು ಸತ್ಯ ಯಾವದು ಮಿಥ್ಯ? ತಥ್ಯವಿಷ್ಟೇ ಚುನಾವಣೆಯಿಂದ ಚುನಾವಣೆಗೆ ರಾಜಕೀಯ ನೀತಿಮತ್ತೆಯ ಪಾತಳಿ ಇಳಿಯುತ್ತ ನಡೆದಿದೆ.

**ಈ ಹಣ ಎಲ್ಲಿಂದ ಬಂತು?**

ಇಂದಿರಾ ಕಾಂಗ್ರೆಸ್ಸು ಚುನಾವಣೆಗಾಗಿ ೨,೦೦೦ ಜೀಪುಗಳನ್ನು ಕೊಂಡಿತು. ಅದು ಯಾವ ಹಣದಿಂದ? ಯಾವ ಇಂಡಿಕೇಟ್ ಶ್ರೇಷ್ಠಿಯೂ ಉತ್ತರ ಕೊಡುವ ಉಸಾಬರಿಗೆ ಬೀಳಲಿಲ್ಲ. ಹಿಂದೊಮ್ಮೆ ಕಾಂಗ್ರೆಸ್ಸಿನ ಶಾಖೋಪಶಾಖೆಗಳು ಜನತೆಯಲ್ಲಿ ಆಳವಾಗಿ ದೂರದವರೆಗೆ ಹಬ್ಬಿದ್ದವು. ಆಗ ಪಕ್ಷ ಸದಸ್ಯರ ಜನತೆಯ ಚಂದಾ-ವರ್ಗಣಿಯಿಂದ ನಿಧಿಸಂಗ್ರಹ ಶಕ್ಯವಿತ್ತು. ಆಗಲೂ ದೊಡ್ಡ ವೆಚ್ಚಕ್ಕಾಗಿ ದೊಡ್ಡ ಮಂದಿಯನ್ನೇ ಮೊರೆಹೊಕ್ಕುತ್ತಿದ್ದರು.

ಆಮೇಲೆ ಈ ಸಂಘಟನೆಯು ಸಂಘರ್ಷ ಯುಗದಿಂದ ಸ್ವಾತಂತ್ರ್ಯ ಯುಗಕ್ಕೆ ಬಂದಾಗ ಶಿಥಿಲವಾಯಿತು. ಅಲ್ಲದೆ ಅಧಿಕಾರದಾಸೆಗೆ ಬಂಡುವಾಳಗಾರರ ಹಣದ ಬಲದಿಂದ ಜನರಲ್ಲಿ ಖೊಟ್ಟಿ ಸದಸ್ಯರ ಯಾದಿಯುಬ್ಬಿಸಿ ಕಾಂಗ್ರೆಸ್ (ಕಾಗದೀ) ಸಂಘಟನೆ ನಿಂತಿತು - ಅದು ಅವಿಭಕ್ತವಿದ್ದಾಗಲೇ ಈ ಕಥೆ.

**ಕೊನೆಯ ಮಾತು**

ಕಾಂಗ್ರೆಸು ಅನೇಕ ರಾಜಕೀಯ ಪಕ್ಷಗಳ ಮಾತೃ ಸಂಸ್ಥೆ. ಅದರ ಚಾಳಿಯನ್ನೆ ಉಳಿದವು ಕಲಿತವು. ಪಂಚಾಯತು, ಸಹಕಾರಿ ಸಂಸ್ಥೆ, ಅಭಿವೃದ್ಧಿ ವಿಕಾಸ ಸೌಕರ್ಯ, ಸಕ್ಕರೆ ಕಾರಖಾನೆ- ಇತ್ಯಾದಿ ನೂರು ಬಾಯಿಗಳಿಂದ ಪಕ್ಷಗಳ ಪ್ರಮುಖರು ಹಣ ಶೇಖರಿಸುವಂತಾಯಿತು. ಅಧಿಕಾರ, ಹಣ ಮತ್ತು ಜಾತಿ ಈ ತ್ರಿದೋಷಗಳು ಕೂಡಿ ದೇಶದ ಆರೋಗ್ಯ ಕೆಟ್ಟಿತು. ದಾಹ ಹೆಚ್ಚಿತು. ಭ್ರಷ್ಟಾಚಾರ ಬೆಳೆಯಿತು. ಪ್ರತಿ ಚುನಾವಣೆ ಅದಕ್ಕೆ ಕಾಳಸಂತೆ!

●

('ಜನಸೇವಕ' ೧೯೭೧)

# ಕಪ್ಪು ಸಮುದ್ರಕ್ಕೆ ಬೇಲಿ

ಪ್ರತ್ಯಕ್ಷ ಕರ ವಿಚಾರಣೆಯ ಕಮಿಟಿ ಕೇಂದ್ರ ಸರಕಾರಕ್ಕೆ ತನ್ನ ವರದಿಯನ್ನು ಒಪ್ಪಿಸಿದೆ. ನ್ಯಾಯಮೂರ್ತಿ ವಾಂಚೂ ಇದರ ಅಧ್ಯಕ್ಷರು. ೧೯೭೦ರ ಕೊನೆಯೊಳಗೇ ಈ ವಾಂಚೂ ಕಮಿಟಿ ತನ್ನ ವರದಿಯ ಸಾರಾಂಶವನ್ನು ಮುಂದಾಗಿ ಒಪ್ಪಿಸಿತ್ತು.

ಕಮಿಟಿಯ ಸಲಹೆ ಸೂಚನೆ ಉಗ್ರವಾಗಿವೆ. ನಮ್ಮ ಸಮಾಜವಾದೀ ಒಲವಿನ ಸರಕಾರ ಸಹಕರಿಸಿದರೆ, ಈ ವರದಿಯ ಮೇರೆಗೆ ದೇಶದ ಹಣಕಾಸಿನ ಪರಿಸ್ಥಿತಿ ಸುಧಾರಿಸಬಹುದು.

ಕಮಿಟಿಯ ತೀರ್ಮಾನದಂತೆ ಇಂದು ದೇಶದಲ್ಲಿ ಪ್ರತಿ ವರ್ಷ ೧೪೦೦-೩೦೦೦ ಕೋಟಿಯಷ್ಟು 'ಕಪ್ಪು ಹಣ' ಕಳ್ಳ ಬಳಿಕೆಯಲ್ಲಿ ಬರುತ್ತದೆ. ಈ ತೀರ್ಮಾನಕ್ಕೆ ಭಿನ್ನ ಮತವನ್ನು ಕೊಟ್ಟ ಸದಸ್ಯರ ತೀರ್ಪಿನಂತೆ ಈ ಅಂಕೆಗಳು ತಪ್ಪು ತಿಳುವಳಿಕೆ ಹುಟ್ಟಿಸುವಂಥವು. ನಿಜವಾಗಿ ಈ ಕಪ್ಪು ಹಣದ ಮೊತ್ತ ೨೮೦೦ ರಿಂದ ೩೦೦೦ ಕೋಟಿ ರೂಪಾಯಿಯಂತೆ. ಈ ಮತಬೇಧದಲ್ಲಿ ಹೆಚ್ಚಿನ ಸ್ವಾರಸ್ಯವಿಲ್ಲ! ಉಭಯ ತೀರ್ಮಾನಗಳಲ್ಲಿಯ ೧೪೦೦ ಕೋಟಿಯ ವಾರ್ಷಿಕ ಅಂದಾಜೇ ಸಾಕು ನಮಗೆ.

ಸಾರಿಗೆ ಉದ್ದಿಮೆ ವ್ಯಾಪಾರ ಇವುಗಳೇ ಪ್ರಮುಖ ಮೂಲ ಈ "ಕಪ್ಪು ಸಮುದ್ರ" ದ ವಿಸ್ತಾರಕ್ಕೆ. ಅದಕ್ಕೆ ಇತರ ಮಹಾನದಿಗಳು ಬಂದು ಸೇರಿದ್ದು ಉದ್ದಿಮೆ, ಇತರ ವ್ಯವಸಾಯ ಮತ್ತು ವೃತ್ತಿವರ್ಗಗಳಿಂದ.

ಕಳ್ಳ ವ್ಯಾಪಾರ-ವ್ಯವಹಾರ ಚಿನ್ನ ಮತ್ತು ವಿಲಾಸೀ ವಸ್ತುಗಳ ಕಳ್ಳಸಾಗಾಟ, ಕಾಯಿದೆಬಾಹಿರ ಲೈಸೆನ್ಸ್ ಕೋಟ ಖರೀದಿ, ಅವುಗಳ ಗುಪ್ತ ಕಮಿಶನ್ನು ರಾಜಕೀಯ ಪಕ್ಷಗಳಿಗೆ ಧನ ದಾನ, ಮದುವೆ ಮಂಗಲೋತ್ಸವಗಳಲ್ಲಿ ವಿಪರೀತ 'ಅದ್ದೂರಿ' ವೆಚ್ಚ ಇವೆಲ್ಲ ಈ ಹಣದ ಕೆಲವು ವಿನಿಯೋಗಗಳು.

ಈ ಕಪ್ಪು ಹಣದ ಹಾವಳಿಗೆ ನಿವಾರಣೋಪಾಯಗಳೇನು?

೧೦ ರೂ.ಗಳ ಮೇಲಿನ ಎಲ್ಲ ನೋಟುಗಳನ್ನು ರದ್ದು ಮಾಡುವದು. ಅಲ್ಲದೆ ೫೦೦ ರೂ.ಗಳ ಮೇಲೆ ತಾನಾಗಿ ನಗದಿಯಲ್ಲಿ ಮುರಿಸಿಕೊಳ್ಳುವ ಅನುಕೂಲವಿರಕೂಡದು.

ಪ್ರಾಮಾಣಿಕ ಕರತೆರಿಗೆದಾರರಿಗೆ ಕರಗಳ ಮಾರ್ಜಿನಲ್ ರೇಟಿನಲ್ಲಿ ನೂರಕ್ಕೆ ೭೫ರಷ್ಟು ಕಡಿಮೆ ಮಾಡಿ ಕೊಡುವದು. ಕರ ತಪ್ಪಿಸುವ ಅಧಿಕಾರಿಗಳಿಗೆ ಕನಿಷ್ಠ ೬ ವರ್ಷ ಅಧಿಕಾರದಿಂದ ತಳ್ಳಿಡಬೇಕು. ಅಂಥವರಿಗೆ ಯಾವ ಸಾಮಾಜಿಕ ಸಾರ್ವಜನಿಕ ಸನ್ಮಾನವೂ ಸಿಗಬಾರದು. (ಇಂದು ಕರನಿರಾಕರಣೆಯ ಈ ವೀರರಿಗೂ ಪದ್ಮಶ್ರೀ ಪದ್ಮಭೂಷಣಗಳು ಸಿಗುತ್ತಿವೆ. ಆದರೆ ಕರ ತಪ್ಪಿಸಿ ದೇಶಕ್ಕೆ ವಂಚನೆ ಮಾಡಿದ ಬಗ್ಗೆ ಅಲ್ಲ!)

ಟೇಕ್ಸು ತಪ್ಪಿಸುವವರಿಗೆ ಯಾವದೇ ಬ್ಯಾಂಕಿಂಗ್ ಸೌಕರ್ಯ ಸಿಗಕೂಡದು. ಸಾಲ-ಪತ್ತು

ಒದಗಕೂಡದು.

ನಿರ್ಯಾತ ಪ್ರಮೋಷನ್ನಿನ ಅರ್ಹತೆಯ ಪ್ರಾಶಸ್ತ್ಯ ಯೋಜನೆ ಈಗಿದ್ದ ರೂಪದಲ್ಲಿ ಪೂರ್ತಿ ಧೂರ್ತರ ಲಾಭಬಡಕರ ಸಂಚಾಗಿದೆ- ಎಂದಿದೆ ವಾಂಚೂ ಸಮಿತಿಯ ವರದಿ.

ರಾಜಕೀಯ ಪಕ್ಷಗಳಿಗೆ ಸರಕಾರದಿಂದ ಧನಸಹಾಯ ದೊರೆಯಬೇಕು. ಈ ಕಳ್ಳ ಹಣದಿಂದ ಅಲ್ಲ. ಅಭ್ಯರ್ಥಿಗಳೂ ಪಕ್ಷದ ಹಿರಿಯರೂ ತಮ್ಮ ಲೆಕ್ಕ ಸರಕಾರಕ್ಕೆ ಒಪ್ಪಿಸಬೇಕು. ಅದು ಸಾರ್ವಜನಿಕವಾಗಿ ಪ್ರಕಟವಾಗಬೇಕು.

ಇನ್ನು ವೈಯಕ್ತಿಕವಾಗಿ ಪಕ್ಷಗಳಿಗೆ ಧನಿಕರು ಧನ ದಾನ ಮಾಡಬಹುದು. ಆದರೆ ಅದಕ್ಕೆ ವರಮಾನ ಕರದ ವಿನಾಯಿತಿ ಇರಕೂಡದು.

ಕಪ್ಪು ಹಣದ ಪ್ರವಾಹ "ಹಸಿರು ಕ್ರಾಂತಿಕಾರ" ತತ್ವ ಹಿಡಿದಿದೆ! ಗ್ರಾಮಾಂತರಗಳಲ್ಲಿ ತೋಟಪಟ್ಟಿ ಡೇರಿ ಕೋಳಿ ಸಾಕಣೆ ಹಿರಿಯ ಬೇಸಾಯ ಹಣ್ಣ ಲಾಗುವಾಡು ಹೀಗೆಲ್ಲ ಹಲವು ಮುಖವಾಡಗಳಡಿಗೆ ಕಪ್ಪು ಹಣ ಭೂಮಿಗತವಾಗುತ್ತಿದೆ.

ಇದಕ್ಕೆ ಉಪಾಯವೆಂದರೆ ವರಮಾನ ಕರದ ಬಗೆಗೆ ಬೇಸಾಯ ಮತ್ತು ಇತರ ವರಮಾನಗಳಲ್ಲಿ ಭೇದ ಮಾಡಬಾರದು. ಕರಾಕರಣೆ ಎರಡಕ್ಕೂ ಒಂದೇ ರೀತಿ ಇರಬೇಕು. ಡೇರಿ ಪೌಲ್ಟ್ರಿ ಇತ್ಯಾದಿಗಳಿಗೆ ವಿಶೇಷ ವಿನಾಯಿತಿ ರಿಯಾಯಿತಿಗಳನ್ನು ನಿಲ್ಲಿಸಬೇಕು.

ಎಲ್ಲ ಕಂಪನಿಗಳ ಬಂಡವಾಳದ ಮೇಲೆ ನೂರಕ್ಕೆ ೧ ರಂತೆ ಸಪಾಟಾಗಿ ಕರ ಆಕರಣೆ ಮಾಡಬೇಕು.

ಕರವಸೂಲಿಯ ಮತ್ತು ಕಳ್ಳ ಹಣದ ತನಿಖೆಯ ಎಲ್ಲ ಸರಕಾರಿ ಯಂತ್ರಣೆ ಚುರುಕುಗೊಳಿಸುವ ಬಗೆಗೂ ಕಮಿಟಿ ವಿವರವಾಗಿ ಸೂಚನೆ ನೀಡಿದೆ.

ಇಂದು ಲೆಕ್ಕ ಇಡುವ ಮತ್ತು ಅದರ ತಪಾಸಣೆ ಮಾಡುವ ಅಕ್ರಮ ವ್ಯವಸ್ಥೆಗಳೇ ಈ ಎಲ್ಲ ಆಡಳಿತದ ಸರಪಳಿ ಹರಿಯುವ ಅತಿ ದುರ್ಬಲ ಕೊಂಡಿ! ಕಮಿಟಿಯ ಒಬ್ಬ ಸದಸ್ಯರ ಮತದಂತೆ ಈ ಅಕೌಂಟಿಂಗ್ ಮತ್ತು ಆಡಿಟಿಂಗ್ ವ್ಯವಸಾಯಗಳೇ ದೇಶದಲ್ಲಿಯ ಇಷ್ಟು ದೊಡ್ಡ ಕಪ್ಪು ಹಣದ ವಿಸ್ತರಣೆಗೆ ಒಂದು ಮುಖ್ಯ ಹೊಣೆ.

( ಈ ಸಂದರ್ಭದಲ್ಲಿ ಒಂದು ಸತ್ಯ ಕಥೆ ನೆನಪಾಯಿತು. ಮುಂಬಯಿಯ ಒಬ್ಬ ಇನ್‌ಕಂಟ್ಯಾಕ್ಸ್ ಇನ್‌ಸ್ಪೆಕ್ಟರ್ ತನ್ನ ಆಪ್ತರಿಗೆ ಎಚ್ಚರಿಕೆ ಕೊಟ್ಟು "ನೋಡಿ ನನ್ನ ಹಣ ಆದಷ್ಟು ಬೇಗ ಎಲ್ಲಾದರೂ ಹೊಲ ಮನೆಗಳಲ್ಲಿ ತೊಡಗಿಸಬೇಕಾಗಿದೆ. ನಾನು ಯಾವ ಕ್ಷಣಕ್ಕೂ ಜೈಲಿಗೆ ಹೋಗಬಹುದು! ತಿರುಗಿ ಬಂದಾಗ ನೆಮ್ಮದಿಯಾಗಿ ಬದುಕುವಂತೆ ಆಗಬೇಕು!" ಈ ಉದ್ಗಾರದಲ್ಲಿ ಹಿಂದೆ ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮ ಆಸ್ತಿ ಪಾಸ್ತಿ ಹೆಂಡಿರು-ಮಕ್ಕಳ ಅಥವಾ ಆಪ್ತ ಮಿತ್ರರ ಹೆಸರಿಗೆ ಮಾಡಿ ಯಾವ ಕ್ಷಣಕ್ಕೂ ಜೇಲಿಗೆ ಹೋಗಲು ಹೊರಟುನಿಂತ 'ದೇಶಭಕ್ತ' ನ ದನಿ ಮೊಳಗುವದಿಲ್ಲವೇ?)

ಈ ಕುರಿತು ಕಂಪನಿ ಕಾಯ್ದೆಯನ್ನು ಸೂಕ್ತವಾಗಿ ತಿದ್ದಬೇಕು ಎಂದಿದೆ ಒಬ್ಬ ಸದಸ್ಯನ ಟಿಪ್ಪಣಿ.

ಉದ್ದಿಮೆ ವ್ಯವಸಾಯಗಳಂತೆಯೇ ಬೇಸಾಯವನ್ನು ಒಂದೇ ಸಮ ವರಮಾನ ಕರಕ್ಕೆ ಒಳಪಡಿಸಲು ಅನುವಾಗುವಂತೆ ಅವಶ್ಯವಿದ್ದಲ್ಲಿ ಸಂವಿಧಾನವನ್ನೇ ತಿದ್ದಬೇಕೆಂದು ಕಮಿಟಿಯು ಸೂಚಿಸಿದೆ.

ಕೊನೆಯದಾಗಿ ಅರ್ಥವ್ಯವಸ್ಥೆ ಅದರ ಸಾಮಾಜಿಕ ಮತ್ತು ಇತರ ದೃಷ್ಟಿಯಿಂದ ಕಮಿಟಿಯು ಒಂದು ರಾಷ್ಟ್ರೀಯ ಅಭಿವೃದ್ಧಿ ವಿಕಾಸ ನಿಧಿಯ ರಚನೆಯನ್ನು ಸೂಚಿಸಿದೆ. ಈ ನಿಧಿಗೆ ಎಲ್ಲ ತೆರಿಗೆದಾರರೂ ಕರ-ಕಂದಾಯಗಾರನೂ ತಮ್ಮ ವರಮಾನದ ಒಟ್ಟು ನೂರಕ್ಕೆ ೧೦ರಷ್ಟು ಮಿಕ್ಕದಂತೆ ಸಲ್ಲಿಸಬೇಕು. ಈ ಸಲುವಳಿಗೆ ಕರದಿಂದ ವಿನಾಯಿತಿ ನೀಡಬೇಕು. - ಎಂದು ಸರಕಾರಕ್ಕೆ ವಾಂಚು ಕಮಿಟಿಯು ಶಿಫಾರಸು ಮಾಡಿದೆ.

ಹಾಗೆಯೇ ಉತ್ಪಾದನೆ ಹೆಚ್ಚಿಸುವ ಹಾಗೂ ಹಿಂದುಳಿದ ಪ್ರದೇಶಗಳಲ್ಲಿ ಉದ್ದಿಮೆ ಸ್ಥಾಪಿಸಿ ಉದ್ಯೋಗಾವಕಾಶಗಳನ್ನು ಕಲ್ಪಿಸುವ ಎಲ್ಲ ಔದ್ಯೋಗಿಕ ಯೋಜನೆಗಳಿಗೂ ಆ ಮಟ್ಟಿಗೆ ಕರಗಳಿಂದ ವಿನಾಯಿತಿಯನ್ನು ಸರಕಾರ ನೀಡಬೇಕೆಂದೂ ಕಮಿಟಿಯ ಸೂಚನೆ.

ನಾಳೆ ಚುನಾವಣೆಗಳ ನಂತರ ಅನುಕೂಲ ಅನುವರ್ತಿಯಾದ ರಾಜ್ಯ ಸರಕಾರಗಳು ಅಸ್ತಿತ್ವದಲ್ಲಿ ಬಂದಾಗಲೇ ದಾರಿದ್ರ್ಯ ನಿವಾರಣೆಯ ಪಂಥತೊಟ್ಟ ಸರಕಾರದ ಸತ್ವ ಪರೀಕ್ಷೆ ಈ ವಾಂಚು ಕಮಿಟಿಯ ವರದಿಯ ಕಾರ್ಯಾಚರಣೆಯಲ್ಲಿದೆ.

●

('ಜನಸೇವಕ' ೧೯೭೨)

# ಭಾರತದ ಜಾಗತಿಕ ಪರ್ವ

ಬಾಂಗ್ಲಾ ವಿಮೋಚನೆಯ ಯುದ್ಧದ ನಂತರ - ಅಂದರೆ ನಾವು ಪಾಕಿಸ್ತಾನದ ಯುದ್ಧ ಯಂತ್ರವನ್ನು ಮುರಿದು ಸದೆಬಡಿದು ಗೆದ್ದ ನಂತರ,- ಭಾರತದ ವಿದೇಶ ನೀತಿಯು ಹೊಸದೊಂದು ಕಳೆಯನ್ನು ತಳೆದಿದೆ. ಅದರ ಜತೆಗೆ ವಿದೇಶದ ಮಹಾಬಲಿಗಳ ದೃಷ್ಟಿಯಲ್ಲಿ, ಅಂತರಾಷ್ಟ್ರೀಯ ಸನ್ನಿವೇಶದಲ್ಲಿ ಭಾರತದ ಭೂಮಿಕೆಗೆ ಹೊಸದೊಂದು ಮಹತ್ವ ಬಂದಿದೆ. - ಎಂಬುದು ಯಾವ ಹಾದಿಹೋಕನಿಗೂ ವೇದ್ಯವಾಗುವ ಮಾತು.

ಆದರೆ ಈ ಭೂಮಿಕೆಯ ಹಾಗೂ ಅದರ ಹಿಂದಿನ ನಮ್ಮ ಬಲದ ನಿಜವಾದ ಸ್ವರೂಪವೇನು? ಪರರಾಷ್ಟ್ರಗಳ ಸಂದರ್ಭದಲ್ಲಿ ಭಾರತವು ಎಲ್ಲಿ ಹೇಗೆ ನಿಂತಿದೆ? ಎಂಬುದನ್ನು ತುಸು ಆಳದಲ್ಲಿ ಅರಿತುಕೊಳ್ಳುವುದು ಅಪ್ರಸ್ತುತವಾಗಲಿಕ್ಕಿಲ್ಲ.

ಭಾರತವು ಇಂದು ಮೂರು 'ಮಹಾರಾಷ್ಟ್ರ'ಗಳನ್ನು ಎದುರಿಸುತ್ತಿದೆ: ಅಮೇರಿಕಾ, ರಶಿಯಾ ಮತ್ತು ಚೀನ. ಇದೂ ಅಲ್ಲದೆ ಪಶ್ಚಿಮ ಏಶಿಯಾದ ಅರಬ ರಾಷ್ಟ್ರಗಳೊಂದಿಗೆ ಆಫ್ರಿಕೆಯ ಹೊಸ ರಾಷ್ಟ್ರಗಳೊಂದಿಗೆ ಹಳೆಯ ಹಗೆಯೂ ಋಣಾನುಬಂಧಿಯೂ ಆದ ಇಂಗ್ಲೆಂಡ್‌ದೊಂದಿಗೆ ಅದರ ಮಿತ್ರ ರಾಷ್ಟ್ರ ಸಂಘದೊಡನೆ, ಮತ್ತು 'ಯೂರೋಪದ ಸಾಮಾಯಿಕ ಪೇಟೆ' ರಾಷ್ಟ್ರಗಳೊಡನೆ ನಮ್ಮ ನಿಲುಮೆ, ನಿಲುಕು ಹೇಗಿದೆ ಎಂಬುದನ್ನು ಪರ್ಯಾಲೋಚಿಸುವದು ಕ್ರಮಪ್ರಾಪ್ತವು.

ಹಿಂದೊಮ್ಮೆ ನೆಹರೂಜೀ ಬದುಕಿದ್ದಾಗ ನಮ್ಮ ಸುಪ್ರಸಿದ್ಧ ತಾಟಸ್ಥ್ಯ ನೀತಿಯು ಅಮೇರಿಕಾ, ಏಶಿಯಾ, ಇಂಗ್ಲೆಂಡ್‌ಗಳಿಗೆ ತುಂಬಾ ಅನುಕೂಲಕ್ಕೆ ಒದಗುತ್ತಿತ್ತು. ಅವು ಅತ್ಯಂತಿಕ ನಿಷ್ಠುರದ ನಿಲುಮೆ ಹಿಡಿದಾಗ ಅವುಗಳ ನಡುವೆ ಏನಾದರೊಂದು ಸಂಧಾನ ಸಂವಿಧಾನಗಳನ್ನು ಆರಂಭಿಸಲಿಕ್ಕೆ ಭಾರತವು ಶ್ರೀಕೃಷ್ಣನಂತೆ ದೌತ್ಯವನ್ನು ನಿರ್ವಹಿಸಲು ಅನುವಾಗುತಿತ್ತು. ಉದಾಹರಣೆಗೆ ಸುಯೇಜಕಾಲುವೆಯ ಕಲಹದಲ್ಲಿ ಭಾರತದ ಮಧ್ಯಸ್ಥಿಕೆ ತುಂಬ ನೆರವಾಯಿತು. ಕೋರಿಯಾದಲ್ಲಿ ಶಾಂತಿ ವ್ಯವಸ್ಥೆಯ ಪಾರುಪತ್ಯವನ್ನು ಭಾರತವೇ ವಹಿಸಲು ಮುಂದಾಯಿತು. ಅದಕ್ಕೆ ಪ್ರತಿಯಾಗಿ ನಮ್ಮ ಗೋವಾ ಆಕ್ರಮಣದ ಆಯಕಟ್ಟಿನಲ್ಲಿ ಅಧ್ಯಕ್ಷ ಜನರಲ್ ನಾಸೇರ ತುಂಬ ನೆರವಾದರು.

ಆದರೆ ಮುಂದೆ ಈ ಸಂವಿಧಾನ ಉಳಿಯಲಿಲ್ಲ. ಪ್ರಪಂಚದ ರಾಜಕಾರಣ ಹಿಂದಿನಂತೆ ಸರಳವಾಗಿ ಸ್ಪಷ್ಟವಾಗಿ ಎರಡು ಧ್ರುವಗಳ ಸುತ್ತಲೂ ಕೇಂದ್ರೀಕೃತವಾಗಿ ಉಳಿಯಲಿಲ್ಲ. ಇಷ್ಟೇ ಅಲ್ಲ; ಈ ಧ್ರುವಗಳು- ಅಮೇರಿಕಾ, ಸೋವಿಯತ್ ರಶಿಯಾ ಒಂದಕ್ಕೊಂದು ಹತ್ತಿರ ಬರುವಂತೆ ಆಯಿತು. ವಾಷಿಂಗ್‌ಟನ್ ಮಾಸ್ಕೋ ನೇರ ಟೆಲಿಫೋನ್ ಸಂಪರ್ಕವಾಯಿತು. ಶ್ವೇತಭವನ್ - ಕೆಂಪು ಕ್ರೆಮ್ಲಿನ್ ನೇರವಾಗಿ ಮಾತುಕತೆ ನಡೆಸುವಂತೆ ಆಯಿತು. ಮತ್ತು ಆ ಮಟ್ಟಿಗೆ ಭಾರತದ ದೂತ ಪಾತ್ರಕ್ಕೆ ಅಂತರ್‌ರಾಷ್ಟ್ರದ ರಾಜಕೀಯದ ರಂಗಪ್ರವೇಶಕ್ಕೆ ಆಸ್ಪದ ಕಡಿಮೆ ಆಯಿತು.

ಇದಕ್ಕೂ ಸೂಕ್ಷ್ಮವಾದ ಇನ್ನೊಂದು ಮಾರ್ಪಾಟು ಒದಗಿ ಬಂದಿತು. ಅಮೇರಿಕೆಯು ಕೆಂಪು ಚೀನವನ್ನು ಸುತ್ತುಗಟ್ಟಿ ಅದಕ್ಕೆ ತಡೆ ಹಾಕುವ ಮಹಾವ್ಯೂಹದಲ್ಲಿ ಭಾರತವೂ ಪೂರ್ತಿ

ನೆರವಾಗಬೇಕೆಂದು ಹಿಂದಿನಿಂದಲೂ, ೫೦-೬೦ರ ದಶಕಗಳಲ್ಲಿ ವಿಶೇಷವಾಗಿ ಹಂಬಲ ವಿಟ್ಟುಕೊಂಡಿತ್ತು.

ಆದರೆ ಭಾರತವು ತನ್ನ ವಿರೋಧ ತಾಟಸ್ಥ್ಯ ಅಥವಾ ನಿರ್ಲಿಪ್ತ ನೀತಿಯ ಮೂಲಕ ಅಮೇರಿಕೆಯೊಂದಿಗೆ ಅಷ್ಟು ದೂರಕ್ಕೆ ಹೆಜ್ಜೆ ಹಾಕಲು ಸಿದ್ಧವಾಗಲಿಲ್ಲ. ಆಗೆಲ್ಲ ಅಮೆರಿಕೆಯ ಪಿ.ಎಲ್ ೪೮೦ರ ಅಕ್ಷಯ ಭಿಕ್ಷೆಯ ಮೇಲೆ ನಾವು ಬದುಕಿದ್ದೆವು. ಆದಾಗ್ಯೂ ಅಮೆರಿಕೆಯ ರಾಜಕೀಯ ಹೊಂಚುಗಾರಿಕೆಗೆ ಭಾರತ ಭಾಗಿಯಾಗಲಿಲ್ಲ.

ಆದರೂ ಏಶಿಯಾದ ಈ ಭಾಗದಲ್ಲಿ ಕಮ್ಯುನಿಸಂ ಹಬ್ಬದಂತೆ ನೋಡಿಕೊಳ್ಳುವುದರಲ್ಲಿ ಭಾರತಕ್ಕೂ ಆಸಕ್ತಿ ಇದ್ದರಿಂದ ಅಮೆರಿಕ ಈ ದೇಶವನ್ನು ತನ್ನ ಧೋರಣೆಯ ಪಾಲುಗಾರವೆಂದೇ ಭಾವಿಸಿತು.

ಈ ಭಾವನೆ ಮೊನ್ನಿನವರೆಗೆ ಮುಂದುವರಿಯಿತು. ಈ ಮೊನ್ನೆಯೆಂದರೆ ಅಧ್ಯಕ್ಷ ನಿಕ್ಸನ್ ಮಾವೊತ್ಸೆತುಂಗರಿಗೆ ಭೇಟಿಯಾದದ್ದು. ವಾಶಿಂಗ್‌ಟನ್ ಪೀಕಿಂಗ್‌ಗಳ ಕೈಕುಲುಕಿನಿಂದ ಅಮೆರಿಕಾ ಕೆಂಪು ಚೀನಗಳ ನಡುವಿನ ಕ್ರೋಧದ ತಿಕ್ಕಾಟ ಅದರ ಬಿರುಸು ಬಿಗುವು ಮೊಂಡವಾಯಿತು. ಸಡಿಲವಾಯಿತು. ಕಾಗದದ ಹುಲಿಯು ಚೀನೀ ಬೆಕ್ಕಿನ ಅಥವಾ ಪೀಕಿಂಗ್ ಕುನ್ನಿ ಸಂಗಾತಿ ಆದಂತೆ ಕಂಡು ಬಂತು.

ಇದರಿಂದ ವ್ಯವಹಾರಿಕವಾಗಿ ಅಮೇರಿಕೆ ಚೀನದ ದಿಗ್ಬಂಧದ ಜಿದ್ದನ್ನು ಬಿಟ್ಟಂತೆ-ಆ ಮೂಲಕ ಅಮೆರಿಕೆಯ ಕಣ್ಣಿನಲ್ಲಿ ಭಾರತದು ಅಗತ್ಯ ಮಹತ್ವ ಹಿಂದಿನಷ್ಟು ಉಳಿಯಲಿಲ್ಲ. ಅಧ್ಯಕ್ಷ ನಿಕ್ಸನ್ ಭಾರತದ ಕುರಿತು ತನ್ನ ಹಳೆಯ ಪೂರ್ವ.ಗ್ರಹಿಕೆಯ ದೂಷಿತ ಧೋರಣೆಯನ್ನು ಯಥೇಚ್ಛವಾಗಿ ಪೂರೈಸಿಕೊಳ್ಳಲು ಈಗ ಯಾವ ತೊಡಕೂ ಉಳಿಯಲಿಲ್ಲ. ಅಂಥ ವೈಷಮ್ಯ ಪ್ರದರ್ಶನಕ್ಕೆ ನೆವಮಿತ್ತಗಳಿಗೇನೂ ಕೊರತೆ ಬೀಳುವುದಿಲ್ಲ.

ಅಧ್ಯಕ್ಷ ಕೆನಡಿ ನಿಧನಹೊಂದಿದಾಗ, ಅವರ ಅಂತ್ಯ ಯಾತ್ರೆಯಲ್ಲಿ ಭಾರತವನ್ನು ನಮ್ಮ ಅಧ್ಯಕ್ಷರಾಗಲಿ ಪ್ರಧಾನಿಗಳಾಗಲಿ ಪ್ರತಿನಿಧಿಸಲಿಲ್ಲ. ಅದರ ಬದಲು ಶ್ರೀಮತಿ ವಿಜಯ ಲಕ್ಷ್ಮಿ ಪಂಡಿತರು ನಮ್ಮ ಸರಕಾರವನ್ನು ಪ್ರತಿನಿಧಿಸಿದರು. ಆ ಅಂತ್ಯ ಸಂಸ್ಕಾರಕ್ಕೆ ದೇಶವಿದೇಶಗಳ ಅಧ್ಯಕ್ಷರೂ ದೊರೆಗಳೂ ಅವ್ಯವಸ್ಥಿತರಾಗಿದ್ದರು. ಆದಾಗ್ಯೂ ಇದನ್ನು ಗಮನಿಸದೆ ಪ್ರಧಾನಿ ಇಂದಿರಾಜಿ ಅಮೆರಿಕೆಗೆ ಹೋದಾಗ ಪ್ರತ್ಯಕ್ಷ ಅಧ್ಯಕ್ಷರೇ ಅವರನ್ನು ಶ್ವೇತಭವನದ ಮೆಟ್ಟಿಲ ಮೇಲೆ ಸ್ವಾಗತಿಸದೆ ವಾಶಿಂಗ್‌ಟನ್ ವಿಮಾನ ನಿಲ್ದಾಣದಲ್ಲಿ ಹೋಗಿ ಬರಮಾಡಿಕೊಂಡರು.

ಹೀಗಿದ್ದರೂ ಅಮೆರಿಕನ್ ನೀತಿ ಒಟ್ಟಾರೆ ವೈಷಮ್ಯ ದರ್ಶಕವಾಗಿಯೇ ಇದೆ. ಅಮೆರಿಕೆಯ ಇಂದಿನ ಆಳರಸರು ಭಾರತ ಹಾಗೂ ಬಾಂಗ್ಲಾದೇಶದ ವಿರುದ್ಧ ತಮ್ಮ ಅಸಹನೆಯನ್ನು ಸಾಕಷ್ಟು ಕಾಣಿಸುತ್ತಿದ್ದಾರೆ. ಇದಕ್ಕೆ ಈಚೆಗೆ ಸ್ಫೋಟಗೊಂಡ ಎಂಡರ್ಸನ್ ಕಾಗದ ಪತ್ರಗಳೇ ಸಾಕ್ಷಿ. ಅಮೇರಿಕೆಯ ೭ನೆಯ ನೌಕಾದಳದ ನಾವೆಗಳು ಹಿಂದೂ ಮಹಾಸಾಗರದಲ್ಲಿ ಸುತ್ತಾಡುತ್ತಿರುವ ಇನ್ನೊಂದು ಸಾಕ್ಷಿ. ಅದೂ ಸಾಲದೆ ಭೂಮಾರ್ಗದ ಸಮುದ್ರದಲ್ಲಿದ್ದ ೬ನೇ ನೌಕಾದಳದ ಕೆಲವು

ಭಾಗವನ್ನು ಹಿಂದೂಮಹಾಸಾಗರಕ್ಕೆ ವರ್ಗಾಯಿಸಲ್ಪಟ್ಟಿದ್ದು ಒಂದು ಸಾಕ್ಷಿ.

ಇದೂ ಅಲ್ಲದೆ ನಮ್ಮ ಇಂದಿರಾ ಸರಕಾರವನ್ನು ಪತ್ತುಗೇಡುಮಾಡಲು ಇಲ್ಲಿಯ ವಿರೋಧಿ ಪಕ್ಷಗಳಿಗೆ ಉಗ್ರ ಮತ ಪ್ರದರ್ಶನಗಳನ್ನೂ ದೊಂಬಿಗಳನ್ನೂ ಅಭಿನಯಿಸಲು ಪ್ರೋತ್ಸಾಹ ನೀಡುವದೆಂದು ಅಮೇರಿಕೆಯ ಸೂತ್ರ ಬೇಹುಗಾರಿಕೆಯ ಸಿ.ಎ.ಎ. ಸಂಘಟನೆಯ ಮೇಲೆ ಕಾಂಗ್ರೆಸ್ ಅಧ್ಯಕ್ಷರು ಮಾಡಿದಾಗ ಅದನ್ನು ಅಲ್ಲಗಳೆದು ತೀವ್ರ ಅಸಂತೋಷ ವ್ಯಕ್ತಪಡಿಸಲು ಮುಂದೆ ಬಂದದ್ದು ಭಾರತದಲ್ಲಿಯ ಅಮೇರಿಕನ್ ರಾಯಭಾರಿ!

ಅಮೆರಿಕ-ಚೀನಗಳ ಹೊಸ ಮುಖದ ಒಂದು ಸಂಯುಕ್ತ ಕುಚೋದ್ಯವೋ ಎಂಬಂತೆ ಬಾಂಗ್ಲಾದೇಶದಲ್ಲಿ ಅಲ್ಲಿಯ ಸರಕಾರಕ್ಕೆ ಪೇಚುಗೊಳಿಸಲು ಚೀನವು ಎಡಪಕ್ಷಗಳನ್ನು ಎತ್ತಿಗಟ್ಟಿದರೆ ಇಲ್ಲಿ ಭಾರತ ಸರಕಾರದ ವಿರುದ್ಧ ಅಮೆರಿಕೆಯು ಬಲಪಕ್ಷಗಳನ್ನು ಉತ್ತೇಜಿಸುತ್ತಿದೆ. ಎಡವೇನು ಬಲವೇನು? ತಮಗೆ ಆಗದವರನ್ನು ಮೆಟ್ಟಲು ನಡೆಯೊಂದೇ.

ಕೆಲವು ದಿನ ಹಿಂದೆ ಅಮೆರಿಕೆಯ ಕೆಲವು ವಿದ್ವಾಂಸರು ಭಾರತಕ್ಕೆ ಭೇಟಿ ಇತ್ತರು. ಅವರು ಬಹಳ ಪ್ರಯಾಸಪಟ್ಟು ಅಮೆರಿಕೆಯ ಧೋರಣದ ವಿವರಣೆ ಮಾಡಿದರು. ಅದೇನೆಂದರೆ ಸದ್ಯ ದಕ್ಷಿಣ ಏಶಿಯಾಕ್ಕೆ ಅಮೆರಿಕೆ ಈ ಪ್ರಾಶಸ್ತ್ಯ ಕೊಟ್ಟುದ್ದು ಕಡಿಮೆ. ಈಗ ಅಮೆರಿಕೆಯ ಆದ್ಯಗುರಿ ರಶಿಯಾ, ಚೀನ, ಜಪಾನ್, ಮತ್ತು ಪಶ್ಚಿಮ ಯೂರೋಪ್‌ನೊಂದಿಗೆ ತನ್ನ ಸಂಬಂಧಗಳನ್ನು ಸುಧಾರಿಸುಕೊಳ್ಳುವುದು.

ಈ ಬಗೆಯ ಸುಧಾರಣೆಯ ಹಿಂದೆ ಮನಸ್ಸು ಶುದ್ಧವಿದ್ದರೆ ಅದು ವಿಶ್ವಶಾಂತಿಗೆ ಅನುವಾಗುವುದು. ಅರ್ಧ ಶತಮಾನದಷ್ಟು ಕಾಲ ಪರಸ್ಪರ ವೈರಿಗಳಾಗಿ ಬಂದ ಜಪಾನ ಚೀನಗಳು ಇಂದು ಹಿಂದಿನದನ್ನೆಲ್ಲ ಮರೆತು ಹೊಸಮೈತ್ರಿಯ ಮಾತನ್ನು ಆಡುತ್ತಿವೆ. ಜತೆಗೆ ಅದರ ಬೆಲೆಯೋ ಎಂಬಂತೆ ತೈವಾನದ "ರಾಷ್ಟ್ರೀಯ" ಚೀನದ ಕೈಯನ್ನು ಜಪಾನ ಬಿಡುತ್ತಲಿದೆ! ಇದಕ್ಕೆಲ್ಲ ಪೂರ್ವಭಾವಿಯಾಗಿ ಜಪಾನದ ಪ್ರಧಾನಿ ಅಮೆರಿಕೆಯ ಅಧ್ಯಕ್ಷರನ್ನು ಕಂಡು ವಿಚಾರ ವಿನಿಮಯ ಮಾಡಿಯೆ ಬಂದದ್ದು ಒಟ್ಟು ಗಾಳಿ ಯಾವತ್ತು ಬೀಸುತ್ತಿದೆ ಎಂಬುದರ ನಿದರ್ಶನ. ಇಲ್ಲಿ ಬೀಸುವ ಗಾಳಿ ಓಡಿ ಮೂಡಗಾಳಿ ತೀಡಲು ಸುರುವಾಗಿದೆ ಎನ್ನಬಹುದು.

ಸಧ್ಯ ಭಾರತವು ಅನಿವಾರ್ಯವಾಗಿ ಸೋವಿಯತ್ ರಶಿಯಾದೊಂದಿಗೆ ಮೈತ್ರಿಯ ಒಪ್ಪಂದ ಮಾಡಿಕೊಂಡಿದೆ. ಪಾಕಿಸ್ತಾನಕ್ಕೆ ಅಮೇರಿಕೆ ಶಸ್ತ್ರಾಸ್ತ್ರಗಳನ್ನು ಪೂರೈಸಿತು. ಹಿಂದಿನ ಪಾಕ್ ಆಕ್ರಮಣದಲ್ಲಿಯೂ ಹಾಗೆಯೇ. ಅದಕ್ಕೂ ಹಿಂದೆ ಚೀನಾ ಆಕ್ರಮಣದಲ್ಲಿ ಅಮೇರಿಕನ್ ರಾಯಭಾರಿ ಪರಕೀಯ ಆಕ್ರಮಣದ ವಿರುದ್ಧ ಭಾರತದ ಈ ಉಪಖಂಡವನ್ನು ಸಂರಕ್ಷಿಸಲಿಕ್ಕೆ ಭಾರತ-ಪಾಕ್ ಒಂದಾಗುವ ಒಂದು ಹಂಚಿಕೆಯನ್ನು ಅಂದು ಸೂಚಿಸಿದ್ದರು. ಅದನ್ನು ನೆಹರೂಜಿ ಒಪ್ಪಿದರೂ ಆಯೂಬ್‌ಖಾನ್ ಒಪ್ಪಲಿಲ್ಲ.

ಅಂದರೆ ಅಮೇರಿಕೆ ಎಂದಿನಿಂದಲೂ ಪಾಕ್ ಪಕ್ಷಪಾತಿ ಇದ್ದಾಗ ಬಾಂಗ್ಲಾ ಯುದ್ಧದಲ್ಲಿ ಭಾರತದ ಪೇಚನ್ನು ಸಹಾನುಭೂತಿಯಿಂದ ನೋಡಲು ಮನಸ್ಸು ಮಾಡದಿರುವಾಗ ಭಾರತಕ್ಕೆ

ಸೋವಿಯತ್ ರಶಿಯಾದತ್ತ ಹೊರಳದೆ ಗತ್ಯಂತರವೇ ಇರಲಿಲ್ಲ. ಇದೂ ಅಲ್ಲದೆ, ವಿಧಿಯ ವ್ಯಂಗ್ಯವೋ ಎಂಬಂತೆ ಚೀನವೂ ಜನಾಂಗಗಳ ಸ್ವಾತಂತ್ರ್ಯ ಸಂಗ್ರಾಮಗಳಿಗೆ ಪ್ರೋತ್ಸಾಹ ಕೊಡಬೇಕಾದ ತನ್ನ ನಿಲುಮೆಯನ್ನು ಬಿಟ್ಟು, ಬಾಂಗ್ಲಾದ ವಿರುದ್ಧ ಪಾಕಿಸ್ಥಾನಕ್ಕೆ ಬೆಂಬಲ ನೀಡಿತು. (ಪ್ರತ್ಯಕ್ಷ ಯುದ್ಧದಲ್ಲಿ ಭಾರತದ ವಿರುದ್ಧ ಧುಮುಕಲಿಲ್ಲ-ಈ ಮಾತು ಬೇರೆ. ಆ ಮಟ್ಟಿಗೆ ಭಾರತ ಚೀನಕ್ಕೆ ಅಭಾರಿಯೇ!) ಈ ಪರಿಸ್ಥಿತಿಯಲ್ಲಿ ಸೋವಿಯತ್ ರಶಿಯಾದ ಸ್ನೇಹ ಹಸ್ತವನ್ನು ಭಾರತವು ಹಿಡಿಯುವುದು ಸ್ವಾಭಾವಿಕವೇ ಸರಿ.

ಭಾರತ-ಸೋವಿಯತ್ ಸ್ನೇಹವನ್ನು ಮೆಚ್ಚದಿದ್ದರೂ ಅಮೇರಿಕೆ ಈ ಕುರಿತು ಸದ್ಯ ಅಪೇಕ್ಷೆ ಮಾಡಿದಂತೆ ಕಂಡರೆ ಅದಕ್ಕೆ ಇನ್ನೂ ಮೂರು ಕಾರಣಗಳನ್ನು ಕೊಡಬಹುದು.

(೧) ಅಮೇರಿಕ-ನಿಕ್ಸನ್ನನ ಸರ್ಕಾರ-ಪೀಕಿಂಗ್ ಸರ್ಕಾರದೊಂದಿಗೆ ಎಷ್ಟೇ ಸ್ನೇಹದ ಅಭಿನಯವನ್ನು ತೋರಿಸಿದರೂ ಸೋವಿಯತ್-ಚೀನ ವೈಮನಸ್ಯವು ಮುಂದುವರಿಯುವುದರಲ್ಲಿ ಅದಕ್ಕೆ ಇಷ್ಟವೇ.

ಇಂದು ಅಮೇರಿಕೆ ಆಗ್ನೇಯ ಏಶಿಯಾದಲ್ಲಿಯೂ ದೂರ ಪೂರ್ವದಲ್ಲಿಯೂ ಸಮರಾಸಕ್ತವಾಗಿದೆ. ಅಲ್ಲಿಂದ ಅಮೇರಿಕನ್ ಪಡೆಗಳು ಹಿಂದೆ ಸರಿಯುವನಕವು ಚೀನ-ಸೋವಿಯತ್ ರಶಿಯಾ ಶೀತಯುದ್ಧದ ತಿಕ್ಕಾಟವು ಅಮೇರಿಕೆಗೆ ತುಂಬ ಹಿತಾವಹ, ಚೀನ ಪಾಕಿಸ್ತಾನವನ್ನೂ ರಶಿಯಾ ಭಾರತವನ್ನೂ ಪ್ರೋತ್ಸಾಹಿಸುವನಕವು, ಈ ಶೀತಯುದ್ಧ ಮುಂದರಿಯುವದೇ. ಚೀನವು ಪಾಕಿಸ್ತಾನವನ್ನೂ ಮಾತ್ರವಲ್ಲ. ಅದರ ಮಿತ್ರ ರಾಷ್ಟ್ರವಾದ ಇರಾಣದ ಮೈತ್ರಿಯನ್ನು ಕಟ್ಟಿಕೊಂಡಿದೆ. (ಪಾಕಿಸ್ತಾನ ಇರಾಣಗಳು ಸಿಂಟೊ ರಾಷ್ಟ್ರವಲಯಕ್ಕೆ ಸೇರಿದವು.) ಇತ್ತ ಭಾರತವೂ ರಶಿಯಾದ ಮಿತ್ರರಾಷ್ಟ್ರವಾದ ಇರಾಕ್‌ದೊಂದಿಗೆ ಪೂರ್ಣಸಂಬಂಧವನ್ನು ಸುಧಾರಿಸಿಕೊಳ್ಳುತ್ತಿದೆ.

(೨) ದಕ್ಷಿಣ ಏಶಿಯಾದಲ್ಲಿ ರಶಿಯಾಕ್ಕೆ ಕೈ ಕಾಲು ಚಾಚಲು ಚೀನ ಬಿಡುವದಿಲ್ಲ ಎಂಬ ಭರವಸೆ ಇದ್ದರಿಂದ ಪಶ್ಚಿಮ ಏಶಿಯಾದಲ್ಲಿ ರಶಿಯಾ ತನ್ನ ಮಹದಾಕಾಂಕ್ಷೆಗಳಿಗೆ ಕಡಿವಾಣ ಹಾಕಿಕೊಳ್ಳಲು ಒಪ್ಪಿದರೆ, ಭಾರತದಲ್ಲಿ ಅದು ಏನೇ ಮಾಡಿಕೊಂಡರೂ ಅಮೇರಿಕೆ ಅದನ್ನು ಒಪ್ಪಲು ಸಿದ್ಧ.

ಪ್ರಭಾವದ ವಲಯಗಳಲ್ಲಿ ಪ್ರಪಂಚವನ್ನು ಹಂಚಿಕೊಳ್ಳಲು ಹೊರಟ ಈ ಮಹಾರಾಷ್ಟ್ರಗಳ ನಾಯಕರು - ಅಧ್ಯಕ್ಷ ನಿಕ್ಸನ್ ಮತ್ತು ಬ್ರೆಜನೋವ್ಹ - ಈ ಬಗ್ಗೆ ಸ್ವಚ್ಛ ಒಪ್ಪಂದವೇನೂ ಮಾಡಿಕೊಂಡಿಲ್ಲ. ಆದರೂ ಅಮೇರಿಕೆಗೆ ಪಶ್ಚಿಮ ಏಶಿಯಾ ಮತ್ತು ರಶಿಯಾಕ್ಕೆ ದಕ್ಷಿಣ ಏಶಿಯಾ ಪರಸ್ಪರರು ಆಡುಂಬೊಲವಾಗಿ ಬಿಡಲು ಒಪ್ಪಿದಂತೆ ಇದೆ.

ಅರಬರ ಬಗೆಗೆ ಈ ತನಕವೂ ತೀವ್ರ ಸಹಾನುಭೂತಿ ಸಹಾಯ ನೀಡುವ ರಶಿಯಾ ಇಂದು ಇಜಿಪ್ತದ ಅವಕೃಪೆಗೆ ಕಾರಣವಾಗಿದೆ. ಮೊನ್ನಿನ ಮ್ಯೂನಿಕ್ ಹತ್ಯಾಕಾಂಡಕ್ಕಾಗಿ ಅರಬರ ಗತ್ತುಗಾರರ ಹಿಂಸ ಪ್ರವೃತ್ತಿಯನ್ನು ರಶಿಯಾ ಖಂಡಿಸಿದೆ.

(೩) ಇನ್ನೂ ಮಾರ್ಮಿಕವಾದ ಕಾರಣವೆಂದರೆ ಸದ್ಯದ ಭಾರತ-ರಶಿಯಾ ಮೈತ್ರಿಯನ್ನು ಒಡೆಯುವ ಅಕ್ರಮ ಅಪಾಯವೆಂದರೆ ಇವೆರಡೂ ರಾಷ್ಟ್ರಗಳು ಇನ್ನೂ ಹತ್ತಿರಕ್ಕೆ ಅನ್ಯೋನ್ಯ

ಸಹಕಾರದಲ್ಲಿ ಬರಲು ಬಿಡುವುದು - ಎಂದು ನಿಕ್ಸನ್ ಆಡಳಿತ ನಿರ್ಣಯಿಸಿದೆ.

ಅಮೇರಿಕೆಗೆ ಎರಡು ಸಂಗತಿಗಳು ಪೂರ್ಣ ಮನವರಿಕೆ ಆಗಿವೆ; ಒಂದು, ಇಂದಿರಾಗಾಂಧಿ ಕಮ್ಯುನಿಸ್ಟ್ ಒಲವಿನವರಲ್ಲ: ಇನ್ನೊಂದು, ಇಂದಿರಾಗಾಂಧಿ ರಶಿಯಾಕ್ಕೆ ವಿಧೇಯವಾಗಿ ನಡೆಯುವಾಕೆ ಅಲ್ಲ. ಅವರು ಅತ್ಯಂತ ಸ್ವಾಭಿಮಾನಿ. ಅಂದಾಗ ಮಾಸ್ಕೋದ ಅಭಿಲಾಷೆ ಅಭಿಪ್ರಾಯಗಳನ್ನು ಭಾರತ ಈಡೇರಿಸುವದು ಸಹಸಾ ಸಾಧ್ಯವಿಲ್ಲ. ಆದ್ದರಿಂದ ಇವೆರಡೂ ಸರ್ಕಾರಗಳು ಹತ್ತಿರ ಬಂದಷ್ಟೂ ಅವರ ನಡುವೆ ತಪ್ಪು ತಿಳುವಳಿಕೆ ತಿಕ್ಕಾಟ ಹೆಚ್ಚಾಗಲಿದ್ದು ಅದರಿಂದಲೇ ಈ ಮೈತ್ರಿ ಒಡೆಯುವದು- ಎಂದು ಅಮೇರಿಕೆ ಲೆಕ್ಕ ಹಾಕಿದೆ.

ಇತ್ತೀಚೆಗೆ ಪಾಕಿಸ್ತಾನಕ್ಕೆ ಸಹಾಯ ನೀಡುವ ಹೊಣೆಯನ್ನು ಅಮೇರಿಕೆ ಚೀನದ ಹೆಗಲಿಗೆ ಏರಿಸಿದಂತಿದೆ. ಅಲ್ಲದೆ ವಿಶ್ವಸಂಸ್ಥೆಯಲ್ಲಿ ಚೀನವು ಬಾಂಗ್ಲಾ ದೇಶದ ವಿರುದ್ಧ ವ್ಹಿಟೋ ಪ್ರಯೋಗಿಸಿದಾಗ, ಭಾರತದ ವಶಕ್ಕೆ ಇದ್ದ ಪಾಕ್ ಯುದ್ಧ ಕೈದಿಗಳ ಬಿಡುಗಡೆಯ ಬೇಡಿಕೆ ಮಾಡಿದಾಗ ಅಮೇರಿಕೆ ಆ ಕುರಿತು ಮೌನತಾಳಿತು.

ಇದೆಲ್ಲ ಹೀಗೇಕೆ? ಇಂದಿನ ಅಂತರರಾಷ್ಟ್ರೀಯ ರಾಜಕಾರಣವು ತೀರ ಅಂಕುಡೊಂಕಾದ ಚಕ್ರವ್ಯೂಹದೊಳಗಿನ ವಕ್ರವ್ಯೂಹ. ಅದಕ್ಕೆ "ಅಥವಾ" ಎಂದು ಎರಡೇ ಪರ್ಯಾಯಗಳಲ್ಲಿ ಕೊನೆಗೂ ರಾಷ್ಟ್ರರಾಷ್ಟ್ರಗಳಲ್ಲಿ ವೈರವೂ ಶಾಶ್ವತವಲ್ಲ. ಮೈತ್ರಿಯೂ ಶಾಶ್ವತವಲ್ಲ. ಅವರವರ ಸ್ವಾರ್ಥಗಳೇ ಹಿತಾಶಕ್ತಿಗಳೇ ಶಾಶ್ವತ. ಅದಕ್ಕೆ ಅನುಕೂಲವಾಗಿ ಬಹು ರೂಪದರ್ಶಕದೊಳಗಿನ ಬಣ್ಣ ಬಣ್ಣದ ಗಾಜಿನ ಬಳೆಯೋಡುಗಳಂತೆ ಘಟನೆಗಳೂ ಧೋರಣೆಗಳೂ ಹೊಸ ಹೊಸ ಪಡಿಯಚ್ಚಿನಲ್ಲಿ ಕಾಣಿಸಿಕೊಳ್ಳುವವು. ಒಮ್ಮೆಲೆ ಹಲವು ಬಗೆಯ ಸಂಬಂಧಗಳು ಕೂಡಿಬರುವವು.

ಇಸ್ರಾಯಿಲ್ ವಶಪಡಿಸಿಕೊಂಡ ಸೆನಾಯಿ ಮಲೆನಾಡನ್ನು ಇಜಿಪ್ತವು (ಅರಬರು) ತಿರುಗಿ ಪಡೆಯದಾಯಿತು. ರಶಿಯಾ ಬೆಂಬಲಕ್ಕೆ ಇದ್ದೂ ಹೀಗಾಯಿತು. ಅತ್ತ ಅಮೇರಿಕೆ ಇಸ್ರಾಯಿಲ್ ಶಕ್ತಿಯು ಉಗಮವಾಗಿತ್ತು. ಇದರ ಪ್ರತಿಕ್ರಿಯೆಯಾಗಿ ಒಂದು ಈಜಿಪ್ತದಿಂದ ರಶಿಯನ್ ಸೈನಿಕ ತಾಂತ್ರಿಕ ಸಿಬ್ಬಂದಿ ಹೊರತಳ್ಳಲ್ಪಡುತ್ತಿದೆ.

ಇದಕ್ಕೆ ಪ್ರತಿಯಾಗಿ ರಶಿಯಾ ಅರಬ ಗತ್ತುಗಾರರಿಗೆ ಎತ್ತಿಕಟ್ಟುತ್ತಿದೆ. ಈ ಪಾಲಿಸ್ತಾನಿಯನ್ ಪುಂಡರು ಮಾಡಿದ ಮ್ಯೂನಿಕ್ ಕಗ್ಗೊಲೆಯನ್ನು ರಶಿಯಾ ನಿಷೇಧಿಸಿತು. ಅವರ ವಿಮೋಚನಾ ಚಟುವಟಿಕೆಗಳಿಗೆ ರಶಿಯಾದ ಶಸ್ತ್ರಾಸ್ತ್ರಗಳ ಬೆಂಬಲ ೧೯೬೨ರಿಂದಲೂ ಇದೆ. ಇದರಿಂದ ಅಮೇರಿಕೆಯ ಮಧ್ಯಸ್ತಿಕೆಯಲ್ಲಿ ಇಸ್ರಾಯಿಲ್‌ರೊಂದಿಗೆ ಒಂದು ಒಪ್ಪಂದಕ್ಕೆ ಬರಬೇಕೆಂಬ ಇಜಿಪ್ತದ ಅಧ್ಯಕ್ಷ ಸಾದತ್‌ನ ಯತ್ನ ನಿಷ್ಫಲವಾಗುತ್ತಿದೆ?

ಭಾರತದ ಅಸ್ಕಾಯಿಚಿನ್ ಮತ್ತು ಆಜಾದ ಕಾಶ್ಮೀರ ಭಾಗಬಿಟ್ಟರೆ ಉಳಿದ ಸಮಗ್ರ ದೇಶವು ಹೆರವರ ಹಿಮ್ಮಡದಡಿಗೆ ಇಲ್ಲ. ಇವೆರಡನ್ನೂ ಭಾರತವು ಬಲಪ್ರಯೋಗವಿಲ್ಲದೆ ತಿರುಗಿ ಪಡೆಯುವ ಯೋಚನೆಯಲ್ಲಿದೆ. ಅಲ್ಲದೆ ಪಾಕೀಸ್ತಾನ ಮತ್ತೆ ಆಕ್ರಮಣ ಮಾಡಿದರೂ ಅದನ್ನು ಹಿಮ್ಮೆಟ್ಟಿ ಸೋಲಿಸುವ ಸಾಮರ್ಥ್ಯ ಭಾರತಕ್ಕೆ ಇದೆ.

ಆದರೆ ಭಾರತದ ದೊಡ್ಡ ಕುತ್ತು ಅದರ ಆಂತರಿಕ ಆರ್ಥಿಕ ಸಮಸ್ಯೆ. ಅದರಿಂದ ಅಸಂತುಷ್ಟರೂ ಸಂತಪ್ತರೂ ಆದ ವರ್ಗಗಳು. ಅಲ್ಲಿ ಸಮಾಜವಾದ ಒಂದೇ ನಮ್ಮ ತರಣೋಪಾಯ. ಇಂದು ವಿಶ್ವಬ್ಯಾಂಕಿನ ಅಧ್ಯಕ್ಷರೂ ಜಾಗತಿಕ ದಾರಿದ್ರ್ಯ ನಿವಾರಣೆಗೆ ಸಮಾಜವಾದಿ ಕಾರ್ಯಕ್ರಮಗಳನ್ನು ಪುರಸ್ಕರಿಸಿದ್ದಾರೆ! ಇದೊಂದು ಭಾರತದ ನೈತಿಕ ವಿಜಯ.

ನೈತಿಕದೊಂದಿಗೆ ಭಾರತವೂ ಕೂಡಿದೆ. ಇಂದಿಗೂ ಅಂತರ್‌ರಾಷ್ಟ್ರೀಯ ರಂಗದಲ್ಲಿ ಶಕ್ತಿಪ್ರದರ್ಶನಕ್ಕೆ ಮಿಗಿಲು ಮನ್ನಣೆ. ಬಾಂಗ್ಲಾ ಯುದ್ದದಿಂದಾಗಿ ಭಾರತದ ಬಲದ ಸತ್ವಪರೀಕ್ಷೆ ಆಗಿ ಪಾಕಿಸ್ತಾನದ ಪರಾಭವದಿಂದ ನಮ್ಮ ಪ್ರತಿಷ್ಠೆ ಒಂದು ರಾಷ್ಟ್ರವೆಂದು ಎಂದಿಗಿಂತಲೂ ಮಿಗಿಲಾಗಿ ಬೆಳೆದಿದೆ.

ಇದನ್ನು ಪ್ರತ್ಯಕ್ಷ ಪ್ರಯೋಜನಗಳಲ್ಲಿ ಮಾಡಿಸಿಕೊಳ್ಳಬೇಕಾಗಿದೆ. ಬಲಿಷ್ಠತೆಯು ಸ್ವಾವಲಂಬನದಿಂದ ಯಾರೊಂದಿಗೂ ಒಡಂಬಡಿಕೆ ಸಾಧ್ಯ ಮತ್ತು ಇಷ್ಟ. ಜಪಾನದಂಥ ಶತಮಾನದ ಶತ್ರುವೆ ಇಂದು ಚೀನದೊಂದಿಗೆ ನೆರೆಹೊರೆಯ ನಂಟು ಸ್ಥಾಪಿಸ ಹತ್ತಿದೆ. ಅಂದಾಗ “ಪಂಚಶೀಲದ ಸಹಪ್ರವರ್ತಕವಾದ ಭಾರತವು ಚೀನದೊಂದಿಗೆ ತನ್ನ ಪ್ರಾಚೀನದ ಬಾಂಧವ್ಯವನ್ನು ಸುಧಾರಿಸಿಕೊಂಡರೆ ತಪ್ಪೇನೂ ಇಲ್ಲ.

ಅಮೇರಿಕೆಯೊಂದಿಗೂ ಹಾಗೆಯೇ. ಇಂದು ಪ್ರಪಂಚದಲ್ಲಿ ಎರಡೇ ಮಹಾ ಪ್ರಜಾಸತ್ತೆಗಳು: ಪಶ್ಚಿಮದಲ್ಲಿ ಅಮೇರಿಕೆ ಪೂರ್ವದಲ್ಲಿ ಭಾರತ. ಸದ್ಯ ನಮ್ಮಿಬ್ಬರಲ್ಲಿ ವಿರಸವಿದೆ: ಪಾಕಿಸ್ತಾನಿಯ ನಿಮಿತ್ತ. ಆದರೆ ಪಾಕ್ ಆಳರಸರೂ ಈಗ ನಮ್ಮೊಂದಿಗೆ ಸರಿಹೊಂದಿಸಿಕೊಳ್ಳಲು ಹವಣಿಸುತ್ತಿದ್ದಾರೆ, ನಮ್ಮ ಸ್ವಾತಂತ್ರ್ಯದ ಬೆಳ್ಳಿ ಹಬ್ಬದ ನಿಮಿತ್ತ ಭಾರತವನ್ನು ಅಭಿನಂದಿಸುವ ಗೊತ್ತುವಳಿ ಅಮೇರಿಕೆಯ ಕಾಂಗ್ರೆಸ್ಸಿನ ಇದಿರು ಬಂದಾಗ ಬಹಳಷ್ಟು ಅಮೆರಿಕನ್ ಸೆನೇಟರುಗಳು ಹಾಜರಿದ್ದಿಲ್ಲ- ತಮ್ಮ ಅಸಮ್ಮತಿಯನ್ನು ಪ್ರದರ್ಶಿಸಲಿಕ್ಕೆ!

ಆದಾಗ್ಯೂ ನಾವು ನಿರಾಶರಾಗಬೇಕಿಲ್ಲ.

ಈಗಲೇ ನಮ್ಮ ಕೇಂದ್ರ ಅರ್ಥಮಂತ್ರಿ ಚವ್ಹಾಣರು ವಿಶ್ವಬ್ಯಾಂಕಿನ ಒಬ್ಬ ಗವರ್ನರರೆಂಬ ದೃಷ್ಟಿಯಿಂದ ಅಮೆರಿಕೆಗೆ ಭೇಟಿ ಇತ್ತು ಉಭಯ ರಾಷ್ಟ್ರಗಳ ಮೈತ್ರಿಯು ಪುನಶ್ಚೇತನಗೊಳಿಸಬೇಕೆಂದು ಕಳಕಳಿಯಿಂದ ಹೇಳಿ ಬಂದರು. ಅವರು ಜಪಾನಿನೊಂದಿಗೆ ಪರಸ್ಪರ ನೆರವಿನ ಒಪ್ಪಂದ ಮಾಡಿಕೊಳ್ಳುವವರಿದ್ದಾರೆ.

ಒಟ್ಟಾರೆ ಸದ್ಯದ ಆದ್ಯತೆ ಜಾಗತಿಕ ಶ್ರೇಷ್ಠ ಶಮನ. ಅಭಿವೃದ್ಧಿಗೆ ಅನುಕೂಲವಾದ ಶಾಂತ ಸಹಜೀವನದ ಸ್ವಾಸ್ಥ್ಯಪೂರ್ಣ ವಾತಾವರಣ. ಈ ದೃಷ್ಟಿಯಿಂದ ವಿಶ್ವಸಂಸ್ಥೆ ಹೆಚ್ಚು ಹೆಚ್ಚು ನಿರಾಶೆಯನ್ನೇ ಹುಟ್ಟಿಸುತ್ತಿದೆ. ಅಮೆರಿಕೆಯಂಥ ಕುಬೇರರಾಷ್ಟ್ರವೂ ವಿಶ್ವಸಂಸ್ಥೆಗೆ ಎಂದಿನಂತೆ ಧನಸಹಾಯ ಮಾಡಲು ಉದಾಸೀನಮಾಡತೊಡಗಿದೆ.

ಅತ್ತ ಸಿಂಟೋ ಸಂಘಟನೆ ಕುಸಿಯುತ್ತಿದೆ. ಸಿಂಟೋ ಸಂಘಟನೆಗೂ ಅಡ್ಡ ತಿಡ್ಡ ಬಿರುಕು.

ಏಶಿಯಾದೊಳಗಿನ ಇಂದಿನ ದೊಡ್ಡ ಸತ್ಯವೆಂದರೆ ಪುಟ್ಟ ಜಪಾನವು ಆರ್ಥಿಕಬಲದಿಂದ ನಾಲ್ಕನೆಯ ಮಹಾ ರಾಷ್ಟ್ರವಾಗ ಹತ್ತಿದೆ! ಅದೂ ಭಾರತಕ್ಕೆ ಪ್ರತಿಕೂಲವಿಲ್ಲ.

ಉಗಾಂಡದ ಭಂಡತನ ಕೇವಲ ಭಾರತದ ವಿರುದ್ಧವೇ ಎತ್ತಿದ ತುಪಾಕಿಯಲ್ಲ. ಸದ್ಯ ನಮ್ಮ ರಾಷ್ಟ್ರಾಧ್ಯಕ್ಷರ ಸದಿಚ್ಛಾ ಸಂಚಾರ ಆಫ್ರಿಕೆಯ ಆ ಭಾಗದಲ್ಲಿ ಯಶಸ್ವಿಯಾಗಿ ನಡೆದಿದೆ. ತಿಳಿದೂ ತಿಳಿದೂ ಜನರಲ್ ಅಮೀನ ಅದಕ್ಕೆ ಅಪಾರ್ಥ ಹಚ್ಚುತ್ತಿದ್ದಾನೆ-ಭಾರತವು ತಾಂಜಿಯಾದ ದಾಳಿ ಎತ್ತಿಗಟ್ಟುತ್ತಿದೆಯೆಂದು ಮೂಲತಃ ಇಲ್ಲಿ ಒಂದು ಸುಳ್ಳು. ಅದೆಂದರೆ ತಾಂಜಿಯಾ ಯುಗಾಂಡದ ಮೇಲೆ ದಾಳಿ ಮಾಡಿಯೇ ಇಲ್ಲ. ಉಗಾಂಡದಲ್ಲಿ ತಲೆ ಎತ್ತಿದ್ದು ಯಾದವೀ ಕಲಹ. ಅದಕ್ಕೆ ತಾಂಜಿಯಾ ಉತ್ತೇಜನ ನೀಡಿರಬಹುದು.

ಉಗಾಂಡದ ನಿರ್ವಾಸಿತ ವಿದೇಶ ಏಶಿಯನ್‌ರಿಗೆ ತನ್ನ ಪಾಲಿನ ಸ್ವಾಗತ ಆಶ್ರಯ ಕೊಡಲು ಭಾರತ ಸಿದ್ಧವೇ ಇದೆ. ಶರಣಾರ್ಥಿಗಳಿಗೆ ಅಭಯ-ಭಾರತದ ಅನಾದಿಯ ಸಾಂಸ್ಕೃತಿಕ ವರದಾನ. ನಮ್ಮ ರಾಷ್ಟ್ರದ ಅನೇಕ ವಿಪತ್ತುಗಳು ಈ ಆತಿಥ್ಯ ಶೀಲಗುಣದ ಅತಿರೇಕದಿಂದಲೇ ಉಂಟಾದವು. ಕಳೆದ ೨೫ ವರ್ಷಗಳಲ್ಲಿ ನಾವು ವಿದೇಶಿಗಳಿಗೆ ಆಶ್ರಯವಿತ್ತು ಕೆಂಪು ಚೀನದ ದಾಳಿಗೆ ದಾರಿ ತೆರೆದು ಕೊಟ್ಟೆವು. ಬಾಂಗ್ಲಾ ನಿರ್ವಾಸಿತರಿಗೆ ಆಶ್ರಯಕೊಟ್ಟು ಅವರ ಪುನರ್ನಿವೇಶನಕ್ಕಾಗಿ ಒಂದು ಯುದ್ಧವನ್ನು ಕೊಂಡುಕೊಂಡೆವು.

ಭಾರತವು ತನ್ನ ವಿದೇಶ ನೀತಿಯ ಯಾವ ಅಂಶಕ್ಕಾಗಿಯೂ ಭಯಪಡಬೇಕಾಗಿಲ್ಲ. ನಾಚಿಕೆಪಡಬೇಕಾಗಿಲ್ಲ. ಕೆಲಸಲ ನಮ್ಮ ಗುಣಾತಿರೇಕವೇ ದೋಷವಾಗಬಹುದು. ಆದರೆ ಭಾರತದ ಸತ್ವ ಶುದ್ಧವಿದೆ, ಭದ್ರವಿದೆ. ಅದನ್ನು ನೆಹರೂಜೀ ಗಾಂಧೀಜೀ ತಮ್ಮ ಬೆವರು ಕಣ್ಣೀರು ನೆತ್ತರು ಎರೆದು ಪೋಷಿಸಿದ್ದು ವ್ಯರ್ಥವಾಗಲಾರದು.

೧೯೪೨ರ ಆಗಸ್ಟ್ ಚಳವಳಿಯ ಆರಂಭದಲ್ಲಿ ಮುಂಬಯಲ್ಲಿ ನಡೆದ ಎ.ಐ.ಸಿ.ಸಿ.ಯ ಅಧಿವೇಶನದಲ್ಲಿ ಜನತೆಗೆ "ಮಾಡಿರಿ ಇಲ್ಲವೆ ಮಡಿಯಿರಿ" ಎಂಬ ತಮ್ಮ ಅಮರ ಆದೇಶವನ್ನು ಕೊಟ್ಟು "ಚಲೇಜಾವ್" ಘೋಷಣೆಯ ಗೊತ್ತುವಳಿಯ ನಿಮಿತ್ತ ಮಾತಾಡುತ್ತ ಗಾಂಧೀಜಿ ಅಂದಿದ್ದರು.

- ಇಂದು ವಿಶ್ವದ ಕಣ್ಣು ನೆತ್ತಿಗೇರಿ ಕೆಂಪಾಗಿದ್ದರೂ ನಾವು ವಿಶ್ವವನ್ನು ಶಾಂತ ಮತ್ತು ಶುದ್ಧ (ನಿರ್ವಿಕಾರ) ಕಣ್ಣಿನಿಂದ ಕಣ್ಣಲ್ಲಿ ಕಣ್ಣಿಟ್ಟು ನೋಡಬೇಕು.

ಭಾರತಕ್ಕೆ ಇಂದಿನ ಪ್ರಪಂಚದ ಮಹಾ ಬಲ ರಾಷ್ಟ್ರಗಳ ಚಕ್ರವ್ಯೂಹದಲ್ಲಿ ನಿಂತೂ ಹಾಗೆ ನೋಡುವ ಧೈರ್ಯವಿದೆ. ಆತ್ಮವಿಶ್ವಾಸವಿದೆ, ಆತ್ಮಶಕ್ತಿಯೂ ಇದೆ- ಎಂದು ಬೇರೆ ಹೇಳಬೇಕೆ?

●

('ಜನಪ್ರಗತಿ' ೧೯೭೨)

# ನಗರ-ನಗರಲೋಕ

'ನಾಕ' 'ನರಕ' ಎರಡೂ ಒಂದೇ-ಎಂದು ನನ್ನದೊಂದು ಹಳೆಯ ನಂಬಿಗೆ. ಇದಕ್ಕೆ ಆಧಾರ ಇಷ್ಟೇ- 'ನಾ' ಅಂದರೂ 'ನರ' ಅಂದರೂ ಒಂದೇ- ಮನುಷ್ಯ. ಈ 'ಸಿದ್ಧಾಂತ' ಸಿದ್ಧವೋ ಸಾಧ್ಯವೋ- ಸದ್ಯ ಒಂದು ಮಾತು ಒಪ್ಪಲೇಬೇಕು. ಇಂದಿನ 'ನಗರ' ವೆಂಬ ವಿಕಾರಗೆಟ್ಟ ವಸತಿ ಪ್ರಕಾರದಲ್ಲಿ ನಾಕ-ನರಕಗಳೆರಡೂ ಒಂದೇ ಆಗಿರುತ್ತವೆ!

ದಿನ ಬೆಳಗಾದರೆ ನಾವು ಪತ್ರಿಕೆಗಳಲ್ಲಿ ಓದುತ್ತೇವೆ. - "ಬೆಂಗಳೂರು ಒಂದು ಬರೆ ಸಿಮೆಂಟ್ ಕಾಂಕ್ರೀಟಿನ ಅರಣ್ಯವಾಗತ್ತಿದೆ!" "ಕಲಕತ್ತೆ ಯಮಯಾತನೆಯ ನಗರವಾಗಿದೆ!" "ಮಹಾರಾಷ್ಟ್ರ ಸರಕಾರವು ಮುಂಬಯಿಯ ನರಿಮನ್ ಪಾಂಮಿಟಿನ ಹತ್ತಿರದ ಭೂಮಿಯನ್ನು ಚ.ಮೀಟರಿಗೆ ೧೩೦೦೦ ರೂ.ಗೆ ಹರಾಜು ಮಾಡಲಿದೆ!" "ಮದರಾಸಿನಲ್ಲಿ ಬೇಸಿಗೆಯಲ್ಲಿ ಒಂದು ಬಕೆಟ್ ನೀರು ಒಂದು ರೂಪಾಯಿಗೆ ಮಾರಿತು."

ಇವೆಲ್ಲ ಸುದ್ದಿಗಳು ನಗರವೆಂಬ ಮಾನವತೆಯ ಗೋರಿಯ ಮೇಲಿನ ಮೃತ್ಯುಲೇಖಗಳು. ನಮ್ಮ ದೇಶದಲ್ಲಿಯ ನಗರ ವಸತಿಯ ಜನಸಂಖ್ಯೆಯ ಉತ್ತರೋತ್ತರ (?) ಅವನತಿಯ ಶಿಲಾಲೇಖಗಳು!

೧೯೬೧ರಲ್ಲಿ ಭಾರತದ ನಾಗರೀ (ನಾಗರಿಕ ಅಲ್ಲ ಮತ್ತೆ!) ಜನಸಂಖ್ಯೆ ೭೮.೮ ದಶ ಲಕ್ಷವಿತ್ತು. ಅದು ಈಗ ಹತ್ತು ವರ್ಷಗಳಲ್ಲಿ ೧೦೯ ದಶಲಕ್ಷಕ್ಕೆ ಏರಿದೆ. ನಗರ ವಸತಿಯ ದೃಷ್ಟಿಯಿಂದ ಭಾರತವು ಪ್ರಪಂಚದ ಅತಿ ಕಿಕ್ಕಿರಿದ ನಗರಗಳುಳ್ಳ ರಾಷ್ಟ್ರಗಳಲ್ಲಿ ಒಂದಾಗಿದೆ.

"ದೇವರು ಹಳ್ಳಿಯನ್ನು ಮಾಡಿದರೆ, ಮನುಷ್ಯ ಪಟ್ಟಣ ಮಾಡಿದನು" ಎಂದಿದೆ ಒಂದು ಗಾದೆ. ಆದರೆ ಈ ನಗರ-ಮಹಾನಗರವನ್ನು ಯಾರು ಮಾಡಿದ್ದು? ಘಟೋತ್ಕಚನೇ, ಮಯಾಸುರನೇ. ಅಥವಾ ಸೈತಾನನೇ? ಈ ಕುರಿತು ಕೆಲವು ಅಂಕಿಸಂಖ್ಯೆಗಳು ಕಣ್ಣು ಕುಕ್ಕುವಂತಿದೆ.

ಹತ್ತು ವರ್ಷಗಳ ಹಿಂದೆ ನಗರವೆಂಬ ಸ್ಥಳಗಳು ೨೭೦೦೦ ಇದ್ದವು. ಅವು ೧೯೭೧ ರಲ್ಲಿ ೨೯೨೧ ಆಗಿವೆ. ಪ್ರಥಮ ಶ್ರೇಣಿಯ ನಗರವೆಂದರೆ, ಒಂದು ಲಕ್ಷ ಜನವಸತಿ ಇರುವ ಪಟ್ಟಣ, ಇಂಥ ನಗರಗಳೇ ಈ ದೇಶದಲ್ಲಿ ೧೪೨ ಇರುತ್ತವೆ.

ಭಾರತದ ನಾಗರೀ ಜನಸಂಖ್ಯೆಯ ನಾಲ್ಕರಲ್ಲಿ ಒಂದು ಪಾಲು ಒಟ್ಟು ಹತ್ತು ಮಹಾ ನಗರಗಳಲ್ಲಿ ನೆಲೆಸಿದೆ. ಇವುಗಳಲ್ಲಿ ಒಂಭತ್ತರಲ್ಲಿ ಪ್ರತಿಯೊಂದೂ ೧೦ ಲಕ್ಷಕ್ಕಿಂತ ಹೆಚ್ಚು ಜನಸಂಖ್ಯೆಯಿಂದ ತುಂಬಿದೆ! (ಇನ್ನೊಂದು ಯುದ್ಧವಾದರೆ ಜನಸಂಹಾರಕ್ಕಾಗಿ ಶತ್ರುವಿಗೆ ಎಂಥ ಸುಗಮ ಮತ್ತು ಪ್ರಚಂಡ ಆಕರ್ಷಣೆ!) ಈ ಮಹಾನಗರಗಳಲ್ಲಿ ಕಲಕತ್ತೆ, ಮುಂಬಯಿ, ದಿಲ್ಲಿ, ಪ್ರತಿಯೊಂದರ ಜನಸಂಖ್ಯೆ ಅನುಕ್ರಮವಾಗಿ ೭.೦೧, ೫.೯೨ ಮತ್ತು ೩.೬೩ ದಶಲಕ್ಷವಿದೆ.

ಈ ಮಹಾ ನರಕಗಳಲ್ಲಿ ಪ್ರಜೆಯನ್ನು ತೊಳಲಾಡಿಸುವ ತಲ್ಲಣಗೊಳಿಸುವ ಶಾಪಗಳು

ಯಾವವು? ವಸತಿ ಸೌಕರ್ಯಗಳದೇ ಕೊರತೆ, ಹೊಲ ನಾರುವ ಕೊಳೆಗೇರಿಗಳ ಹಬ್ಬುವ ವ್ರಣಗಳು, ಏನೂ ಸಾಲದ ಸಾರಿಗೆ 'ವ್ಯವಸ್ಥೆ' ಅಂತಸ್ತುಗಳು? ಏರದೇ ಅಂತರಿಕ್ಷಕ್ಕೆ ಏರಿ ನಿಲ್ಲುವ ಮನೆಬಾಡಿಗೆ ದರ. ಹೊಸ ಮನೆ ಕಟ್ಟಲು ಸಿಗದಂತೆ ಭೂಮಿಯ ಅಸಹ್ಯ ಅತಿಪ್ರಸರಣದ ಬೆಲೆ ಉಬ್ಬರ, ಇದೇ ಮುಂತಾದವು.

ಇವೂ ಸಾಲವೋ ಎಂಬಂತೆ, ಜೀವನದ ಜೀವಾಳದ ಬೇಡಿಕೆಗಳಾದ ನೀರು, ಶಾಲೆ, ಆಸ್ಪತ್ರೆ, ಮತ್ತು ಆಟದ ಬಯಲುಗಳ ಘೋರ ಕೊರತೆ! ಅನಿಶ್ಚಿತ ಬದುಕಿಗೆ ಅಕಸ್ಮಾತ ಸಾವಿನ ಪೂರ್ಣ ವಿರಾಮ.

ಈ ನಾಗರೀಕರಣವು ನಮ್ಮ ಆರ್ಥಿಕ ವಿಕಾಸಾಭಿವೃದ್ಧಿಯ ಔದ್ಯೋಗೀಕರಣದ ಅನುಷಂಗಿಕವಾದ ಸಾಮಾಜಿಕ ಫಲವು. ಈ ಮಹಾ ನಗರಗಳು ದೇಶದ ದೇಹದಲ್ಲಿ ಕ್ಯಾನ್ಸರ್ ಗ್ರಂಥಿಗಳು ಬೆಳೆಯುವ ಭರದಲ್ಲಿ ಅಲ್ಲಲ್ಲಿ ಹುಟ್ಟಿ ಹಬ್ಬಿಕೊಂಡಿರುತ್ತವೆ - ಕೊಳ್ಳುತ್ತಿವೆ. ನಗರಗಳ ಮಧ್ಯ ಅಥವಾ ಹತ್ತಿರ ಪ್ರಚಂಡ ಉದ್ದಿಮೆ ಕೇಂದ್ರಗಳು ಇವುಗಳು ವಿಷಬೀಜಗಳಾಗಿ ಬೆಳೆಯುತ್ತವೆ. ಅವುಗಳ ಸುತ್ತಲೂ ಜನರಾಶಿ ಮುಕುರುತ್ತದೆ-ಕೀವಿಗೆ ನೊಣಗಳಂತೆ, ತಿಪ್ಪೆಗೆ ಹುಳಗಳಂತೆ!

ಭಾರತದ ಔದ್ಯೋಗಿಕ ಚಟುವಟಿಕೆಯ ಅರ್ಧಕ್ಕಿಂತ ಹೆಚ್ಚು ಮುಂಬಯಿ-ಕಲಕತ್ತೆಗಳ ಪಾಲಾಗಿದೆ. ಮುಂಬಯಿಯಲ್ಲಿಯೆ ವಿವಿಧ ಸಂಕೀರ್ಣ ಸ್ವರೂಪದ ಹಿರಿಕಿರಿ ಕಾರಖಾನೆಗಳೇ ೩೬೦೦೦ ದಷ್ಟು ಇರುವವೆಂದು ಅಂದಾಜು. ದೇಶದಲ್ಲಿಯ ಕಿರಿ ಉದ್ದಿಮೆಗಳ ಅಭಿವೃದ್ಧಿಯ ಕಾರ್ಪೊರೇಷನುಗಳು ಈ ಕೆಲವು ವರ್ಷಗಳಲ್ಲಿ ಒದಗಿಸಿದ ಸಾಲದ ಮೊತ್ತದಲ್ಲಿ ನಾಲ್ಕರಲ್ಲಿ ಮೂರು ಪಾಲು ದೇಶದ ನಾಲ್ಕು ಮಹಾನಗರಗಳ ಪಾಲಿಗೇ ಸಂದಿದೆ! ಅಂದಾಗ ಬಹುದೊಡ್ಡ ಪ್ರಮಾಣದಲ್ಲಿ ಹಳ್ಳಿಯ ಜನ ಹೊಟ್ಟೆಯ ಪಾಡಿಗೆ ಊರು ಬಿಟ್ಟು ನಗರಕ್ಕೆ ಗೂಳೆಯೆತ್ತಿ ಶರಣಾರ್ಥಿಗಳಂತೆ ಮುಕುರುತ್ತಿದ್ದರೆ ಆಶ್ಚರ್ಯವೇನು? ಇದರಿಂದ ಮಹಾ ನಗರವೂ ಮಹಾರೋಗಿಯ ಮೈಯಂತೆ ಹೊಲಸು ನಾರುತ್ತಿದ್ದರೂ ಆಶ್ಚರ್ಯವೇನು?

ಈ ನಗರಗಳ 'ಕೊಳೆ ರೋಗ' ನಿವಾರಣೆ ಅಶಕ್ತಪ್ರಾಯ. ಅವುಗಳ ಧನ ಮೂಲಗಳೇ ಕಡಿಮೆ. ನೂರಕ್ಕೆ ೧೫ ಮುನಿಸಿಪಾಲಿಟಿಗಳ ವರಮಾನ ತಲಾ ೩೦ ರೂಪಾಯಿಯ ಒಳ ಹೊರಗೆ ಇದೆ. ನೂರಕ್ಕೆ ೫೦ ರಷ್ಟು ಸ್ಥಾನಿಕ ಸಂಸ್ಥೆಗಳು ಸಾರ್ವಜನಿಕ ಸೌಕರ್ಯಕ್ಕಾಗಿ ತಲಾ ಒಂದು ರೂಪಾಯಿಗಿಂತಲೂ ಹೆಚ್ಚು ವೆಚ್ಚ ಮಾಡುವುದಿಲ್ಲ-ಮಾಡಲಾರವು. ನಮ್ಮ ಗ್ರಾಮಾಂತರದ ಅನೇಕ ಹಳ್ಳಿಗಳಲ್ಲಿ ಕೇರಿಗಳಿಗೆಲ್ಲ ಕತ್ತಲೆ. ಬೀದಿ ಬೆಳಕಿನ ಹಾಸಲು ತುಂಬಲಿಕ್ಕೇ ಪಂಚಾಯತದಲ್ಲಿ ಹಣವಿಲ್ಲ.

ಈ ಮಹಾನಗರಗಳಲ್ಲಿ, ಸರ್ವೇ ಸಮೀಕ್ಷೆಯ ಮೇರೆಗೆ, ೨ರಲ್ಲಿ ೧ ಪಾಲು ಜನ ಒಂದೇ ಕೋಣೆಯ 'ಮನೆ'ಗಳಲ್ಲಿ ಬದುಕುವರು. ೩ರಲ್ಲಿ ೧ ಪಾಲಿಗಿಂತ ಕಡಿಮೆ ಭಾಗ್ಯವಂತರಿಗೆ ಪ್ರತ್ಯೇಕ ಸ್ನಾನ ಗೃಹ, ಶೌಚ ಗೃಹಗಳ ಅನುಕೂಲತೆ ಇರುವದು. ಒಬ್ಬ ನಾಗರಿಕನಿಗೆ ವಾಸದ ಕ್ಷೇತ್ರ ಸರಾಸರಿ ೪೦ ಚ.ಅಡಿ. ಈ ನಗರಗಳ ಜನಸಂಖ್ಯೆಯ ಅರ್ಧಕ್ಕಿಂತ ಕಡಿಮೆ ಜನಕ್ಕೆ ನೀರಿನ

ವ್ಯವಸ್ಥೆ ಇರುತ್ತದೆ ಮತ್ತು ನೂರಕ್ಕೆ ೭೫ರಷ್ಟು ಜನಕ್ಕಾಗಿ ಚರಂಡಿ ವ್ಯವಸ್ಥೆ ಇರುವುದಿಲ್ಲ.

ಕಲಕತ್ತೆಯ ೩ರಲ್ಲಿ ೨ ಪಾಲು ಜನ ಗುಡಿಸಲು ಗುಡಾರ, ತಟ್ಟಿ ಕೋಣೆಗಳಲ್ಲಿ ವಾಸಿಸುತ್ತದೆ.

ಈ ನಗರಗಳಲ್ಲಿ ಮನೆಗಳ ಕೊರತೆ ಅಸಾಧ್ಯ ಬಿಕ್ಕಟ್ಟು. ಮುಂಬಯಿಯಲ್ಲಿ ೧೯೭೦ರ ತನಕವೂ ಬರೆ ೪.೬ ಲಕ್ಷ ಪಕ್ಕಾ ಮನೆಗಳಿದ್ದವು. ಅಲ್ಲಿಯ ಜನದಟ್ಟಣೆಗೆ ನಿಜವಾಗಿ ೧೦.೨ ಲಕ್ಷ ಮನೆಗಳು ಬೇಕು. ಕಲಕತ್ತೆಯಲ್ಲಿ ೪.೪ ಲಕ್ಷ ಮನೆಗಳು. ಅಲ್ಲಿಬೇಕು ೯.೫ ಲಕ್ಷ. ದಿಲ್ಲಿಯಲ್ಲಿ ಪಕ್ಕಾ ಮನೆ ೩.೧ ಲಕ್ಷ. ಬೇಡಿಕೆ ೫.೫ ಲಕ್ಷ ಮನೆಗಳದು.

ದೇಶದ ನಗರಗಳಲ್ಲಿ ಒಟ್ಟು ಮನೆಗಳ ಕೊರತೆ ೧೯೫೧ ರಲ್ಲಿ ೨೮ ಲಕ್ಷ. ೧೯೫೬ ರಲ್ಲಿ ೫೦ ಲಕ್ಷ. ೧೯೬೬ರಲ್ಲಿ ೧೧೮ ಲಕ್ಷ. ೧೯೭೩-೭೪ರೊಳಗೆ ಈ ಬೇಡಿಕೆ ೧೩೭ ಲಕ್ಷಕ್ಕೆ ಏರಲಿದೆ! ತನ್ನ ಭಾಗ್ಯದ ಕರೆಗೆ ಓಗೊಟ್ಟು ಬರುವ ಸ್ವಯಂ ನಿರ್ವಾಸಿತರಿಗೆ ಕಲಕತ್ತೆಯಲ್ಲಿ ಜಾಸ್ತಿ, ಮುಂಬಯಿಯಲ್ಲಿ ಜೋಪಡಿಪಟ್ಟಿ, ದಿಲ್ಲಿಯಲ್ಲಿ ಝುಗ್ಗಿ ಜೋಪಡಿ, ಮದರಾಸಿನಲ್ಲಿ ಘೇರಿ, ಮತ್ತು ಕಾನ್‌ಪುರದಲ್ಲಿ ಅಹಡಗಳೇ ಗತಿ.

ಔದ್ಯೋಗಿಕರಣ ಆರ್ಥಿಕ ಸ್ಥಿತ್ಯಂತರದೊಂದಿಗೆ ನಗರೀಕರಣ ಅನಿವಾರ್ಯ. ಆದರೆ ವೇಗಕ್ಕೆ ಇದರ ವೇಗ ಬದ್ಧವಾದದ್ದು. ನಗರಗಳ ಒತ್ತಡ ಕಡಿಮೆ ಆಗಲು ಒಂದೇ ಉಪಾಯ - ಹಳ್ಳಿ ಹಳ್ಳಿ ನಗರವಾಗುವದು! ಕಳೆದ ೨೦ ವರ್ಷಗಳಲ್ಲಿ ಔದ್ಯೋಗೀಕರಣಕ್ಕೆ ಹೊಂದಿಕೊಂಡೇ ನಗರಗಳು ಎದ್ದಿವೆ. ನಗರದ ಅನುಕೂಲಗಳಿದ್ದಲ್ಲಿಯೆ ಉದ್ದಿಮೆಗಳು ಎದ್ದಿವೆ.

ದೊಡ್ಡ ಉದ್ದಿಮೆಗಳಿಗೆ ಬೇಕಾದ ಕೆಳಮಟ್ಟದ ಉದ್ದಿಮೆಗಳ ಹಂದರ ಹಳ್ಳಿಗಳಲ್ಲಿ ಇರುವದಿಲ್ಲ. ಆದ್ದರಿಂದ ಹಳ್ಳಿ ಮೊದಲು ನಗರವಾಗಬೇಕು. ಆಗ ಅಲ್ಲಿ ದೊಡ್ಡ ಉದ್ದಿಮೆ ನಿಲ್ಲುವಂತಾಗುತ್ತದೆ.

ಹಳ್ಳಿಗಳಿಗೆ ಮಿಂಚು ಹರಿಯಬೇಕು. ಬರೇ ಬೀದಿ-ಮನೆ ದೀಪಗಳಿಂದ ಇಲೆಕ್‌ಟ್ರಿಕ್ ಬೋರ್ಡಿನ ಪ್ರಪಂಚ ಸಾಗದು. ಹಳ್ಳಿಯಲ್ಲಿ ಕಿರಿ ಉದ್ದಿಮೆಗಳು ವಿದ್ಯುತ್ತನ್ನು ವಿನಿಯೋಗಿಸಬೇಕು. ಅಂದರೆ ಹಳ್ಳಿಯ ಜನ ಗ್ರಾಮಾಂತರ ಜನತೆ ಆ ಉದ್ದಿಮೆಗಳಿಗೆ ತಕ್ಕ ಬೇಡಿಕೆಯ ಪೇಟೆ ಒದಗಿಸಬೇಕು. ಅಂದರೆ ಆ ಜನರ ಶ್ರಮಶಕ್ತಿ ಹೆಚ್ಚಬೇಕು. ಅದಕ್ಕೆ ಮೊದಲು ಹಳ್ಳಿಯ ರೈತರ ಜೇಬಿಗೆ ಹೆಚ್ಚು ಹಣ ಹೋಗಬೇಕು. ಅದಕ್ಕಾಗಿ ಕೃಷಿಕ್ರಾಂತಿ ಆಗಬೇಕು. ಉಳುವವನಿಗೆ ಅವನ ಉಳುಮೆಯ ಹೊಲ ಸಿಗಬೇಕು. ಸ್ವಂತ ಸಾಗುವಳಿಯ ಹೊಲದೊಡೆಯರೇ ಎಲ್ಲ ರೈತರು ಆಗಬೇಕು. ಅದಕ್ಕಾಗಿ ಹೊಲಗಳ ಚಾಂದಾಣಿಕೆ ಯೋಗ್ಯವಾಗಿ ನ್ಯಾಯವಾಗಿ ಆಗಬೇಕು. ಇದಕ್ಕಾಗಿ ಹಿಡುವಳಿಗಳ ಮೇಲೆ ಪರಮಾವಧಿ ಬರಲೇಬೇಕು. ೧೯೪೬ರಲ್ಲಿ ಅಮೇರಿಕೆಯ ಸೇನಾಧಿಪತ್ಯದ ಬೆಂಬಲದಿಂದ ಜಪಾನು ಈ ಕೃಷಿ ಕ್ರಾಂತಿ ಮಾಡಿತು. ಅಲ್ಲಿ ಒಂದು ಹಿಡುವಳಿಯ ಪರಮಾವಧಿ ೭.೫ ಎಕರೆ. ಸರಾಸರಿ ಪ್ರತಿ ರೈತ ೩ ಎಕರೆಗೆ ಒಡೆಯ.

ಈ ಕೃಷಿಕ್ರಾಂತಿ ಕಮ್ಯುನಿಝಂ ಅಲ್ಲ. ಸಮಾಜವಾದವೂ ಅಲ್ಲ. ಯೂರೋಪ

ಅಮೇರಿಕೆಗಳಲ್ಲಿ ಸರಂಜಾಮಿ (ಪಾಳೆಯಗಾರಿಕೆ) ಪದ್ಧತಿಯನ್ನು ಕಳೆದು ಬಂಡುವಾಳಗಾರಿಕೆಯ ಸ್ಥಾಪನೆ ಆಗುವ ಮುಂಚೆ ಔದ್ಯೋಗಿಕ ಕ್ರಾಂತಿಯ ಹಿನ್ನೆಲೆಯಾಗಿ ಈ ಕ್ರಾಂತಿ ಎಂದೋ ಒದಗಿ ಬಂದಿತು.

ಹೀಗೆ ಈ ನಗರ ನಗರೀಕರಣದ ಮಹಾರೋಗಕ್ಕೆ ಒಂದೇ ಪರಿಹಾರ-ಗ್ರಾಮಾಂತರದ ಅಭಿವೃದ್ಧಿ ವಿಕಾಸ. ಅದಿಲ್ಲದೆ ಹಳ್ಳಿಗೆ ಹೊಸ ಡಾಕ್ಟರು, ತಂತ್ರಜ್ಞರು, ಅಟ್ಟಿದರೂ ಹೋಗಲಾರರು. ಕೃಷಿಕ್ರಾಂತಿ-ಔದ್ಯೋಗಿಕ ಕ್ರಾಂತಿ - ಗ್ರಾಮಗಳ ನಗರೀಕರಣ ಅಂದರೆ ಬಡ ರೈತ ಕಸಬುಗಾರರ ಮಧ್ಯಮ ವರ್ಗೀಕರಣ- ಈ ಹಾದಿಯಲ್ಲಿ ಈ ಅಭಿವೃದ್ಧಿಯ ಹೆಜ್ಜೆ ಇಡಬೇಕು.

ಸದ್ಯ ಸುಮಾರು ೭೨ ಪಟ್ಟಣಗಳಿಗೂ ನಗರಗಳಿಗೂ 'ಗುರು ಯೋಜನೆ' (Master Plan) ಸಿದ್ಧವಾಗಿವೆ. ಆದರೆ ಅವುಗಳ ಬೆನ್ನಿಗೆ ಕಾಯಿದೆಯ ಸಾಮರ್ಥ್ಯವಿದ್ದವು ಕೆಲವೇ ನಗರಗಳ ಪುನರ್‌ರಚನೆ ಎಂದೊಡನೆ, ದೊಡ್ಡ ಮೊತ್ತದ ಬದಲಾವಣೆಗಳು, ಹಳೆ ಮನೆ ಹಳೆ ಪರಿಸ್ಥಿತಿ ಪರಿಸರಗಳ ಸ್ಥಿತ್ಯಂತರಗಳು ಅಗತ್ಯ. ಈಗ ಅವುಗಳಲ್ಲಿ ತಮ್ಮ ಸ್ವಾರ್ಥವನ್ನು ತೊಡಗಿಸಿರುವ ವರ್ಗಗಳ ವಿರೋಧ ತಪ್ಪಿದ್ದಲ್ಲ. ಈ ವಿರೋಧಕ್ಕೆ ಮುಖ ರಾಜಕಾರಣಿಯದು - "ಸಾಮಾಜಿಕ ಕಾರ್ಯಕರ್ತ" 'ಪುಡಾರಿ' ಎಂಬ ಘಟಾಟೋಪಿ ಪ್ರಾಣಿಯದು. ನಗರಪಾಲಿಕೆ ಪಂಚಾಯತ ಸ್ಥಾನಿಕ ಸಂಸ್ಥೆಗಳಲ್ಲಿ ಈ ಪ್ರಾಣಿಯ ಕೈವಾಡ ಉಪದ್ವ್ಯಾಪ ಹೆಚ್ಚು. ಈ ಸಂಸ್ಥೆಗಳು ಇಂದು ಇದ್ದದ್ದೇ ಈ ರಾಜಕಾರಣಿಗಳ ಆಡುಂಬೊಲಗಳಾಗಿ. ಆದ್ದರಿಂದ ಇಂಥವರ ಕೈವಾಡದ ಮೂಲಕ ಯಾವ ಸಾರ್ಥಕ ಯೋಜನೆಯೂ ಕಾರ್ಯಗತವಾಗುವದಿಲ್ಲ.

ಇದರಿಂದ ಸ್ಥಾನಿಕ ಸಂಸ್ಥೆಗಳು ಅಕಾರ್ಯದಕ್ಷತೆ, ಹೊಣೆಗೇಡಿತನ, ಸಂಕುಚಿತ ಭಾವನೆ, ಜಗಳಗಂಟಿತನ ಇವುಗಳಿಗಾಗಿ ಆಡಳಿತ ಮತ್ತು ಸಭಾ ಕಾರ್ಯಗಳ ಪತ್ತನ್ನು ಕೆಡಿಸಿಕೊಂಡು ಹೆಸರಾಗಿದೆ.

ನಗರ ನಿರ್ಮಾಣಕ್ಕಾಗಿ ಒಂದು ನಿರ್ದಿಷ್ಟವಾದ ನಿರ್ದುಷ್ಟವಾದ ರಾಷ್ಟ್ರೀಯ ಯೋಜನೆ ಅಗತ್ಯ. ಅದರ ನಿರ್ವಹಣೆಗೆ ಕೇಂದ್ರದಿಂದಲೇ ಒಂದು ಆಡಳಿತ ಮಂತ್ರಣೆ ಅಗತ್ಯ. ಅದಕ್ಕೆ ಅಲ್ಲಲ್ಲಿ ರಾಜ್ಯ ಹಾಗೂ ಜಿಲ್ಲಾ ಮಟ್ಟಗಳಲ್ಲಿ ದಕ್ಷ ಪ್ರಾತಿನಿಧ್ಯವನ್ನು ಕೊಡಬಹುದು. ಈ ನಿಟ್ಟಿನಲ್ಲಿ ಸದ್ಯ ಬರೆ ಸಭೆ, ಸಮಿತಿ, ಸೆಮಿನಾರುಗಳು ನಡೆಯುತ್ತವೆ. ಇವುಗಳಿಂದ ಯಾವ ಪ್ರಯೋಜನವೂ ಆಗದು. ಎಲ್ಲ ಹಂತಗಳಲ್ಲಿ ಪಕ್ಷೀಯ ರಾಜಕಾರಣದ ರೂಪ-ರಸ-ಗಂಧಗಳು ಪ್ರಬಲವಾಗಿ ಸೇರಿಕೊಂಡು ದ್ವೇಷ, ಘರ್ಷಣೆ, ಬಾಯ್ಬೀಗ, ಬೆನ್ನಿರಿತ, ಕಾಲ್ತೊಡಕು, ಕೈಕಟ್ಟುಗಳಿಗೆ ಕಾರಣವಾಗುತ್ತವೆ.

ಮೊನ್ನೆ ತಾನೆ ವಿಶಾಖಪಟ್ಟಣದಲ್ಲಿ ಇಂದಿರಾಗಾಂಧಿ ಹರಿಜನರಿಗಾಗಿ ನೆಹರೂ ಹೆಸರಿಟ್ಟ ಒಂದು ಹೊಸ ವಸಾಹತನ್ನು ಉದ್ಘಾಟಿಸಿದರು. ೨೦ ಹರಿಜನ ಕುಟುಂಬಗಳು ತಮ್ಮ ಅನಾದಿ ಕಾಲದ ಕೊಳೆಗೇರಿಗಳನ್ನು ಬಿಟ್ಟು ಅಲ್ಲಿ ಹೋಗಿ ನೆಲಸಿದವು- ದೊಡ್ಡ ಸಮಾರಂಭದಿಂದ. ಆದರೆ ಕೆಲವೇ ದಿನಗಳಲ್ಲಿ ಜಡಿಮಳೆಗೆ ನೆಲಗಟ್ಟು ಮುಳುಗಿದವು. ಗೋಡೆಗಳು ಬಿರುಕು ಬಿಟ್ಟವು. ಮಾಡು

ಮುರಿದವು. ಬಡ ಕುಟುಂಬಗಳು "ಮರಳಿ ಮಣ್ಣಿಗೆ" ತಮ್ಮ ಹಳೆಯ ಹೊಲಗೇರಿಗೆ ಓಡಿದವು.

ಈಗ 'ನೆಹರೂ' ನಾಮ ಬಲವೂ ಈ ಜನರನ್ನು ಆಡಳಿತದ ಭ್ರಷ್ಟಾಚಾರದ ಬವಣೆಯಿಂದ ಕಾಪಾಡಲಿಲ್ಲ! ರಿಪೇರಿ ಮಾಡಿಕೊಟ್ಟ ಹೊರತು ಈ ಕುಳಗಳು ತಿರುಗಿ ಈ 'ಹೊಸ' ವಸಾಹತಿಗೆ ಹೋಗಲು ಒಪ್ಪುವುದಿಲ್ಲ. ಆದರೆ ಆಡಳಿತದ ಬಳಿ ರಿಪೇರಿಗೆ ಹಣವಿಲ್ಲ! ಅಲ್ಲದೆ ಈ ಹೊಸ ಮನೆಗಳು ಕುಸಿದದ್ದು ಹೇಗೆ?

ಕಂಟ್ರಾಕ್ಟರರೂ ಅಧಿಕಾರಿಗಳೂ ಸಂಚು ಮಾಡಿ ಕೆಳಮಟ್ಟದ ಸಾಮಗ್ರಿ ಬಳಸಿ 'ಕಾಮಗಾರಿ' ಕೆಡಿಸಿ ಬಿಟ್ಟರೆಂದು ಜನರ ದೂರು. ಆದರೆ ಆಡಳಿತದ ಹೇಳಿಕೆಯೇ ಬೇರೆ. ಇಂದಿನ ದಿನಮಾನದ ಬೆಲೆ ಏರಿಕೆಯಲ್ಲಿ ೧೮೦೦ರೂ.ಗೆ ೨ ಕೋಣೆಯ ಹಂಚಿನ ಮಾಡಿನ ಒಂದು ಮನೆಕಟ್ಟುವುದು ಅಸಾಧ್ಯ. ಈಗ ಮಂಜೂರಾದ ಹಣದಲ್ಲಿ ಇಂಥ ಮನೆಗಳೇ ಕಟ್ಟಿ ನಿಲ್ಲುವುವು - ಅಂದರೆ ನಿಲ್ಲಲಾರದೆ ಬೀಳುವುವು!

ಗ್ರಾಮಾಂತರ ವಸತಿ ನಿರ್ಮಾಣ ಈ ಬಗೆ ಆದರೆ, ನಗರಗಳಲ್ಲಿಯ ಲಕ್ಷಾಂತರ ಜನಕ್ಕೆ ಮನೆ ಇಲ್ಲ, ತಲೆಯ ಮೇಲೆ ಒಂದು ನೆರಳಿಲ್ಲ. ಹಾದಿಯಲ್ಲಿ ಸಂಕದ ಕೆಳಗೆ, ಕಟ್ಟೆಯ ಮೇಲೆ ಕೊಳಾಯಿಯೊಳಗೆ, ತರೆ ಮಾರುಗಳು ಹುಟ್ಟಿ ಸಾಯುತ್ತವೆ. ದೊಂಬಿ-ಬಂಡಾಯಗಳಿಗೆ ಇವೇ ಸ್ಫೋಟಕ ಹುತ್ತಗಳು. ಈ ಕುರಿತು ಪಕ್ಷನಿರಪೇಕ್ಷವಾಗಿ ನಮ್ಮ ಪುರಪ್ರಮುಖರು ಯೋಗ್ಯ ವಿಚಾರ ಮಾಡುವುದು ಎಂದೋ!

●

('ಉದಯವಾಣಿ' ೧೯೭೨)

# ಪಾಪಿಗಳ ಪುಣ್ಯಪವಾಡ

ನಾರದ ಮಹರ್ಷಿಗಳು ರಾಮ ಮಂತ್ರದಿಂದ ಡಕಾಯಿತ ವಾಲ್ಮೀಕಿಯನ್ನು ಮಹರ್ಷಿಯಾಗಿ ಮಹಾಕವಿಯಾಗಿ ಮಾರ್ಪಡಿಸಿದ ಪವಾಡಕ್ಕೆ ರಾಮಾಯಾಣವೇ ಸಾಕ್ಷಿಯಾಗಿ ನಿಂತದೆ.

ಆನಂತರದ ಉದಾಹರಣೆ ಪೂಜ್ಯ ವಿನೋಬಾ ಅವರೂ ಅವರ ಪಟ್ಟ ಶಿಷ್ಯ ಶ್ರೀ ಜಯಪ್ರಕಾಶ ನಾರಾಯಣರೂ ಮಾಡಿದ ಬಹು ದೊಡ್ಡ ಪ್ರಮಾಣದ ದುಷ್ಟರ ಹೃದಯ ಪರಿವರ್ತನೆಯೇ ಸರಿ.

**ಜಯಪ್ರಕಾಶರ ಜಯ**

ಏಪ್ರಿಲ್ ತಿಂಗಳ ಅತಿ ದೊಡ್ಡ ಸುದ್ದಿ-ವಿಯತ್‌ನಾಮದಲ್ಲಿ ಬಾಂಬದಾಳಿ ಅಲ್ಲ. ಸದ್ದಿಲ್ಲದ ನರ್ಮದಾ ನದಿಯ ಕೊಳ್ಳದಲ್ಲಿ ಕಳೆದ ೧೨ ವರ್ಷಗಳಿಂದಲೂ ಸರ್ವೋದಯ ಕಾರ್ಯಕರ್ತರ ಶಾಂತಿ ನಿಯೋಗವು ಕೆಲಸ ಮಾಡಿ ಜಯಪ್ರಕಾಶರು ಅಲ್ಲಿಯ ಭಯಂಕರ ದರೋಡೆಗಾರರ ಎದೆಯ ಕಗ್ಗವಿಗಳಲ್ಲಿ ಪ್ರಕಾಶವನ್ನು ಹರಡುವದರಲ್ಲಿ ಜಯಶಾಲಿ ಆದದ್ದು.

ಏಪ್ರಿಲ್ ೧೭ನೆಯ ದಿನಾಂಕಕ್ಕೆ ಆ ಕೊಳ್ಳದ ಮೂರನೆಯ ದೊಡ್ಡ ಕೊಳ್ಳೆಗಾರ ನಾಥೂ ಸಿಂಗ ಗ್ವಾಲ್ಹೇರ ಸ್ಟೇಶನ್ನಿನಲ್ಲಿ ಜಯಪ್ರಕಾಶರಿಗೆ ಶರಣುಬಂದನು. ಈ ಹಿಂದೆ ಇನ್ನೆರಡು ಭಯಾನಕ ಡಕಾಯಿತಿಗಳು- ಮೋಹರ ಸಿಂಗ ಮತ್ತು ಮಧೂ ಸಿಂಗ ಜೌರಾದ ಗಾಂಧೀ ಆಶ್ರಮದಲ್ಲಿ ೧೫-೨೦ ಸಾವಿರ ಜನಸಮುದಾಯದ ಇದಿರಿಗೆ ತಮ್ಮ ಶಸ್ತ್ರಾಸ್ತ್ರಗಳೊಂದಿಗೆ ಸಹಕಾರಿ ಗುಂಪುಗಳೊಂದಿಗೆ ಶರಣು ಬಂದಿದ್ದರು.

**ತಲೆಗಳ ಬೆಲೆಯೆಷ್ಟು?**

ನಥೂ ಸಿಂಗನೊ ಭಯಾನಕ ಕೊಲಪಾತಕಿ. ಅವನನ್ನು ಹಿಡಿದುಕೊಟ್ಟವರಿಗೆ ೨೦,೦೦೦ ರೂ. ಪಾರಿತೋಷಕ ಸರಕಾರ ಜಾಹೀರ ಮಾಡಿತ್ತು. ಮೊರಾರ್ ಸರ್ಕೀಟ್ ಬಂಗಲೆಯಲ್ಲಿ ಆತನ ಶರಣಾಗತಿಯ ಸಮಾರಂಭ ನಡೆಯುವದಿತ್ತು. ಅಲ್ಲಿ ೧೦ ಸಾವಿರ ಜನ ನೆರೆದಿದ್ದರು. ಆದರೆ ನಥೂ ಸಿಂಗ ಹಾಜರಾಗಲಿಲ್ಲ. ಅವನು ಸಕಾಲಕ್ಕೆ ಬರಲು ಆಗಲಿಲ್ಲ. ಅವನ ವಾಹನ ನಡುದಾರಿಯಲ್ಲಿ ಕೆಟ್ಟಿತಂತೆ. ಆದರೆ ಆತ ಹಿಂದಿನಿಂದ ಬಂದು ಜಯಪ್ರಕಾಶರು ಟ್ರೇನ ಹತ್ತಲಿರುವಾಗ ಗ್ವಾಲ್ಹೇರ ಸ್ಟೇಷನ್ನಿನಲ್ಲಿ ಶರಣಾಗತನಾದನು.

೧೯೬೬ರಿಂದಲೂ ಸರಕಾರ ಅವನ ಬಂಧನಕ್ಕಾಗಿ ಪ್ರಯತ್ನಿಸುತ್ತಿತ್ತು. ಅವನ ಗುಂಪಿನವರನೇಕರು ಪೋಲಿಸರ ಗುಂಡಿಗೆ ಬಲಿಯಾಗಿದ್ದರು. ಗುಂಪು ಮುರಿದಂತೆ ಇತ್ತು.

ಆದರೆ ಈ ಮೂವರು ಮಹಾ ಡಕಾಯಿತಿಗಳಲ್ಲಿ ಮೋಹರ ಸಿಂಗ ಅತಿ ಕುಪ್ರಸಿದ್ಧ. ಅವನಷ್ಟು ಕೊಲೆ ಸುಲಿಗೆ-ಹಿಂಸಾಚಾರಗಳನ್ನು ಬೇರೆ ಡಕಾಯಿತಿಗಳು ಮಾಡಿಲ್ಲ. ಅವನ ತಲೆಗೆ ಸರಕಾರ ೨ ಲಕ್ಷ ರೂಪಾಯಿ ಬೆಲೆ ಕಟ್ಟಿತ್ತು.

**ಡಕಾಯಿತರ ವ್ಯಕ್ತಿತ್ವ**

ಮೋಹನ ಸಿಂಗ ಮಾಧೂ ಸಿಂಗ ಇಬ್ಬರೂ ಆರಡಿ ಎತ್ತರದ ಕಟ್ಟಾಳು. ಸೋಜಿಗವೆಂದರೆ, ಅವರೂ ಅವರ ಅನುಯಾಯಿಗಳೂ ಮಧ್ಯ ಪ್ರದೇಶದ ಪೋಲಿಸರ ಸಮವಸ್ತ್ರಗಳನ್ನು ತೊಟ್ಟಿದ್ದರು! ಅದೂ ಅವರವರ ದರ್ಜೆಗೆ ತಕ್ಕಂತೆ.

ಅವರ ಶರಣು ಸಮಾರಂಭವನ್ನು ನೋಡಲು ಸಾವಿರಗಟ್ಟಲೆ ಜನ ಬಂದಿದ್ದರು. -ಸೈಕಲು, ಸ್ಕೂಟರು, ಜೀಪು, ಚಕ್ಕಡಿ ಟ್ರಾಕ್ಟರು- ಕೈಗೆ ಸಿಕ್ಕಿದ ವಾಹನವನ್ನೇರಿ. ಈ ಜನರಲ್ಲಿ ಅನೇಕರು ಈ ಡಕಾಯಿತಿಗಳಿಗೆ ಪಾದ ಮುಟ್ಟಿ ನಮಸ್ಕಾರ ಮಾಡಹತ್ತಿದರು!

ಶರಣು ಬರುವಾಗ ಮೋಹನ ಸಿಂಗ ತನ್ನ ಗಡ್ಡವನ್ನು ಬೋಳಿಸಿಕೊಂಡಿದ್ದ. ಆದರೆ ಜೋಲು ಮೀಸೆಗಳು ಹಾಗೆಯೇ ಇದ್ದವು. ಮಂದಿ ಅವನನ್ನು 'ದಾದಾ' ಎಂದು ಕರೆಯುತ್ತಿದ್ದರು. ಮಾಧೂ ಸಿಂಗ ಅವನಿಗಿಂತ ಹೆಚ್ಚು ಸುಟಿ,-ಕೆನ್ನೆಗಿಳಿದ 'ಕಟ್' (ಸೈಡಬರ್ನ್ಸ) ಹೆಂಡಲ್‌ಬಾರ ಮೀಸೆ; ಅವನ ಠೀವಿಯೇ ಠೀವಿ. ಇಬ್ಬರ ಮೂಗೂ ಎದ್ದು ಕಾಣುವಂತಹದ್ದು. ಮಿನುಗುವ ಕಣ್ಣ ಇಬ್ಬರರದೂ ಪ್ರಭಾವಿ ಭದ್ರಾಕಾರ. ಮೋಹನ ಹೆಚ್ಚು ದಾಂಡಿಗ. ಮಾಧೂ ಹೆಚ್ಚು ಬಡಕಲು- ಕಟ್ಟುಮಸ್ತು. ಈ ಮೋಹನಸಿಂಗ ಅಶಿಕ್ಷಿತ ನಿರಕ್ಷರಸ್ಥ. ಗುರ್ರೆಂದೇ ಮಾತನಾಡುವವನು. ಶರಣಾಗತಿಯ ಸಭೆಯಲ್ಲಿ ಆತ ಸ್ವಸ್ಥಚಿತ್ತನಾಗಿ ಕಾಣಲಿಲ್ಲ. ತನ್ನ ತಂಡದವರಿಗೆ ಆಗಾಗ್ಗೆ ಚುರುಕಾಗಿ ಆಜ್ಞೆ ಮಾಡುತ್ತಿದ್ದ. ಅವನ ನಡೆ-ನುಡಿ ಮೊಂಡ. ಕಡ್ಡಿ ಮುರಿದಂತೆ.

**ಡಕಾಯಿತಿ ಬಿಟ್ಟು ಮತ್ತೆ ತಿರುಗಿದ**

ಆದರೆ ಮಾಧೂ ಸಿಂಗ ಹಾಗಲ್ಲ. ಇವನ ನಡತೆ ತುಂಬ ಮೃದು. ಈತ ಮೆಟ್ರಿಕ್ ಬೇರೆ ಪಾಸಾದವನು. ಹಳೆಯ ಸೈನಿಕ. ತಾನು ಸಮಾಜವಾದವನ್ನು ನಂಬಿದವನೆಂದು ಹೇಳುತ್ತಾನೆ. ಹಿಂದೊಮ್ಮೆ ಜಯಪ್ರಕಾಶರ ಅನುಯಾಯಿಯಾಗಿ ಸಮಾಜವಾದೀ ಪಕ್ಷ ಸೇರಿದ್ದೂ ಉಂಟು! ಆದರೆ ಏನೇನೋ ಅನಿಷ್ಟ ಅವಾಂತರಗಳು ನಡೆದು ಮನಸ್ಸು ಕಟುವಾಗಿ ಆತ ಡಕಾಯಿತಿ ಟೋಳಿಯನ್ನು ಸೇರಿ ನಾಗರಿಕತೆಗೆ ವೈರಿಯಾದನು. ಅವನು ಕಾಡುಮೇಡು ಬಿಟ್ಟು ದಿಲ್ಲಿ ಕಲಕತ್ತಾ ಮುಂಬಯಿಗೆ ಹೋಗಿ ಬಂದವನು. ಉತ್ತಮ ಹಾಟೆಲುಗಳಲ್ಲಿ ಉಳಿದು ಭೋಗಪಟ್ಟವನು- ರಾಮಸಿಂಗ ಎಂಬ ಹೆಸರಿನಲ್ಲಿ. ನೇಪಾಳ, ಸಿಕ್ಕಿಂ, ಭೂತಾನ, ಸಿಲೋನ ಎಲ್ಲ ಸುತ್ತಾಡಿ ಬಂದಿರುವೆನೆಂದು ಹೇಳುತ್ತಾನೆ.

ಈ ಶರಣಾಗತಿಯ ನಂತರ ಡಕಾಯಿತಿಗಳ ವಿಶೇಷ ನ್ಯಾಯ ವಿಚಾರಣೆ ಆಗಲಿದೆ. ಆತನಕ ಅವರನ್ನು ಗೌರವದಿಂದ ನಡೆಸಿಕೊಳ್ಳಲಾಗುವದು. ಶರಣು ಬಂದಾಗ ಈ ದರೋಡೆಗಾರರು ಅತ್ಯಾಧುನಿಕ ಶಸ್ತ್ರಾಸ್ತ್ರಗಳನ್ನು ತಂದು ಒಪ್ಪಿಸಿದರು.

**ಡಕಾಯಿತಿಗಳಲ್ಲೂ ಜನ ವಿಶ್ವಾಸ**

ಇವರು ಊಟ ಮಾಡುವ ಪ್ರದೇಶಗಳಲ್ಲೆಲ್ಲ ಹಳ್ಳಿಗಳ ಜನವೆಲ್ಲ ಈ ಡಕಾಯಿತಿಗಳಿಗೆ

ಸಾಮೀಲು. ಇವರು ಬಡವರ ಬಂಧುವೆಂದು ಪ್ರಭಾವ ಸ್ಥಾಪಿಸಿದವರು. ಇವರಿಗೆ ಆಚ್ಛಾದನೆ ಕೊಡುವ ಬಡಹಳ್ಳಿಗರಲ್ಲಿ ಮದುವೆ ಮುಂತಾದ ಕಾರ್ಯಗಳಿಗೆಲ್ಲ ಇವರು ಕೊಡುಗೈಯಿಂದ ಹಣ ಕೊಡುವದುಂಟು. ಪೋಲಿಸು, ಸರಕಾರ, ಸಾವುಕಾರ ಇವರೆಲ್ಲರ ಬಗೆಗೆ ಹಳ್ಳಿಗರಲ್ಲಿ ಬಡವರಲ್ಲಿ ಬೇರೂರಿರುವ ಅಸಹನೆ, ಅಸಹಕಾರ ಭಾವನೆಯ ಪೂರ್ತಿ ಲಾಭ ಈ ಡಕಾಯಿತಿಯವರು ಪಡೆಯುತ್ತ ಬಂದವರು. ಅಲ್ಲದೆ ಡಕಾಯಿತಿ ತಮ್ಮ ಕುಲ ಸಂಪ್ರದಾಯವೆಂದು ನಂಬಿದವರು.

**ದರೋಡೆಗಾರನ ದರೋಡೆ**

ಕಳೆದ ಚಳಿಗಾಲದ ಆರಂಭದಲ್ಲಿ ಮಾಧೋ ಸಿಂಗ ತಲೆಯ ಮೇಲೆ ೧-೧॥ ಲಕ್ಷ ಬೆಲೆಕಟ್ಟಿದ್ದರೂ- ಪೌನಾರಕ್ಕೆ ಹೋಗಿ ವಿನೋಬಾಜಿಯವರನ್ನು ಕಂಡನು. ಆಗ ಬಾಬಾಜಿಯವರು ಅವನನ್ನು ಜಯಪ್ರಕಾಶ ನಾರಾಯಣನ ಬಳಿಗೆ ಕಳುಹಿಸಿದರು. ಮಾಧೋನಿಗೆ ಜಯಪ್ರಕಾಶರು ಹೊಸಬರಲ್ಲ.

ಮಾಧೋ ನೇರವಾಗಿ ದಿಲ್ಲಿಗೆ ಹೋದ- ಗಾಂಧೀ ಶಾಂತಿ ಪ್ರತಿಷ್ಠಾನದ ಕಚೇರಿಗೆ. ಅಲ್ಲಿ ಜೆ.ಪಿ. ಸಿಗಲಿಲ್ಲ. ಅವರು ಪಾಟ್ನಾದಲ್ಲಿದ್ದರು. ಮಾಧೋ ಟ್ರೇನ್ ಹತ್ತಿ ಪಾಟ್ನಾಕ್ಕೆ ಬಂದ. ಬರುವಾಗ ಗಾಡಿಯಲ್ಲಿ ಈ ಪ್ರಚಂಡ ದರೋಡೆಗಾರನ ಜೇಬಿನಿಂದಲೆ ಯಾರೋ ೫,೦೦೦ ರೂ. ಹಾರಿಸಿದರು!

ಆರಂಭದಲ್ಲಿ ತಾನು ಯಾರೆಂದು ಆತ ಜಯಪ್ರಕಾಶರಿಗೆ ತಿಳಿಸಲಿಲ್ಲ. ಆದರೆ ಆ ಸರ್ವೋದಯ ಧುರೀಣರು ಅವನನ್ನು ನಂಬಿಗೆಯಲ್ಲಿ ತೆಗೆದುಕೊಳ್ಳಲು ತಡವಾಗಲಿಲ್ಲ.

**ಡಕಾಯಿತರ ಬೇಡಿಕೆ**

ಡಕಾಯಿತಿಗಳ ಪರವಾಗಿ ಮಾಧೋನ ಬೇಡಿಕೆ ಇಷ್ಟೆ- ತಮಗೆ ಗಲ್ಲಿಗೇರಿಸಬಾರದು. ತಮ್ಮ ವಿಚಾರಣೆ ಬಹಳ ದೀರ್ಘ ಕಾಲ ನಡೆಯಬಾರದು. ತಮ್ಮ ಕುಟುಂಬಗಳಿಗೆ ಯಾವದೇ ರೀತಿ ಪೀಡೆ ಆಗಬಾರದು. ಮತ್ತು ಜೇಲಿನಲ್ಲಿ ಶಿಕ್ಷೆಯ ಅವಧಿ ಮುಗಿದ ಮೇಲೆ ತಮಗೆ ಶಾಂತಿಯುತವಾದ ಜೀವನಕ್ಕೆ ನೆಲೆ ಮಾಡಿಕೊಳ್ಳಬೇಕು.

**ಡಕಾಯಿತರಿಗೆ ಭೂದಾನ**

ಆದರೆ ಇಂಥ ಜೀವಾವಧಿಯ ಹಿಂಸಾಚಾರಿಗಳು ಶಾಂತಿ ಮಾರ್ಗ ಹಿಡಿಯುವದುಂಟೇ? ೧೨ ವರ್ಷಗಳ ಹಿಂದೆ ಚಂಬಲ್ ಕೊಳ್ಳದ ಲುಕ್ಕಾ ಎಂಬ ಪ್ರಸಿದ್ಧ ಡಕಾಯಿತಿಯು ೧೧ ಸಂಗಡಿಗರೊಂದಿಗೆ ವಿನೋಬಾ ಅವರಿಗೆ ಶರಣು ಬಂದನು. ಒಬ್ಬ ಸಾಧು ಹೇಳಿದ ತುಳಸಿದಾಸರ ದ್ವಿಪದಿಯನ್ನು ಕೇಳಿ ಒಮ್ಮೆಲೆ ಅವನಲ್ಲಿ ಹೃದಯ ಪರಿವರ್ತನೆ ಆಯಿತು. ಈ ಡಕಾಯಿತಿಗಳಿಗೆ ಪ್ರತಿಯೊಬ್ಬನಿಗೂ ೨೦ ಎಕರೆ ಭೂದಾನದ ಜಮೀನು ನೀಡಲಾಯಿತು- ಬಿಡುಗಡೆಯಾಗಿ ಬಂದ ಮೇಲೆ, ಅವರೀಗ ನೆಮ್ಮದಿಯಾಗಿ ಹಸಿರು ಕ್ರಾಂತಿ ಮಾಡುತ್ತಿದ್ದಾರೆ. ಲುಕ್ಕಾ ಸ್ವತಃ ಬಿಹಾರದ ಶಿವಪುರಕಲಂದದಲ್ಲಿ ಒಂದು ಯಶಸ್ವಿಯಾದ ಹೊಲ ಮಾಡಿಕೊಂಡಿದ್ದಾನೆ.

ಈ ತಿಂಗಳ ಕೊನೆಯೊಳಗೆ ೨೫೦ ಡಕಾಯಿತರು ಶರಣು ಬರುವರೆಂದು ಸರ್ವೋದಯ ಕಾರ್ಯಕರ್ತರ ಅಂದಾಜು. ಸರಕಾರೀ ಲೆಕ್ಕದಲ್ಲಿ ಈ ಒಟ್ಟು ಡಕಾಯಿತಿಗಳು ೪೮೦.

**ಸರಕಾರ ಕೊಟ್ಟ ಸೌಕರ್ಯ**

ಅವಶ್ಯವಿದ್ದರೆ ಜಯಪ್ರಕಾಶರು ಡಕಾಯಿತಿಗಳ ಪ್ರದೇಶದಲ್ಲಿ ತಾನೆ ಸಂಚರಿಸಿ ಅವರನ್ನು ಮನವೊಲಿಸಲಿದ್ದಾರೆ. ಅವರ ಶಾಂತಿ ನಿಯೋಗದ ಕೆಲಸದ ವೆಚ್ಚಕ್ಕಾಗಿ ಸರಕಾರ ೧ ಲಕ್ಷ ರೂಪಾಯಿ ಒದಗಿಸಿದೆ. ಜಯಪ್ರಕಾಶರು ಈಗಾಗಲೇ ಜೇಲಿಗೆ ಹೋಗಿ ಅಲ್ಲಿ ಹಿಡಿದಿಟ್ಟ ಶರಣಾಗತರನ್ನು ಸಂದರ್ಶಿಸಿದ್ದಾರೆ. ಸರಕಾರವು ಶಾಂತಿ ನಿಯೋಗದ ಸಂಚಾರಕ್ಕಾಗಿ ೬ ಜೀಪು ಮತ್ತು ಅದಕ್ಕಾಗಿ ಪೆಟ್ರೋಲು ಒದಗಿಸಲಿದ್ದಾರೆ.

ಡಕಾಯಿತಿಗಳು ತಾವು ನಿಜವಾಗಿಯೂ ಮಾಡಿದ ಅಪರಾಧಗಳನ್ನು ಒಪ್ಪಿಕೊಳ್ಳಲಿದ್ದಾರೆ. ಜೆ.ಪಿ. ಅವರಿಗಾಗಿ ವಕೀಲರ ವ್ಯವಸ್ಥೆ ಮಾಡಲಿದ್ದಾರೆ.

ಡಕಾಯಿತಿಗಳು ಸತ್ಯಕ್ಕೆ ಅಂಟಿಕೊಳ್ಳುವರು. ಅವರ ಹೃದಯ ಪರಿವರ್ತನೆ ಪ್ರಾಮಾಣಿಕವೆಂದು ಜೆ.ಪಿ.ಯ ಮನವರಿಕೆ.

**ಸರ್ವೋದಯದ ಸೇವೆ**

ಡಕಾಯಿತಿ ಕುಟುಂಬಗಳ ಯೋಗಕ್ಷೇಮ ಅವರ ಮೇಲೆ ಸಮಾಜದ ಸೇಡಿನ ಸ್ಫೋಟವಾಗದಂತೆ ಸರ್ವೋದಯ ಕಾರ್ಯಕರ್ತರು ನೋಡಿಕೊಳ್ಳುವರು. ಈ ಕುಟುಂಬದವರು ಇನ್ನು ಮುಂದೆ ಶಸ್ತ್ರಾಸ್ತ್ರಗಳನ್ನು ಬಿಟ್ಟುಕೊಡುವರು. ಶರಣು ಬಂದ ಡಕಾಯಿತಿಗಳ ಮಕ್ಕಳ ಶಿಕ್ಷಣಕ್ಕಾಗಿ ಸರಕಾರ ತಿಂಗಳಿಗೆ ೫೦ ರಿಂದ ೧೦೦ ರೂ. ತನಕ ವಿದ್ಯಾರ್ಥಿ ವೇತನ ಕೊಡಮಾಡಿದೆ.

**ಸೆರೆಯಲ್ಲಿರುವವರ ಸ್ವಭಾವ**

ಸೆರೆಯಲ್ಲಿದ್ದ ಡಾಕಾಯಿತಿಗಳೆಲ್ಲ ಗಂಭೀರರೂ ಚಿಂತಾಕ್ರಾಂತರೂ ಕಾಣುತ್ತಾರೆ. ಜೇಲಿನ ನಿರ್ಬಂಧಗಳಿಗೆ ವಿಧೇಯರಾಗಿ ನಡೆಯುತ್ತಿದ್ದಾರೆ. ಜೇಲಿಗೆ ಒಯ್ದೊಡನೆ ಮೋಹನ್ ಸಿಂಗ್ ಮತ್ತು ಅವರ 'ಸಾಥಿಗಳು' ಸ್ನಾನ ಪೂಜೆ ಮುಗಿಸಿದ ಮೇಲೆಯೇ ಅನ್ನ ಮುಟ್ಟಿದರು! ಜೇಲಿನ ಆವಾರದಲ್ಲಿ ಇರುವ ಹನುಮಪ್ಪನ ಗುಡಿಗೆ ಈ ಭೂತಪೂರ್ವ ಡಕಾಯಿತಿಗಳು ತಪ್ಪದೇ ಹೋಗಿ ಕೆಲ ಹೊತ್ತು ಅಲ್ಲಿ ದಿನಾಲು ಕಳೆದು ಬರುತ್ತಾರಂತೆ.

"ಪ್ರತಿಯೊಬ್ಬ ಪಾಪಿಗೂ ಒಂದು ಭವಿಷ್ಯ ಕಾಲವಿದೆ. ಪ್ರತಿಯೊಬ್ಬ ಸಂತನಿಗೂ ಒಂದು ಭೂತಕಾಲವಿತ್ತು" - ಅಂದಿಲ್ಲವೆ ಆಸ್ಕರ್ ವೈಲ್ಡ್? ಇಂದು ಈ ಡಕಾಯಿತಿಗಳ ಭವಿಷ್ಯಕಾಲ ಉದಯವಾಗಲಿದೆ.

**ಲೋಕಕಂಟಕರ ರಕ್ಷಕರು**

ಒಂದು ಮಾತು ನಿಜ. ಡಕಾಯಿತರ ಈ ಹೃದಯ ಪರಿವರ್ತನೆ ಕೇವಲ ಸಾತ್ವಿಕವಲ್ಲ. ದಿನ ಹೋದಂತೆ ಇವರ ಈ ಬುನಾದಿಯಿಂದ ಬಂದ ವ್ಯವಸಾಯ ಇನ್ನೂ ಕಷ್ಟದ್ದಾಗಹತ್ತಿತ್ತು.

ಮಧ್ಯಪ್ರದೇಶ, ಬಿಹಾರ ಮತ್ತು ಬಂಗಾಲಗಳಲ್ಲಿ ಅನೇಕ ರಾಜಕಾರಣಿಗಳ ಎಂ.ಪಿ.ಎಮ್ಮೆಲ್ಲೇ ಮಂತ್ರಿ ಮಹಾಶಯರುಗಳ ಬೆಂಬಲ ಅಥವಾ ರಕ್ಷಣೆ ಈ ಲೋಕಕಂಟಕರಿಗೆ ಇತ್ತು. (ಎರಡು ವರ್ಷಗಳ ಹಿಂದೆ ಒಬ್ಬ ಗೂಂಡಾ ದಾದಾ ಕಲಕತ್ತೆಯಲ್ಲಿ ಸತ್ತಾಗ, ಅವನ ಅಂತ್ಯಯಾತ್ರೆಯಲ್ಲಿ ಸಾವಿರಾರು ಪ್ರತಿಷ್ಠಿತರು ಭಾಗವಹಿಸಿದ್ದರು. ಅವರಲ್ಲಿ ಶಾಸನಸಭಾ ಸದಸ್ಯರೂ ಇದ್ದರಂತೆ!) ಇಂದು ಸರಕಾರ ವಿಮಾನಗಳಿಂದ ಬಾಂಬು ಚೆಲ್ಲಿ ಈ ಡಕಾಯಿತಿ ಹುತ್ತಗಳನ್ನು ನಾಶ ಮಾಡಬಹುದು. ಹಿಂದೆ ಆಫ್ರಿಡಿ ಬಣಗಳನ್ನು ಬ್ರಿಟಿಶ ಸರಕಾರ ವಾಯುವ್ಯ ಸರಹದ್ದಿನ ಗುಡ್ಡಗಳಲ್ಲಿ ಬೇಟೆ ಆಡಿದಂತೆ! ಅಂದರೆ ಡಕಾಯಿತಿ ಇನ್ನು ಹಿಂದಿನಷ್ಟು ಲಾಭದ ಗ್ರಾಮೋದ್ಯೋಗವಾಗಿ ಉಳಿದಿಲ್ಲ. ಆದ್ದರಿಂದ ಡಕಾಯಿತಿಗಳ ಶರಣಾ ಗತಿಯಲ್ಲಿ ಭಾವನೆಗಿಂತ ಬುದ್ಧಿವಂತಿಕೆಯ ಅಂಶವೇ ಹೆಚ್ಚಿದೆ.

**ಚಿಗುರು ಕಾಣಿಸಿಕೊಂಡೀತು!**

ಆದಕ್ಕೇ ಕೇಂದ್ರ ಮಂತ್ರಿ ಶ್ರೀ ಕೆ.ಸಿ. ಪಂತರು ಹೇಳಿದ್ದು- ಈ ಶರಣಾಗತ ಡಕಾಯಿತಿಗಳನ್ನು ಬೆರಗು ಬಿನ್ನಾಣದ ಮರಳುಗಣ್ಣಿನಿಂದ ನೋಡಬೇಡಿರಿ ಎಂದು. ಇವರು ಸೆರೆಮನೆಗೆ ನಡೆದು ಬಂದರೂ ಇವರ ಬೆನ್ನಿಗೆ ಬೇರೆ "ತುರ್ಕರು" ಹುಟ್ಟಬಾರದೆಂದಿಲ್ಲ.

ಆದರೂ ಜಯಪ್ರಕಾಶರು ಕೈಗೊಂಡ ಈ ಮಹತ್ ಸಾಧನೆಯು ನಿಸ್ಸಂದೇಹ ಅಭಿನಂದನೀಯ, ಪ್ರಶಂಸನೀಯ ಸಾಹಸ. ಭಾರತೀಯ ಸಂಸ್ಕೃತಿಯ ದೀಪ ಬೆಳಗಿ ದುಂದುಭಿ ಮೊಳಗಿಸಿ ಉರಿದಾಡುವ ದೇಶಭಕ್ತಿ ರಾಷ್ಟ್ರಾಭಿಮಾನಗಳ ಗುತ್ತಿಗೆ ಹೊತ್ತ ಅನೇಕ ಧುರೀಣರು ದೇಶದಲ್ಲಿ ಕಡಿಮೆ ಇಲ್ಲ. ಇವರಿಗೆ ಅಲ್ಲೊಂದು ಇಲ್ಲೊಂದು ಧರ್ಮಾಂತರದ ವಿಕ್ರಮ ಒಂದೇ ನೆನಪಾಗುತ್ತದೆ. ಹೀಗೆ ಡಕಾಯಿತಿ ಬಣಗಳ ಹೃದಯ ಪರಿವರ್ತನೆ ಅಥವಾ ಬಾಳಿನ ಮನ್ವಂತರದ ಕಲ್ಪನೆಯೇ ತೋಚಿದ್ದು ಕಾಣುವದಿಲ್ಲ!

**ವಿಚಿತ್ರ ಸತ್ಯ**

ಆದರೆ ಒಂದು ವಿಚಿತ್ರ ಸತ್ಯವೆಂದರೆ ಇಂದು ಇಂಥ ಕೊಲೆಗಡಕ ದರೋಡೆಗಾರರನ್ನು ಸರಿಹಾದಿಗೆ ಹಚ್ಚಬಹುದು. ಆದರೆ ಬಡ ಜನತೆಯನ್ನು ಹಾಡೇಹಗಲು ಸುಲಿಯುವ "ಸಫೇದ ಡಾಕು"ಗಳ ಕಳ್ಳ ಪೇಟೆ ಕಪ್ಪು ಹಣದ ಕದೀಮ-ಕುಬೇರರ ಹೃದಯ ಪರಿವರ್ತನೆ ಸಾಧ್ಯವಾಗಲಿಲ್ಲ. ಏಕೆಂದರೆ ಈ ನರ ರಾಕ್ಷಸರಿಗೆ ಹೃದಯವೇ ಇರುವದಿಲ್ಲ!

●

('ಜನಸೇವಕ' ೧೯೭೨)

# ಒಲಿಂಪಿಕ್ ಜ್ಯೋತಿಗೆ ಕವಿದ ಕಾವಳ

ಒಲಿಂಪಿಕ್ ಹಾಕಿ ಪಂದ್ಯದಲ್ಲಿ ಭಾರತವು ಪಾಕಿಸ್ತಾನಕ್ಕೆ ಸೋತ ಸುದ್ದಿ ಕೇಳಿ ನಮ್ಮ ಪ್ರಧಾನಿ ಶೋಕ ವ್ಯಕ್ತಮಾಡಿದರು. ಪಾಕಿಸ್ತಾನದ ಗೆಲುವಿನ ಬಗೆಗೆ ಮತ್ಸರವಿಲ್ಲ. ಆದರೂ ಭಾರತವು ಇದಕ್ಕೂ ಚೆನ್ನಾಗಿ ಆಡಬಹುದಿತ್ತು ಅಂದರು. ಇದಕ್ಕೂ ಹಿಂದೆ ಒಲಿಂಪಿಕ್ ಪಂದ್ಯಗಳಲ್ಲಿ ಭಾರತೀಯ ಸಾಧನೆ ಒಂದು ದುರ್ದೈವದ ಸಂಗತಿ. ನಮ್ಮ ದೇಶದ ಶಾಲೆ ಕಾಲೇಜುಗಳಲ್ಲಿ ಆಟಪಾಟಗಳಿಗೆ ಕ್ರೀಡಾ ಪ್ರವೃತ್ತಿಗಳಿಗೆ ಯೋಗ್ಯ ಪ್ರಾಶಸ್ತ್ಯ ಕೊಡುವದಿಲ್ಲ ಎಂದೂ ಇಂದಿರಾ ಗಾಂಧಿಯವರು ಮರುಗಿದ ವರಧಿ ಪತ್ರಿಕೆಗಳಲ್ಲಿ ಬಂದಿದೆ.

ಮ್ಯೂನಿಕ್ ಪಂದ್ಯಗಳಲ್ಲಿ ಭಾರತದ ಸಾಧನೆ 'ನಾಚಿಕೆಗೇಡು' (Shameful) ಎನ್ನುವಾಗ ಪ್ರಧಾನಿಗಳು ಭಾವನಾ ಪ್ರಧಾನತೆಗೆ ಬಲಿಯಾದಂತಿದೆ. ಏಕೆಂದರೆ ಈ ಪರಿಸ್ಥಿತಿಯ ಹೊಣೆ ಯಾರದು? ಇದರ ಪಾಪ ಯಾರ ಹಣೆಗೆ ಬಡಿಯಬೇಕು? ಎಂಬುದರ ಕುರಿತು ಇಂದಿರಾಜಿ ಆಗ ಯೋಚಿಸಲಿಲ್ಲ.

ನಮ್ಮ ದೇಶದಲ್ಲಿ ಸುಸಂಘಟಿತ ಕ್ರೀಡಾರಂಗವೆಂಬುದೇ ಇಲ್ಲ. ಆಟಗಳ ವ್ಯವಸ್ಥಿತ ಅಭ್ಯಾಸ ತರಬೇತಿಗೆ ಏರ್ಪಾಡು ಅವಕಾಶಗಳೇ ಇಲ್ಲ. ಆಟಗಾರರಿಗೂ ಪಂದ್ಯ ಹೋರುವ ಹುದ್ದರಿಗಳಿಗೂ -ಹೊಟ್ಟೆಯ ಬೆನ್ನಟ್ಟ ಬೇಕಾಗುತ್ತದೆ. ದಿನದ ನಿರ್ವಾಹದ ಚಿಂತೆ ಎದೆಯ ಮೇಲೆ ಸವಾರಿ ಮಾಡುತ್ತದೆ. ದೇಶದಲ್ಲಿ ಉತ್ತಮ ಕ್ರೀಡಾಂಗಣಗಳೇ ಕಡಿಮೆ. ನಮ್ಮ ಕ್ರೀಡಾ ಪಟುಗಳಿಗೆ ದುಡಿಮೆ ಹೆಚ್ಚು. ಪೋಷಣೆ ಕಡಿಮೆ-ಪಾಶ್ಚಾತ್ಯ ಪಟುಗಳೊಂದಿಗೆ ಹೋಲಿಸಿದಾಗ.

ಇದೆಲ್ಲಕ್ಕೂ ಹೆಚ್ಚಾಗಿ ಇಲ್ಲಿಯ ನಿಜವಾದ 'ನಾಚಿಕೆಗೇಡು' ಆಟಗಾರರದಲ್ಲ. ಈ ಸಂಘಟನೆಗೆ ಸಂಬಂಧಪಟ್ಟ ಅಧಿಕಾರಿ ವರ್ಗದ್ದು. ಈ ಸಲ ಮ್ಯೂನಿಕ್‌ಗೆ ಹೋದ ಭಾರತೀಯ ಅಧಿಕಾರಿ ವರ್ಗ ನಮ್ಮ ಆಟಗಾರರ ತಂಡಗಳಿಗೂ ಸಂಖ್ಯೆಯಲ್ಲಿ ಹೆಚ್ಚು. ದಂಡಾಳುಗಳಿಗಿಂತ ದಂಡ ನಾಯಕರು-ದಂಡದ ನಾಯಕರು-ಹೆಚ್ಚು. ಈ ಅಧಿಕಾರಿಗಳು ಆಟಗಾರರ ರೇಶನ್ನು ಉಂಡು, ಅವರ ಭತ್ಯದ ಹಣ ತಾವೇ ತಿಂದು ಅವರಿಗಾಗಿ ಇದ್ದ ವಸತಿ ತಾವೇ ಆಕ್ರಮಿಸಿ ಮ್ಯೂನಿಕ್‌ದಲ್ಲಿ ಮೆರೆದಾಡಿದರು. ನಮ್ಮ ಆಟಗಾರರು ಅಥ್ಲೇಟರು ಈ ಅಮಲುದಾರರ ಆಳುಗಳಂತೆ ನಡೆಯಬೇಕಾಗಿತ್ತು. ಆಟಗಾರರು ತಮ್ಮ ಮಂಚ ಅವರಿಗೆ ಕೊಟ್ಟು ತಾವು ನೆಲದ ಮೇಲೆ ಮಲಗುತ್ತಿದ್ದರು. ನಮ್ಮ ಕುಸ್ತಿಯ ಮಲ್ಲರಿಗೆ ಇಂಥ ದುರ್ದಶೆ ಪ್ರಾಪ್ತವಾಗಿತ್ತು. ಕ್ರೀಡಾಪಟುಗಳನ್ನು ತಮ್ಮ ಚಾಕರಿಗೆ ಬಳಸಿಕೊಳ್ಳಲೂ ಈ ಅಧಿಕಾರಿಗಳು ಹೇಸಲಿಲ್ಲ. ಅಧಿಕಾರಿಗಳು ಭಾರತದಲ್ಲಿ ತಮ್ಮ ಮೇಲೆ ಚಲಾಯಿಸಬಹುದಾದ ದರ್ಪ ಪ್ರಭಾವಗಳಿಗೆ ಹೆದರಿ ಬಡಪಾಯಿ ಆಟಗಾರರು ದೀನರಾಗಿ ದನಗಳಂತೆ ನಡೆದುಕೊಳ್ಳುತ್ತಿದ್ದರು.

ಅಧಿಕಾರಿಗಳು ಮಾತ್ರವಲ್ಲ ಅಧಿಕಾರಿಗಳೆಂಬ ಸೋಗಿನಲ್ಲಿ ಏನಾದರೂ ನೆವ ಒಡ್ಡಿ ಅನೇಕ ಪ್ರತಿಷ್ಠಿತರು ಕ್ರೀಡಾಪಟುಗಳ ತಂಡದವರೆಂದು-ಹುಲಿಯ ಚರ್ಮ ಹೊದ್ದ ನರಿಗಳಂತೆ-ಅಗ್ಗದ ಅತಿಥಿಗಳಾಗಿ ಹೋಗಿ ಆಟಗಾರರಿಗೆ ತೊಂದರೆ ಕೊಟ್ಟವರೂ ಬೇರೆ ಇದ್ದಾರೆ.

ಇಷ್ಟಾದರೂ ನಮ್ಮವರ ಬಗೆಗೆ ಯೋಗ್ಯ ವ್ಯವಸ್ಥೆ ಇದ್ದಿಲ್ಲ. ಮುಷ್ಟಿ ಯುದ್ಧದಲ್ಲಿ ಗಾಯಗೊಂಡ ಮಲ್ಲನಿಗೆ ಉಪಚಾರ ಒದಗಿಸಲು ಒಬ್ಬ ಡಾಕ್ಟರ ಸಕಾಲಕ್ಕೆ ಸಿಗಲಿಲ್ಲ! ಅಂದಾಗ ನಮ್ಮ ಕ್ರೀಡಾಪಟುಗಳಿಂದ ನಾವು ಎಂಥ ಉತ್ಸಾಹ ಆವೇಶದ ವಿಕ್ರಮವನ್ನು ನಿರೀಕ್ಷಿಸಬಹುದು?

ಹೀಗೆಲ್ಲ ಆಗಲು ಕಾರಣವೇನು? ಒಂದು ಇಂಥ ಅಂತಾರಾಷ್ಟ್ರೀಯ ಕ್ರೀಡಾ ಪಂದ್ಯಗಳು ಶುದ್ಧ ಆಟಗಾರಿಕೆಯ ರಂಗವಾಗಿ ಉಳಿದಿಲ್ಲ. ಅವು ರಾಷ್ಟ್ರೀಯ ರಾಜಕಾರಣ, ಅಂತರಾಷ್ಟ್ರೀಯ ಪ್ರತಿಷ್ಠೆಯ ಬಗೆಗೆ ಸೆಣಸಾಟ ಇವುಗಳ ಗತ್ತುಗಾರಿಕೆಗೆ ಹೊಸ ರಣಕ್ಷೇತ್ರವಾಗಿದೆ. ಒಂದಲ್ಲ ಒಂದು ರೀತಿ ರಾಜಕೀಯವು ಆಟಪಾಟಗಳ ಕ್ಷೇತ್ರದಲ್ಲಿ ನುಗ್ಗಿ ಹಾವಳಿ ಎಬ್ಬಿಸುತ್ತದೆ.

ಮ್ಯೂನಿಕ್ ಪಂದ್ಯಗಳ ಆರಂಭದಲ್ಲಿಯೆ, ಒಲಿಂಪಿಕ್ ರಂಗದಿಂದ ರೊಡೇಶಿಯಾದ ಉಚ್ಚಾಟನೆ ಆಯಿತು. ಅದನ್ನು ಪ್ರತಿಭಟಿಸಿ ಆಫ್ರಿಕಾದ ಹುದ್ದರಿಗಳು ಪಂದ್ಯಗಳ ಮೇಲೆ ಬಹಿಷ್ಕಾರ ಹಾಕಬೇಕೆಂದರು. ಅದನ್ನು ಪ್ರತಿಭಟಿಸಿ ಫ್ರೆಂಚ್ ಪತ್ರಿಕೆಗಳು ಉಗ್ರವಾಗಿ ಬರೆದವು.

ಆಟಪಾಟಗಳು, ಕ್ರೀಡಾ ರಂಗ ಮಾನವ ಜನಾಂಗಗಳನ್ನೂ ರಾಷ್ಟ್ರಗಳನ್ನೂ ರಾಜಕೀಯೇತರ ಭೂಮಿಕೆಯಲ್ಲಿ ಒಂದುಗೂಡಿಸಲಿಕ್ಕೆ ಒಂದು ದಿವ್ಯ ಸಾಧನ ಎಂಬುದು ನಮ್ಮ ನಿಮ್ಮ ಸಂಪ್ರದಾಯಿಕ ನಿಲುಮೆ. ಈ ಪಂದ್ಯಗಳಿಂದ ನೈತಿಕ ನಾಗರಿಕ ಮೌಲ್ಯಗಳ ಸಂಸ್ಕಾರ ಮಾನವನಲ್ಲಿ ಬೆಳೆಯಬೇಕೇ ಹೊರತು ರಾಜಕೀಯ ಹಟ-ಹೇಯ ತ್ವೇಷ ದ್ವೇಷ ವೈಷಮ್ಯ ವೈರಗಳಲ್ಲ.

ಆದರೆ ಇತ್ತೀಚೆಗೆ ಈ ಆದರ್ಶದ ಕುರಿತು ಪ್ರತಿವಾದವಿಲ್ಲದಿದ್ದರೂ, ಇಂದಿನ ಸಂದರ್ಭಕ್ಕೆ ಇದು ಹೊಂದಿಕೊಳ್ಳಬಲ್ಲುದೇ ಎಂಬ ಶಂಕೆ ತೀವ್ರವಾಗಿದೆ. ಮೊನ್ನಿನ ಇಸ್ರಾಯಿಲ್ ಹುದ್ದರಿಗಳ ಹಾಡೇಹಗಲ ಕಗ್ಗೊಲೆಯಿಂದಾಗಿ ಇದು ಶಂಕೆಯಾಗಿ ಉಳಿದಿಲ್ಲ- ಸುಡುವ ಲಂಕೆಯಾಗಿ ಕಣ್ಣು ಕುಕ್ಕುತ್ತಿದೆ.

ಒಂದು ಅಂತಾರಾಷ್ಟ್ರೀಯ ಕ್ರೀಡಾಂಗಣವನ್ನು ಅಂತಾರಾಷ್ಟ್ರೀಯ ರಾಜಕೀಯ ಸಂದರ್ಭದಿಂದ ಪ್ರತ್ಯೇಕಿಸಲು ಸಾಧ್ಯವೆಂಬುದನ್ನು ನಂಬಲಿಕ್ಕೆ ತೀರ ಸರಳ ಅಥವಾ ತರಳ ಬುದ್ಧಿಯೂ ಸಾಕು!

ಆಧುನಿಕ ಒಲಿಂಪಿಕ್ ಪಂದ್ಯಗಳ ಸ್ಥಾಪಕ ಕೂಬರ್ಟನ್‌ನ ಮೂಲ ಉದ್ದೇಶವೇ ಈ ಮೂಲಕ ಪ್ರಪಂಚದ ರಾಷ್ಟ್ರಗಳನ್ನು ಒಟ್ಟಿಗೆ ತರುವದೇ ಆಗಿತ್ತು. ಆಂದರೆ ರಾಷ್ಟ್ರ ರಾಷ್ಟ್ರಗಳ ವಿತುಷ್ಟಿ ವಿರೋಧಗಳನ್ನು ಮನಗಂಡೇ ಅವನ್ನು ಪ್ರಯತ್ನಪೂರ್ವಕ ನಿವಾರಿಸಲಿಕ್ಕೆಂದು ಒಲಿಂಪಿಕ್ ಪಂದ್ಯಗಳ ಆಧುನಿಕ ಅವತಾರವಾಯಿತು. ಆದರೆ ಅಂದಿನಿಂದ ಇಂದಿಗೆ ಪರಿಸ್ಥಿತಿ ಬದಲಾಗಿದೆ. ಒಂದು ಅಂತಾರಾಷ್ಟ್ರೀಯ ರಂಗ ಒತ್ತಟ್ಟಿಗಿರಲಿ, ರಾಷ್ಟ್ರೀಯ ರಂಗದಲ್ಲಿಯೂ ಆಟ-ಪಾಠ ಅಂಗ ಸಾಧನೆಯ ವಿಷಯ ರಾಜಕೀಯೀಕರಣದಿಂದ ದೂರವಿಡುವದು ಸುಲಭವಾಗಿಲ್ಲ.

ಜೀನಮಿನೊ (Jean Meynand) ಎಂಬ ಒಬ್ಬ ಫ್ರೆಂಚ್ ಸಮಾಜ ಶಾಸ್ತ್ರಜ್ಞನು ಈ ವಿಷಯವಾಗಿ ಒಂದು ಗ್ರಂಥದಲ್ಲಿ ಆಟಿಗ ವೃತ್ತಿಯ ವಿಚಿಕಿತ್ಸೆ ಮಾಡಿದ್ದಾನೆ. ಅವನ ಅಭಿಪ್ರಾಯ ವೆಂದರೆ, ಆಟಪಾಟಗಳು (ವ್ಯಾವಸಾಯಿಕ ರೂಪದಲ್ಲಿ) ಅನೇಕ ಸಲ ಮನೋರೋಗಗಳಿಗೆ ಕಾರಣವಾಗಿದೆ. ಅದು ಅಂಗ ಸಾಧಕ, ಮಲ್ಲ, ಕ್ರೀಡಾಪಟುಗಳಲ್ಲಿ ಒಂದು ಬಗೆಯ ನಿರ್ವಿಣ್ಣತೆ

(depression) ಉಂಟು ಮಾಡುತ್ತದೆ. ಪ್ರೇಕ್ಷಕರಲ್ಲಿ ತಾವು ಶ್ರೇಷ್ಠರೆಂಬ ಭ್ರಮೆ (paranoia) ತರುತ್ತದೆ. ಮತ್ತು ಹುದ್ದರಿಗಳಿಗೆ ತರಬೇತಿ ಕೊಡುವ ಶಿಕ್ಷಕರಲ್ಲಿಯೂ ಆಶ್ರಯದಾತರಲ್ಲಿಯೂ ವಿವಿಧ ಮಾನಸಿಕ ಅವ್ಯವಸ್ಥೆಗಳನ್ನು ಉಂಟುಮಾಡುತ್ತದೆ. ಇದೂ ಅಲ್ಲದೆ ಸಾರ್ವಜನಿಕರಲ್ಲಿ ಒಂದು ಸಾಮೂಹಿಕ ಸಂಮೋಹನೆ (Mass hysteria) ಉಂಟಾಗಿ ಅದರಿಂದ ಪ್ರಾಣ ಘಾತಕ ಮೂರ್ಖತನವೂ ತಲೆದೋರುತ್ತದೆ. (ನಮ್ಮಲ್ಲಿ ವಿದೇಶೀ ಕ್ರಿಕೆಟ್ ತಂಡಗಳು ಬಂದಾಗಿನ ಆಟಗಳ ಸಮಯ ಸ್ಟೇಡಿಯಂಗಳಲ್ಲಿ ಆಗುವ ಹಿಂಸಾಮಯ ಕೋಲಾಹಲಗಳನ್ನು ಇಲ್ಲಿ ನೆನೆಯಬಹುದು.)

ಫ್ರಾನ್ಸಿನಂಥ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕ್ರೀಡಾರಂಗದ ಮೇಲೆ ಸರಕಾರದ ನಿಯಂತ್ರಣ ಹೆಚ್ಚು ಹೆಚ್ಚು ಹಬ್ಬುತ್ತದೆ. ಯುವ ಜನರನ್ನು ರಾಷ್ಟ್ರೀಯ ಕ್ರಾಂತಿಗೆ ಹೂಡಲಿಕ್ಕೆ ಅದೊಂದು ಸಾಧನವಾಗಿ ಉಪಯೋಗಿಸಲಾಗುತ್ತದೆ. ಪ್ರಾಚೀನ ರೋಮನ್‌ರೂ, ಜರ್ಮನಿಯ ನಾಝೀ ಶಾಸನವೂ, ಫ್ರಾನ್ಸ್‌ನಲ್ಲಿ ಜನರಲ ದಗಾಲನ ಸರಕಾರವೂ ಹೀಗೆ ಯುವ ಜನರನ್ನೂ ರಾಷ್ಟ್ರ ನಿರ್ಮಾಣವನ್ನೂ ಕ್ರೀಡಾರಂಗದಲ್ಲಿ ತಳಕು ಹಾಕುತ್ತ ಬಂದದ್ದಾಗಿದೆ. ಜನತೆ ಬ್ರೆಡ್ ಬೇಡಿದರೆ ರೋಮನ್ ಸೀಝರ ಅವರಿಗೆ ಸರ್ಕಸ್ ಕಾಣಿಸುತ್ತಿದ್ದರು. ರಾಷ್ಟ್ರೀಯ ಕ್ರೀಡಾ ಸಂಘಟನೆಯ ಹಿಂದಿನ ಪ್ರೇರಣೆ ಅಂದಿನಿಂದ ಇಂದಿಗೆ ಬಹಳೇನೂ ಬದಲಾಗಿಲ್ಲ.

ಆದರೆ ನರಕದ ಹಾದಿಗೆ ಯಾವಾಗಲೂ ಶುಭಾಶಯಗಳನ್ನೇ ಹಾಸಲಾಗುತ್ತದೆ. ಜನಸಾಮಾನ್ಯರು ರಾಜಕೀಯದಿಂದ ದೂರವಿಡಬೇಕು. (de-politicise) ಎಂಬುದು ಈ ಕ್ರೀಡಾ ನೀತಿಯ ತತ್ವ. ಆದರೆ ಪ್ರತ್ಯಕ್ಷವಾಗಿ ಕ್ರೀಡಾಪಟುಗಳಿಗೂ ಅವರ ಸಂಘ ಸಂಘಟನೆಗಳೂ ಪ್ರಸ್ಥಾಪಿತ ಸರಕಾರವನ್ನೂ ಅವರ ಬೆನ್ನಿನ ಪಕ್ಷವನ್ನೂ ಸಮರ್ಥಿಸುವಂತೆ ನೋಡಿಕೊಳ್ಳಲಾಗುತ್ತದೆ.

ಬಹುಜನ ಸಮುದಾಯವು ಬೌದ್ಧಿಕ ವೈಚಾರಿಕ ಅಥವಾ ಕಲಾತ್ಮಕ ಸಿದ್ಧಿಗಿಂತ ಹೆಚ್ಚಾಗಿ ಮನಃಪೂರ್ವಕವಾಗಿ ಆಟಪಾಟಗಳ ಕ್ರೀಡಾರಂಗದ ಯಶಸ್ಸಿಗೆ ಕೂಡಲೇ ಪ್ರತಿಕ್ರಿಯೆ ಕೊಡುತ್ತದೆ. ಇದು ರಾಜಕಾರಣಿಗಳಿಗೆ ಗೊತ್ತು. ಆದ್ದರಿಂದ ಎಷ್ಟೋ ಪಾಶ್ಚಾತ್ಯ ಸರಕಾರಗಳು ಜನತೆ ಒಂದು ಪ್ರಚಂಡ ರಾಷ್ಟ್ರೀಯ ಕ್ರೀಡಾ ಕಾರ್ಯಕ್ರಮದಲ್ಲಿ ಮೈಮರೆತಿರುವಾಗಲೆ ತನ್ನ ಆಗ್ರ ಧೋರಣೆಗಳನ್ನೂ ಕಾರ್ಯಕ್ರಮಗಳನ್ನೂ ಜಾರಿಯಲ್ಲಿ ತರುವದುಂಟು-ಅಮಲು ಏರಿದಾಗಲೆ ಶಸ್ತ್ರಕ್ರಿಯೆ ಮಾಡುವಂತೆ. ಸರಕಾರಗಳು ಕ್ರೀಡಾಪಟುಗಳ ತರಬೇತಿಗೆ ದೊಡ್ಡ ಮೊತ್ತದ ಧನ ಸಹಾಯ ಒದಗಿಸುವಷ್ಟು ಬೇಗ ಶಾಲೆಗಳಲ್ಲಿ ಆಟಪಾಟಗಳ ಏರ್ಪಾಟಕ್ಕೆ ಒದಗಿಸುವದು ಕಡಿಮೆ.

ಮೊನ್ನೆ ಬೊಬಿ ಫಿಶರ್ ಬೊರಿಸ್ ಸ್ಪಾಸ್ಕಿಯೊಂದಿಗೆ ಚದುರಂಗದಾಟದ ದ್ವಂದ್ವಯುದ್ಧದಲ್ಲಿ ತೊಡಗಿದ್ದಾಗ, ಅಧ್ಯಕ್ಷ ನಿಕ್ಸನ್‌ನ ಆಪ್ತ ಬೇಹುಗಾರ ಮತ್ತು ಸಲಹೆಗಾರ ಡಾ. ಕಿಸಿಂಜರ್ ಫಿಶರನಿಗೆ ಫೋನಿನಲ್ಲಿ ಕರೆದು ಹೇಳಿದನು-ಬರೆ ಚದುರಂಗದ ವಿಜಯಪಟ್ಟಕ್ಕಿಂತ ಹೆಚ್ಚಿನದೊಂದು ಹಿರಿಯ ಸಂಗತಿ ಅವನ ದ್ವಂದ್ವದಲ್ಲಿ ಅಡಕವಾಗಿದೆ. ಜೋಕೇ! ಮತ್ತು ಇನ್ನು ಮನೆಗೆ ಮರಳುವ ಅಮೇರಿಕನ್ ಆಟಗಾರ - ತಂಡಗಳನ್ನು ಅವರ ತರತರದ ಪದಕಗಳೊಂದಿಗೆ ಉತ್ಸವದಿಂದ ಸತ್ಕರಿಸಿ ಅಧ್ಯಕ್ಷರೊಂದಿಗೆ ಕೂತು ಫೋಟೋ ತೆಗೆಯಿಸಿ ಮುಂಬರುವ ಮಹಾ ಚುನಾವಣೆಗಳಿಗೂ ಮುಂಚೆಯೆ ರಾಷ್ಟ್ರದಾದ್ಯಂತ ಅವರ ಜೈತ್ರಯಾತ್ರೆ ಜಾಹೀರು ಮಾಡಲಾಗುವದು.

ಪ. ಜರ್ಮನಿಗೂ ಈ ಸಲ ಮ್ಯೂನಿಕ್‌ದಲ್ಲಿ ಒಲಿಂಪಿಕ್ ಮಹೋತ್ಸವ ನಡೆದದ್ದು ಒಂದು ಅಂತಾರಾಷ್ಟ್ರೀಯ ಆಟಗಾರರ ಮೇಳಕ್ಕಿಂತ ಮಿಗಿಲಾದ ಮಹಾ ಪರ್ವಣಿಯು. ಉತ್ಸವದ ಆರಂಭದಲ್ಲಿಯೇ ಬವೇರಿಯಾದ ಕ್ಯಾಥೋಲಿಕ್, ಪ್ರಾಟೆಸ್ಟೆಂಟ್ ಮತ್ತು ಯಹೂದಿ ಸಂಸ್ಥೆಗಳೆಲ್ಲ ಕೂಡಿ ಒಂದು ಭವ್ಯ ಸಮಾರಂಭ ನೆರವೇರಿಸಿದರು. ಆಗ ೧೯೩೬ರ ಬರ್ಲಿನ್ ಒಲಿಂಪಿಕ್ ಪಂದ್ಯಗಳ ಮೇಳವು ಅಂದಿನ ನಾಝಿ ಸರಕಾರಕ್ಕೆ ಹೇಗೆ ಗೌರವ ತಂದುಕೊಟ್ಟಿತ್ತೆಂಬುದನ್ನು ಅನೇಕ ಭಾಷಣಕಾರರು ಎತ್ತಿ ಹೇಳಿದರು. ಅದೇ ರೀತಿ ಈ ಮ್ಯೂನಿಕ್ ಒಲಿಂಪಿಕ್ ಮಹೋತ್ಸವವು ಯುದ್ಧೋತ್ತರ ಕಾಲದಲ್ಲಿ ತಲೆಯೆತ್ತಿ ನಿಂತ ಪ. ಜರ್ಮನಿಯ ಈ ಹೊಸ ರಾಷ್ಟ್ರಕ್ಕೂ ಒಂದು ಜಾಗತಿಕ ಮನ್ನಣೆಯ ಮುದ್ರೆಯನ್ನೊತ್ತುವದೆಂದು ಹಾರೈಸಲಾಯಿತು.

ಪೂರ್ವ ಜರ್ಮನಿಯೂ ಇದೇ ಕನಸನ್ನು ಬೇರೊಂದು ಬಣ್ಣದಲ್ಲಿ ಕಾಣುತ್ತದೆ. ಪೂ. ಜರ್ಮನಿಯ ಧುರೀಣ ವಾಲ್ಟರ ಉಲ್ ಬ್ರಿಚ್ ಸ್ಪಷ್ಟವಾಗಿಯೇ ಅಂದಿದ್ದನು. "ಜಿ.ಡಿ.ಆರ್.ದ ಆಟಗಾರರು ಪಂದ್ಯ ಗೆದ್ದವರ ವೇದಿಕೆಯಲ್ಲಿ ಇತರರೊಂದಿಗೆ ನಿಲ್ಲುವದೆಂದರೆ ಬಾನ್‌ದಲ್ಲಿಯ ಸೇಡುಗಾರರಿಗೆ ಉತ್ತಮ ಪ್ರತ್ಯುತ್ತರ?"

ಅಂದರೇನು? ಈ ಪಂದ್ಯಗಳಲ್ಲಿ ರಾಷ್ಟ್ರೀಯ ಪ್ರತಿಷ್ಠೆ ಆಳವಾಗಿ ಅಡಕವಾಗಿದೆ. ಇದರ ಬೆನ್ನಿಗೆ ಒಂದು ತುರುಸಿನ ಹೋರಾಟ ಏರಾಟದ ತಾತ್ವಿಕವಾದವೂ ಇರುತ್ತದೆ. ಪೂ. ಜರ್ಮನಿಯ ಕ್ರೀಡಾಪಟುಗಳಿಗೆ ಪದೇ ಪದೇ ಎಚ್ಚರಿಸಲಾಗುತ್ತಿತ್ತು- "ನೀವು ಗೋಡೆಯಾಚೆಯ ನಿಮ್ಮ ಸೋದರ ಸಂಬಂಧಿಗಳನ್ನೂ ವಿಶೇಷಾಧಿಕಾರಿಗಳನ್ನೂ ಭೋಗಿಸುವ ಶತ್ರುಗಳನ್ನೂ ಸೋಲಿಸುವದಿದೆ. ಸದೆಬಡಿಯುವದಿದೆ."

ಜಿ.ಡಿ.ಆರ್. (ಪೂ.ಜರ್ಮನಿ)ಯ ಪ್ರತಿಯೊಬ್ಬ ಕ್ರೀಡಾ ಪಟುವಿನ ಶಪಥದಂತೆ, ಆತ (ಕೆ) "ಜರ್ಮನ್ ಡೆಮೊಕ್ರಟಿಕ್ ರಿಪಬ್ಲಿಕ್‌ದ ಗೌರವಕ್ಕಾಗಿ, ಆಟಪಾಟಗಳ ಮತ್ತು ಸಮಾಜವಾದ, ಶಾಂತಿ ಮತ್ತು ಮೈತ್ರಿಗಳ ಶ್ರೇಯೋವೈಭವಕ್ಕಾಗಿ" ಪಂದ್ಯಗಳಲ್ಲಿ ಭಾಗವಹಿಸುತ್ತಾನೆ(ಳೆ). ಕ್ರೀಡಾ ಪಟುವಿಗೆ ಸ್ವರ್ಣ ಪದಕ ದೊರೆತರೆ ಅದಕ್ಕೆ ಪ್ರತಿಯಾಗಿ ಜಿ.ಡಿ.ಆರ್. ಸರಕಾರ ೫೦೦೦೦ ಮಾರ್ಕ್ ಕಾಣಿಕೆ ಕೊಡುವದು. ಈ ಹಣವೆಷ್ಟು? ಪೇಟೆಯ ದರಕ್ಕೆ ೮ ಮೋಟರ್ ಕಾರು ಖರೀದಿ ಮಾಡುವಷ್ಟು!

ಇನ್ನೂ ಪೂರ್ವಕ್ಕೆ ಕ್ರೀಡೆ ಮತ್ತು ರಾಜಕಾರಣಗಳ ಈ ತಳಕು ಇನ್ನೂ ಹೊಂದಿಕೊಳ್ಳುತ್ತದೆ.

ಉತ್ತರ ಕೊರಿಯಾದ ಒಬ್ಬ ಸಿಪಾಯಿ ಹೊ ಜನ್ ಲಿ ಅಕಸ್ಮಾತ್ ಚಿನ್ನದ ಪದಕ ಗೆದ್ದ- ಗುರಿಯಿಟ್ಟು ಗುಂಡು ಹೊಡೆಯುವ ಒಂದು ಪಂದ್ಯದಲ್ಲಿ. ಆ ಬಡಪಾಯಿ ತನ್ನ ಗೆಲುವಿನ ಗುಟ್ಟು ಹೀಗೆ ರಟ್ಟು ಮಾಡಬೇಕೇ! "ನನ್ನ ಹಗೆಗಳಿಗೆ ಗುಂಡಿಟ್ಟು ಹೊಡೆಯುತ್ತಿದ್ದೇನೆಂದೇ ಭಾವಿಸಿ ಹೊಡೆದೆ. ನಮ್ಮ ಪ್ರಧಾನಿ ನಾವು ಹೊರಡುವಾಗ ಹಾಗೆ ಹೇಳಿದ್ದರು-ನಮ್ಮ ಶತ್ರುಗಳೊಂದಿಗೇ ಹೋರಾಡುತ್ತಿದ್ದಂತೆ ಹೊಡೆಯಿರಿ ಎಂದು. ನಾನು ಬರೆ ಅದನ್ನೇ ಮಾಡಿದೆ!" ಈ ಸ್ಪಷ್ಟೀಕರಣ ಒಂದು ಕಿರಿಯ ಕೋಲಾಹಲವೆಬ್ಬಿಸಿತು. ಈಗ ಉತ್ತರ ಕೊರಿಯಾ ಒಲಿಂಪಿಕ್ ಕಮಿಟಿ ಈ ನಿಯಮ ಭಂಗವನ್ನು ಖುಲಾಸೆ ಮಾಡಬೇಕಾಗಿ ಬಂದಿದೆ! ರಾಷ್ಟ್ರ ರಾಷ್ಟ್ರಗಳನ್ನು ಒಕ್ಕಟ್ಟಿನಲ್ಲಿ

ನಿಲ್ಲಿಸುವ ಗುರಿ ಒಲಿಂಪಿಕ್ ಪಂದ್ಯಗಳದು. ಅಲ್ಲಿ ಶತ್ರುವನ್ನು ಕಂಡಂತೆ ಹೊಡೆದರೇನೇ ಗುರಿಗಾರಿಕೆಯ ಚಿನ್ನದ ಪದಕ ಸಾಧ್ಯ! ಎಂಥ ವಿಡಂಬನೆ!

ಚೀನದಲ್ಲಿಯಂತೂ ಶಾರೀರಿಕ ಚಪಲತೆ ರಾಜಕೀಯ ಚಾಪಲ್ಯದೊಂದಿಗೆ ಹೆಚ್ಚು ನಿಕಟವಾಗಿ ಹೊಂದಿಕೊಳ್ಳುವಂತೆ ನೋಡಿಕೊಳ್ಳಲಾಗುತ್ತದೆ. ಅಲ್ಲಿಯ ಪಿಂಗ-ಪಾಂಗ ಪಂದ್ಯಗಳನ್ನು ಕೂಡ ನೀತಿಯ ಗತ್ತುಗಾರಿಕೆಗೆ ಹೇಗೆ ಬಳಸಿಕೊಳ್ಳಲಾಯಿತೆಂಬುದು "ಪಿಂಗು ಪಾಂಗ ಡಿಪ್ಲೊಮಸಿ" ಪದಪ್ರಯೋಗದಿಂದಲೇ ಸಿದ್ಧವಾಯಿತು. ಚೀನೀ ಬೆಂಬಲ ಟೇನಿಸ್ (ಪಿಂಗ್-ಪಾಂಗ್) ತಂಡಕ್ಕೆ ಅಮೇರಿಕೆಯಲ್ಲಿ ಸಂಧಿಸುವಾಗ ಕೆಲವು ಸಲ ಬುದ್ಧ್ಯಾ ಸೋಲಲಿಕ್ಕೆ ಸೂಚನೆ ಕೊಡಲಾಗಿತ್ತು! ಅಮೇರಿಕೆಗೆ, ಯಜಮಾನ ರಾಷ್ಟ್ರಕ್ಕೆ, ಸ್ವಗೃಹದಲ್ಲಿಯೆ ಅತಿಥಿಯಿಂದ ಪೂರ್ತಿ ಸೋಲು! ತಿಂದು ಪತ್ತುಗೇಡು ಆಗಬಾರದೆಂದು! ಇನ್ನೂ ದಿನಗಳೆದಂತೆ ಈ ಪಂದ್ಯಗಳಿಂದ ತಮಗೆ ಆಗದ ಸೇರದ ರಾಷ್ಟ್ರದ ತಂಡಗಳನ್ನು ಹೊರ ತಳ್ಳಲು ಇತರ ತಂಡಗಳು ಆಗ್ರಹ ಹಿಡಿಯಬಹುದು. ಇಸ್ರಾಯಿಲ್-ಅರಬರ ವೈರ ಈಗ ಸ್ಫೋಟವಾಗಿಯೇ ಬಿಟ್ಟಿದೆ. ಅರಬ ಗತ್ತುಗಾರರು ತಮ್ಮ ವೈರಿಗಳ ತಂಡವನ್ನು ಮಾತ್ರವಲ್ಲ ಒಲಿಂಪಿಕ್‌ದ ಸತ್ವವನ್ನೆ ಕೊಂದರು. ಇನ್ನು ಕೆಂಪು ಚೀನ ತೈವಾನನ್ನು ತಳ್ಳಬೇಕೆನ್ನಬಹುದು. ಪಾಕಿಸ್ತಾನ ಬಾಂಗ್ಲಾ ದೇಶದ ತಂಡಕ್ಕೆ ಸ್ಥಾನ ಸಿಗಬಾರದೆಂದು ಕೂಗಬಹುದು. ಕ್ರಮೇಣ ಒಲಿಂಪಿಕ್ ಅಂತರಾಷ್ಟ್ರೀಯವು ತನ್ನ ಅರಾಜಕೀಕರಣದ ಭಂಗಿಯನ್ನು ಬಿಡಬೇಕಾಗ ಬಹುದು.

ಕಳೆದ ೨೦ ವರ್ಷ ಶ್ರೀ ಆವೆರಿ ಬ್ರಾಂಡೇಜ ಈ ಕಮಿಟಿಯ ಅಧ್ಯಕ್ಷರಾಗಿ ಅತ್ಯಂತ ಹೆಮ್ಮೆಯಿಂದ ಬಿಗುಮಾನದಿಂದ ಈ ಶುದ್ಧ ಕ್ರೀಡಾ ಪ್ರವೃತ್ತಿಯ ಬಿಸಿಲುಗುದುರೆಯನ್ನೇರಿ ಬಂದಿದ್ದಾರೆ. ರಾಜಕಾರಣ ಮತ್ತು ದೊಡ್ಡ ರಾಷ್ಟ್ರಗಳ ಹಣದ ಆಮಿಷ ಇವೆರಡರಿಂದಲೂ ಕ್ರೀಡಾ ಭಾವನೆಯನ್ನು ದೂರಕ್ಕೆ ಮೇಲಕ್ಕೆ ಇಡುವ ಪವಿತ್ರ ಕನಸನ್ನು ಎದೆಗೆ ಅವಚಿಕೊಂಡು ಹೆಣಗಿದ್ದಾರೆ. "ಒಲಿಂಪಿಕ್ ವ್ಯಕ್ತಿಗಳ ನಡುವಿನ ಸ್ಪರ್ಧೆ ಹೊರತು ರಾಷ್ಟ್ರಗಳ ನಡುವೆ ಅಲ್ಲ!" ಎಂದು ಅವರು ಮತ್ತೆ ಮತ್ತೆ ಸಾರುತ್ತ ಬಂದಿದ್ದಾರೆ. ಆಟಗಾರರು ಹೆಚ್ಚು ವೇಗದಿಂದ ಹೆಚ್ಚು ದೂರ ಓಡಬೇಕು ಹೆಚ್ಚು ಬಲಿಷ್ಠರಾಗಬೇಕು" ಎಂಬುದೊಂದೇ ಅವರ ಗುರಿ.

ಆದರೆ ಈ ಸಲದ ಮ್ಯೂನಿಕ್ ದುರಂತ ಬ್ರಾಂಡೇಜರ ಕೊನೆಯ ಸೋಲು. ಈ ದುರಂತದ ನಾಂದಿ ರೊಡೇಶಿಯಾದ ಬಹಿಷ್ಕಾರದಲ್ಲಿ. ಕೊನೆಯ ರುದ್ರ ದೃಶ್ಯ ಇಸ್ರಾಯಿಲ್ ಆಟಗಾರರ ಕೊಲೆಯಲ್ಲಿ. ಈ ನಿಮಿತ್ತದ ರಕ್ತದ ಓಕುಳಿಯಾಟದಲ್ಲಿ.

ಅವೆರಿ ಬ್ರಾಂಡೇಜ ಸದ್ಯವೇ ನಿವೃತ್ತರಾಗುವರು. ಅವರೊಂದಿಗೆ ಅವರು ವ್ಯರ್ಥವಾಗಿ ಹೆಣಗಿ ಸಾಧಿಸಲು ಶ್ರಮಿಸಿದ ನಿರ್ಲಿಪ್ತ ಕ್ರೀಡಾಭಾವದ ಆದರ್ಶವೂ ಅಸ್ತಂಗತವಾಗುವದು. ಮುಂದಿನ ಒಲಿಂಪಿಕ್ ಪಂದ್ಯಗಳ ಸ್ವರೂಪದ ನೆರಳು ಮೊನ್ನಿನ ನೆತ್ತರದ ಮಡುವುಗಳಲ್ಲಿಯೆ ಕಾಣಿಸಿಕೊಂಡಿದೆ.

●

('ಉದಯವಾಣಿ' ೧೯೭೨)

# ಪತ್ರಿಕಾ ವ್ಯವಸಾಯವನ್ನು ಬಾಧಿಸುವ ಪಂಚ ಭೂತಗಳು

ಪತ್ರಿಕೋದ್ಯಮವನ್ನು ಬಾಧಿಸುವ ಪಂಚಭೂತಗಳು ಯಾವವು? ಮುಂಬಯಿಯ ದೈನಿಕ 'ನವಾಕಾಳ' ಪತ್ರಿಕೆಯ ಸಂಪಾದಕ ಶ್ರೀ ನೀಲಕಂಠ ಖಾಡೀಲಕರರು ಪುಣೆಯಲ್ಲಿ ವಸಂತ ವ್ಯಾಖ್ಯಾನ ಮಾಲೆಯಲ್ಲಿ ಈ ಪ್ರಶ್ನೆಯನ್ನೆತ್ತಿಕೊಂಡು ಆ ಭೂತ ಬಾಧೆಯ ಮೇಲೆ ಚೆನ್ನಾಗಿ ಬೆಳಕು ಬೀರಿದರು. ಅದರ ಸಾರಾಂಶವನ್ನೆ ಇಲ್ಲಿ ಕೊಡಲಾಗಿದೆ.

ನಾವು ದಿನಪತ್ರಿಕೆಗಳಲ್ಲಿ ದಿನದ ಸುದ್ದಿ ಓದುತ್ತೇವೆ. ನಿನ್ನೆಯ ಅಗ್ರಲೇಖ ಇಂದಿನ ನಮ್ಮ ರಾಜಕೀಯ ಬುದ್ಧಿವಂತಿಕೆ ಆಗುತ್ತದೆ. ಕೆಲ ಸಲ ಸುದ್ದಿಯ ಕೆಳಗೂ ಒಳಗೂ ಹಿಂದೂ ನಾವು ಓದುತ್ತೇವೆ. ಅದರಿಂದ ನಮ್ಮದೇ ಅಭಿಪ್ರಾಯಗಳನ್ನು ಕಟ್ಟುತ್ತೇವೆ. ಆ ಬಗೆಗೆ ಹರಟೆ ಕೊಚ್ಚುತ್ತೇವೆ.

ಇಷ್ಟೆಲ್ಲ ಆಗಿಯೂ ಒಂದು ಪತ್ರಿಕೆ ಹೇಗೆ ಬದುಕುತ್ತದೆ, ಅದರ ಧೋರಣೆ-ಧಾರಣೆಗಳನ್ನು ಯಾರು ಹೇಗೆ ರೂಪಿಸುತ್ತಾರೆ? ಈ ಬಗೆಗೆ ನಮಗೆ ದೀಪದ ಬುಡದಷ್ಟೇ ಕತ್ತಲೆ. (ವಿದ್ಯುತ್ ದೀಪವಿದ್ದರೆ ಆ ಕತ್ತಲೆ ಕೆಳಗಲ್ಲ ಮೇಲೆ!)

ಶ್ರೀ ಖಾಡೀಲಕರರು ವರ್ಣಿಸಿದಂತೆ ಪಾರತಂತ್ರ್ಯದ ಕಾಲದಲ್ಲಿ ವೃತ್ತಪತ್ರಿಕೆಗಳು ಸ್ವತಂತ್ರವಿದ್ದವು. ಆದರೆ ಸ್ವಾತಂತ್ರ್ಯ ಬಂದನಂತರ ಪತ್ರಿಕೆಗಳು ಪರತಂತ್ರವಾಗಹತ್ತಿದೆ! ಬ್ರಿಟಿಶ್ ಆಳರಸರನ್ನು ಟೀಕಿಸುವ ನಿರ್ಭಯ ನಿರ್ಭಿಡೆಯ ವೃತ್ತಿ ಇಂದು ಉಳಿದಿಲ್ಲ- ಅಂದರೆ ಸರಕಾರದ ಟೀಕೆ ನಡೆಯುತ್ತದೆ. ಆದರೆ ಅದರ ಇಂಗಿತ ಬೇರೆಯೇ ಇರುತ್ತದೆ.

ಈ ವಾತಾವರಣದಲ್ಲಿ ಪತ್ರಿಕೆಗಳನ್ನು ಬಾಧಿಸಿದ ಮೊದಲನೆಯ ಭೂತವು ಬಂಡುವಾಳದಾರ. ವೃತ್ತಪತ್ರ ವ್ಯವಸಾಯದಲ್ಲಿ ಇಂದು ಬಂಡುವಾಳದಾರ ನುಗ್ಗಿ ನಿಂತಿದ್ದಾನೆ. ಅವನ ಉದ್ದೇಶವೇನು? ಸರಕಾರದ ಮೇಲೆ ಒತ್ತಾಯ ತರುವದು. ಮತ್ತು ಜನತೆಯಲ್ಲಿ ದಿಗ್ಭ್ರಮೆಯುಂಟು ಮಾಡುವುದು. ಇದಕ್ಕಾಗಿ ಬಂಡುವಾಳದಾರನಿಗೆ ಪ್ರಸಿದ್ಧಿಯ ಒಂದು ಸಾಧನ ಪ್ರಚಾರದ ಒಂದು ಆಯುಧ ಬೇಕು. ಪತ್ರಿಕೆಯ ಉದ್ದಿಮೆಯಲ್ಲಿ ಕನಿಷ್ಠ ೨೫ ಲಕ್ಷ ರೂಪಾಯಿ ತೊಡಗಿಸಿದ ಈ ಭೂಪತಿ ಸುಮ್ಮನಿರುವದು ಸಾಧ್ಯವೇ? ಇಂದು ಒಂದು ದಿನಪತ್ರಿಕೆ ನಡೆಯಿಸಲು ಕನಿಷ್ಠ ೨೫ ಲಕ್ಷ ರೂಪಾಯಿ ಚೆಲ್ಲಬೇಕು. ಮತ್ತು ಅದನ್ನು ಕಳೆದುಕೊಳ್ಳಲಿಕ್ಕೂ ಸಿದ್ಧವಿರಬೇಕು. ಈ ಕೂವತ್ತು ಬಂಡುವಾಳದಾರನಿಗಲ್ಲದೆ ಇನ್ನಾರಿಗೆ? ಬಡ ಸಂಪಾದಕನ ಸಂಪಾದನೆಯು ಬಡತನದಲ್ಲಿ ಒಂದು ವ್ಯಾಯಾಮ. ಹಿರಿಯ ಸಂಪಾದಕರ ಬಾಯಿಗೆ ನಾಣ್ಯದ ತೊಬರಿ.

ಅಷ್ಟೊಂದು ಹಣ ಹಾಕಿದ ಮೇಲೆ ಅದರ ಯೋಗ್ಯ ಅಯೋಗ್ಯ ಪ್ರತಿಫಲ ಗಿಟ್ಟಿಸಿಕೊಳ್ಳದೆ ಬಿಡುವದು ಬಂಡುವಾಳಗಾರಿಕೆಯ ಧರ್ಮವಲ್ಲ. ಈ ಅನರ್ಥದ ಮುನ್‌ಸೂಚನೆ ಲೋಕಮಾನ್ಯ ತಿಲಕರು ೧೮೮೧ರಲ್ಲಿಯೇ ಕೊಟ್ಟಿದ್ದುಂಟು. ಅವರು ಅಂದು 'ಕೇಸರಿ' ಪತ್ರಿಕೆಯ ಪ್ರಥಮ ಅಗ್ರಲೇಖದಲ್ಲಿಯೇ ಬರೆದಿದ್ದರು. "ಪತ್ರಿಕಾ ವ್ಯವಸಾಯಕ್ಕೆ ಸಂಬಂಧವಿಲ್ಲದ ಮಂದಿ ಮುದ್ರಣಾಲಯಗಳನ್ನು ತೆರೆದು ಪತ್ರಿಕೆಗಳನ್ನು ನಡೆಯಿಸಬಹುದು"-ಎಂದಿದ್ದರು ಲೋಕಮಾನ್ಯರು.

ಪತ್ರಿಕಾ ವ್ಯವಸಾಯಕ್ಕೆ ಬಾಧಕವಾದ ಎರಡನೆಯ ಭೂತ ತೀರ ಹೊಸತು- ಅದು ರದ್ದಿಯ ತಂತ್ರ! ಹೆಚ್ಚು ಪುಟ ಹಾಕಿ ಸಂಚಿಕೆ ತೆಗೆಯುವದು. ಆ ಸಂಚಿಕೆಯನ್ನು ಓದುಗನು ರದ್ದಿಯ ಬೆಲೆಯನ್ನು ಗಮನದಲ್ಲಿ ಇಟ್ಟುಕೊಂಡು ಕೊಂಡುಕೊಳ್ಳುವನು. ಸಂಚಿಕೆಗಳು ಮಾರಿಹೋಗದಿದ್ದರೂ ಅವು ವಿಕ್ರಿಯಾಗಿವೆಯೆಂದು ಲೆಕ್ಕಪತ್ರಗಳಲ್ಲಿ ಕಾಣಿಸುವದು ಮತ್ತು ಪತ್ರಿಕಾ ಕಚೇರಿಯ ರದ್ದಿಯನ್ನು ಏಜಂಟನೇ ಮಾರಬೇಕೆಂದು ಗೊತ್ತುಮಾಡಿಬಿಟ್ಟರೆ - ಈ ರದ್ದಿಯ ತಂತ್ರ ಸಿದ್ಧವಾಗುತ್ತದೆ. ಈ ತಂತ್ರದಿಂದ ಕಾಗದದ ಕಳ್ಳಪೇಟೆ ನಡೆಯಿಸಲಿಕ್ಕೂ ಅನುಕೂಲ. ಅಲ್ಲದೆ ಅತಿ ದೊಡ್ಡ ಪ್ರಸಾರದ ಪತ್ರಿಕೆಯೆಂದು ಪ್ರಸಿದ್ಧಿ-ಪ್ರಶಸ್ತಿಗಳ ದೊಡ್ಡಸ್ತಿಕೆ ಬೇರೆ!

ಇಂದು ಧ್ಯೇಯವಿಲ್ಲ. ದೃಷ್ಟಿ ಇಲ್ಲ. ಪತ್ರಿಕೆಗಳು ರದ್ದಿಯ ತಂತ್ರದ ಬಲದಿಂದ ಯಶಸ್ವಿಯಾಗಿ ನಡೆಯುತ್ತದೆ!

ಬಿಳಿಯ ಹಾಳೆಯ ಮೇಲೆ ಪತ್ರಿಕಾಕರ್ತ ಗೀಚಿದೊಡನೆ ಅದು ರದ್ದಿ ಆಯಿತು. ಬಿಳಿ ನ್ಯೂಜ್‌ಪ್ರಿಂಟಿನ ಬೆಲೆ ೧॥ ರೂಪಾಯಿಗೆ ೧ ಕಿಲೋ. ಪತ್ರಿಕೆಗಳ ರದ್ದಿಯು ೧। ರೂಪಾಯಿಗೆ ೧ ಕಿಲೊದಂತೆ ಮಾರುತ್ತದೆ. ಪತ್ರಿಕಾ ವಿಕ್ರಯದ ಮತ್ತು ಪ್ರಸಾರದ ಅಂಕಿ-ಸಂಖ್ಯೆ ಹೆಚ್ಚಿಸುವದಕ್ಕಾಗಿ ಬಂಡುವಾಳಗಾರರು ಈ ರದ್ದಿಯ ತಂತ್ರದ ಪ್ರಯೋಗವನ್ನು ಧಾರಾಳವಾಗಿ ಮಾಡುತ್ತಾರೆ.

ಪತ್ರಿಕೆಗಳನ್ನು ಕಾಡುವ ಮೂರನೆಯ ಭೂತ ಜಾಹಿರಾತುಗಳು ಮತ್ತು ಏಜೆಂಟರು. ಅನೇಕ ಮಾಸಪತ್ರಿಕೆಗಳು ಕೇವಲ ಇಂಥ ಜಾಹಿರಾತುಗಳಿಗಾಗಿಯೇ ನಡೆಯುತ್ತವೆ.

ಪತ್ರಿಕಾ ಪ್ರಪಂಚದಲ್ಲಿ ರಿಂಗಣ ಹಾಕುವ ನಾಲ್ಕನೆಯ ಭೂತ ರಾಜಕೀಯ ಧುರೀಣರದು. ಈ ಧುರೀಣರಿಗೆ ಪತ್ರಿಕೆಗಳಲ್ಲಿ ಆದಷ್ಟು ಹೆಚ್ಚು ಪ್ರಸಿದ್ಧಿ ಬೇಕು. ಅವರ ಮೇಲೆ ಟೀಕೆ ಟಿಪ್ಪಣೆ ಬಂದರೆ ಏನೇನೂ ಸಹಿಸಲಾಗದು. ಅಲ್ಲದೆ ಅವರ ವಿರೋಧಿಗಳ ಸುದ್ಧಿ-ಪ್ರಸಿದ್ಧಿಯೂ ಅವರು ಕೃಪಾಪೋಷಣೆ ಕೊಡುವ ಪತ್ರಿಕೆಗಳಲ್ಲಿ ಬರಕೂಡದು. ಪತ್ರಿಕೆಯ ಸಂಪಾದಕ ಸಂಚಾಲಕರು ಈ ಕಡ್ಡಾಯಕ್ಕೆ ಮಣಿಯದಿದ್ದರೆ ಗುಂಡ ಪುಂಡರನ್ನು ಹಾಕಿ ಅವರನ್ನು ಚೆನ್ನಾಗಿ ಹೊಡೆಯಿಸುವದೂ ಈ ಭೂತಾಟಿಕೆಯ ಒಂದು ತಂತ್ರ!

ಇನ್ನು ಸುಪ್ರಿಂ ಕೋರ್ಟು ಪತ್ರಿಕಾ ವ್ಯವಸಾಯದ ಬೆನ್ನಿಗೆ ನಿಂತ ಐದನೆಯ ಭೂತ. ಟೈಮ್ಸ್‌ದಂಥ ದೊಡ್ಡ ಪತ್ರಿಕೆಗಳು ವರಿಷ್ಠ ನ್ಯಾಯಾಲಯದಲ್ಲಿ ಹೋಗಿ ತಮ್ಮ ಪುಟ ಸಂಖ್ಯೆ ಬೆಳೆಯಿಸಿಕೊಳ್ಳಬಲ್ಲವು. ಆದರೆ ಸಣ್ಣಪತ್ರಿಕೆಗಳ ಹಣದ ಚೀಲ ಅಲ್ಲಿಯ ತನಕ ನಿಲುಕುವಷ್ಟು ಉದ್ದವಿರುವದಿಲ್ಲ. ಅವು ತೆಪ್ಪಗೆ ಕೂತು ಬಿಡಬೇಕಾಗುತ್ತದೆ. ಒಂದು ದೊಡ್ಡ ಪತ್ರಿಕೆಯ ಹಕ್ಕಿನ ರಕ್ಷಣೆ ಮಾಡುವಾಗ ಅನೇಕ ಸಣ್ಣ ಪತ್ರಿಕೆಗಳ ಹಕ್ಕುಗಳು ಕಾಲಡಿಗೆ ಬೀಳುತ್ತವೆ. ಸ್ವತಂತ್ರ ಭಾರತದಲ್ಲಿ ನ್ಯಾಯದ ಕಣ್ಣಿಗೆ ಎಲ್ಲರೂ ಸಮಾನರು. ನ್ಯಾಯದೇವತೆಯ ಕಣ್ಣಿಗಂತೂ ಪಟ್ಟಿಯೇ ಕಟ್ಟಿದೆ. ಆದರೆ ನ್ಯಾಯಾಧೀಶರ ಕಣ್ಣಿಗೆ ತಾರತಮ್ಯ ತೋರದೇ ಹೋದೀತೆ?

ಇದೆಲ್ಲ ಭೂತಬಾಧೆಯ ಪರಿಣಾಮವೇನು? ಇಂದು ಪತ್ರಿಕೆಗಳ ಪ್ರಸಾರ ಬೆಳೆದಿದೆ. ಆದರೆ ಪ್ರಭಾವ ಕಡಿಮೆಯಾಗಿದೆ. ಪತ್ರಿಕೆಗಳ ಮೇಲಿನ ಜನತೆಯ ವಿಶ್ವಾಸವು ಹಾರಿಹೋಗಿದೆ.

ಇಂದು ಪತ್ರಿಕಾ ವ್ಯವಸಾಯ ನೀರಸವಾಗಹತ್ತಿದೆ. ಕಿವಿಗಡಚಿಕ್ಕುವಂತಾಗಿದೆ. ಅಥವಾ ಬೇಸರದ್ದಾಗಿದೆ. ವ್ಯವಸಾಯದಲ್ಲಿ ಗುಣವತ್ತತೆಯ ಮೇಲೆ ನಡೆಯುವ ಸ್ಪರ್ಧೆ ಮುಗಿಯಲು ಬಂದಿದೆ.

ಸತ್ಯದಷ್ಟು ಬೆರಗಿನ ದಿಗಿಲಿನ ಸುದ್ದಿ ಬೇರೆ ಯಾವದೂ ಇಲ್ಲ- ಎಂಬ ಸಂಗತಿಯನ್ನೇ ಸುದ್ದಿಗಾರರು ಮರೆತಂತೆ ಆಗಿದೆ. ಸುದ್ದಿಗಾರ ಸದ್ದುಗಾರನಾಗಬಾರದು. ಸುಳ್ಳುಗಾರನೂ ಆಗಬಾರದು. 'ಗಾರ'ನಿಗಿಂತ ಸುದ್ದಿಗೇ ಪ್ರಾಧಾನ್ಯವಿರಬೇಕು. ಕೊನೆಗೂ ಸುದ್ದಿಗಾರ ಹೇಗೇ ಇರಲಿ ಈ ಪಂಚ ಭೂತಗಳು ಪತ್ರಿಕಾ ವ್ಯವಸಾಯದಲ್ಲಿ ಇನ್ನೂ ಸದಾ ಜಾಗೃತವಾಗಿ ಊರ್ಜಿತವಾಗಿ ಉಳಿಯತಕ್ಕವೇ! ಅಂದಾಗ ಈ ಭೂತಾಟಿಕೆಯಿಂದ ಪತ್ರಿಕಾಕರ್ತರ ಬಿಡುಗಡೆಗೆ ಮಂತ್ರ ಯಾವದು? ಮಾಂತ್ರಿಕರು ಯಾರು?

●

('ಜನಸೇವಕ' ೧೯೬೨)

# ದಲಿತ ವರ್ಗದ ವಿಮೋಚನೆ

ಹರಿಯಾನಾದಲ್ಲಿ ಸುಮಾರು ೨೫,೦೦೦ ಹರಿಜನ ಕುಟುಂಬಗಳನ್ನು ಬಲಾತ್ಕಾರದಿಂದ ಗೂಳೆ ಎಬ್ಬಿಸಿ ಅವರ ಹೊಲ-ಮನೆಗಳನ್ನು ಕಸಿದುಕೊಳ್ಳಲಾಗಿತ್ತು. ಅದನ್ನು ಕೇಂದ್ರ ಸರಕಾರವು ಈ ದಲಿತ ವರ್ಗದ ದುರ್ದೈವಿಗಳಿಗೆ ತಿರುಗಿ ಕೊಡಿಸಲು ಕ್ರಮ ಕೈಗೊಳ್ಳಬೇಕೆಂದು ಲೋಕಸಭೆಯಲ್ಲಿ ಜನಸಂಘದ ನಾಯಕ ಶ್ರೀ ಅಟಲ ಬಿಹಾರಿ ವಾಜಪೇಯಿಗಳು ದನಿ ಎತ್ತಿದರು. ಇದು ಅಭಿನಂದನೀಯ ವಿಷಯವೇ ಸರಿ. "What man has made of man" ಎಂದು ಕವಿ ವರ್ಡ್ಸ್‌ವರ್ಥ್ ವ್ಯರ್ಥವಾಗಿಯೇ ಮರುಗಿದ್ದನು. ಹಿಂದೂ ರಾಷ್ಟ್ರಕರು ಹಿಂದೂ ರಾಷ್ಟ್ರಕರನ್ನು ಇಷ್ಟು ಹೀನಾಯವಾಗಿ ಹೇಯವಾಗಿ ಕಾಣುತ್ತಾರೆಂಬುದು ಪ್ರಪಂಚದಿದುರಿಗೆ ಭಾರತಕ್ಕೆ ಒಂದು ಬರೆಯಿಟ್ಟ ಕಲಂಕ. ಅದನ್ನು ಹೋಗಲಾಡಿಸುವಲ್ಲಿ ಸರಕಾರದೊಂದಿಗೆ ಸರ್ವ ರಾಜಕೀಯ ಪಕ್ಷಪಂಗಡಗಳೂ ಭಾರತೀಯ ಸಂಘಟನೆಯನ್ನು ಹಿಂದೂ ಸಂಸ್ಕೃತಿಯ ತಳಹದಿಯ ಮೇಲೆ ಅಥವಾ ಹಿಂದೂ ಸಂಘಟನೆಯನ್ನು ಭಾರತೀಯ ಸಂಸ್ಕೃತಿಯ ತಳಹದಿಯ ಮೇಲೆ ಕಟ್ಟಲು ಕಂಕಣಬದ್ಧರಾದ ಜನಸಂಘೀಯ ಧುರೀಣತ್ವದೊಂದಿಗೆ ಇತರ ರಾಜಕೀಯ ಧುರೀಣರೂ ಸಕ್ರಿಯವಾಗಿ ಮಾನವೀಯತೆಯ ಪಾತಳಿಯಲ್ಲಿ ಸಹಕರಿಸಿದರೆ ನಮ್ಮ ಸ್ವ-ರಾಜ್ಯದ ಸತ್ವಕ್ಕೆ ನಿಜವಾದ ಸತ್ವ ತುಂಬಿದಂತೆ ಆಗುವುದು. ಈ ಕಾರ್ಯದಲ್ಲಿ ಸಮಾಜಿಕ ನ್ಯಾಯದ ತಗಾದೆಯೇ ಮೇಲಾಗಬೇಕು. ಆರ್ಥಿಕ ವೈಷಮ್ಯ, ಜಾತಿ ದ್ವೇಷ ತ್ವೇಷಗಳ ಉಚ್ಚಾಟನೆಯೆ ಮುಖ್ಯ ಕೂಗಾಗಬೇಕು.

ಕಳೆದ ತಿಂಗಳ ಎರಡನೆಯ ವಾರದಲ್ಲಿ ಪರಿಶಿಷ್ಟ ವರ್ಗಗಳ ಆಯೋಗದ ಅಧ್ಯಕ್ಷರ ವರದಿ (೧೯೭೦-೭೧) ರಾಜ್ಯಸಭೆಯಲ್ಲಿ ಚರ್ಚೆಗೆ ಬಂದಿತು. ಆ ವರದಿ ಒದರಿ ಹೇಳುವ ಸೊಲ್ಲು ಒಂದೇ-ಹರಿಜನ ಗಿರಿಜನರ ಅಭಿವೃದ್ಧಿ ಕಾರ್ಯದ ಪ್ರಗತಿ ತೀರ ಮಂದವಾಗಿದೆ. ಆಗಬೇಕಾದ ಕೆಲಸ ಸಾಕಷ್ಟು ಆಗಿಲ್ಲ. ಆದ ಕೆಲಸವೂ ಸರಿಯಾಗಿ ಚೆನ್ನಾಗಿ ಆಗಿಲ್ಲ. ಇದು ಎರಡು ವರ್ಷ ಹಿಂದಿನ ಸ್ಥಿತಿಗತಿಯ ವೃತ್ತಾಂತ. ಆದರೂ ಅದರಿಂದ ಖಚಿತವಾಗುವುದೇನೆಂದರೆ ಈ ದೀನದಲಿತ ವರ್ಗಗಳ ವಿಕಾಸಾಭಿವೃದ್ಧಿಗಾಗಿ ವೆಚ್ಚವಾದ ಕೋಟ್ಯಂತರ ರೂಪಾಯಿಗಳ ಮೊತ್ತದ ಪ್ರಮಾಣದಲ್ಲಿ ಪ್ರತಿಫಲ ಸಿಗಲಿಲ್ಲ! ಮಾಡಿದ್ದೆಲ್ಲ ನೀರಿನಲ್ಲಿ - ಕಣ್ಣೀರಿನಲ್ಲಿ! - ಹೋಮ.

ಈ ವರದಿಯಿಂದ ಮನಗಾಣುವ ಪಾಠ ನಾನು ಆರಂಭದಲ್ಲಿಯೇ ಎತ್ತಿ ಆಡಿದ ಮಾತು. ಈ ಹರಿಜನೋದ್ಧಾರ ಹಿಂದುಳಿದವರ ಮುನ್ನಡೆ ಕೇವಲ ಸರಕಾರದ ಹೊಣೆಯಾಗಿ ಉಳಿದರೆ ಪ್ರಯೋಜನವಿಲ್ಲ. ಇದಕ್ಕೆ ಕೇಂದ್ರ ರಾಜ್ಯ ಸರಕಾರಗಳೂ ಸ್ವಯಂಕಾರ್ಯಕಾರಿ ಸಂಘಟನೆಗಳೂ ಕೂಡಿಯೆ ಮನಮುಟ್ಟಿ ದುಡಿಯಬೇಕು. ಇಲ್ಲಿ ನಾವು ಮನಗಾಣಬೇಕಾದ ಇನ್ನೊಂದು ಸೂಕ್ಷ್ಮ ಅಂಶವಿದೆ. ಇಂದಿನ ಕಾಲಮಾನದಲ್ಲಿ 'ಉದ್ಧಾರ'ದ ಕಲ್ಪನೆಗೆ ಏನೂ ಎಡೆಯಿಲ್ಲ. ಇನ್ನೇನೂ ಅಲ್ಲದಿದ್ದರೂ ಸ್ವಾಭಿಮಾನ ಜಾಗೃತವಾದ ಇಂದಿನ ಪರಿಶಿಷ್ಟ ವರ್ಗದ ಯುವ ಜನಾಂಗವು ಶಿಷ್ಟ ವರ್ಗದ ಈ ಉದಾರಾಶ್ರಯದ ಅಹಂಮಾನ್ಯ ಅನುಕಂಪೆಯ ನಿಲುಮೆಯನ್ನು, ನೋಟವನ್ನು ಎಂದೆಂದೂ ಸಹಿಸದು. ಪರಿಹಾರ ಮುಂದೆ ಬಿದ್ದಂತೆ ಪರಿತಪಿಸುವವರ ಬೇಕು ಬಯಕೆ ಬೇಡಿಕೆಗಳ ತೀವ್ರತೆ ಅವುಗಳನ್ನು ಪಡೆಯಬೇಕೆಂಬ ಹಟದ ಉಗ್ರತೆ ಹೆಚ್ಚುತ್ತಲೇ ಹೋಗುತ್ತದೆ. ಮಾನವನನ್ನು ಮಾನವನಾಗಿ ಗುರುತಿಸುವ ಗೌರವಿಸುವ ಹೆಜ್ಜೆಯಿಂದ ಹಿಂಜರಿಯುವ ಅದಕ್ಕೆ ಹಿಂದೆ ಮುಂದೆ

ನೋಡಲು ಹಚ್ಚುವ ಎಂಥ ಪ್ರಜ್ಞಾವಾದವೂ ಮಾನವರಾಗಿ ತಮ್ಮ ಅಸ್ತಿತ್ವ ಅಸ್ಮಿತೆಗಳನ್ನು ಸ್ಥಾಪಿಸಲು ಹೊರಟವರಿಗೆ ಒಂದು ಅಸಹ್ಯ ಅವಹೇಳನೆಯೇ ಆಗುತ್ತದೆ. ಮೇಲ್ವರ್ಗದವರ ಪ್ರಭಾವದಲ್ಲಿ ಸಾಗುವ ಪಕ್ಷೀಯ ರಾಜಕೀಯ, ಅದರ ಶ್ರೇಷ್ಠ ಸತ್ತೆ, ಅದರ ಧಾರಣೆ-ಧೋರಣೆ ಅವುಗಳಿಗೆ ಸರಿಹೋಗದ ಆಚರಣೆ ಅದನ್ನು ಸಮರ್ಥಿಸುವ ಎರಡು ನಾಲಿಗೆಯ ಚರ್ಚಾ ಚಾತುರ್ಯ ಒಂದು ಕಡೆಗೆ, ಸಿಕ್ಕಷ್ಟು ಸ್ವಾತಂತ್ರ್ಯ ಸದವಕಾಶಗಳಿಂದಲೇ ತಮ್ಮ ಆಶೆಆಕಾಂಕ್ಷೆಗಳು ತೀವ್ರವಾಗಿ ಕೇವಲ ನ್ಯಾಯಕ್ಕಾಗಿ ಮಾನವೀಯ ಸಮತೆ ಬಂಧುತೆಗಳಿಗಾಗಿ ತಲ್ಲಣಿಸುವ ತಾಳ್ಮೆಗೆಟ್ಟ ದಲಿತ ತರುಣ ಪೀಳಿಗೆ ಇನ್ನೊಂದು ಕಡೆಗೆ!

ಈ ನಡುವೆ ನಮ್ಮ ಸಂಸತ್ತಿನಲ್ಲಿಯ ಚರ್ಚೆ ಸಾಥೀ ಎಂ.ಜಿ.ಗೋರೆ ಅಂದಂತೆ ಬರೆ ಮೊಸಳೆಗಳ ಕಣ್ಣೀರ ಕೋಡಿಯಾಗಿದ್ದರೆ ಆಶ್ಚರ್ಯ ಇನ್ನೊಂದಿಲ್ಲ! ಕೇಂದ್ರ ಗೃಹಮಂತ್ರಿ ಶ್ರೀ ಉಮಾಶಂಕರ ದೀಕ್ಷಿತರೆಂದರು: ಹೊಸದಾಗಿ ಸ್ಥಾಪಿತವಾದ ಔದ್ಯಮಿಕ ಸಂಘಟನೆಗಳಲ್ಲಿ ಕೂಡ ಕೆಲಸ ಒದಗಿಸುವುದರ ಕುರಿತಾದ ಸರಕಾರಿ ನೀತಿಯನ್ನು ಅನುಸರಿಸಲಾಗುವುದಿಲ್ಲ - ಇದು ನಾಚಿಕೆಗೇಡು. ( A matter of shame). ಸರಕಾರಿ ಇಲಾಖೆಗಳಲ್ಲಿಯೂ, ಮೇಲ್ವರ್ಗಗಳ ಸಂಖ್ಯಾಬಲದ ಶೇಕಡಾ ಪ್ರಮಾಣಕ್ಕೆ ವಿಪರೀತ ಹೆಚ್ಚಿನ ಪ್ರಮಾಣದಲ್ಲಿ ನೌಕರಿ ಚಾಕರಿಗಳ ಸೌಲಭ್ಯ ಈ ಬಲಿಷ್ಠರು ಗಿಟ್ಟಿಸಿಕೊಂಡಿದ್ದಾಗಿದೆ.

ಅರ್ಹತೆ ಮುಖ್ಯ; ಬರೆ ಜಾತೀಯತೆಯ ಪ್ರಾತಿನಿಧ್ಯ ಪ್ರಮಾಣ ಸಲ್ಲದು ಎಂಬ ಧೂರ್ತ ವಿವೇಕವನ್ನು ಪಟ್ಟಭದ್ರರು ಪಟಪಟನೆ ಪಠಿಸುತ್ತಾರೆ. ಆದರೆ ಅರ್ಧ ಶತಮಾನ ಹಿಂದೆ ಈ ವರ್ಗಗಳು, ಇಂದಿನ ಈ ಮೇಲ್ವರ್ಗದ ಸರಕಾರಿ ನೌಕರರ ತಾತ ಮುತ್ತಾತರು ಆಯಾ ಇಲಾಖೆಗಳಲ್ಲಿ ಸ್ವಜನರ ಸರಬರಾಜಿನ ಗುತ್ತಿಗೆ ಹಿಡಿದಾಗ ಆ ಮಹಾಶಯರಿಗೆಲ್ಲ ಅಂಥ ವಿಶೇಷ ಅರ್ಹತೆ ಏನಿತ್ತು? ಆದರೆ ಈ ಪ್ರಶ್ನೆ ತನಗೇ ತಾನು ಕೇಳಿಕೊಳ್ಳಲು ಈ ಜಾಣರು ತಪ್ಪದೆ ಮರೆಯುತ್ತಾರೆ.

ಆದ್ದರಿಂದಲೇ ಪ್ರಮಾಣಬದ್ಧ ಪ್ರಾತಿನಿಧ್ಯದ ಸರಕಾರೀ ಸೂತ್ರವನ್ನು ಕಟ್ಟುನಿಟ್ಟಾಗಿ ಪಾಲಿಸಲಾಗುವುದಿಲ್ಲ. ರಾಜ್ಯಸಭೆಯ ಚರ್ಚೆಯಲ್ಲಿ ಸರದಾರ ಅಮ್ಜದ ಅಲಿ ಅಂದಂತೆ, ಶ್ರೇಷ್ಠಿಗಳೆನಿಸಿ ಕೊಂಡವರು ಅಧಿಕಾರದ ಅಗ್ರ ಪಜ್ತೆಯಲ್ಲಿ ಮೆರೆಯುವವರು ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಅವಕಾಶ ಕೊಡಲು ಮನೋವೃತ್ತಿಯಿಂದಲೇ ಪ್ರತಿಕೂಲರಿರುತ್ತಾರೆ. ಇದಕ್ಕೇನು ಮಾಡಬೇಕು? ಈ ಅಧಿಕಾರಿ-ಧುರೀಣ ವರ್ಗ ಅಳಿದು ಹೋಗುವ ತನಕ ಕೆಳಗಿನವರು ಇನ್ನೊಂದು ಶತಮಾನ ಕಾಯಬೇಕೆ?

೪ನೆಯ ಯೋಜನೆಯಲ್ಲಿ ಹರಿಜನರ ಕಲ್ಯಾಣಕ್ಕಾಗಿ ನಿಗದಿ ಮಾಡಿದ ನಿಧಿಗಳ ಎಷ್ಟೋ ಪಾಲು ವ್ಯಯವಾಗದೇ ಉಳಿದಿದೆ. ಅವನ್ನು ಈಗ ೫ನೆಯ ಯೋಜನೆಗೆ ಸೇರಿಸಬೇಕೆಂದು ಸೂಚನೆ. ಆದರೆ ಈ ಯೋಜನೆಯಲ್ಲಿಯೂ ಅವುಗಳ ವಿನಿಯೋಗದ ಯೋಚನೆ ಇಲ್ಲದೇ ಹೋದರೆ? ಆ ತನಕ ದಲಿತ ವರ್ಗಗಳ ನೋವಿಗೆ ನಾಲಿಗೆ ಸಿಗದೇ ಹೋಗುವುದೇ?

"ಇಲ್ಲಿ ಕೊಸರದಂಥ ನೋವು ಫಲಿಸದಂಥ
ಯಾತನೆ
ಇಲ್ಲಿ ನಿತ್ಯ ಕೊಳೆಯುತಿಹುದು ಹಸಿದ
ಜೀವ ಚೇತನ"

ಕವಿ ವಿನಾಯಕರು ಆಧುನಿಕ ವ್ಯಕ್ತಿಯ ಅಸಹಾಯ ಅನಾಥ ಪ್ರಜ್ಞೆಯ ಬಗೆಗೆ ಆಡಿದ ಈ ಮಾತು ದಲಿತ ವರ್ಗಗಳ ಜಾಯಮಾನದ ಪಲ್ಲವಿಯಾಗಿದೆ. ಈ ಅಸಂತೋಷ, ಅಸಹನೆ, ದಾಹ, ದ್ವೇಷ, ತಾಳ್ಮೆಗೆಟ್ಟು ಈ ವರ್ಗದ ಸರಕಾರೀ ಮತ್ತು ಸರಕಾರೇತರ ಧುರೀಣರ ತುಟಿ ಮೀರಿ ಚೀತ್ಕಾರವಾಗಿ ಫೂತ್ಕಾರವಾಗಿ ಹೊಮ್ಮುತ್ತಿದೆ. ಅವಿವೇಕವು ಅತಿರೇಕಕ್ಕೆ ದಾರಿ ತೆರೆಯುತ್ತಿದೆ. ಇದರಿಂದ ಒಟ್ಟಾರೆ ಕಾರ್ಯಸಾಧನೆಗಿಂತ ಕಾರ್ಯ ಹತ್ಯೆಯೇ ಹೆಚ್ಚಾಗಿ ವಾತಾವರಣ ಇನ್ನಷ್ಟು ವಿಷಮಯ ವಿಷಾದಮಯವಾಗುತ್ತ ಹೋಗಿ ಒಟ್ಟು ಪರಿಸ್ಥಿತಿ ಹದಗೆಡುತ್ತಿದೆ.

ಆದರೆ ಈ ಸಮಸ್ಯೆಯ ಬಗೆಗೆ ಇಲ್ಲಿ ಈಗ ಪ್ರಸ್ತಾಪ ಬೇಡ. ಇಲ್ಲಿಯ ಪ್ರಸ್ತುತ ವಿಷಯ ಮೇಲೆ ಹೇಳಿದ ಸರಕಾರೀ ಸೂತ್ರ-ಉದ್ಯೋಗಾವಕಾಶಗಳ ಬಗೆಗೆ ಪೂರ್ತಿಯಾಗದೇ ಉಳಿದ ಉಳಿಯುವ ಅಂಶಗಳು. ಸರಕಾರೀ ಸೇವಾವಿಭಾಗಗಳಲ್ಲಿಯೂ ಸರಕಾರೀ ಆಡಳಿತದ ಶೈಕ್ಷಣಿಕ ಸಂಸ್ಥೆಗಳಲ್ಲಿಯೂ ಹರಿಜನ-ಗಿರಿಜನ- ಹಿಂದುಳಿದ ಜನವರ್ಗಗಳಿಗಾಗಿ ನೌಕರಿಗಳನ್ನು ಕಾಯ್ದಿಡಲಾಗಿದ್ದರೂ, ಇದು ಬರೆ ತಾತ್ವಿಕವಾಗಿ - ಕಾಗದ ಪತ್ರಗಳಲ್ಲಿ. ಪ್ರತ್ಯಕ್ಷ ವ್ಯವಹಾರದಲ್ಲಿ ಈ ಸ್ಥಳಗಳನ್ನು ಈ ವರ್ಗದ ಅಭ್ಯರ್ಥಿಗಳಿಂದ ತುಂಬುವುದೇ ಇಲ್ಲ. ಅದಕ್ಕೆ ಬೇಕಾಗುವ ಅರ್ಹತೆಯ ಅಭ್ಯರ್ಥಿಗಳೇ ಸಾಕಷ್ಟು ಸಂಖ್ಯೆಯಲ್ಲಿ ಮುಂದೆ ಬರುವುದಿಲ್ಲವೆಂಬ ನೆವದಿಂದ ಪರಿಶಿಷ್ಟ ವರ್ಗದ ನಿರುದ್ಯೋಗಿಗಳಿಗೆ ಈ ಉದ್ಯೋಗಾವಕಾಶಗಳು ಸಿಗುವದೇ ಇಲ್ಲ!- ಎಂದು ಈ ವರ್ಗದ ಯುವಜನರ ತಕರಾರು.

ಈ ತಕರಾರನ್ನು ಗಮನಿಸಿಯೇ ಉ.ಪ್ರದೇಶ ಮತ್ತು ಮಹಾರಾಷ್ಟ್ರಗಳ ಸರಕಾರಗಳು ಈ ತುಂಬದೆ ಉಳಿದ ಸ್ಥಳಗಳ 'ಕೋಟಾ' ಪ್ರಕರಣಗಳ ಬಗೆಗೆ ವಿಶೇಷ ಪರಿಶೀಲನೆ ಕೈಗೊಂಡಿವೆ. ಉ.ಪ್ರದೇಶದ ಹೊಸ ಮುಖ್ಯ ಮಂತ್ರಿ ಈ ಪ್ರಶ್ನೆಯ ಬಗೆಗೆ ಮತ್ತು ಬಗೆಹರಿಕೆಗೆ ಒಂದು ಪ್ರತ್ಯೇಕ ವರದಿಯನ್ನೆ ಬೇಡಿದ್ದಾರೆ. ಮಹಾರಾಷ್ಟ್ರದ ಕಾಯಿದೆ ವಿಭಾಗದ ರಾಜ್ಯಮಟ್ಟದ ಮಂತ್ರಿಯೂ ಈ ರೀತಿ ಸಂವಿಧಾನಬದ್ಧರಾಗಿ ಕಾದಿಟ್ಟ ಸ್ಥಳಗಳನ್ನು ರಾಜ್ಯದ ಪಬ್ಲಿಕ್ ಸರ್ವಿಸ್ ಕಮಿಶನ್ ತುಂಬದೆ ಬಿಟ್ಟದ್ದೇಕೆಂದು ಸರಕಾರ ತನಿಖೆ ಮಾಡುವುದೆಂದು ನಾಗಪುರದಲ್ಲಿಯ ವಿಧಾನಸಭಾ ಅಧಿವೇಶನದಲ್ಲಿ ಆಶ್ವಾಸನೆ ಕೊಟ್ಟಿದ್ದಾರೆ.

ಹಿಂದುಳಿದ ಗುಂಪುಗಳ ಅಭ್ಯರ್ಥಿಗಳಿಗೆ ಅವರಿಗಾಗಿಯೇ ಕಾದಿಟ್ಟ ಈ ಸ್ಥಳಗಳೂ ಸಿಗದಷ್ಟು ಅವರ ಅರ್ಹತೆಯಲ್ಲಿ ಲೋಪ ದೋಷಗಳಿದ್ದವೋ? - ಎಂಬುದರದೇ ತನಿಖೆ ಆಗಲಿದೆ. ಈ ತನಿಖೆಯ ಫಲವಾಗಿ, ಈ ಕಡಿಮೆ ಯೋಗ್ಯತೆಯ ವರ್ಗದವರಿಗೆ ಸಾಕಷ್ಟು ಅರ್ಹತೆ ಇದ್ದೂ ಈ ನೌಕರಿಯ ಅವಕಾಶಗಳನ್ನು ಅಲ್ಲಗಳೆದಿದ್ದೇ ಆದರೆ ಇಂಥ ಘೋರ ಮತ್ತು ಹೀನ ಅನ್ಯಾಯ ಕೊನೆಗಾಣಲೇ ಬೇಕು. ಅದಕ್ಕೆ ಹೊಣೆಗಾರರಾದವರಿಗೆ ದಂಡವಾಗಲೇಬೇಕು. ಸಮಾಜದ ಒಂದು ಅಂಗವನ್ನು ಹಿಮ್ಮೆಟ್ಟಿ ಮೆಟ್ಟಿದ್ದು ದುರ್ಬಲ ಬದಿರಗೊಳಿಸಿ ಇಡಿಯ ಸಮಾಜ ಪರಿಪುಷ್ಟವಾಗಿ ಪ್ರಗತಿ ಹೊಂದಲಾರದು. ಈ ಸಾಮಾನ್ಯ ತಿಳುವಳಿಕೆಯೂ ಈ ಪಟ್ಟಭದ್ರ ಸ್ವಾರ್ಥ ಸಾಧಕ ಸಾರ್ವಜನಿಕ ಸೇವಾ ಆಯೋಗದವರಿಗೆ ಇಲ್ಲವೆಂಬುದು ದೇಶಕ್ಕೆ ಗಂಡಾಂತರದ ಮಾತಾಗಿದೆ. ಇಂಥ ಅನ್ಯಾಯ ನಡೆಯುತ್ತಿದ್ದುದು ಸತ್ಯವಾದರೆ ಅದು ಒಮ್ಮೆಲೆ ಕೂಡಲೆ ನಿಲ್ಲಬೇಕು.

ಇನ್ನು ಇದಕ್ಕೆ ಪ್ರತಿಯಾಗಿ ಈ ಹರಿಜನ-ಗಿರಿಜನರಿಗೆ ಬುದ್ಧ್ಯಾ ಏನೂ ಅನ್ಯಾಯವಾಗಿಲ್ಲ. ಅವರೇ ಸಾಕಷ್ಟು ಜನ ಸರಕಾರಿ ಚಾಕರಿಯ ಅವಕಾಶಗಳನ್ನು ತುಂಬಲು ಮುಂದೆ ಬರುತ್ತಿಲ್ಲವೆಂದು

ಸಿದ್ಧವಾದರೆ ಮಾತ್ರ ಈ ಕುರಿತು ಕೂಡಲೆ ಏನೂ ಮಾಡುವಂತಿಲ್ಲ.

ಇಲ್ಲಿ ಇನ್ನೂ ಮೂಲಭೂತವಾದ ಪ್ರಶ್ನೆಯೊಂದಿದೆ. ಈ ಬಗೆಯಲ್ಲಿ ಸ್ಥಳಗಳನ್ನು ಕಾಯ್ದಿಡುವುದು. ಸಂರಕ್ಷಿತ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡುವುದು ಮತ್ತು ಅದರ ಹಿಂದಿನ ತತ್ವಸರಣಿಯು ನಿಜವಾಗಿಯೂ ಯೋಗ್ಯವೇ? ಅದು ಈ ದುರ್ಬಲ ಗುಂಪುಗಳನ್ನು ಇನ್ನಷ್ಟು ಸತ್ವ ಶೂನ್ಯರನ್ನಾಗಿ ಮಾಡುವುದಿಲ್ಲವೆ? ಅವರ ಸಂಕಲ್ಪಶಕ್ತಿಯನ್ನೆ ಬತ್ತಿಸಿ, ಸ್ವಭಾವಸಿದ್ಧವಾದ ಸ್ಪರ್ಧೆಯ ವೃತ್ತಿಯನ್ನು ಮೊಂಡುಗೊಳಿಸಿ ಪರಿಶಿಷ್ಟ ವರ್ಗದ ತರುಣರ ನಿಜವಾದ ವಿಕಾಸಾಭಿವೃದ್ಧಿಗೆ ತೊಡಕು ಉಂಟುಮಾಡುವುದಿಲ್ಲವೇ?

ಸಂವಿಧಾನದಂತೆ ಕಾನೂನುಬದ್ಧವಾದ ಆಶ್ವಾಸನವೇನೆಂದರೆ, ಈ ವರ್ಗಗಳಿಗೆ ಅವು ತಮಗೆ ತಾವೇ ಸಹಾಯಕರಾಗುವಂತೆ ಮಾಡುವುದು, ನೋಡಿಕೊಳ್ಳುವದು. ಈ ಉದ್ದೇಶ ಸಾಧಿಸಬೇಕಾದರೆ ಒಂದೇ ಉಪಾಯ. ಈ ವರ್ಗದ ಯುವಜನರ ಒಟ್ಟು ಸ್ಪರ್ಧಾ ಪ್ರವೃತ್ತಿಯನ್ನು ಜಾಗೃತಗೊಳಿಸುವುದು. ಅದೂ ಅವರಿಗಾಗಿ ಕೆಲಸಗಳ ಸ್ಥಳಗಳನ್ನು, ಶಾಲೆ ಕಾಲೇಜುಗಳಲ್ಲಿ ಸೀಟುಗಳನ್ನು ನಿರಂತರವಾಗಿ ಶಾಶ್ವತವಾಗಿ ಕಾದಿಡುವುದೂ ಅಲ್ಲ ಅಥವಾ ಕಾಲಕಾಲಕ್ಕೆ ಈ ಜಾತಿನಿಷ್ಠ ಸ್ಥಳಗಳ ಪ್ರಮಾಣವನ್ನು ಹೆಚ್ಚಿಸುವುದೂ ಅಲ್ಲ.

ಹೀಗೆ ಸ್ಥಳಗಳನ್ನು ಕಾದಿಡುವುದು ಅವಶ್ಯ. ಆದರೆ ಅದು ಕೆಲವೊಂದು ಪರಿಮಿತಿಯವರೆಗೆ ಮಾತ್ರ. ಆ ಪರಿಮಿತಿಯನ್ನು ನಿರ್ದಿಷ್ಟಗೊಳಿಸಿ ಖಚಿತವಾಗಿ ಸಾರಿರಬೇಕು. ಹೊರತು ಅನಿಯಮಿತ ವಾಗಿ ಅದನ್ನು ಮುಂದುವರಿಸುವುದಲ್ಲ. ಹಿಂದುಳಿದ ವರ್ಗದ ಯುವಜನರಲ್ಲಿ ಸವರ್ಣ ಯುವಕರೊಂದಿಗೆ ಯಾವ ಕ್ಷೇತ್ರದಲ್ಲಿಯೂ ಸ್ಪರ್ಧಿಸುವ ಕೆಚ್ಚು, ದಕ್ಷತೆ, ಕಾರ್ಯಕ್ಷಮತೆ ಉಂಟಾಗಬೇಕು. ಕಾದಿಟ್ಟ ಹೊಲದಲ್ಲಿಯೇ ಮೇಯುವ ಚಟ ಮೈಯುಂಡಿ ಹೋಗಬಾರದು. ಈ ಆಲಂಬನ ಸ್ವಾವಲಂಬನಕ್ಕೆ ಹಾದಿಯಾಗಬೇಕು. ಈ ಹಾದಿ ಹಸನು ಮಾಡಲು ಇನ್ನು ನಿರಂತರವಾಗಿ ನಿರಲಸವಾಗಿ ದುಡಿಯಬೇಕಾಗಿದೆ. ಕೇಂದ್ರ ಮತ್ತು ರಾಜ್ಯ ಸರಕಾರಗಳು ಈ ವರ್ಗಗಳ ಹಿಂದುಳಿವಿನ ಸಾಮಾಜಿಕ, ಆರ್ಥಿಕ ಕಾರಣಗಳನ್ನು ದೂರ ಮಾಡಲು ಇನ್ನು ನಿರಂತರವಾಗಿ ನಿರಲಸವಾಗಿ ದುಡಿಯಬೇಕಾಗಿದೆ. ಕೇಂದ್ರ ಮತ್ತು ರಾಜ್ಯ ಸರಕಾರಗಳು ಈ ವರ್ಗಗಳ ಹಿಂದುಳಿವಿನ ಸಾಮಾಜಿಕ, ಆರ್ಥಿಕ ಕಾರಣಗಳನ್ನು ದೂರಮಾಡಲು ಬಹು ದೊಡ್ಡ ಮೊತ್ತದಲ್ಲಿ ಹೆಣಗಬೇಕು. ಅವರ ಶಿಕ್ಷಣಕ್ಕಾಗಿ ವಿಶೇಷವಾದ ಪ್ರಯತ್ನವಾಗಬೇಕು. ಮುಖ್ಯವಾಗಿ ಈ ವರ್ಗದವರ ಎಳೆಯ ಪೀಳಿಗೆಯ ಕಾಯಕಲ್ಪವಾಗಬೇಕು. ಸಾಂಸ್ಕೃತಿಕ ಪುನರ್ಜನ್ಮವಾಗಬೇಕು. ಈ ಮಕ್ಕಳ ಅಪಪೋಷಣೆಯ ನಿವಾರಣೆಗೆ, ಆರೋಗ್ಯದ ಸಂವರ್ಧನೆಗೆ ಪ್ರತ್ಯೇಕವಾಗಿ ಪ್ರಯತ್ನ-ಯೋಜನೆಗಳು ಸಾಂದ್ರ ಕೃಷಿಯಂತೆ ನಡೆಯಬೇಕು. ಅವರಲ್ಲಿಯ ಚುರುಕಾದ ಮಕ್ಕಳಿಗೆ ಹೇರಳ ಶಿಷ್ಯವೃತ್ತಿಗಳನ್ನು ಒದಗಿಸಿ ಅವರು ಸವರ್ಣ ವಿದ್ಯಾರ್ಥಿಗಳೊಂದಿಗೆ ಸ್ಥೈರವಾಗಿ ಸ್ಪರ್ಧಿಸುವಂತೆ ಆಗಬೇಕು. ಅವರಲ್ಲಿಯ ಹೀನ ಭಾವನೆ ಪೂರ್ತಿ ಮಾಯವಾಗಬೇಕು. ಆಧುನಿಕತೆಯ ಸಂಸ್ಕಾರ ಒಂದೇ ಆಳಮಟ್ಟದಲ್ಲಿ ಈ ಜನರ ಸ್ವಾಭಿಮಾನ ಕುದುರಿಸಿ, ಅವರನ್ನು ಮುಂದುವರಿದ ಜನರ ಮಕ್ಕಳೊಂದಿಗೆ ಸಮಾನಸ್ಕಂದರಾಗಿ ಮಾಡಬಲ್ಲದು. 'Man is man, who is more?' ಫ್ರೆಂಚ್ ರಾಷ್ಟ್ರಗೀತದ ಈ ಆಹ್ವಾನ ನಿಜವಾಗಿಸಬೇಕು. "ಮಾನವನು ಮಾನವನೆ, ಯಾರು ಯಾರಿಗೆ ಮೀಸಲು?"

ಹರಿಜನ-ಗಿರಿಜನರಿಗೆ ಇಂದು ದಯೆ ಬೇಡ. ದಾಂಭಿಕ ಉದಾರಾಶ್ರಯ ಬೇಡ

ಮತಮಾನ್ಯಗಳ ತೀರ್ಥಪ್ರಸಾದ ಬೇಡ. ಸಂಭ್ರಮದ ಮಂದಿರ ಪ್ರವೇಶ ಬೇಡ. ಒಣ ಉಪಚಾರದ 'ಹರಿಜನ ದಿನಾಚಾರಣೆ' ಬೇಡ. 'ಹರಿಜನ' ರೆಂಬ ಟೊಳ್ಳು ಹೆಸರೂ ಬೇಡ. ಅವರಿಗೆ 'ಉದ್ಧಾರ' ಬೇಡ. ಆಧಾರ ಬೇಕು. ಅದಕ್ಕಾಗಿ ಅವರಲ್ಲಿಯೆ ದೃಢ ನಿರ್ಧಾರ ಬೇಕು. "ಬಡವರಿಗೆ ಬಡವರಲ್ಲದೆ ಬೇರೆ ಗತಿಯುಂಟೆ?"- ಎಂದು ಕುವೆಂಪು ವಾಣಿ ಈ ಹಿಂದುಳಿದ ಜನಕ್ಕೂ ಸಲ್ಲುತ್ತದೆ. ಅವರನ್ನು ಮನುಷ್ಯರಾಗಿ ಕಾಣುವ ಪರಿಸ್ಥಿತಿ ಪರಿಸರ ಉಂಟಾಗಬೇಕು.

ಹರಿಜನರು ಮದ್ಯಪಾನದಿಂದ ಕೆಟ್ಟರೆಂದು ಒಂದು ವಾದ. ಆದರೆ ಅವರು ಮದ್ಯಕ್ಕೆ ಬಾಯೊಡ್ಡಿದ್ದು ಏಕೆ? ಅದೊಂದು ಷೋಕಿಗೆ ಸಿಗುವ ಚಟವೆಂದೆ? ಅಲ್ಲ, ನಮ್ಮಲ್ಲಿ ಉಪ್ಪಿನಾಗಾರ ಗಳಲ್ಲಿ ದಿನವಿಡಿ ಬೆನ್ನು ಮುರಿದು ದುಡಿದು ಬೇಸತ್ತ ಅಗೇರರಿಗೆ ಸಂಜೆ ಕಳ್ಳು ಬೇಕೇಬೇಕು. ನಮ್ಮ ಬಾಲ್ಯದಿಂದಲೂ ಅವರು ತಮ್ಮ 'ಒಡೆದಿರ' ಅಂಗಳದಲ್ಲಿ ಕೂತು ಸಂಜೆ ಗಂಜಿಗೆ ಹೇಗೋ ಹಾಗೆ ಕಳ್ಳಿಗೂ ಕಾಸು ಕಿತ್ತುಕೊಂಡು ಹೋಗುತ್ತಿದ್ದರು. ಮುಂದೆ ಪಾನಪ್ರತಿಬಂಧ ಬಂತು. ಅವರಿಗೆ ಕಳ್ಳು ಕಟ್ಟಾಯಿತು. ಅದಕ್ಕಾಗಿ ಸಿಗುವ ನಾಲ್ಕಾಣೆಗೂ ಲೋಪ ಬಂದಿತು. ಆ ಹಣ ಅವರ ಕೈಗೆ ಉಳಿತಾಯವಾಗಲಿಲ್ಲ! ೨ನೆ ಮಹಾಯುದ್ಧದಂದಿನಿಂದಲೂ ನಮ್ಮಲ್ಲಿ ಸ್ಥಿರವಾಗಿ ನಿಂತ ಆಹಾರಧಾನ್ಯಗಳ 'ತುಟಾಗ್ರತೆ' ಇದೆಂಥ ಅಪಸ್ಮಾರ ಶಬ್ದ! - ಈ ದಿನವಿಡಿ ದುಡಿದುಣ್ಣುವ ಆಳುಗಳಿಗೆ ಹೊಟ್ಟೆತುಂಬ ಗಂಜಿಗೂ ಸಿಗದಂತೆ ಮಾಡಿತು. ಆಗ ಈ ಅವಪೋಷಣೆಯನ್ನು ಕೆಲಮಟ್ಟಿಗೆ ನೀಗಿಸಲು ಅವರು ಕಳ್ಳು-ಸೇಂದಿ ಸರಾಯಿ ಕುಡಿಯಹತ್ತಿದರು. ಹಿಂದೆ ಮದ್ಯವನ್ನು ಮುಟ್ಟದ ಮೂಸದ ಹಾಲಕ್ಕಿ ಒಕ್ಕಲಂಥವರೂ ಅದಕ್ಕೆ ಬಾಯೊಡ್ಡಿದರು. ಇದಕ್ಕೆ ಇನ್ನೊಂದು ಬಲವಾದ ಕಾರಣ ಪಾನಪ್ರತಿಬಂಧವೇ. ಅದರಿಂದ ಕಳ್ಳಭಟ್ಟಿ ತುಂಬ ಉಚ್ಛ್ರಾಯಕ್ಕೆ ಬಂದ ಗ್ರಾಮೋದ್ಯೋಗವಾಯಿತು-ಮೇಲ್ವರ್ಗದವರೇ ಇದರ ಮಹಾ ಪೋಷಕರು. ಆದರೆ ಕೆಳ ವರ್ಗದವರು ಹಿಂದೆ ಕುಡಿಯದವರೆಂಬ ವರ್ಗಗಳ ಜನರು ಇದರ ಮಾರಾಟಕ್ಕೆ ಒಳ್ಳೆಯ ನೆರವಾದರು. ಈ ಸಿಗುವ ಸೌಕರ್ಯ ದೇಹದ ದಾಹಗಳಿಂದಾಗಿ ಈ ಬಡಪಾಯಿಗಳು ಯಥೇಷ್ಟ ಕುಡಿಯತೊಡಗಿದರು.

ಇದೂ ಅಲ್ಲ. ನಮ್ಮಲ್ಲಿ ಎಷ್ಟೋ ಅಸ್ಪೃಶ್ಯರಲ್ಲದ ಜಾತಿಗಳು ಮದ್ಯವನ್ನು ನಿಷಿದ್ಧವಾಗಿ ಕಾಣುವುದಿಲ್ಲ. ಅವರಲ್ಲಿ ಹಿರಿಕಿರಿ ಎಲ್ಲ ಮನೆಮಂದಿ ಕುಡಿಯುವ ವಾಡಿಕೆ ಬುನಾದಿಯಿಂದಲೂ ಬಂದಿದೆ. ಕುರುಬರ ಮಕ್ಕಳು ಶಾಲೆಗೆ ಬರುವಾಗ ಮುಂಜಾನೆ ಕುಡಿದೇ ಬರುವುದುಂಟು. ಅಂದಾಗ ಕುಡುಕುತನ ಪಾನಪ್ರತಿಬಂಧ ತೆಗೆದುಹಾಕಿದ್ದರಿಂದ ಹೆಚ್ಚಾಗಿದೆ ಎಂಬುದೊಂದು ಆಧುನಿಕ ಆಖ್ಯಾಯಿಕೆ. ಪ್ರತಿಬಂಧವಿದ್ದಾಗಲೇ ಪಾನವು 'ಭೂಮಿಗತ'ವಾಗಿದ್ದರೂ ಊರ್ಜಿತವಾಯಿತು. ಸಾರ್ವತ್ರಿಕವಾಯಿತು. ನಿಷಿದ್ಧದ ಮೋಹ ಆಕರ್ಷಣೆ ಯಾವಾಗಲೂ ಹೆಚ್ಚು, ಇರಲಿ.

ಒಟ್ಟಾರೆ ಈ ನಿಮ್ನ ವರ್ಗಗಳಿಗೆ ಮಾನವರಂತೆ ಕಾಣುವ ಕಾಲ ಎಂದು ಬರುವುದೋ! ಅವರು ತಲೆ ಎತ್ತಿ ನಿಂತಾಗಲೇ ಭಾರತಕ್ಕೆ ನಿಜವಾದ ವಿಮೋಚನೆ. ಆತನಕ ಶಿಕ್ಷಣ, ಸೇವಾಸೌಕರ್ಯ ಗಳಲ್ಲಿ ಅವರ ಪಾಲು ಅವರಿಗೆ ಸಿಗುವಂತೆ ಆಗ್ರಹದಿಂದ ಪ್ರಯತ್ನ ನಡೆಯಬೇಕು ಮತ್ತು ಈ ಜನಕ್ಕೆ ತಮ್ಮ ಹಿಂದುಳಿವಿನಲ್ಲಿಯೆ ಒಂದು ಕೆಟ್ಟ ಸ್ವಾರ್ಥ ಕಟ್ಟಿಟ್ಟ ಭಾವನೆ ಬೆಳೆದು ಬರಬಾರದು.

●

('ಉದಯವಾಣಿ' ೧೯೭೩)

# ವಂದೇ ಮಾತರಂ ಮತ್ತು ವಿವೇಕ

ಒಂದು ಮಹಾನ್ ನಗರಪಾಲಿಕೆಯ ಕೆಲವು ಸದಸ್ಯರು ಇದ್ದಕ್ಕಿದ್ದಂತೆ ಸಭೆಯ ಆರಂಭದಲ್ಲಿ ಎದ್ದು ನಿಂತು "ಒಂದೇ ಮಾತರಂ" ಹಾಡಲು ಆರಂಭಿಸುತ್ತಾರೆ. ಆಗ ಇತರ ಅನೇಕ ಸದಸ್ಯರು ಆ ಹಾಡಿಗೆ ದನಿಗೂಡಿಸುತ್ತಾರೆ- ಅಂದರೆ ಒಟ್ಟಾಗಿ ದೊಡ್ಡ ದನಿಯಲ್ಲಿ ಎಲ್ಲರೂ ಹಾಡುತ್ತಾರೆ (ತ್ರಿಶತ್‌ಕೋಟಿ ಕಂಠ ಕಲಕಲ ನಿನಾದಕರಾಲೇ "ಎಂದು ಮಹರ್ಷಿ ಬಂಕಿಮಚಂದ್ರರೇ ಗೀತದಲ್ಲಿ ಭಾರತಮಾತೆಯನ್ನು ಸಂಭೋಧಿಸಿದಾಗ" ದನಿಗೂಡಿಸುವದೇನು ಬಂತು?) ಆಗ ಒಬ್ಬಿಬ್ಬರು ಎದ್ದು ಹೊರಗೆ ನಡೆಯುತ್ತಾರೆ. ಅವರು "ರಾಷ್ಟ್ರದ್ರೋಹಿಗಳು" ಎಂದು ಒಳಗೆ ಉಳಿದವರು ರಾಷ್ಟ್ರಗೀತವನ್ನು ಹಾಡಲು ಶುರು ಮಾಡಿದವರು ಜರಿಯುತ್ತಾರೆ.

ಇಲ್ಲಿಗೆ ಈ ಪರ್ವ ಮುಗಿಯಲಿಲ್ಲ. ಆ ದ್ರೋಹಿಗಳ ಬಗೆಗೆ ಏಕೆ ಕ್ರಮ ಕೈಕೊಳ್ಳಬಾರದೆಂದು ಮಹಾಪೌರರಿಗೆ ಆಸಕ್ತ ಸದಸ್ಯರು ಕೇಳುತ್ತಾರೆ. ಅದಕ್ಕೆ ಅವರಿತ್ತ ಉತ್ತರಕ್ಕೆ ಎರಡು ಅಂಶಗಳು ೧) "ವಂದೇಮಾತರಂ" ರಾಷ್ಟ್ರಗೀತವಾಗಿದ್ದರೂ ಅಧಿಕೃತ ರಾಷ್ಟ್ರಗೀತವಲ್ಲ. ಆದ್ದರಿಂದ ಅದನ್ನು ಹಾಡುವಲ್ಲಿ ಎಲ್ಲರಿಗೂ ಭಾಗವಹಿಸಲು ಕಡ್ಡಾಯ ಮಾಡುವಂತಿಲ್ಲ. ೨) ಮಹಾನಗರಪಾಲಿಕೆಯ ಸಭೆಯ ಆರಂಭಕ್ಕೆ "ವಂದೇಮಾತರಂ" ಹಾಡಬೇಕೆಂದು ಒಂದು ಸಂಕೇತವನ್ನೋ ನಿಯಮವನ್ನೋ ಇಟ್ಟುಕೊಂಡಿದ್ದು ಇಲ್ಲ. ಅಂದರೆ ಮಾಡದೆ ಇದ್ದ ನಿಯಮವನ್ನು ಮುರಿದರೆಂಬ ಪ್ರಶ್ನೆಯೆ ಏಳುವದಿಲ್ಲ!

ಹಾಗಾದರೆ ಮಹಾಪೌರರ ಸ್ವಂತ ಅಭಿಪ್ರಾಯವೇನು- ಈ ರಾಷ್ಟ್ರಗೀತದ ಬಗೆಗೆ? ಎ ಸಂತಪ್ತ ಪೌರನ ಪ್ರಶ್ನೆ. ನನಗೆ ಆ ಗೀತದ ಬಗೆಗೆ ತುಂಬ ಆದರ ಗೌರವ ಪ್ರೀತಿ ಇದೆ. ಅದನ್ನು ಹಾಡುವಾಗ ನಾನೂ ನಿಂತು ದನಿಗೂಡಿಸುತ್ತೇನೆ ಎಂದು ಮಹಾ ಪೌರರ ಉತ್ತರ.

ಮೇಲೆ ಕೊಟ್ಟ ವರದಿ ಕೆಲವು ದಿನದ ಹಿಂದೆ ಒಂದು ದಿನಪತ್ರಿಕೆಯಲ್ಲಿ ಬಂದ ವೃತ್ತಾಂತದ ಸಾರಾಂಶ. ಹೊರತು ಅಲ್ಲಿ ಮೂಲದ ಮಾತುಗಳೇ ಇಲ್ಲ. ಆದರೆ ಅಲ್ಲದ ಮಾತೂ ಈ ಪೌರ-ಮಹಾಪೌರರ ಸಂಭಾಷಣೆಯಲ್ಲಿ ಸೇರಿಸಿದ್ದೂ ಇಲ್ಲ.

ಆದರೆ ಈ ವರದಿಯನ್ನು ತುಸು ನಿರ್ವಿಕಾರವಾಗಿ ನೋಡಿದರೆ ತುಂಬ ವಿಚಿತ್ರವಾ ಕಾಣುವದಿಲ್ಲವೇ? ಇಲ್ಲಿ "ವಂದೇಮಾತರಂ" ಗೀತದ ಮಂತ್ರಶಕ್ತಿಯ ಬಗೆಗೆ ಐತಿಹಾಸಕ ಮಹತ್ವದ ಬಗೆಗೆ ರಾಷ್ಟ್ರೀಯತ್ವದ ಜ್ವಾಲೆಯನ್ನೇ ಹೊತ್ತಿಸಿದ ಜ್ಯೋತಿರ್ಮಯತೆಯ ಬಗೆಗೆ ಶಂಕೆಯೇ ಇಲ್ಲ.

ನಮ್ಮ ರಾಷ್ಟ್ರಗೀತಗಳಲ್ಲಿ "ಒಂದೇ ಮಾತರಂ" ರಾಷ್ಟ್ರದೇವತೆಯ ಅಧಿಸೂಕ್ತ. ಆ ನಂತ "ಸಾರೇ ಜಹಾಂಸೇ ಅಚ್ಛಾ!" ಗೀತವಿದೆ. ಇನ್ನೂ ಅನೇಕ ರಾಷ್ಟ್ರಗೀತಗಳಿರುತ್ತವೆ. ಸಾವಿರಾರು ಸ್ವಾತಂತ್ರ್ಯವೀರರು ಆ ಗೀತಗಳನ್ನು ಹಾಡುತ್ತ ಜೇಲಿಗೆ ಹೋಗಿದ್ದಾರೆ, ಲಾಠಿ ತಿಂದಿದ್ದಾರೆ, ಗುಂಡಿ ಬಲಿಯಾಗಿದ್ದಾರೆ, ರಕ್ತತರ್ಪಣ ಆತ್ಮಾರ್ಪಣ ಮಾಡಿದ್ದಾರೆ. ಈ ಕುರಿತು ವಾದವೇ ಇಲ್ಲ.

ಆದರೆ ಹಾಗೆಂದ ಮಾತ್ರಕ್ಕೆ ಒಂದು ಸಭೆಯಲ್ಲಿ ಒಂದು ಸಂದರ್ಭದಲ್ಲಿ ಸಾರ್ವಜನಿ ಪ್ರಸಂಗದಲ್ಲಿ ಯಾರೂ ಥಕ್ಕನೇ "ವಂದೇಮಾತರಂ" ಹಾಡಲು ಶುರುಮಾಡುವದೂ, ಅದ ದನಿಗೂಡಿಸಲು ಒಪ್ಪದವರನ್ನು ಅಷ್ಟಕ್ಕಾಗಿಯೇ ರಾಷ್ಟ್ರದ್ರೋಹಿಗಳೆಂದು ಧಿಕ್ಕರಿಸುವದು- ಇದೆ

ಒಂದು ಸಭ್ಯ ವ್ಯವಹಾರಿಕವಾಗಿ ಕಾಣುವದಿಲ್ಲ.

ಅದೇ ಪತ್ರಿಕೆಯಲ್ಲಿ ಇನ್ನೂ ಒಂದು ಘಟನೆ ಬಂದಿತ್ತು. ಈ ಸ್ವಯಂಭೂದೇಶ ಭಕ್ತರು ಹಾದಿಯಲ್ಲಿ ಬರಹೋಗುವ ಬಸ್ಸು, ಕಾರು ತಡೆದು ನಿಲ್ಲಿಸಿ ಅದರ ಒಳಗಿದ್ದವರನ್ನು ಹೊರಗಿಳಿಸಿ ಅವರಿಂದ "ವಂದೇಮಾತರಂ" ಕೂಗಿಸಿ ಹೋಗಗೊಡುತ್ತಿದ್ದರಂತೆ. ಇದು ಬೇರೊಂದು ದಿನದ ಪರಾಕ್ರಮ.

ಇದೆಲ್ಲ ಏನು? "ವಂದೇಮಾತರಂ" ಗೀತವನ್ನು ಹೀಗೆ ಮಂದಿಯ ದೇಶಭಕ್ತಿ ರಾಷ್ಟ್ರಾಭಿಮಾನಗಳನ್ನು ಪರೀಕ್ಷಿಸುವ ಒಂದು ಸಾಧನವಾಗಿ ಬಳಸಹತ್ತಿದರೆ ಆ ಮಧುರ ಗಂಭೀರ ಗೀತದ ಗೌರವವನ್ನು ಕಾಪಾಡಿದಂತೆಯೇ? ಸ್ವಪಕ್ಷದ ಪ್ರತಿಷ್ಠೆ ಪ್ರಚಾರಗಳ ನಗಾರಿ ಬಾರಿಸಲು ಈ ಗೀತವನ್ನು ಒಂದು ಕೋಲಾಗಿ ಉಪಯೋಗಿಸುವದು ಸಾಧುವೆ? ನ್ಯಾಯವೇ?

ಕಿಷ್ಕಿಂಧೆಯಲ್ಲಿ ಸಲ್ಲುವದೆಲ್ಲ ಅಯೋಧ್ಯೆಯಲ್ಲಿ ಸಲ್ಲುವದಿಲ್ಲ. ಸ್ವಾತಂತ್ರ್ಯ ಬಂದನಂತರ ಭಾರತವು ರವೀಂದ್ರರ ಗೀತವನ್ನು ಅಧಿಕೃತ ರಾಷ್ಟ್ರಗೀತೆಯಾಗಿ ಸ್ವೀಕರಿಸಿತು. ಅದನ್ನು ಶಿರಸಾವಹಿಸುವದು ಪ್ರತಿಯೊಬ್ಬ ಭಾರತೀಯನ ಕರ್ತವ್ಯ. ನಾಗರಿಕ ಧರ್ಮ. ಅದಕ್ಕೆ ಚ್ಯುತಿ ಬಂದರೆ-ತಂದರೆ ಅಂಥವ ದಂಡನೆಗೆ ಅರ್ಹ.

ಅಂಥಲ್ಲಿಯೂ ಅನೇಕಾನೇಕ ಚಿತ್ರಮಂದಿರಗಳಲ್ಲಿ ನಮ್ಮ ಜನ ಅದೂ ಸುಶಿಕ್ಷಿತ ಸುಸಂಸ್ಕೃತರೆನ್ನುವ ಜನ ರಾಷ್ಟ್ರಗೀತ ನಡೆಯುವಾಗ ತಡೆಯುವದೇ ಇಲ್ಲ. ಒಂದು ಸಭೆಯಲ್ಲಿ ಅದನ್ನು ಹಾಡುವಾಗ ಅನೇಕರು ಮುಕ್ತಕಂಠದಿಂದ ಅದರಲ್ಲಿ ಭಾಗಿಯಾಗುವದಿಲ್ಲ- ಅದಕ್ಕೂ ಒಂದು ನಾಚಿಕೆ, ಬೇಸರ, ಉಪೇಕ್ಷೆ; ಹೃದಯದ ಕಾರ್ಪಣ್ಯ. ಈಚೆಗೆ ಮುಂಬಯಿಯಲ್ಲಿ ಮೂರು ಮಠಾಧೀಶರು ರಾಷ್ಟ್ರಗೀತ ನಡೆಯುವಾಗ ಎದ್ದೂ ನಿಲ್ಲದೇ ಕುಳಿತೇ ಉಳಿದ ಬಗೆಗೆ ಮಹಾರಾಷ್ಟ್ರ ವಿಧಾನಸಭೆಯಲ್ಲಿ ತುಂಬ ಗದ್ದಲವೆದ್ದಿತು. ಸ್ವಾಮಿಗಳು ಆಗಲೇ ಧ್ಯಾನಸ್ಥರಿದ್ದರಂತೆ! ಇರಲಿ.

ಅಖಿಲ ಭಾರತೀಯ ಕಾಂಗ್ರೆಸ್ ತನ್ನ ಅಧಿವೇಶನಗಳನ್ನು "ವಂದೇಮಾತರಂ" ದಿಂದಲೇ ಯಾವಾಗಲೂ ಆರಂಭಮಾಡುತ್ತದೆ. ದಿನನಿತ್ಯದ ಆಕಾಶವಾಣಿ ಕಾರ್ಯಕ್ರಮವೂ ಹಾಗೆಯೇ. ಅಂದರೇನು? ಈ ಗೀತಕ್ಕೆ ತಕ್ಕ ಮನ್ನಣೆ, ಮೆಚ್ಚಿಗೆ ಇಂದಿಗೂ-ಎಂದೆಂದಿಗೂ ಇದ್ದೇ ಇದೆ. ಆದರೆ "ಜನಗಣಮನ"ವನ್ನು ಸಕಲ ಸಾರ್ವಜನಿಕ ರಾಷ್ಟ್ರೀಯ ಪ್ರಸಂಗಗಳಲ್ಲಿ ಹಾಡಬೇಕಾದ ರಾಷ್ಟ್ರಗೀತವೆಂದು ಒಪ್ಪಿಕೊಂಡಮೇಲೆ ಅದರಷ್ಟೇ ಗೌರವ "ವಂದೇಮಾತರಂ" ಗೀತಕ್ಕೆ ಇದ್ದರೂ ಅದರಂತೆಯೇ ಇದನ್ನು ಹಾಡುವಾಗಲೂ ಶಿಸ್ತನ್ನು ಸರ್ವರೂ ಪಾಲಿಸಬೇಕೆಂದು ಅಪೇಕ್ಷಿಸುವದು ಸರಿಯೇ? ಅಪೇಕ್ಷಿಸಿದರೂ ಹಾಗೆ ಆಗ್ರಹ ಹಿಡಿದು ಆನಿಮಿತ್ತ ಸಾರ್ವಜನಿಕ ಶಾಂತಿಯನ್ನು ಕದಡುವದು ಯೋಗ್ಯವೇ? ಬಲ್ಲವರು ಆಲೋಚಿಸಬೇಕಾಗಿದೆ. ಎಲ್ಲವನ್ನೂ ರಾಜಕೀಯಕ್ಕೆ ಉರುವಲ ಮಾಡಬಾರದು!

●

('ಮುನ್ನಡೆ' ೧೯೭೩)

# ಅಸ್ಪೃಶ್ಯತೆ ಮತ್ತು ಅದರ ನಿವಾರಣೆ

ಅಸ್ಪೃಶ್ಯತಾ ನಿವಾರಣೆಯ ವಿಷಯವು ಇಂದಿಗೂ ಒಂದು ಸಾಮಾಜಿಕ ಸಮಸ್ಯೆ. ಅದೂ ತೀವ್ರ ಘೋಷಣೆ-ಘರ್ಷಣೆ, ತ್ವೇಷ-ದ್ವೇಷಗಳಿಗೂ ಕಾರಣವಾಗುವ ಸಮಸ್ಯೆಯಾಗಿ ಉಳಿದದ್ದು ಎಷ್ಟು ಸೋಜಿಗವೋ ಅಷ್ಟೇ ಬೇಸರದ ಮತ್ತು ನಾಚಿಕೆಯ ಸಂಗತಿಯಾಗಿದೆ. ಗಾಂಧೀಜಿಯ ಅಸಂಧಿಗ್ದ ಅಸ್ಥೆ-ಆಸಕ್ತಿಗಳ ಮತ್ತು ಅನನ್ಯ ಪರಿಶ್ರಮದ ಆಂದೋಲನವೆಂದರೆ ಈ ಅಸ್ಪೃಶ್ಯತಾ ನಿವಾರಣೆಯಾಗಿತ್ತು. ಅವರ ಕಾಲದಲ್ಲಿ ಈ ಕುರಿತು ಕಂಡು ಬಂದ ಜಾಗೃತಿ ಈ ಆಂದೋಲನದ ದೇಶವ್ಯಾಪಿಯಾದ ಪ್ರಗತಿ ಕಂಡ ನಾವು ಒಂದು ಮಾತನ್ನು ನೆನಪಿಟ್ಟು ಕೊಂಡಿದ್ದೆವು. ಅವರ ಜೀವವನದಲ್ಲಿ ಸ್ವರಾಜ್ಯವು ಬಂದು ಬಿಡಲಿ. ಅಸ್ಪೃಶ್ಯತೆಯ ಈ ಘೋರ ಕಲಂಕವು ಭಾರತ ಮಾತೆಯ ಮುಖದಿಂದ ಪೂರ್ತಿ ಅಳಿಸಿ ಹೋಗುವುದು ಮಾತ್ರ ಖಂಡಿತ.

ಆದರೆ ಆದದ್ದೂ ತೀರಾ ವಿಪರೀತ. ಸ್ವರಾಜ್ಯವೇ ಮೊದಲಿಗೆ ಬಂದಿತು. ಅಸ್ಪೃಶ್ಯತೆಯ ಸಮಸ್ಯೆ ಇಂದಿಗೂ ತೀವ್ರವಾಗಿಯೇ ಉಳಿದಿದೆ. ಹಿಂದಿಗಿಂತ ಅದು ಹೆಚ್ಚು ಉಗ್ರವಾಗಿ ಉಲ್ಬಣಗೊಂಡಿದೆ. ಹೀಗಾಗಲು ಕಾರಣವೇನು?

ಸ್ವರಾಜ್ಯ ಪ್ರಾಪ್ತಿಯಿಂದಾಗಿ ಈ ಸಮಸ್ಯೆಗೆ ಹೊಸದೊಂದು ರಾಜಕೀಯ ಪ್ರಾಮುಖ್ಯತೆ ಬಂದಿತು. ಅದು ಕೇವಲ ಸಾಮಾಜಿಕ ನ್ಯಾಯದ ಪ್ರಶ್ನೆಯಾಗಿ ಉಳಿದಿಲ್ಲ. ಹಿಂದುಳಿದ ಪರಿಶಿಷ್ಟ ವರ್ಗದವರ ಉನ್ನತಿ ಅಭಿವೃದ್ಧಿಗಾಗಿ ಸ್ವರಾಜ್ಯದ ಸರಕಾರಗಳು ಸಂವಿಧಾನಕ್ಕೆ ಬದ್ಧವಾಗಿ ಅನೇಕ ಸೌಕರ್ಯ ಸೌಲಭ್ಯಗಳನ್ನು ವಿಕಾಸ ಕಾರ್ಯದ ಯೋಜನೆಗಳನ್ನು ಹಾಕಿಕೊಂಡು ಆ ನಿಟ್ಟಿನಲ್ಲಿ ಸಾಕಷ್ಟು ಮುಂದಿರದವು. ಇದರಿಂದಾಗಿ ಇತರ ವಿಶಿಷ್ಟ ವರ್ಗಗಳಲ್ಲಿ ಎಂದಿಲ್ಲದ ಈರ್ಷೆ ಅಸೂಯೆ ತಲೆದೋರಿತು. ಆರ್ಥಿಕ ಹಿಂದುಳಿವು ಕೆಲಮಟ್ಟಿಗೆ ಶೈಕ್ಷಣಿಕ ಸಾಂಸ್ಕೃತಿಕ ಹಿಂದುಳಿವು ದೇಶದಲ್ಲಿ ಅನೇಕ ಅನಭಿವೃದ್ಧ ವಲಯಗಳಲ್ಲಿ ಸಾರ್ವತ್ರಿಕವಾಗಿಯೇ ಬೇರೂರಿತು. ತೀರ ಬಡವರೂ ನಿರಕ್ಷರಸ್ಥರೂ ನಿರುದ್ಯೋಗಿಗಳೂ ಬಡ ಮೂಢ ಜನರೂ ಎಲ್ಲ ಸಮಾಜ-ಜಾತಿ ಕೋಮು ಗಳಲ್ಲಿಯೂ ಕಣ್ಣು ಕುಕ್ಕುವ ಪ್ರಮಾಣದಲ್ಲಿ ಕಂಡು ಬರುತ್ತಿರಲು, ಈ ಹರಿಜನ ಗಿರಿಜನರಿಗಾಗಿ ಮಾತ್ರ ಮುದ್ದುಮಕ್ಕಳಂತೆ ಸರಕಾರಗಳು ಹೆಚ್ಚು ಕಟಾಕ್ಷದಿಂದ ಅನುಗ್ರಹದಿಂದ ನೋಡಿಕೊಳ್ಳುವದು ಇತರ "ಸವರ್ಣ" ದೀನ-ದಲಿತದರಿದ್ರರಿಗೆ "ಉಚ್ಚ"ರೆಂಬ ಒಣ ಹೆಮ್ಮೆಯೊಂದಿಗೆ ನೀಚ ವರ್ಗಗಳಂತೆಯೇ ಅವರೊಂದಿಗೆಯೇ ಶೋಷಣೆಯ ಗಾಣದಲ್ಲಿ ಹಿಂಡಿ ಹಿಪ್ಪೆಯಾಗುತ್ತಿರುವವರಿಗೆ ಕಣ್ಣುರಿಯಾಯಿತು. ಹೊಟ್ಟೆಗಿಚ್ಚಾಯಿತು. ಮಾನವೀಹಕ್ಕುಗಳೆಲ್ಲ ಸರಿಸಮನಾಗಿರುವಾಗ ಅಸ್ಪೃಶ್ಯತಾ ನಿವಾರಣೆಯ ನಿಮಿತ್ತವಾಗಿ ಈ ಪರಿಶಿಷ್ಟ ಜನರನ್ನು ವಿಶೇಷ ಪ್ರಾಶಸ್ತ್ಯದಿಂದ (Preferential treatment) ನೋಡಿಕೊಳ್ಳುವ ಏರ್ಪಾಡು ಸಂವಿಧಾನದಲ್ಲಿಯೇ ಸೇರ್ಪಡೆಯಾದದು ಅಸ್ಪೃಶ್ಯರಲ್ಲದ ಹಿಂದುಗಳಲ್ಲಿಯ ಇತರ ಹಿಂದುಳಿದ ವರ್ಗದವರ ತಾಳ್ಮೆಗೇಡು ತಿಳಿಗೇಡುಗಳಿಗೆ ಸೇಡು ಕೇಡಿನ ಉಪದ್ವ್ಯಾಪ-ಉಪದ್ರವಗಳಿಗೆ ಪರ್ಯಾಯವಾಗಿ ಕಾರಣವಾಯಿತು.

**ಪಾಪಕ್ಕಾಗಿ ಪ್ರಾಯಶ್ಚಿತ್ತ**

ಶಾಲೆ ಕಾಲೇಜುಗಳಲ್ಲಿ, ವಸತಿ ಸೌಕರ್ಯಗಳಲ್ಲಿ, ಉದ್ಯೋಗ-ನೌಕರಿಗಳಲ್ಲಿ ಅವರಿಗಾಗಿ ಹೆಚ್ಚಿನ ಅವಕಾಶ ಅನುಕೂಲಗಳು ಅವರಂತೆಯೇ ಆರ್ಥಿಕವಾಗಿ ಸಾಮಾಜಿಕವಾಗಿ ತಾರತಮ್ಯದಿಂದ ಹಿಂದೆ ಬಿದ್ದ ಇತರ "ಸವರ್ಣ" ಜನಕ್ಕೆ ಸಹನವಾಗಲಿಲ್ಲ. ಇದೊಂದು ಸಾಮುದಾಯಿಕ ಕರ್ಮ ವಿಪಾಕ, ಶತಮಾನಗಳಿಂದ ತುಳಿದು ಮೆಟ್ಟಿ ಸುಲಿದು ಬಿಟ್ಟ ಈ ದುರ್ದೈವಿಗಳಿಗೆ ಇಂದು ಒಮ್ಮೆಲೇ ಹೆಚ್ಚಿನ ಸೌಲಭ್ಯ ಸೌಕರ್ಯಗಳನ್ನು ನೀಡುವುದು ಪರಂಪರೆಯು ಬಗೆದ ಸಾಮಾಜಿಕ ಪಾಪಕ್ಕಾಗಿ ಪ್ರಾಯಶ್ಚಿತ್ತ. ಇನ್ನು ಕೆಲಕಾಲ ಈ ದಲಿತ ಜನಕ್ಕೇ ಬರೇ ಶುಷ್ಕ ನ್ಯಾಯ ಮತ್ತು ಸಮಾನತೆಯಿಂದ ನೋಡಿದರೆ ಸಾಲದು. ಅವರಿಗೇ ಸವಲತ್ತರಿಯಾಗುತ್ತುಗಳು ಹೆಚ್ಚು ಸಿಗಬೇಕಾದದ್ದು ಅನಿವಾರ್ಯ -ಎಂಬ ಪರಿಹಾರ ದೃಷ್ಟಿಯಿಂದ ನೋಡಬೇಕಾದ ಅಗತ್ಯ ಈ ಉಚ್ಚವರ್ಣೀಯ ಉತ್ಪೀಡಿತರಿಗೆ ಅನಿಸಲೇ ಇಲ್ಲ.

ಅನ್ಯಾಯದ ಮೇಲೆ ಮೂಲತಃ ವೈಷಮ್ಯದ ಮೇಲೆ ನಿಂತ ಸಮಾಜ ವ್ಯವಸ್ಥೆಯಲ್ಲಿ ಶುಷ್ಕವಾದ ಕುರುಡು ನ್ಯಾಯ (ನ್ಯಾಯದೇವತೆಯ ಕೈಗೆ ತಕ್ಕಡಿ, ಕಣ್ಣಿಗೆ ಪಟ್ಟಿಯಂತೆ!) ಒಂದು ಘೋರವಾದ ಅನ್ಯಾಯವೇ ಸರಿ. ಒಂದು ನಿಚ್ಚಣಿಕೆಯ ಹಿರಿದೊಂದು ಮೆಟ್ಟಿಲ ಮೇಲೂ ಒಬ್ಬೊಬ್ಬ ನಿಂತಿದ್ದಾರೆಂದು ಕಲ್ಪಿಸಿರಿ. ತೀರಾ ಕೆಳಮೆಟ್ಟಲ ಮೇಲಿನ ಇಸಮು ನೀರಿನಲ್ಲಿ ನಿಂತಿದ್ದಾನೆ. ನೀರುಕುತ್ತಿಗೆಯ ಮಟ್ಟಕ್ಕೆ ಬಂದಿದೆ. ಆಗ ನಾವು ಕೇವಲ ಸಮಾನತೆಯ ನ್ಯಾಯ ಭಾವನೆಯಿಂದ ಎಲ್ಲರಿಗೂ ಒಂದೊಂದು ಮೆಟ್ಟಲು ಕೆಳಗೆ ಇಳಿಯಲು ಆಜ್ಞಾಪಿಸಿದರೆ, ಆ ತೀರಾ ಕೆಳಗಿನವ ಮುಳುಗಿ ಸಾಯುವುದೇ? ಅಂದರೆ, ಮೂಲತಃ ವಿಷಮ ವ್ಯವಸ್ಥೆ ಇದ್ದಲ್ಲಿ ಎಲ್ಲರಿಗೂ ಒಂದೇ ಸಮವಾದ ಏರ್ಪಾಟ ಮಾರ್ಪಾಟ ಕಲ್ಪಿಸುವುದು ನ್ಯಾಯದ ನೆಪದಿಂದ ನಡೆದ ಕ್ರೂರ ಅನ್ಯಾಯವೇ ಆಗುತ್ತದೆ. ಆದ್ದರಿಂದ ಶತಮಾನಗಳಿಂದ ಹಿಂದೆ ಬಿದ್ದ ಪಶುಗಳಿಗಿಂತಲೂ ಕೀಳಾಗಿ ಬದುಕುತ್ತ ಬಂದ ನಮ್ಮ ದುರ್ದೈವೀ ದಲಿತ ಬಾಂಧವರಿಗೆ ಮಾನವ್ಯದ ಬಾಂಧವ್ಯದಲ್ಲಿ ತಂದು ನಾವೆಲ್ಲರೂ ಸರಿಸಾಟಿಯಾಗಿ ನಿಲ್ಲುವಂತೆ ಮಾಡಬೇಕಾದರೆ ಅವರಿಗೆ ಹೆಚ್ಚಿನ ವಿಶೇಷ ಸೌಕರ್ಯಗಳನ್ನು ಸವಲತ್ತುಗಳನ್ನು ವೈಧಾನಿಕವಾಗಿಯೇ ನೀಡಬೇಕು. ಅದಕ್ಕೆ ಸರಿಯಾಗಿ ಅವರನ್ನು ನೋಡಿಕೊಳ್ಳುವ ನಡೆಯಿಸಿಕೊಳ್ಳುವ ಭರವಸೆ ಅವರಲ್ಲಿ ಮಾಡಬೇಕು. ಅದಕ್ಕಾಗಿ ಅನಿವಾರ್ಯವಾಗಿ ಈವರೆಗೆ ಪಟ್ಟ, ಭದ್ರ ಪ್ರಯೋಜನಗಳನ್ನು ವಿಶೇಷಾಧಿಕಾರಗಳನ್ನು ತಲೆಮಾರಿನಿಂದ ತಲೆಮಾರಿಗೆ ಭೋಗಿಸುತ್ತ ಬಂದ ಮೇಲ್ವರ್ಗಗಳೆಂಬವರಿಗೆ ಕೆಲವು ಕಾಲ ಅನ್ಯಾಯವಾದಂತೆ ತೋರಿದರೂ ನಷ್ಟವಿಲ್ಲ. ಕೊನೆಗೂ ಕಾಯಿದೆಗಿಂತ ನ್ಯಾಯ ದೊಡ್ಡದು. ನ್ಯಾಯಕ್ಕಿಂತಲೂ ಸತ್ಯವು ದೊಡ್ಡದು.

**ಸಾವರಕರರ ಮೇಲ್ಪಂಕ್ತಿ**

ಆದರೆ ಆ ಸತ್ಯಕ್ಕೆ ಹಲವು ಮಗ್ಗಲು. ಸತ್ಯವೊಂದೇ ಆದರೂ ಅದನ್ನು ಬಹುವಿಧವಾಗಿ ಹೇಳುತ್ತ ಬಂದಿದ್ದಾರೆ. ಅಂದರೆ ಆ ಮಟ್ಟಿಗೆ ಅವರು ಪ್ರಾಮಾಣಿಕರಾಗಿಲ್ಲ. ತಾನು ಕಂಡಷ್ಟು ಸತ್ಯವನ್ನು ಕಂಡಷ್ಟೇ ಕಂಡದ್ದೇ ಸತ್ಯವೆಂದು ಆಗ್ರಹದಿಂದ ಸಾಧಿಸುತ್ತ ಬಂದಿದ್ದಾರೆ. ಈ ಹೇಳಿಕೆ-ತೋರಿಕೆಗಳ ಕಡೆಯ ಸತ್ಯವೇನು? ಅಸ್ಪೃಶ್ಯತೆಯ ನಿವಾರಣೆ ಒಂದು ರೀತಿಯಿಂದ

ಎಷ್ಟು ಕಠಿಣವೂ ಇನ್ನೊಂದು ರೀತಿ ಅಷ್ಟೇ ಸುಲಭ. ಅದನ್ನು ದಿ ಸ್ವಾತಂತ್ರ್ಯವೀರ ಸಾವರ್ಕರರು ರತ್ನಾಗಿರಿಯಲ್ಲಿ ಸ್ಥಾನ ಬದ್ಧರಾಗಿದ್ದಾಗಲೇ ರಾಜಕೀಯ ಚಟುವಟಿಕೆಗಳನ್ನು ಮಾಡದಂಥ ಉಗ್ರ ನಿರ್ಬಂಧದಲ್ಲಿ ಇರುವಾಗಲೇ ಬಹು ದೊಡ್ಡ ಪ್ರಮಾಣದಲ್ಲಿ ಸಾಧಿಸಿ ತೋರಿಸಿದರು.

ದಿ. ಬ್ಯಾರಿಸ್ಟರ್ ಸಾವರ್ಕರರು ರತ್ನಾಗಿರಿಯಲ್ಲಿ ಪತಿತಪಾವನ ಮಂದಿರವನ್ನು ಸ್ಥಾಪಿಸಿದರು. ಅಲ್ಲಿ ಹರಿಜನರೇ ಪೂಜಾರಿಗಳು. ರಾಮದೇವರ ಉತ್ಸವಕ್ಕೆ ಕರವೇರ ಪೇಟದ ಜಗದ್ಗುರು ಶಂಕರಾಚಾರ್ಯ, ಡಾ॥ ಕರ್ತಕೋಟಿಯವರನ್ನು ಆಮಂತ್ರಿಸಿದರು. ಶ್ರೀ ಶಂಕರಾಚಾರ್ಯರಿಗೆ ಉಣ ಬಡಿಸಿದ್ದು ಶುಚಿರ್ಭೂತ ಅಸ್ಪೃಶ್ಯರೇ ತಯಾರಿಸಿದ ಊಟ! ಸಾವಿರಾರು ಹಿಂದುಗಳು ಸ್ಪೃಶ್ಯಾಸ್ಪೃಶ್ಯತ ಬೇಧವಿಲ್ಲದೆ 'ಸಹಭೋಜನ' ಸಂತರ್ಪಣೆಗಳಲ್ಲಿ ಉತ್ಸಾಹ-ಉಲ್ಲಾಸಗಳಿಂದ ಭಾಗವಹಿಸಿದರು. ಆ ಭೋಜನವಾದರೂ ಯಾವುದು? ತೀರಾ ಬಡವರು ಉಣ್ಣುವ "ಚಟಣೀ ಭಾಕರಿ". ಇಂದು ನಾವು 'ಸಹಜೀವನ'ದ ಮಾತು ಆಡಂಬರದಿಂದ ಎಲ್ಲೆಡೆಗೂ ಘೋಷಿಸುತ್ತೇವೆ? ಯಾಗ, ಯಜ್ಞ, ಹೋಮ, ಹವನ, ಸಾಮುದಾಯಿಕ ಸತ್ಯನಾರಾಯಣ, ಸಹಸ್ರ ಭೋಜನ ಇತ್ಯಾದಿ ಅದ್ದೂರಿಯಿಂದ ನಡೆಯಿಸುತ್ತೇವೆ. ಅಲ್ಲಿ ಹೊಲೆಯ, ಮಾದಿಗ, ಚಮಗಾರ, ಆಗೇರ, ಮುಕ್ರಿ ಮುಂತಾದವರು, ಕುಂಬಾರ, ಕಮ್ಮಾರ ಉಪ್ಪಾರರಂಥವರು, ನಾಡಿಗರಂಥವರು ಎಷ್ಟು ಜನ ಬರೇ ಹುಟ್ಟಿನಿಂದ ಬ್ರಾಹ್ಮಣರೆನಿಸಿಕೊಂಡ ಸವರ್ಣರೊಂದಿಗೆ ಒಂದೇ ಪಂಕ್ತಿಯಲ್ಲಿ ಕೂತು ಉಂಡದ್ದುಂಟು?

## ಯಾರು ಯಾರಿಗೆ ಅಸ್ಪೃಶ್ಯ?

ನಮ್ಮ ನೂರಾರು ಜಾತಿಗಳು ಒಬ್ಬರಿಗೊಬ್ಬರು ಅಸ್ಪೃಶ್ಯರೇ, ಜಾತಿ-ಮತಿಗಳ ನಡುವೆ ಊಟ-ಉಪಚಾರ ಹೆಣ್ಣು ಗಂಡಿನ ಸಂಬಂಧ ಅಂದರೆ ಲಗ್ನ ವಿಧಿಯಿಂದಲೇ ವರ್ಜ್ಯ, ನಿಷಿದ್ಧ. ಯಾರು ಯಾರಿಗೆ ಅಸ್ಪೃಶ್ಯ? ಅಸ್ಪೃಶ್ಯ ಅಂದರೆ ಮುಟ್ಟತಕ್ಕದ್ದಲ್ಲ, ಮುಟ್ಟಲು ಯೋಗ್ಯವಲ್ಲವೆಂದು. ಅಂದಾಗ ಯಾರು ಹೆಚ್ಚು "ಮಡಿಯೊ" ಅವರೇ ಹೆಚ್ಚು ಅಸ್ಪೃಶ್ಯರು. ಅವರನ್ನು ಯಾರೂ ಮುಟ್ಟಬಾರದು! ನಮ್ಮಿಂದ ಮುಟ್ಟಿಸಿಕೊಳ್ಳಲು ಅವರು ಯೋಗ್ಯರಲ್ಲ. ಈ ಅಸ್ಪೃಶ್ಯತೆ ಮಡಿ-ಮೈಲಿಗೆಯದೇ ಒಂದು ಮಿತಿಗೆಟ್ಟ ವಿರಾಟರೂಪ. ಅದು ಕೆಳಕೆಳಗೆ ಹೋದಂತೆ ಹೆಚ್ಚು ಹೆಚ್ಚು ತೀವ್ರ ಉಗ್ರ ಮತ್ತು ನಿಂದ್ಯವಾಗಿ ಬಿಟ್ಟಿದೆ. ಅಸ್ಪೃಶ್ಯರೆಂಬ ಜಾತಿಗಳು ಪರಸ್ಪರ ಅಸ್ಪೃಶ್ಯರು!! ನಿಜವಾಗಿಯೂ ಈ ಅಸ್ಪೃಶ್ಯತೆಯ Anotomy ಯನ್ನು ವಿಶ್ಲೇಷಿಸಿ ವಿವೇಚಿಸಿ ಒಂದು ಸಂಶೋಧನಾತ್ಮಕ ಪ್ರಬಂಧವನ್ನು ಬರೆದು ಯಾರೂ ಸ್ನಾತಕೋತ್ತರ ವಿದ್ಯಾರ್ಥಿ ಡಾಕ್ಟರೇಟು ಪಡೆಯಬಹುದು.

ಇಲ್ಲಿ ನಾವು ಗಮನಿಸಬೇಕಾದ ಮುಖ್ಯ ಅಂಶವೆಂದರೆ ಈ ಮುಟ್ಟಬಾರದೆಂಬ ಹಾಸ್ಯಾಸ್ಪದ ಲಜ್ಜಾಸ್ಪದ ಲಕ್ಷಣವು ಹಿಂದೂ ಜಾತೀ ವ್ಯವಸ್ಥೆಯ ಒಂದು ಸರ್ವ ಸಾಮಾನ್ಯ ಲಕ್ಷಣ ಎಂಬುದನ್ನು.

ಅಂದಾಗ ಇದನ್ನು ಹೋಗಲಾಡಿಸಲು ಮೂಲತಃ ಜಾತಿ ಭಾವನೆ ಜಾತಿಬಂಧನಗಳನ್ನು ಬೇರುಗೂಡಿ ಹೋಗಲಾಡಿಸಲೇಬೇಕು. ಬೇರು ಭದ್ರವಾಗಿ ಇರುವನಕ ಅಥವಾ ಇಟ್ಟುಕೊಂಡು

ಟೊಂಗೆ ಕಡಿದು ತೊಗಟೆ ಸವರಿದರೆ ಏನು ಪ್ರಯೋಜನ? ಪೇಜಾರರ ಶ್ರೀಗಳಿಂದು ಹರಿಜನ ಕೇರಿಯಲ್ಲಿ ಹೋಗಿ ತೀರ್ಥಕೊಡುತ್ತಾರೆ. ಆದರೆ ಇದರಿಂದ ಈ ಬೇರಿಗೆ ನೀರೆರೆದಂತೆಯೇ. ಏಕೆಂದರೆ ಅಸ್ಪೃಶ್ಯತೆಗೆ ಮೂಲಭೂತವಾದ ಸಾಮಾಜಿಕ ತಾರತಮ್ಯ, ವರ್ಗಗಳ ವೈಷಮ್ಯವನ್ನು ಶ್ರೀಗಳು ಒಪ್ಪಿಕೊಂಡಿದ್ದಾರೆ. ಅದನ್ನು ವೈಚಾರಿಕ ಅಥವಾ ದೈವಿಕ ನಿಲುಮೆಯಿಂದ ಪಾರಮಾರ್ಥಿಕ ಪಾತಳಿಯಿಂದ ನೋಡಿ ಒಂದು ಬಗೆಯ ಸಮದರ್ಶಿತನದ ಪಾಂಡಿತ್ಯ ಪ್ರದರ್ಶನ ಮಾಡಿದಂತೆ ಆಗುತ್ತದೆ. ಈ ಬಗೆಯ, ಪ್ರತೀಕಾತ್ಮಕ ಸಾಂಕೇತಿಕ ಪ್ರದರ್ಶನೀಯ ಅವಿರ್ಭಾವ ಆಚಾರಗಳಿಂದ ಈ ಕಾಲದಲ್ಲಿಯ ಎಚ್ಚೆತ್ತು ಹುರಿಗೊಂಡ ದಲಿತ ಜನತೆಯ ಸ್ವಾಭಿಮಾನದ ವೃತ್ತಿ ತಣಿಯದು, ಮಣಿಯದು. ಪೇಜಾವರ ಶ್ರೀಗಳವರ ಉಲ್ಲೇಖಬಿಟ್ಟು ಶಂಕರಾಚಾರ್ಯ ಡಾ॥ ಕುರ್ತಕೋಟೆಯವರ ಸಂದರ್ಭದಲ್ಲಿ ಮಾತಾಡಿದಾಗ ಅಂದಿನ ಅವರ ಮತ್ತು ಇಂದಿನ ಇವರ ವರ್ತನೆ-ಪ್ರವರ್ತನೆಗಳ ಮೇಲೆ ಚೆನ್ನಾಗಿ ನಿಡುಬೆಳಕು ಬೀಳುತ್ತದೆ.

**ಸತ್ತೆ ಸಂಪತ್ತುಳ್ಳವರ ಜಾತಿ**

ಈ ಮಹನೀಯರ ಉದ್ದೇಶಗಳ ಬಗೆಗೆ ಶಂಕೆಯೇ ಇಲ್ಲ. ಗಾಂಧೀಜಿಯೊಬ್ಬರೇ ಅಸ್ಪೃಶ್ಯತೆಯನ್ನು ತ್ರಿಕರ್ಣಕಪೂರ್ವಕವಾಗಿ ನಿರಾಕರಿಸಿದರು. ಅಸ್ಪೃಶ್ಯರನ್ನು ಹರಿಜನರೆಂದು ಕರೆದ ಮಾತ್ರಕ್ಕೆ ಅದೊಂದು ಹೊಸ ಪಂಗಡವಾಯಿತೆ ಹೊರತು ಹರಿಜನರ ಅಸ್ಪೃಶ್ಯತೆ ಹೋಗಲಿಲ್ಲ. ಡಾ॥ ಅಂಬೇಡ್ಕರರು ಕೊನೆಗೂ ಸಹನೆಗೆಟ್ಟ ತಮ್ಮ ವರ್ಗವನ್ನು ಬೌದ್ಧರನ್ನಾಗಿ ಮತಾಂತರಿಸಿದರು. ಆದರೆ ಇದರಿಂದ 'ನವ ಬೌದ್ಧರು' ಹೊಸತೊಂದು ಜಾತಿಯಾದರೇ ಹೊರತು ತಮ್ಮ ಪರಿಶಿಷ್ಟ ವರ್ಗದ ಹಿಂದಿನ ಹಕ್ಕುಗಳನ್ನು ಕಳೆದುಕೊಳ್ಳುವುದರ ಕಡೆಗೆ ಹೊಸದೇನೂ ಗಳಿಸಿದಂತಾಗಲಿಲ್ಲ!

ಈ ನಿಟ್ಟಿನಲ್ಲಿ ನಮ್ಮ ಅತ್ಯಾಧುನಿಕರೆನಿಸಿಕೊಳ್ಳುವ ಯುವಜನರು ಜೀವದ ಹಂಗುದೊರೆದು ಹೋರಾಡಬೇಕು. ಕೇವಲ ಸಂಪೂರ್ಣ ಆಧುನೀಕರಣ ಅದಕ್ಕೆ ಹಿನ್ನೆಲೆಯಾದ ಔದ್ಯೋಗಿಕರಣ-ಅವೆರಡೆ ನಿಜವಾಗಿ ಅಸ್ಪೃಶ್ಯತಾ ನಿವಾರಣೆಗೆ ಅದರ ಹಿಂದಿನ ಜಾತ್ಯಾತೀತತೆಗೆ ಸಮರ್ಥ ಸಮರ್ಪಕ ಉಪಾಯ.

ನಮ್ಮಲ್ಲಿ ಒಬ್ಬ ಅಸ್ಪೃಶ್ಯ ಬಿ.ಡಿ.ಓ. ಬಂದರು. ಅವರಿಗೆ ಎಲ್ಲ ಉಚ್ಚವರ್ಣದವರ ಮನೆಯೊಳಗೂ ಎಡೆ ಬಿತ್ತು. ಮಂತ್ರಿಗಳು ದೊಡ್ಡ ಅಧಿಕಾರಿಗಳ ಜಾತಿಯನ್ನು ಯಾರೂ ಗಮನಿಸುವದಿಲ್ಲ. ಗೋಕರ್ಣದ ಗೌರೀ ಗುಡಿಯ ಗರ್ಭ ಗುಡಿಯೊಳಗೂ ಸಿರಿವಂತ 'ಕೀಳು ಜಾತಿ' ಯವರಿಗೆ "ಮುಟ್ಟು ಪೂಜೆ" ಯ ಪ್ರವೇಶ ಸಿಗುತ್ತದೆ. ಅಂದರೇನು? ಸತ್ತೆ, ಮತ್ತು ಸಂಪತ್ತು ಈ ಶಕ್ತಿಗಳು ಯಾವ ವ್ಯಕ್ತಿಯ ಅಥವಾ ವರ್ಗದ ಕೈಗೆ ಬರುವವೋ ಅವರಿಗೆ ಇಂದು ಎಲ್ಲ ಸಾರ್ವಜನಿಕ ಸಾಮಾಜಿಕ ಸನ್ಮಾನ ಸ್ವಾಗತಗಳ ಬಾಗಿಲುಗಳು ತೆರೆಯುವವು.

ಡಾ॥ ಲೋಹಿಯಾ ಹೇಳುವಂತೆ- ಭಾರತದ ಇತಿಹಾಸ ಎಲ್ಲ ಮಧ್ಯಯುಗೀನ ಸಮಾಜಗಳ ಇತಿಹಾಸ ವರ್ಣಾಂತರ ವರ್ಗಾಂತರಗಳ ವ್ಯತ್ಯಯ ವರ್ಗಗಳು ಅನುವಂಶಿಕವಾಗಿ ಸಾರ ಬದ್ಧವಾಗಿ ವರ್ಣಗಳಾಗುತ್ತವೆ. ಆಗ ಸಮಾಜ ಸಾರಬದ್ದ ಜಡಬದ್ಧವಾಗುತ್ತದೆ. ಪರಂಪರೆ ಸಾಂಪ್ರದಾಯಗಳೇ

ಎಲ್ಲ ಯೋಗ್ಯತೆ ಅರ್ಹತೆಗಳ ಒರೆಗಲ್ಲಾಗುತ್ತದೆ. ಆದರೆ ಕ್ರಮೇಣ ಔದ್ಯೋಗಿಕ ವಿಕಾಸದಿಂದ ವರ್ಣಗಳು ಮುರಿದು ಕರಗಿ ಹೊಸ ವರ್ಗಗಳಾಗುತ್ತವೆ. ಜನ್ಮಕ್ಕಿಂತ ಗುಣ ಕರ್ಮಕ್ಕೇ ಪ್ರಾಶಸ್ತ್ಯ ದೊರೆಯ ಹತ್ತುತ್ತದೆ. ವ್ಯಕ್ತಿ ಸ್ವಾತಂತ್ರ್ಯ ಮೇಲಾಗುತ್ತದೆ. ಆಗ ಸಮಾಜ ಸ್ಥಿತ್ಯಂತರದ ಹಂತದಲ್ಲಿ ಸಾಗುತ್ತದೆ. ನಾವಿಂದು ಈ ಎರಡನೆಯ ಮಾದರಿಯ ಸಮಾಜದ ಘಟಕಗಳು. ಆದರೆ ಈ ಸ್ಥಿತ್ಯಂತರವನ್ನು ನಿರ್ದಿಷ್ಟ ಗುರಿ ಮತ್ತು ಸಮಾಜವಾದೀ ವ್ಯವಸ್ಥೆಯತ್ತ ಒಯ್ಯಬೇಕಾಗಿದೆ. ಅದಕ್ಕಾಗಿ ಅಸ್ಪೃಶ್ಯತೆ ಯಾವ ಹಂತದಲ್ಲಿಯೇ ಯಾವ ರೂಪದಲ್ಲಿಯೇ ಇರಲಿ ಅದನ್ನು ನಾಶ ಮಾಡಬೇಕಾಗಿದೆ. ಆಧುನಿಕತೆಯನ್ನು ಎಲ್ಲ ವಿಧದಿಂದಲೂ ಎಲ್ಲ ಕ್ಷೇತ್ರಗಳಲ್ಲಿಯೂ ನೆಲೆಗೊಳಿಸಬೇಕಾಗಿದೆ.

**ಶೂದ್ರ ಪ್ರತಿಕ್ರಿಯೆ-ಶೂದ್ರ ಯುಗ.**

ಇದಕ್ಕಾಗಿಯೆ ಇಂದು "ದಲಿತ ಪ್ಯಾಂಥರ್"ಶೂದ್ರ ಪ್ರತಿಕ್ರಿಯೆ ದಕ್ಷಿಣದ ರಾಜ್ಯಗಳಲ್ಲಿ ತೀವ್ರವಾಗಿ ತಲೆ ಎತ್ತಿದೆ. ನಿಜವಾಗಿಯೂ ಇಂದಿನ ಯುಗ-ಶೂದ್ರ ಯುಗ, ನಿಜವಾದ ಬ್ರಾಹ್ಮಣ್ಯ ದ್ರೋಣಾಚಾರ್ಯರ ಕೌರವರಲ್ಲಿ ಧನುರ್ವಿದ್ಯೆ ಕಲಿಸುವ ಊಳಿಗಕ್ಕೆ ನಿಂತಂದಿನಿಂದಲೇ ಲೋಪವಾಗಿದೆ. ಚಾಕರಿ, ನೌಕರಿ ಮಾಡುವ ಎಲ್ಲ ತ್ರಿವರ್ಣಿಕರೂ ಸ್ಮೃತಿ ಗ್ರಂಥಗಳಂತೆ "ಕರ್ಮ ಚಾಂಡಾಲ"ರು.

ನಮ್ಮ ಯುವಜನರು ಹೋಟೆಲ್ ಹಾಸ್ಟೆಲ್‌ಗಳಲ್ಲಿಯ ಅಸ್ಪೃಶ್ಯತೆ ಹೋಗಲಾಡಿಸಲು ಹೋರಾಡಬೇಕು. ಅಸ್ಪೃಶ್ಯತೆಯನ್ನು ತ್ರಿಕರಣ ಪೂರ್ವಕವಾಗಿ ಬಿಟ್ಟುಕೊಡಬೇಕು. ಕಳೆದ ವರ್ಷ ಕಲಕತ್ತಾ ಕಾಂಗ್ರೆಸಿನಲ್ಲಿ ಎಲ್ಲ ಪರಿಚಾರಿಕೆಯರೂ ಉಣ ಬಡಿಸುವವರೂ ಅಸ್ಪೃಶ್ಯ ಸೋದರಿಯರೇ ಆಗಿದ್ದರು. ಆ ಸ್ತುತ್ಯ ಕ್ರಮ ಎಲ್ಲ ಸಮಾರಂಭಗಳಲ್ಲಿ ರೂಢವಾಗಬೇಕು. ಕೇವಲ ಶಾಂತಿಗೆ, ರುಚಿಗೆ, ಸಭ್ಯತೆಗೆ ವಿನಯಕ್ಕೆ ಪ್ರಾಧಾನ್ಯ ನೀಡಬೇಕು.

ಅಸ್ಪೃಶ್ಯತಾ ನಿವಾರಣೆ ಬರೇ ಭೂತ ದಯೆಯ ಪ್ರಶ್ನೆ ಅಲ್ಲ ಅದನ್ನು ಹಾಗೆ ನೋಡುವುದು ನಮ್ಮ ಅಸ್ಪೃಶ್ಯರೆಂಬ ಸೋದರರಿಗೆ ಅಪಮಾನ. ಕನಕನಿಗಾಗಿ ಕೃಷ್ಣ ಮುಖ ಹೊರಳಿಸಿ ಕಿಂಡಿಯಲ್ಲಿ ಕಾಣಿಸಿಕೊಂಡನಂತೆ! ಆದರೆ ತಾನು ನಿಂತ ಸ್ಥಾನ ಬಿಡಲಿಲ್ಲ. ಬ್ರಾಹ್ಮಣರ ಬಂಗಾರದ ಪಂಜರ ದಲ್ಲಿಯೇ ಆತ ಕೊಳಲು ಬಾರಿಸುತ್ತ ನಿಂತ! ಪವಾಡಮಾಡುವ ಪರಮಾತ್ಮ ಗಾಡಿಯ ಹೊರಗೆ ಕನಕನ ಗುಡಿಸಲಿಗೇ ಬರಬಹುದಿತ್ತು! ಈಗ ಅದೇ ಉಡುಪಿಯಲ್ಲಿ ಸಿಂಡಿಕೇಟ್ ಬ್ಯಾಂಕಿನ ನೂರಾರು "ಕನಕನ ಕಿಂಡಿ" (Counter windows) ಇವೆ. ಅವುಗಳ ಹಿಂದೆ ಎಷ್ಟು ಅಸ್ಪೃಶ್ಯ ಯುವ ಯುವತಿಯರಿಗೆ ಸ್ಥಾನ ದೊರೆತಿದೆ?

("ಸಮಾಜವಾಣಿ" ೧೯೭೪)

# ಗೋಕರ್ಣ

ಗೋಕರ್ಣ ಎಂಬ ಹೆಸರು ಹೇಗೆ ಬಂತು? ಈ ಪ್ರದೇಶ ಗಂಗಾವಳಿ (ಶಾಲ್ಮಲಾ), ಅಘನಾಶಿನಿಗಳ ನಡುವಿನ ಗೋಕರ್ಣ ಮಂಡಳ-ಆಕಳ ಕಿವಿಯ ಆಕಾರದಂತೆ ಇರುವದೆಂಬುದ ರಿಂದಲೋ? ಹಾಗಾದರೆ ಈ ಸೀಮೆಯ ಈ ಆಕಾರವನ್ನು ಆ ಕಾಲದಲ್ಲಿ ಕಂಡುಕೊಂಡವರು ಯಾರು? ಆದರೆ 'ಗೋಕರ್ಣ' - ಇದು ಸರ್ಪಕ್ಕೆ ಪರ್ಯಾಯ ನಾಮ, ಯಾರಿಗೆ ಕಿವಿಯೇ ಕಣ್ಣಾಗಿರುವುದೋ ಅಂಥ ಪ್ರಾಣಿ ಹಾವು. (ಗೋ-ಕಣ್ಣು; ಗೋಚರಿಸು ಈ ಶಬ್ದದಲ್ಲಿ ಈ ಅರ್ಥವಿದೆ; ಕರ್ಣ ಕಿವಿ) ನಾಗರ ಬಯಲು, ನಾಗಬೀದಿ, ಮಣಿನಾಗ, ಸಮೀಪದಲ್ಲಿ ನಾಗೂರು. ನಾಗಗಳಿಗೆ ಹೆಸರಾದ ಮಣಿಭದ್ರ ಇತ್ಯಾದಿ ಅನೇಕ ನಾಗ-ಸಂದರ್ಭದ ಸ್ಥಳನಾಮಾಂಕಿತಗಳು ಈ ಕ್ಷೇತ್ರದಲ್ಲಿ ಇವೆ.

ರಾವಣ ಕೈಲಾಸದಿಂದ ಆತ್ಮಲಿಂಗವನ್ನು ತಂದು ಸ್ಥಾಪಿಸುವುದಕ್ಕೂ ಹಿಂದಿನಿಂದಲೇ ಈ ಕ್ಷೇತ್ರ 'ಸಿದ್ಧಿಕ್ಷೇತ್ರ' ವೆಂದು ಪ್ರಸಿದ್ಧ. ರಾಮಾಯಣದಲ್ಲಿ ಸೀತಾರಾಮಲಕ್ಷ್ಮಣರು ಗೋಕರ್ಣಸಮುದ್ರ ತೀರದಲ್ಲಿ ಬಂದು ಶಿವನನ್ನು ಪೂಜಿಸಿ ತೀರ್ಥವನ್ನು ಕಲ್ಪಿಸಿದ ಉಲ್ಲೇಖವಿದೆ. ಆದರೆ ರಾವಣನ ಚರಿತ್ರದ ಏಕಮೇವ ಆಕರವಾದ ಆ ಕಾವ್ಯದಲ್ಲಿ 'ರಾವಣ ಆತ್ಮಲಿಂಗವನ್ನು ಇಲ್ಲಿಗೆ ತಂದ ವರ್ಣನೆ ಇಲ್ಲ. ತಾಯಿ ಕೈಕಸಿಗಾಗಿ ಲಿಂಗವನ್ನು ಆದಷ್ಟು ಶೀಘ್ರ ಲಂಕೆಗೆ ಒಯ್ಯಲು ಧಾವಿಸುವ ಮಾತೃಭಕ್ತ ರಾವಣ ದಕ್ಷಿಣಕ್ಕೆ ಹೋಗುವುದು ಬಿಟ್ಟು ಈ ಪಶ್ಚಿಮ ಸಮುದ್ರತೀರಕ್ಕೆ, ಹೇಗೆ, ಏಕೆ ಬಂದಾನು? (ಸೀತೆಯನ್ನು ಅಪಹರಿಸಿ ಹೀಗೆ ಹೀಗೆಯೇ ಲಂಕೆಗೆ ಓಡುವಾಗ ಆತ ಈ ಹಾದಿ ಹಿಡಿದಿದ್ದಿಲ್ಲ!) ಗೋಕರ್ಣಮಹಾತ್ಮ್ಯದಂತೆ ರಾವಣನನ್ನು ಇಲ್ಲಿ ತಡೆದದ್ದು ಈ ಸ್ಥಾನ ಅನಾದಿಯಿಂದಲೂ ಸಿದ್ಧಿ ಕ್ಷೇತ್ರವೆಂದು ಪುರಾಣ ಪ್ರಸಿದ್ಧವಿದ್ದುದರಿಂದ. ಆಗ ಇದಕ್ಕೆ 'ವರುಣಾವರ್ತ'ವೆಂಬ ಹೆಸರಿತ್ತು.

ಈ ಕ್ಷೇತ್ರದಲ್ಲಿ ಅನೇಕ ದೇವ-ದೇವತೆಗಳ ಗುಡಿಗಳಿವೆ. ಆದರೆ ಅವುಗಳ ವೈಶಿಷ್ಟ್ಯವೆಂದರೆ ಅವು ಬಹುಳಷ್ಟು ಶಿವಸ್ಥಾನಗಳೇ! ಅಂದರೆ ಆಯಾ ದೇವತೆ ಇಲ್ಲಿಗೆ ಬಂದು ತೀರ್ಥ ಕಟ್ಟಿ ಲಿಂಗ ಸ್ಥಾಪಿಸಿ ಶಿವನನ್ನು ಒಲಿಸಿಕೊಂಡ ಸ್ಥಾನಗಳಿವು! ಈ ಎಲ್ಲ ಗುಡಿಗಳು ಗೋಕರ್ಣವನ್ನು ಆಗ್ನೇಯದಿಂದ ಸುತ್ತುವರಿದು ನಿಂತ 'ಶತಶೃಂಗ' ಪರ್ವತದಕೋಡಿನ ಅಂಚಿಗೆ ಕಡಲತೀರದಿಂದ ಹಾಗೆಯೇ ಒಳಗೆ ನೆಲಸಿವೆ.

ಪ್ರಾಚೀನಕಾಲದಲ್ಲಿ ಈ ಕ್ಷೇತ್ರದ ಪ್ರವೇಶ ಕೋಟಿತೀರ್ಥದ ಈಶಾನ್ಯಕಡೆಯಿಂದ ಇತ್ತು. ಅದಕ್ಕೆ ಇಂದಿಗೂ ಬಂಡಿಕೇರಿ ಅನ್ನುತ್ತಾರೆ. ಅದರ ಬಾಯಿಗೆ 'ಬಟ್ಟೆ ಗಣಪತಿ' ನಿಂತಿದ್ದಾನೆ. ಕ್ಷೇತ್ರದ ಪ್ರವೇಶದ್ವಾರದಲ್ಲಿ. ಅಲ್ಲಿ ನಿಂತು ನೋಡಿದರೆ ಕಣ್ಣಿಗೆ ತಂಪು ತುಂಬುವ ವಿಶಾಲವಾದ ಕೋಟಿತೀರ್ಥ. ಅದರ ದಕ್ಷಿಣ-ಪೂರ್ವ ಸುತ್ತಿಗೆಲ್ಲ ಪ್ರಾಚೀನ ಗುಡಿಗಳು- ಭೈರವ, ಹನುಮಂತೇಶ್ವರ, ನರಸಿಂಹ, ಶ್ರೀಕೃಷ್ಣ, ಶಂಕರನಾರಾಯಣ ಇತ್ಯಾದಿ. ಕೊನೆಯ ಗುಡಿ ಇಂದು ಹಾಳುಬಿದ್ದಿದೆ. ಅಲ್ಲಿಯ ಮೂಲವಿಗ್ರಹ ವಿಚ್ಛಿನ್ನವಾಗಿ ಎಲ್ಲೋ ಬಿದ್ದಿದೆ- ಅರ್ಧವಿಷ್ಣು ಅರ್ಧಶಿವ. ಆದರೆ ಒಂದು

ಶತಮಾನದ ಹಿಂದೆ ನಮ್ಮ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಿಗೆ ಭೇಟಿಕೊಟ್ಟು ಸಂಚರಿಸಿದ ಡಾ. ಬುರ್ರಾನನ್ ಈ ಶಂಕರನಾರಾಯಣ ವಿಗ್ರಹವನ್ನು ಮೆಚ್ಚಿ ಅದರ ರೇಖಾಚಿತ್ರವನ್ನು ಬರೆದು ತನ್ನ ಗ್ರಂಥದಲ್ಲಿ (ದಿನಚರಿ) ಪ್ರಕಟಿಸಿದ್ದುಂಟು! ಶಿವರಾತ್ರಿಯ ರಥೋತ್ಸವವನ್ನು ಕೆಲವು ಶತಮಾನಗಳ ಹಿಂದೆಯೇ ಅರಬರ ವೇಷದಲ್ಲಿ ಬಂದ ಒಬ್ಬ ಇಟಾಲಿಯನ್ ಪ್ರವಾಸಿ ಬಣ್ಣಿಸಿದ್ದು ಇಂದಿನ ಇಲ್ಲಿಯ ಜಾತ್ರೆಗೆ ಕನ್ನಡಿ ಹಿಡಿದಂತಿದೆ. ಆದರೇನು? ಅಂದಿನಿಂದ ಇಂದಿಗೂ ಈ ಊರು ವಿಶೇಷ ವಿಕಾಸಗೊಂಡಂತಿಲ್ಲ.

ಇಲ್ಲಿಯ ಮಹಾಬಲೇಶ್ವರ ಲಿಂಗವೇ ಒಂದು ಅಪೂರ್ವ. ಸಾಮಾನ್ಯ ಆಗಮೋಕ್ತಲಿಂಗಗಳ ಆಯ ಆಕಾರ ಇದಕ್ಕೆ ಇಲ್ಲವೇ ಇಲ್ಲ. ಗರ್ಭಗುಡಿ ಹೊಕ್ಕರೆ ಆ ಲಿಂಗವೇ ಕಾಣುವುದಿಲ್ಲ. ಅದೊಂದು ಶೂನ್ಯವೆಂದೇ ಅನಿಸುತ್ತದೆ. ಮರದ ಮೊರಡಿನಂತೆ ಮೂರು ಬೇರಾಗಿ ನೆಲದಾಳದಲ್ಲಿ ಹೂತು ನಿಂತ ಲಿಂಗದ ಹೆಬ್ಬೆರಳ ಉಂಗುಟದಂಥ ತುದಿಯು ಮಾತ್ರ ಪೀಠದ ನಡುವೆ ಕುಳಿಯಲ್ಲಿ ಮುಟ್ಟಿದಾಗಲೇ ಮನದಟ್ಟಾಗುವ ರೂಪದಲ್ಲಿದೆ! ಪೀಠವೂ ಶಾಲಿಗ್ರಾಮ ಶಿಲೆಯದು. ಅಂದರೆ ಇಲ್ಲಿಯೂ ಹರಿಹರ ಸಾಮರಸ್ಯ!

ಈ ಕ್ಷೇತ್ರ ಕೇವಲ ಅಂಬಿಗರಿಂದ ಸುತ್ತುವರಿದಿದ್ದು (ಅಭಿವ್ಯೈ ವ್ಯಾಪ್ತಂ ದೃಷ್ಟ್ವಾ) ಕದಂಬಕುಲದ ಮಯೂರವರ್ಮನು(?) ಇದರ ಪೂಜೆಪುನಸ್ಕಾರಗಳಿಗಾಗಿ ಹೈವೆಯ ಬ್ರಾಹ್ಮಣರನ್ನು ಇಲ್ಲಿಗೆ ತಂದು ಸ್ಥಾಪಿಸಿದನೆಂದು ಐತಿಹ್ಯ. ಅವರ ಉಪಜೀವಿಕೆಗೆ ತನ್ನ ಬನವಾಸಿ ಸೀಮೆಯ ಘಟ್ಟದಲ್ಲಿ ಹೆಗಡೆಗಳ ಮನೆಗಳಲ್ಲಿ ನವರಾತ್ರಿಯ ಪೂಜೆ ಮಾಡಿ ಅಡಿಕೆಯ 'ಸರ್ತೆ' ಪಡೆಯಬೇಕೆಂದು ಶಿಸ್ತುಹಾಕಿ ಕೊಟ್ಟನಂತೆ. ಅದು ಇಂದಿಗೂ ಪಾರಂಪರ್ಯದಿಂದ ನಡೆದು ಬಂದಿದೆ.

ಮಹಾಬಲೇಶ್ವರನಿಗೆ ಪ್ರಾಧಾನ್ಯ ಬಂದಂದಿನಿಂದ 'ಆದಿ ಗೋಕರ್ಣ' (ಮಹಾಬಲೇಶ್ವರ ಗುಡಿಯ ಹೊರವಲಯದಲ್ಲಿ ನೆಲದಾಳದ ಗುಡಿ) ತನ್ನ ಪ್ರಾಶಸ್ತ್ಯ ಕಳೆದುಕೊಂಡಿದೆ. ಭೂಮಾತೆ ಗೋವಾಗಿ ನಿಂತು ಅದರ ಕಿವಿಯಿಂದ ರುದ್ರನು ಪಾತಾಳದಿಂದ ಹೊರಹೊರಟ ಸ್ಥಾನವಿದು! ಅಲ್ಲಿಯ ಲಿಂಗ ದೊಡ್ಡದಿದೆ. ಮಹಾಬಲೇಶ್ವರ ಗುಡಿಯ ಒಳವಲಯದ ಚಂದ್ರಶಾಲೆಯಲ್ಲಿ ಮಯೂರವರ್ಮನ ಸ್ಮಾರಕವಾಗಿ ನಿಂತ ಭವ್ಯ ಕದಂಬೇಶ್ವರ ಲಿಂಗವೂ ಅಷ್ಟೇ ದೊಡ್ಡದು.

ಆದರೆ ಈ ದೇವರ ಶಿಲಾಮಂದಿರ ಕದಂಬರಿಗಿಂತ ಹಿಂದಿನದಿರಬೇಕು. ಬನವಾಸಿಯ ಮಧುಕೇಶ್ವರ ದೇವಾಲಯದ ಆಕಾರಬಂಧವಾಗಲೀ ಚಂದವಾಗಲಿ ಈ ಕಟ್ಟಡಕ್ಕೆ ಇಲ್ಲ. ಇದು ಅಚ್ಚುಕಟ್ಟಾದರೂ ವಿಶೇಷ ಕೆತ್ತನೆಗೆಲಸದ ರೂಪುಗಾರಿಕೆ ಇಲ್ಲದ ನಿಷ್ಠುರ ನಿರ್ಮಿತಿ. ಸಭಾಮಂಟಪ ಹಲಸನಾಡಿನ ಶ್ರೀ ವಿಶ್ವೇಶ್ವರಯ್ಯ ಎಂಬವನು ಕಟ್ಟಿಸಿದ್ದು ಎಂದಿದೆ ಅದರ ದ್ವಾರಬಂಧದ ಮೇಲಿನ ಲೇಖ. ಈತ ಯಾರು, ಯಾರ ಪರವಾಗಿ ಕಟ್ಟಿದ- ಏನೂ ಗೊತ್ತಾಗುವುದಿಲ್ಲ. ಶಿಖರ-ಗೋಪುರ ಉನ್ನತವಾಗಿದೆ. ಚಂದ್ರಶಾಲೆಯ ಪಶ್ಚಿಮದ ಕಡೆಯ ಬೋದುಗೆಗಳ ಮರದಲ್ಲಿ ಕೆತ್ತಿದ ವಾದ್ಯದವರ ಎದೆಮಟ್ಟದ ಆಕೃತಿಗಳು ಚೆನ್ನಾಗಿವೆ.

ಮುಖ್ಯ ಗುಡಿಯು ಪಶ್ಚಿಮಾಭಿಮುಖ. ಅದರ ಬೆನ್ನಿಗೆ ಹೊರಸುತ್ತಿನಲ್ಲಿ ತಾಮ್ರಗೌರಿಯ

ಗುಡಿ ಇದೆ. ಅಲ್ಲಿ ಇದುರಿಗೆ ಅಸ್ಥಿ ನಿಕ್ಷೇಪಣಕ್ಕೆ ಹೆಸರಾದ ತಾವರ್ಣಕುಂಡ. ಮಹಾತ್ಮಾಜಿಯವರ ಚಿತಾಭಸ್ಮ ಈ ಕುಂಡದಲ್ಲಿಯೂ ಹಾಕಿದ್ದರಿಂದ ಇದಕ್ಕೆ ಚಾರಿತ್ರಿಕ ಮಹತ್ವ. ಹಾಗೆಯೇ ಗುಡಿಯ ಈಶಾನ್ಯಕ್ಕೆ ಇಡಗುಂಜಿಯ ಮಹಾಗಣಪತಿಯಂತೆ ಇದೂ ದ್ವಿಭುಜ ಲಂಬೋದರ ನಿಂತ ವಿಗ್ರಹ. ತಾಮ್ರ ಗೌರಿ ಪೂರ್ವಕ್ಕೆ ಮೋರೆ ಮಾಡಿದರೆ ಈ ಗಣಪತಿ ಪಶ್ಚಿಮಕ್ಕೆ. ಇಂದು ನಾಗರಪ್ರವೇಶಕ್ಕೆ ಭದ್ರಕಾಳಿ-ವಿಷ್ಣು ಮಾಯೆ. ಈ ವಿಗ್ರಹ ರಸ್ತೆಗೆ ಚೆನ್ನಾಗಿ ದಕ್ಷಿಣಾಭಿಮುಖ. ಊರೊಳಗಿನ ಅತ್ಯಂತ ಸುಂದರ ವಿಗ್ರಹಗಳೆಂದರೆ ನಗರ ಮಧ್ಯದ ವೆಂಕಟರಮಣ ಮತ್ತು ಕೋಟಿತೀರ್ಥದ ದಕ್ಷಿಣ ಬದಿಯಲ್ಲಿಯ ಶ್ರೀಕೃಷ್ಣ. ಆದರೆ ಇವೆರಡನ್ನೂ ಮೀರುವ ಚೆಲುವಿನ ಮೂರ್ತಿ ಬ್ರಹ್ಮನದು. ಆದರೆ ಅದು ಭಿನ್ನ ವಿಗ್ರಹ. ಮಹಾಬಲೇಶ್ವರ ಗುಡಿಯ ದಕ್ಷಿಣ ದ್ವಾರದ ಇದುರಿಗೆ ಪುಟ್ಟ ಕೋಣೆಯಲ್ಲಿದೆ. ಬ್ರಹ್ಮನಿಗೆ ಪೂಜೆಯಿಲ್ಲ. ಇದು ಪೂಜೆಗೆ ಯೋಗ್ಯವೂ ಅಲ್ಲ.

ಮನಃಶಾಂತಿ ಬೇಕಾದವರು ಗೋಕರ್ಣಕ್ಕೆ ಬರಬೇಕು. ಇಲ್ಲಿಯ 'ಗಗನಸದೃಶಂ ಮೇಘವರ್ಣಂ ಶುಭಾಂಗಂ' ಆದ ವಿಸ್ತೀರ್ಣ ಪಡುಗಡಲ ಮೂರು ಮೈಲುದ್ದದ ಬಿಳಿ ಮಳಲಬೇಲೆಯಲ್ಲಿ ಕೂತು ಸೂರ್ಯಾಸ್ತದ ಸೊಬಗನ್ನು ಹೀರಬೇಕು. ಅಲ್ಲಿಂದ ರಾಮತೀರ್ಥದಗುಡ್ಡ. ಅದರಾಚೆಗೆ ರುದ್ರರಮ್ಯ ಜಟಾಯು ತೀರ್ಥ. ಅದರಾಚೆಗೆ ಇನ್ನೂ ಎತ್ತರದ ಉಮಾಮಹೇಶ್ವರ! ಓ ಅದೆಂಥ ಚೆಲುವು! ಕಾರವಾರದ ಇದುರಿನ ದೇವಗಡ ದೀಪಸ್ತಂಭದಿಂದ ಹೊನ್ನಾವಾರದ ಇದುರಿನ ಬಸವರಾಜದುರ್ಗದ ವರೆಗಿನ ೩೦-೪೦ ಮೈಲಿನ ಆಚೆ ಈಚೆಯ ದಿವ್ಯ ದಿಗ್ವಲಯ! ನಮ್ಮ ಊರಮುಂದಿನ ಗುಡ್ಡದ ಮೇಲಿನ ಪ್ರವಾಸಿಬಂಗಲೆಯ ತಾಣವೇ ಒಂದು ಪ್ರೇಕ್ಷಣೀಯ ಸ್ಥಾನ. ಹಾಗೆಯೇ ದೂರದ ಅಗಸೆಹೊಳೆಯ ಅಳವೆ ಮತ್ತು ಬೆಲೆಕಾನ ಬಂದರು. ಎರಡು ದಶಕಗಳ ಹಿಂದೆ ಇಲ್ಲಿಗೆ ಉಗಿಹಡಗುಗಳು ತಡೆಯುತ್ತಿದ್ದವು-ಮುಂಬಯಿ-ಕೊಚ್ಚಿ ಸಾರಿಗೆ ದಾರಿಯಲ್ಲಿ. ಆದರೆ ಈಗ ಈ ತದಡಿಯ ಬಂದರು ಹಾಳುಸುರಿಯುತ್ತಿದೆ. ಆದಾಗ್ಯೂ ಈ ಒಂದೊಂದು ತಾಣವೂ ಸೊಬಗಿನ ಬೀಡಾಗಿ ರಸಿಕರಿಗೆ ಬೆಡಗಿನ ಬಲೆ ಬೀಸುತ್ತದೆ. ಚಲಚ್ಚಿತ್ರ ಛಾಯಗ್ರಾಹಕರ ಕಣ್ಣು-ಕ್ಯಾಮರಾ-ಕಾದಿದೆ!

ಕಾರ್ತಿಕದ ದೀಪೋತ್ಸವ! ಕೋಟಿತೀರ್ಥದಲ್ಲಿ ತೆಪ್ಪೋತ್ಸವ! ಶಿವರಾತ್ರಿಯ ರಥೋತ್ಸವ! ಅದೆಂಥ ರಥ! ಆರು ಚಕ್ರಗಳ ಬೃಹದ್ರಥ! ಭಗವದ್ಭಕ್ತಿಯ ಬಲ್ಲಗ್ಗಣಿಯಿಂದ ಭಕ್ತಜನಸ್ತೋಮವೇ ಎಳೆದೊಯ್ಯುತ್ತದೆ. ಜಾತ್ರೆಗಾಗಿ ಸಾವಿರಗಟ್ಟಲೆ ಜನ ಬರುತ್ತಾರೆ. ಅವರ ಮೇಲೆ ಸರಕಾರ ಯಾತ್ರಸುಂಕ ಹೇರಿ ಎಲ್ಲ ವರಮಾನವನ್ನು ದೋಚಿಕೊಳ್ಳುತ್ತದೆ. ನಗರನೈರ್ಮಲ್ಯಕ್ಕೆ, ವಿಕಾಸಕ್ಕೆ ಅದರ ಯಾವ ಪಾಲೂ ಸಲ್ಲುವುದಿಲ್ಲ. ಇಲ್ಲಿಯ ಶ್ರೀ ಭದ್ರಕಾಳಿ ಅಮ್ಮನವರ ಕಲಶದ ಬಂಡಿಹಬ್ಬ ಮತ್ತು ಹಾಲಕ್ಕಿ ಒಕ್ಕಲ ಸುಗ್ಗಿ-ಹಗರಣ ತುಂಬ ವರ್ಣರಂಜಿತ ಜಾನಪದ ಆಕರ್ಷಣೆಗಳು.

ಗೋಕರ್ಣದ ಒಂದೊಂದು ತೀರ್ಥಕ್ಕೂ ಗುಡಿಗೂ ಒಂದೊಂದು ಅಂದವಾದ ಅಖ್ಯಾಯಿಕೆ ಇದೆ. ಅವನ್ನೆಲ್ಲ ಸ್ಥಳಮಹಾತ್ಮೆಯಲ್ಲಿ ಓದಬೇಕು. ರಾಮಾಯಣ-ಮಹಾ ಭಾರತಗಳಲ್ಲಿಯ ಗೋಕರ್ಣದ ಉಲ್ಲೇಖ ಸಂದಿಗ್ಧವೆಂದರೂ ಶ್ರೀಹರ್ಷನಿಗಿಂತ ಹಿಂದೆ ಕಾಲಿದಾಸನ 'ರಘುವಂಶ' ದಲ್ಲಿ ಗೋಕರ್ಣನಾಥನ ಉಲ್ಲೇಖ ಬಂದಿದೆ. ಇಲ್ಲಿಂದ ಆಕಾಶಮಾರ್ಗವಾಗಿ ಮರಳಿ ಹೋಗುತ್ತಿದ್ದ

ನಾರದನ ಜುಟ್ಟದಿಂದ ಬಿದ್ದ ದೇವರ ಪ್ರಸಾದದ ಹೂಮಾಲೆಯ ಆಘಾತಕ್ಕೆ ಅಜರಾಜನ ಇಂದುಮತಿ ಸತ್ತಳು!

ವಿಜಯನಗರದ ಬುಕ್ಕಭೂಪತಿ ಗೋಕರ್ಣೇಶ್ವರನ ಪೂಜೆಗೆ ಬಂದಿದ್ದ ದಾಖಲೆ ಇದೆ. ಶಿವಛತ್ರಪತಿಯೂ ಬಸರೂರ ಕೋಟೆಯ ಮುತ್ತಿಗೆಯಿಂದ ಮರಳುವಾಗ, ಮಿರ್ಜಾನಿನಲ್ಲಿ ಹಡಗುಪಡೆಯನ್ನು ಬಿಟ್ಟು ಇಳಿದು, ಗೋಕರ್ಣಕ್ಕೆ ಬಂದು ಮಹಾಬಲೇಶ್ವರನನ್ನು ಪೂಜಿಸಿ, ಹಾಗೆಯೇ ನೆಲಮಾರ್ಗದಿಂದ ಸಾಗಿ ತನ್ನ ಹಡಗನ್ನು ಸದಾಶಿವಗಡದಲ್ಲಿ ಏರಿದನೆಂದು ಸರ್ ಜಾದುನಾಥ ಸರಕಾರ್ ಬರೆದಿದ್ದಾರೆ.

ಹೈವೆಯ ಚಂದ್ರವಂಶದ ಅರಸರು ಆಳಿದ ಶಿಶುಕಲಿ ಎಂಬ ರಾಜಧಾನಿ ಗೋಕರ್ಣವೇ ಇರಬೇಕೆಂದು ಡಾ. ಸದಾನಂದನಾಯಕರ ಅಭಿಪ್ರಾಯ. ಗೋಕರ್ಣದಿಂದ ೧೦-೧೨ ಮೈಲಿಗೆ ಚಿಪ್ಪೂರ (ಶಿವಪುರ) ಕ್ಯಾಕಣಿ (?) ಮುಂತಾದ ಹಾಳೂರುಗಳಲ್ಲಿ ಹಳೆಯ ಅಗ್ರಹಾರಗಳ ಕುರುಹುಗಳು ಇವೆ. ಆಧುನಿಕ ಯುಗದ ಮಂತ್ರ ದ್ರಷ್ಟಾರರೆಂದು ಅಂತಾರಾಷ್ಟ್ರೀಯ ಖ್ಯಾತಿಗಳಿಸಿದ ದಿ. ಬ್ರಹ್ಮಶ್ರೀ ಮಹರ್ಷಿ·ದೈವರಾತಶರ್ಮರ ಆಶ್ರಮ ಕಡಲ ತಡಿಯಲ್ಲಿಯೂ ಅಶೋಕವನದಲ್ಲಿಯೂ ಇದೆ.

ಇಡಿಯ ಗೋಕರ್ಣ ಮಂಡಳವೇ ಧಾರ್ಮಿಕವಾಗಿ, ಆಧ್ಯಾತ್ಮಿಕವಾಗಿ ಎಂದೆಂದಿಗೂ ಪ್ರೇಕ್ಷಣೀಯ, ಸರ್ವಥಾ ಸರ್ವದಾ ರಕ್ಷಣೀಯ. ಬಸವ ಕಲ್ಯಾಣದಂತೆ-ಅದಕ್ಕೂ ಹೆಚ್ಚು ಭಾವೈಕ್ಯದ ಕೇಂದ್ರವಾಗಿ ಈ ಪ್ರದೇಶ ಒಂದು ತಾಲೂಕಾಗಿ ಪುನರ್ರಚಿತವಾಗಬೇಕು. ಇಲ್ಲಿ ಪ್ರಾಚೀನ ಕಾಲದಿಂದಲೂ ಹವ್ಯಕರ, ಸಾರಸ್ವತರ, ಗೌಡಸಾರಸ್ವತರ, ಚಿತ್ರಾಪುರ ಸಾರಸ್ವತರ ಹಾಗೂ ಈಚೆಗೆ ವೀರಶೈವರ ಮಠಗಳು ಇದ್ದು ಇವೆಲ್ಲ ತಮ್ಮ ತಮ್ಮ ಸಮಾಜಗಳಿಗೆ ಈ ಕ್ಷೇತ್ರದ ಪಾವಿತ್ರ್ಯ-ಸೌಂದರ್ಯಗಳತ್ತ ಘಂಟಾಘೋಷದಿಂದ ಕರೆಯುತ್ತಿರುತ್ತವೆ. ವಿಭಿನ್ನ ಮತ, ಪಂಥ, ಭಕ್ತಿ, ಶ್ರದ್ಧೆ, ಸಂಪ್ರದಾಯಗಳ ಜನರು ಗೋಕರ್ಣದಲ್ಲಿ ಸಮರಸವಾಗಿ ಬಾಳಿ ಇಲ್ಲಿಯ ಬದುಕನ್ನು 'ಕೋಟಿತೀರ್ಥ'ವನ್ನಾಗಿ ಮಾಡಿರುತ್ತಾರೆ.

●

('ವೈಜಯಂತಿ' ೧೯೭೫)

# ಯುವ ಶಕ್ತಿಯ ಸಮಸ್ಯೆ

ಯುವ ಶಕ್ತಿಯ ಜಾಗೃತಿ, ಸಂಘಟನೆ ವಿವಿಧ ಕಾರ್ಯಯೋಜನೆಗಳಲ್ಲಿ ಅದರ ವಿನಿಯೋಗ ಇಂದಿನ ಯುಗದ ಒಂದು ಧರ್ಮವಾಗಿದೆ. ಬ್ಲಾಕ ಮಟ್ಟದಲ್ಲಿ ಯುವಜನ ಮೇಳಗಳಲ್ಲಿ ಅಲ್ಲಲ್ಲಿಯ ಹಳ್ಳಿಪಟ್ಟಣಗಳಲ್ಲಿಯ ಯುವಕ ಸಂಘಗಳ ಹಲವು ಹಂತದ ಪಂದ್ಯಾಟಗಳಿಂದ ಪುಂಡಾಟಗಳವರೆಗಿನ ಚಟುವಟಿಕೆಗಳಲ್ಲಿ ಈ ಯುವ ಶಕ್ತಿಯ ಉಧ್ಯಾಪನೆ ಉಲ್ಬಣ ಪ್ರಕಟವಾಗುತ್ತಿರುತ್ತದೆ.

ಹಾಗೆ ನೋಡಿದರೆ ಒಂದು ರಾಷ್ಟ್ರದ ನವನಿರ್ಮಾಣದ ಎಲ್ಲ ಆರಂಭವೂ, ಸಾರಂಭವೂ ಯುವ ಜನಾಂಗದ ಶಕ್ತಿ ವಿಲಾಸವೇ ಆಗಿದೆ. ದೇವರ ಕಾರುಣ್ಯದ ಕಥೆ ಏನೇ ಇದ್ದರೂ ಪ್ರಪಂಚ ನಡೆಯುತ್ತಿರುವುದು ಮಾನವನ ತಾರುಣ್ಯದ ಬಲದಿಂದಲೇ, ಛಲದಿಂದಲೇ, ಹಂಬಲದಿಂದಲೇ. ಇತಿಹಾಸವನ್ನು ಮತ್ತೆ ಮತ್ತೆ ಹೊಸ ಎರಕದಲ್ಲಿ ಹೊಯ್ಯುವ ಪ್ರಚಂಡ ತೋಳಬಲ ತರುಣರದ್ದೇ ಮಹಾಯುದ್ಧಗಳ ರಣಮಾರಿಗೆ ಔತಣ ಉಣಬಡಿಸಿದ್ದು ಯುವಜನ ರಕ್ತ ಮಾಂಸದಿಂದಲೇ. ವೈಜ್ಞಾನಿಕ ಸಾಹಸ ಉತ್ತುಂಗ ಶಿಖರಗಳ ಆರೋಹಣ ಎಲ್ಲಾ ಪೌರುಷ - ಪುರುಷಾರ್ಥಗಳ ಆಹ್ವಾನ ಸಾಧನೆ ಯುವಜನರ ಸಂಕಲ್ಪ ಶಕ್ತಿ ಚಾರಿತ್ರ್ಯವೇ ಆಗಿದೆ.

ನಮ್ಮ ಸ್ವಾತಂತ್ರ್ಯ ಸಾಧನೆ, ಸತ್ಯಾಗ್ರಹ, ಅಸಹಕಾರ ಆಂದೋಲನ, ಆಗಷ್ಟ - ಚಳವಳಿ ಎಲ್ಲವೂ ಯುವಶಕ್ತಿಯ ವಿಕ್ರಮವಾಗಿತ್ತು. ಕಾಂಗ್ರೇಸ್ ಸುರತದಲ್ಲಿ ಕವಲೊಡೆದಾಗ ಹಳಬರೂ, ಹರಯಳಿದ ವೃದ್ಧರೂ ಹಿಂದೆ ಸರಿದರು. ಅನಂತರ ಯುವಶಕ್ತಿಯ ಆವಾಹನೆಯಿಂದಲೇ ಆರಂಭವಾಯಿತು. ನಾಗಪುರಧ್ವಜಸತ್ಯಾಗ್ರಹ ಯುವಕರದೇ ಸಾಹಸವಾಗಿತ್ತು. ಲಾಹೋರ ಕಾಂಗ್ರೆಸ್ಸಿನ ಸಮಾಜವಾದದ ಪೂರ್ಣ ಸ್ವಾತಂತ್ರ್ಯದ ಘೋಷಣೆ ಯುವಜನರ ಕಣ್ಮಣಿ ಜವಾಹರಲಾಲರದೇ ರಣಕಹಳೆಯಾಗಿತ್ತು. ಸುಭಾಷ್ಚಂದ್ರ, ಮೆಹರಲಿ, ಜಯಪ್ರಕಾಶ, ಅಚ್ಯುತ ಪಟವರ್ಧನ, ಅರುಣ ಅಸಫಲಿ-ಸಾವಿರ ಸಂಖ್ಯೆಯಲ್ಲಿ ಭಾರತೀಯ ಯುವಜನ ಸ್ವಾತಂತ್ರ್ಯದ ಹೋರಾಟದಲ್ಲಿ ಕಾಂಗ್ರೆಸ್ಸಿನ ಧ್ವಜದಡಿಗೆ ಧಾವಿಸಿ ಬಂದು ಶಿಬಿರ ತುಂಬಿದರು.

ಅದಕ್ಕೂ ಹಿಂದೆ ನಮ್ಮ ಕ್ರಾಂತಿಕಾರಿಗಳು, ಆತಂಕವಾದಿ ಜತೀನದಾಸ, ಭಗತಸಿಂಗ, ಮಾನವೇಂದ್ರನಾಥ ರಾವಲ್ ಪ್ರಭೃತಿಗಳು ಒಂದು ಕೈಯಲ್ಲಿ ಭಗವದ್ಗೀತೆ, ಇನ್ನೊಂದು ಕೈಯಲ್ಲಿ ಬಾಂಬು ಹಿಡಿದು ನಗು ನಗುತ್ತ ಗಲ್ಲಿಗೇರಲು ನುಗ್ಗಿ ಮುನ್ನಡೆದರು. ಅವರೆಲ್ಲರೂ ನವತಾರುಣ್ಯದ ಹೊಸ ಹೊಸ ಮೊಹರುಗಳೇ ಆಗಿದ್ದರು. “ನವ ಜವಾನೋ, ಹೋಶಿಯಾರ!” ಎಂಬುದು ನಮ್ಮ ಸ್ವಾತಂತ್ರ್ಯ ಆಂದೋಲನದ ದುಂದುಭಿ ಘೋಷವಾಗಿತ್ತು.

ಅಂದಿನಿಂದ ಇಂದಿನವರೆಗೂ ಎಂದೆಂದಿಗೂ ರಾಷ್ಟ್ರದ ನವನಿರ್ಮಾಣ, ಅಭಿವೃದ್ಧಿ ವಿಕಾಸ, ನಿರಂತರದ ಪ್ರಗತಿ ನಡೆಯುವದು, ನೆಲೆನಿಂತಿರುವದು ಯುವಜನರ ಹೃದಯದ ಓಟದ ಎಡಬಿಡದ ದಿಕ್ಕಿನಲ್ಲಿ. ಒಂದು ರಾಷ್ಟ್ರ ಜೀವಂತವಿರುವದೇ ಅದರ ತಾರುಣ್ಯದಲ್ಲಿ. ತಾರುಣ್ಯ, ಉತ್ಸಾಹ, ಉತ್ತೇಜನ, ಉದ್ದೇಶಗಳ ಉಗಮಸ್ಥಾನ ಯುವಜನ ಶಕ್ತಿಯ ಸಾಮರ್ಥ್ಯವೂ, ದೌರ್ಬಲ್ಯವೂ ಇದೇ ಉಗಮದಲ್ಲಿವೆ. ಅತಿರೇಕ ಅವಿವೇಕಗಳು ಅದರ ಈ ಉದ್ದೇಶ-ಆವೇಶಗಳ ಅನಿವಾರ್ಯ

ನಿಯತಿ. ಈ ಶಕ್ತಿ ಪ್ರಚಂಡ ತಡಸಲಿನಂತೆ ಅದನ್ನು ಶಕ್ತಿಗೆ ಒಳಪಡಿಸಿ ನೋಡಿದಾಗಲೇ ಅದರಿಂದ ಯೋಗ್ಯವಾದ, ಯಶಸ್ವಿಯಾದ ಕಾರ್ಯವು ಸಾಧ್ಯ.

ಈ ಶಿಸ್ತು ಈ ಸಂಯಮ ಹೇಗೆ ಬರುವುದು? ಏಕೆ ಅವಶ್ಯ? ಇದಕ್ಕೆ ನಾವು ಮೊದಲಿಗೆ ಈ ಯುವ ಶಕ್ತಿಯ ಸ್ವರೂಪವನ್ನು ಪರೀಕ್ಷಿಸಬೇಕು. ಇಂದು ದೇಶದ ಅಭಿವೃದ್ಧಿಯ ಎಲ್ಲ ಅಂಗಗಳಲ್ಲಿಯೂ, ರಂಗಗಳಲ್ಲಿಯೂ ಕ್ರಿಯಾತ್ಮಕವಾಗಿ ಎದ್ದು ಕಾಣಬೇಕಾದದ್ದೇ ಈ ಯುವಶಕ್ತಿಯೇ. ಬೇಸಾಯವೇನು ಚಿಕ್ಕ ಉದ್ದಿಮೆಯೇನು, ಕುಟುಂಬ ಯೋಜನೆಯೇನು, ಮಹಿಳಾ ಕಲ್ಯಾಣವೇನು, ಸಾಕ್ಷರತಾ ಪ್ರಸಾರವೇನು, ಭ್ರಷ್ಟಾಚಾರ ನಿರ್ಮೂಲವೇನು-ಇವೆಲ್ಲ ರಂಗಗಳಲ್ಲಿ ಕಾರ್ಯಕಾರಿ ಆಗುವ ಸಮಾಜದ ಅಂಗವು ಯುವಕ ವೃಂದವೇ ಸರಿ. ಮಕ್ಕಳೂ - ಮುದುಕರೂ ಇಲ್ಲಿ ಸಲ್ಲುವುದಿಲ್ಲ. ಅಂದರೆ ರಾಷ್ಟ್ರದ ಉತ್ಥಾನ ಮತ್ತು ಪ್ರಗತಿಯ ಸಕಲ ಸಾಹಸ ಸಾಧನೆಗಳಿಗೂ ಚಾಲನೆ ಕೊಡುವ ವರ್ಗ ಯುವಕರದ್ದೆ. ಸೈನಿಕ, ನಾವಿಕ, ನಾಗರಿಕ ಯಾವ ಕ್ಷೇತ್ರದಲ್ಲಿಯೂ ಈ ಯುವಕರಿಗೇ ಆವ್ಹಾನ.

ಆದರೆ ನಿಜವಾಗಿ ಸೋಡಿದರೆ ಯುವಕರೆಂಬುದು ಒಂದು ವರ್ಗವೇ? ಅಲ್ಲ, ಅದೊಂದು ಅವಸ್ಥೆ. ಜೀವನದ ಕೆಲವೇ ವರ್ಷಗಳ ಒಂದು ಅವಧಿಯ ಭಾವಾವಸ್ಥೆ, ವ್ಯಕ್ತಿ-ವ್ಯಕ್ತಿಯೂ ಈ ಅವಸ್ಥೆಯೊಳಗಿಂದ ಕೆಲ ಕಾಲ ಪಾದು ಹೋಗುತ್ತಾನೆ. ಕೆಲಸಗಾರ, ಕೂಲಿಕಾರ, ಬಂಡವಾಳಗಾರ, ಬುದ್ದಿಜೀವಿಗಳಂತೆ ಯುವಕರಂಬುವದೊಂದು ವಿಶಿಷ್ಟ ಹಿತ ಸಂಬಂಧಗಳ ಸ್ಥಾಯಿಯಾದ ಸಾಮಾಜಿಕ ವರ್ಗವಲ್ಲ. ಇಲ್ಲಿದೆ ಈ ಯುವಾವಸ್ಥೆಯ ದೌರ್ಬಲ್ಯ.

ಈ ಯುವಜನರೆಂಬ ಅವಸ್ಥೆಯಲ್ಲಿ ಬೇರೆ ಬೇರೆ ವರ್ಗದವರು ಸೇರುತ್ತಾರೆ. ಯುವಕನು ಒಕ್ಕಲಾಗಬಹುದು, ಒಡೆಯನಾಗಬಹುದು, ಬಡವನಾಗಬಹುದು, ಧನಿಕನಾಗಬಹುದು, ಕೆಲಸಗಾರನಾಗಬಹುದು, ಕೆಲಸಕ್ಕೆ ಹಚ್ಚುವ ಮಾಲಕನಾಗಬಹುದು. ಆದರೆ ಹೀಗೆ ವಿಭಿನ್ನ ಹಾಗೂ ಪರಸ್ಪರ ವಿರುದ್ಧ ಹಿತಾಸಕ್ತ ಸ್ವಾರ್ಥ ಸತ್ವಗಳುಳ್ಳ ಈ ಯುವಜನವೆಲ್ಲ ನಿಜವಾದ ಒಕ್ಕಟ್ಟಿನಿಂದ ಒಮ್ಮತದಿಂದ ಬಹುಕಾಲ ದುಡಿಯಬಹುದೇ, ಹಾಗೆ ಅವರು ಭಾವೈಕ್ಯದಿಂದ ಧೀರ್ಘಕಾಲ ಕೂಡಿ ನಡೆಯುವದಾದರೆ ಆತನಕ ಅವರು ಯುವಕರಾಗಿ ಉಳಿಯಬಹುದೇ? ೨೦-೩೫ರ ವರೆಗೆ ಯುವಾವಸ್ಥೆಯೆಂದು ಹಿಡಿದರೆ ಈ ಒಂದೂವರೆ ದಶಕದಲ್ಲಿ ಈ ಭಾವಾವೇಶದ ಸಂಕೀರ್ಣ ಸ್ವರೂಪದ ತಂಡವು ಯಾವ ಶಾಶ್ವತ ಶ್ರೇಯಸ್ಸನ್ನು ಸಾಧಿಸಬಹುದು?

ಈ ಯುವಕರಲ್ಲಿ ಬುದ್ಧಿವಂತ ಭಾವನೆಯ ಉಕ್ಕು ರಭಸ ಹೆಚ್ಚು. ಅದಕ್ಕೆ ಭವ್ಯ ದಿವ್ಯದ ಆಕರ್ಷಣೆ ಹೆಚ್ಚು. ಅಸಾಧ್ಯದ ಮೋಹ ಹೆಚ್ಚು. ಆದರ್ಶದತ್ತ ತುಡಿತ ಅದಕ್ಕಾಗಿ. ತ್ಯಾಗ, ಬಲಿದಾನ, ಅವಿಶ್ರಾಂತ ಪರಿಶ್ರಮದ ಮಿಡಿತ ಹೆಚ್ಚು. ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ದೇಶದಾದ್ಯಂತ ಯುಥ್‌ಲೀಗ್ ಕೆಲಸ ಮಾಡುತ್ತಿದ್ದವು. ಹಾಗೆಯೇ ಹಿಂದುಸ್ಥಾನಿ ಸೇವಾದಲ, ರಾಷ್ಟ್ರ ಸೇವಾದಲಗಳು ಸಮಾಂತರವಾಗಿ ದುಡಿಯುತ್ತಿದ್ದವು, ಅವೆಲ್ಲವೂ ಒಂದೇ ಮನೋರಥಕ್ಕೆ ಹೂಡಿದ ಶಕ್ತಿಗಳಾಗಿದ್ದವು. ಈ ಯುವ ಸಂಘಟನೆಗಳ ಸಕಲ ಸೇವೆ ಸಾಧನೆ ಸ್ವಾತಂತ್ರ್ಯ ಪ್ರಾಪ್ತಿಗಾಗಿ ರಾಷ್ಟ್ರೀಯತೆಯ ವಿಕಾಸಕ್ಕಾಗಿ ಇತ್ತು.

ಅಂದರೆ ಅಂಥ ಒಂದು ಭವ್ಯವಾದ ಸಾರ್ವಭೌಮವಾದ ಆದರ್ಶದ ಕರೆಯ ಮುಂದೆ

ಈ ಯುವಜನರ ರಕ್ತಗತವಾದ ಜನ್ಮಸಿದ್ಧವಾದ, ಎಲ್ಲ ವಿಭಿನ್ನ ವಿರುದ್ಧ ವರ್ಗನಿಷ್ಠ ಹಿತಾಸಕ್ತಿಗಳ ಸೆಳೆತ ತೊಡಕು ಮರೆಯಾಗುವದು, ಮರೆತು ಹೋಗುವದು. ಶಾಲೆ ಕಾಲೇಜುಗಳಲ್ಲಿ ಕಲಿಯುವ ಯುವಜನಕ್ಕಾಗಿ ಎ.ಸಿ.ಸಿ, ಎನ್.ಸಿ.ಸಿ. ಸ್ಕೌಟ್, ಗೈಡ್ ಮುಂತಾದ ವೀರ ವೃತ್ತಿಗೆ, ಶಿಸ್ತಿಗೆ, ಪೋಷಕವಾದ ಸಂಘಟನೆಗಳಿವೆ. ಆದರೆ ಅವು ಹೆಚ್ಚಾಗಿ ಯಾಂತ್ರಿಕವಾಗಿ ಒಣ ಆಡಳಿತದ ಕ್ರಮ ಬದ್ಧತೆಗೆ, ನಿಷ್ಠುರತೆಗೆ ಬಲಿಯಾಗಿ ಯುವಜನರ ಭಾವೋತ್ಸಾಹಕ್ಕೆ ಪ್ರೇರಣೆ ಕೊಡುವದು ಕಂಡುಬರುವದಿಲ್ಲ.

ಇನ್ನು ಹೊರಗಿನ ಖಾಸಗೀ ಸೈನಿಕ ಶಿಸ್ತಿನ ಮೂಲಗಳು, ಸಂಘಗಳು ಶಿವಸೇನೆ, ಭೀಮಸೇನೆ, ಆರ್‌ಎಸ್‌ಎಸ್‌ಗಳಂತೆ ಬಲಿಷ್ಠವಾದದ್ದೂ ದೇಶಕ್ಕೆ ಘಾತಕವೇ ಆಗಿದೆ. ಆರಂಭದಲ್ಲಿಯೇ ಅವು ಯುವಜನರಲ್ಲಿ ದೃಢನಿಷ್ಠೆಯನ್ನು ಹುಟ್ಟಿಸುತ್ತವೆ. ಮತ್ತು ಕೊನೆಯಲ್ಲಿ ಅವರೆದುರು ಅಸಾಧ್ಯವಾದ, ಅಸತ್ಯವಾದ, ಸಂಕುಚಿತವಾದ, ಆದರ್ಶಗಳನ್ನು ಇಟ್ಟು ಅವರನ್ನು ಕೆಲವೊಂದು ಕೋಮುವಾರಿನ ಮತಪಂಥಗಳ ರಾಗ ದ್ವೇಷದ ಅಡ್ಡದಾರಿಗೆ ಒಯ್ಯಲು ಕಾರಣವಾಗುತ್ತವೆ.

ಇಂಥ ಇಕ್ಕಟ್ಟಿನಲ್ಲಿ ಸಿಲುಕಿದ ನಮ್ಮ ಯುವಜನರು ಏನು ಮಾಡಬೇಕು? ಅವರ ಸ್ವಂತದ ವರ್ಗನಿಷ್ಠೆ, ಆಸಕ್ತಿ ಆಕರ್ಷಣೆಗಳನ್ನು ಮಾಡುವ ವಿಶಾಲವಾದ ಸಮಗ್ರ ಜನಾಂಗದ ಹಿತವ ಕಲ್ಯಾಣದ ಅಭಿವೃದ್ಧಿ ಪ್ರಗತಿಯ ಒಂದು ಸಾರ್ವಭೌಮ ಆದರ್ಶವನ್ನು ಅವರ ಕಣ್ಣು ಅರಳಿಸುವಂತೆ, ಭಾವ ಕೆರಳಿಸುವಂತೆ ಉತ್ಕಟವಾಗಿ, ಜೀವಂತವಾಗಿ ಅವರನ್ನು ಆಹ್ವಾನಿಸಬೇಕು, ಸ್ವರಾಜ್ಯವನ್ನು ಸುರಾಜ್ಯವನ್ನಾಗಿ ಮಾರ್ಪಡಿಸುವ ಆದರ್ಶ ಅಂತ ಒಂದು ನಿತ್ಯದ ಆಕರ್ಷಣೆ ಆಗಬೇಕು. ಔದ್ಯೋಗೀಕರಣ, ಅದರಿಂದ ಬರುವ ಆಧುನಿಕತೆ ಅದಕ್ಕೆ ಪೋಷಕವಾಗುವ ಸತ್ಯಶೋಧಕ, ವೈಜ್ಞಾನಿಕ ಪ್ರವೃತ್ತಿ ಯುವಜನರಲ್ಲಿ ಹಬ್ಬ ಬೇಕು.

ಇಂದು ಬಡತನದ ವಿರುದ್ಧ, ಅಜ್ಞಾನದ ವಿರುದ್ಧ ರೂಢ, ಮೂಢ ನಂಬಿಕೆಗಳ ವಿರುದ್ಧ ಯುವಜನರು ಹೋರಾಡುವಂತೆ ಆಗಬೇಕು. ಅದಕ್ಕೆ ತಕ್ಕ ಧುರೀಣತ್ವ ಧೋರಣೆ ಪ್ರಭಾವಿಯಾಗಬೇಕು.

ತರುಣರ ತತ್ವ ಮೂಲಗಾಮಿತ್ವ, ತರುಣನೆಂದರೆ ತರುವಿನ ಲಕ್ಷಣ ಉಳ್ಳವನು. ತರುವಿನ ಲಕ್ಷಣ ಸತತವಾದ ವಿಕಾಸ ಬೆಳವಣಿಗೆ. ಯಾರ ಮನಸ್ಸು ಬುದ್ಧಿ ವಿಚಾರ ಚಿಂತನೆ, ಯಾವಾಗಲೂ ಬೆಳೆಯುತ್ತಲೇ ಇರುವದೋ ಅವನೇ ನಿಜವಾದ ಅರ್ಥದಲ್ಲಿ ತರುಣ. ಈ ಬೆಳವಣಿಗೆ ತಡೆದಲ್ಲಿ ತಾರುಣ್ಯವೂ ಮುಗಿಯಿತು. ನಮ್ಮ ತರುಣರು ಇಂದು ಸಮಾಜವನ್ನು ಕಾಡುತ್ತಿರುವ ಪ್ರಶ್ನೆಗಳನ್ನು ಆಮೂಲವಾಗಿ ಕೆದಕಿ ತಿಳಿದುಕೊಳ್ಳಬೇಕು. ಅವರು ಧ್ಯೇಯವಾದಿಗಳಾಗಬೇಕು. ಆ ಧ್ಯೇಯ ಜಾತಿಯ ಮತ ಪಂಥಗಳನ್ನು ಮೀರಿ ಮಾನವೀಯ ಸಮಾನತೆಯನ್ನು ಸಾರುವ, ಸಾಧಿಸುವ ಸಾಧನೆ ಆಗಬೇಕು. ವ್ಯಕ್ತಿಗಿಂತ ತತ್ವ ಪ್ರತಿಷ್ಠೆಗಿಂತ ನ್ಯಾಯ ಹಕ್ಕಿಗಿಂತ ಹೊಣೆಗಾರಿಕೆಗಳನ್ನು ಹಿರಿದಾಗಿ, ಮಿಗಿಲಾಗಿ ಕಾಣುವ ಪ್ರಜ್ಞೆಮೂಡಿ ಬಂದಾಗಲೇ ಯುವಶಕ್ತಿಗೆ ಮುಕ್ತಿ.

●

('ಶಿರಸಿ ಸಮಾಚಾರ' ೧೯೭೬)

# ಪವಾಡಗಳು ಮತ್ತು ವಿವೇಕ

ವಿವೇಕವೆನ್ನುವದಕ್ಕಿಂತ ವಿವೇಚನೆ ಎಂದರೇ ಚೆನ್ನಾಗಿತ್ತು ಅನಿಸುತ್ತದೆ. ಏಕೆಂದರೆ ವಾದ-ವಿವಾದದಿಂದ ತತ್ವಬೋಧವಾಗುವದಕ್ಕಿಂತ ಕಂಠ ಶೋಷಣೆ ಹೆಚ್ಚಾಗುವದು ವಾಡಿಕೆ. (ಕೆಲಸಲ ವೈರವೂ ವೃದ್ಧಿಯಾಗಬಹುದು!) ಹಾಗೆಯೇ ವಿವೇಚನೆಯಿಂದ ವಿವೇಕ ಉಂಟಾಗುವದೆಂದು ಯಾವಾಗಲೂ ನಿರೀಕ್ಷಿಸುವದೂ ತಪ್ಪಾದೀತು. ಅದು ವಿವಂಚನೆಗೇ ಮೂಲವಾಗಬಹುದು; ಏನೇ ಆದರೂ ಈ ಒಂದು ಜ್ವಲಂತ ಸಮಸ್ಯೆಯ ಕುಂಡದಲ್ಲಿ ಧುಮ್ಮಿಕ್ಕಿ ದುಡುಕಿದ್ದಾಯಿತು. ಈಗ ಹಿಂದೆಗೆಯುವಂತಿಲ್ಲ.

ಪವಾಡವೆಂದರೇನು? ಈ ಶಬ್ದ ನಮ್ಮ ನಿಘಂಟುಗಳಲ್ಲಿ ಎಂದಿನಿಂದಲೂ ಬಿದ್ದಿತ್ತು. ಆದರೆ ಸದ್ಯ ಅನೇಕ ಭಗವಾನರ ಅನುಗ್ರಹದಿಂದ ಅದೀಗ ಎಲ್ಲರ ನಾಲಿಗೆಯಲ್ಲಿಯೂ ನಲಿಯುತ್ತಿದೆ. ಮೂಲತಃ "ಪವಾಡ" ದ ಅರ್ಥ ಇಂದಿನಂತೆ ಒಂದು ಚಮತ್ಕಾರ ಅಘಟಿತ ಘಟನೆ ಎಂದಿದ್ದರಲಿಕ್ಕಿಲ್ಲ. ಈ ಶಬ್ದ ಇಂದಿಗೂ ಮರಾಠಿಯಲ್ಲೆ ಈ ವಿಶಿಷ್ಟ ಅರ್ಥದಲ್ಲಿ ಊರ್ಜಿತವಾಗಿದೆ.

ಮರಾಠಿಯಲ್ಲಿ 'ಪವಾಡ'ವು 'ಪೊವಾಡ' ಆಗಿದೆ. ಪೊವಾಡ ಎಂದರೆ ಆ ಭಾಷೆಯಲ್ಲಿ ಒಂದು ವೀರ ಕಾವ್ಯ. ನಮ್ಮಲ್ಲಿ ಅದನ್ನೇ ನಾವು 'ಲಾವಣಿ' ಎನ್ನುತ್ತೇವೆ. ಮರಾಠಿ ಸಾಹಿತ್ಯದಲ್ಲಿ ಈ ವೀರಗಾಥಾ ಯುಗ ಒಂದು ಆಗಿ ಹೋಯಿತು. ಶಿವಾಜಿಯ ಪೊವಾಡೆ, ಝಾಂಸಿ ಲಕ್ಷ್ಮೀಬಾಯಿಯ ಪೊವಾಡೆ ಇತ್ಯಾದಿ (ನಮ್ಮಲ್ಲಿ ಕಿತ್ತೂರ ಚನ್ನಮ್ಮನ ಲಾವಣಿ ಇರುವಂತೆ.)

ಈ 'ಪೊವಾಡಾ' ರಚಿಸುವ 'ಶಾಹೀರ' (ಶೇರ್=ಕವನ, ಶಾಯರ್=ಕವಿ.) ಸೋಜಿಗವೆಂದರೆ ಮರಾಠಿಯಲ್ಲಿ ಪೊವಾಡಾ ಬರೆಯುವವನಿಗೇ 'ಶಾಹಿರ್' ಎನ್ನುತ್ತಾರೆ. ಕವಿ ಎಂದಲ್ಲ! ಅಂದರೆ ಆ ರಚನೆಯ ಹಿಂದೆ ಒಂದು ಆವೇಶ ಸ್ಫೂರ್ತಿಯ ಉದ್ರೇಕ ಉದ್ಗಾರವಿರುತ್ತದೆ.

ಕನ್ನಡದಲ್ಲಿಯ ಪವಾಡ ಬಹುಶಃ ಸಂಸ್ಕೃತದ 'ಪ್ರವಾದ' ದಿಂದ ತದ್ಭವಗೊಂಡ ಶಬ್ದ. (ರಶಿಯನರಲ್ಲಿಯೂ "Pravda" ಆಗಿವೆ.) ಸಂಸ್ಕೃತ ಮೂಲದ ಅರ್ಥ ಜನಜನಿತ ವಾರ್ತೆ ವದಂತಿ-ಅಂತೆಯೇ ಕಂತೆ ಎಂದಾಗುತ್ತದೆ. ಅಂದರೇನು? ಅತಿ ಮಾನುಷ ಕೃತ್ಯ ಘಟನೆ ಎನಿಸಿಕೊಂಡ ಒಂದು ಸಂಗತಿ, ಮೂಲತಃ ಅಂತೆಯೆ ಕಂತೆಗೆ ಸೇರಿದ್ದು, ಅದನ್ನು ಸಹಸಾ ನಂಬುವದು ಕಠಿಣ ಎಂಬ ಧ್ವನಿ ಈ ಶಬ್ದದಿಂದ ಹೊರಡುತ್ತದೆ.

ಇದೇ ಅರ್ಥ Miracle ದಿಂದ ಅಲೌಕಿಕ ಅತಿ ಮಾನುಷ ಇಲ್ಲವೆ ದೈವಿಕ ಶಕ್ತಿಯ ಒಂದು ಕೃತ್ಯ. ನಿಸರ್ಗಕ್ಕೂ ಮೀರಿದ್ದು. Miracle ಮತ್ತು Mirage ಗಳ ಮೂಲ ಒಂದೇ ಲ್ಯಾಟಿನ್ mirus ಸೋಜಿಗದ್ದು. ಆದರೆ Mirage ಅಂದರೆ ಮೃಗಜಲ (ಬಿಸಿಲುಗುದುರೆ), ಆಭಾಸ mirror ಕನ್ನಡಿಗೂ ಇದೇ ಮೂಲ! ಪ್ರತಿಬಿಂಬವೂ ಒಂದು ಭಾಸ.

ಅಂದರೆ ಎಲ್ಲ ಅತಿ ಮಾನುಷ ನಿಸರ್ಗಾತೀತ ದೈವಿಕವೆಂಬ ಘಟನೆಗಳಲ್ಲಿಯ ಅದೊಂದು ನಂಬಲು ಬಿಗಿ, ಕಂಡಂತೆ ಇಲ್ಲದ್ದು ಒಂಬ ಅರ್ಥದ ಛಾಯೆ ಇದ್ದೇ ಇದೆ.

ಅಂದಾಗ ಪವಾಡ ನಿಜವಾಗಿಯೂ ಆಗುವುದೇ? ಎಂಬ ಪ್ರಶ್ನೆಯೇ ಅಸಮಂಜಸ, ನಿಜವಾಗಿ ಆಗುವದೆಂದು ಅಂಥ ಆಗುವಿಕೆಗೆ ಒಂದು ಕಾರಣ, ಹೇತು ಇರಬೇಕು. ಕಾರ್ಯ-ಕಾರಣ ಸಂಬಂಧಗಳ ಸರಪಳಿಯ ಒಂದು ಕೊಂಡಿ ಆಗು-ಹೋಗು ಕಾರಣವಿಲ್ಲದೆ ಒಂದು ಕಾರ್ಯ ಘಟಿಸಿದರೆ ಅದು ಪವಾಡ. ಅಶಕ್ಯವಾದದ್ದು ವಿನಾಕಾರಣವಾಗಿ ಸಂಭವಿಸಿದರೆ ಅದು ಪವಾಡ.

ಜಡದಿಂದ ಜೀವ, ಬೀಜದಿಂದ ಮರ, ಮುಗಿಲಲ್ಲಿ ಕಾಮನಬಿಲ್ಲು ಇತ್ಯಾದಿ ನಮಗೆ ಸೋಜಿಗವಾಗಿ ಚಮತ್ಕಾರವಾಗಿ ಕಾಣುವವು. ಒಬ್ಬ ಸ್ಯಾಂಡೋ ಎದೆಯ ಮೇಲೆ ಬಾರಿ ಕಲ್ಲು ಹೇರಿ ಒಡೆದು ಕೊಳ್ಳುವದು ನಮ ನಿಮಗೆ ಅಸಾಧ್ಯ. ಆದ್ದರಿಂದ ಪವಾಡ. ನಾವು ಹೈಸ್ಕೂಲಿಗೆ ಹೋಗುತ್ತಿದ್ದಾಗ ಏಕನಾಥ ಮೂರ್ತಿ ಎಂಬ ಒಬ್ಬ ಮಹಾ ಶಕ್ತಿ ಶಾಲಿಯ ಸರ್ಕಸ್ ಬರುತ್ತಿತ್ತು. ಆತ ಕೋವಿಯಿಂದ ಹಾರುವ ಗುಂಡು ಕೈಯಿಂದ ತಡೆ ಹಿಡಿಯುತ್ತಿದ್ದ. ಆತ ಜಗ್ಗಿ ಹಿಡಿದರೆ ಕಾರು ಮುಂದೆ ಹೋಗುತ್ತಲೇ ಇದ್ದಿಲ್ಲ. ದಪ್ಪ ಕಬ್ಬಿಣದ ಸರಪಳಿಯನ್ನು ಸುಲಭವಾಗಿ ಹರಿದು ತುಂಡರಿಸುತ್ತಿದ್ದ.

ಕುಮಾರವ್ಯಾಸ ದ್ರೌಪದಿ ಸ್ವಯಂವರದ ಪ್ರಸಂಗಗಳಲ್ಲಿ ವರ್ಣಿಸಿದ ಬ್ರಾಹ್ಮಣರ ಬಲಹು ಅವರ ಮಟ್ಟಕ್ಕೆ ಒಂದು ಪವಾಡವೇ. ನಾವು-ನೀವು ಎರಡು-ಮೂರು ಹೋಳಿಗೆ ತಿಂದರೆ ಕೆಲವು ಪಳಗಿದ ಭಟ್ಟರು ಹತ್ತು-ಇಪ್ಪತ್ತು ಲೀಲಾಜಾಲವಾಗಿ ಧ್ವಂಸ ಮಾಡಿ ದೊನ್ನೆಗಟ್ಟಲೆ ತುಪ್ಪ ಬೇರೆ ಸುರಿಯಬಹುದು. ಇದು ನಮ್ಮ ದೃಷ್ಟಿಯಲ್ಲಿ ಅದ್ಭುತ-ಪವಾಡವೇ.

ಆದ್ದರಿಂದ ಅನೇಕ ಪವಾಡವೆನಿಸುವ ಸಂಗತಿಗಳು ಸಾಪೇಕ್ಷ. ಒಬ್ಬರಿಗೆ ಸಾಧ್ಯವಾದದ್ದು ಇನ್ನೊಬ್ಬರಿಗೆ ಅಸಾಧ್ಯವಾದರೆ ಅದು ಅವನಿಗೆ ಪವಾಡ. ಇಲ್ಲಿ ಅದು ಸಂಭವನೀಯವಿದ್ದೂ ಪವಾಡ. ಅದೇ ರೀತಿ ಅಸಾಧ್ಯತೆಯಂತೆ ಅಜ್ಞಾನವೂ ಪವಾಡದ ಮೂಲವಾಗುವದುಂಟು.

ಶಿರಡಿ ಸಾಯಿಬಾಬರ ಸಮಾಧಿಯ ಮಂದಿರದಲ್ಲಿ ಕೆಲವು ವರ್ಷಗಳ ಹಿಂದೆ ಇಂತಿಷ್ಟು ಕಾಣಿಕೆ ಕೊಟ್ಟರೆ ಏನೋ ಆರಾಧನೆಯಿಂದ ಆ ಸಾಯಿಬಾಬಾರನ್ನೇ ಪ್ರತ್ಯಕ್ಷ ತೋರಿಸುತ್ತಿದ್ದರು. ಅಂದರೆ ಆ ಸಾಧು ಪುರುಷನಂತೆ ವೇಷ ಕಟ್ಟಿ ಸಮಾಧಿಯ ಮೇಲೆ ಒಬ್ಬನನ್ನು ಕೂಡ್ರಿಸುತ್ತಿದ್ದರು. ಗುಡಿಯ ವಿಶ್ವಸ್ತರು! ಈ ಕುರಿತು ಮುಂದೆ ಗುಟ್ಟು ರಟ್ಟಾಗಿ ಪ್ರಕರಣ ಕೋರ್ಟಿಗೂ ಹೋಯಿತು.

ಕೊಲಂಬಸ ವೆಸ್ಟ-ಇಂಡೀಜ ನಡು ಗಡ್ಡೆಗಳಿಗೆ ತಲುಪಿದಾಗ ಕಂದು ಇಂಡಿಯನ್ನರು ಪರಿಬಂದರು. ಆಗ ಆತ ಅವರಿಗೆ ಗದರಿಸಿದ "ನೀವು ಇಂಥ ದಿನದೊಳಗೆ ಶರಣು ಬರದಿದ್ದರೆ ನಿಮ್ಮ ದೇವರು ಚಂದ್ರನನ್ನು ನಾಶಮಾಡುವೆ!" ಅವರು ನಂಬಲಿಲ್ಲ. ಶರಣು ಬರಲಿಲ್ಲ, ಆದರೆ ಆ ದಿನ ಬಂತು. ರಾತ್ರೆ ಚಂದ್ರ ಕಪ್ಪಾಗುತ್ತ ನಡೆದ. ಕಂದು ಇಂಡಿಯನ್ ಮೂಢರು ಗಾಬರಿ ಆದರು. ಕಂಗೆಟ್ಟು ಶರಣು ಬಂದರು. ಕೋಲಂಬಸ್ ಚಂದ್ರನನ್ನು ಅವರಿಗಾಗಿ ಉಳಿಸಿದ. ಅಂದರೆ ಚಂದ್ರಗ್ರಹಣದ ಮಿತಿಗೊತ್ತಿತ್ತು. ಅವರಿಗೆ ಗೊತ್ತಿದ್ದಿಲ್ಲ. ಅವರ ಅಜ್ಞಾನದ ಪ್ರಯೋಜನ ಆತ ಪಡೆದು ಅವರಿಗೆ ಪವಾಡ ಪುರುಷನಾದ.

ಈ ವಿಶ್ವದಲ್ಲಿ ಕಾರ್ಯ-ಕಾರಣ ಸಂಬಂಧ ಬಿಟ್ಟು ಎಲ್ಲೂ ಏನೂ ಘಟಿಸುವದಿಲ್ಲ. ಹಾಗೆ

ಘಟಿಸುವಂತೆ ಕಂಡಲ್ಲಿ ಅದರ ಆ ಸಂಬಂಧ ನಮಗೆ ಗೊತ್ತಾಗಿರುವದಿಲ್ಲ. ಬಹುಕಾಲ ಗೊತ್ತಾಗಲಿಕ್ಕೂ ಇಲ್ಲ. ವಿಜ್ಞಾನದ ಪ್ರಗತಿಯೇ ಇಂಥ ವಿಸ್ಮಯಗಳನ್ನು ಅರಿತುಕೊಳ್ಳುವುದರಿಂದ ಉತ್ತರೋತ್ತರ ಅಜ್ಞಾನದ ಆಜ್ಞೇಯದ ಅರ್ಥಾತ್ ಪವಾಡ ಚಮತ್ಕಾರದ ಕ್ಷೇತ್ರ ಚಿಕ್ಕದಾಗುತ್ತ ಬಂದಿದೆ. ಆದರೆ ಇನ್ನೂ ಅತರ್ಕ್ಯ ಅತಿಕಠಿಣ್ಯ ಅಗಮ್ಯವೆನಿಸುವ ಅನೇಕ ಸಂಗತಿಗಳು ಇರಬಹುದು. ಅವು ಹಾಗೆ ಇರುವತನಕ ಪವಾಡಗಳ ಪ್ರಪಂಚ ಊರ್ಜಿತವಾಗಿರುವದು.

ಹೀಗೆಂದ ಮಾತ್ರಕ್ಕೆ ಅದೆಲ್ಲ ನಿಜವಾಗಿಯೂ ಚಮತ್ಕಾರಗಳಲ್ಲ. ಆ miracle - ಒಂದು mirage ಆಭಾಸ. ಯಾವ ಪವಾಡಪುರುಷನಿಗೂ ತಾನು ಮಾಡುವ ಪವಾಡ ಏನು ಹೇಗೆ ಎಂಬುದು ಗೊತ್ತಿರುತ್ತದೆ. ನಮ ನಿಮಗೆ ಅದು ಗೊತ್ತಾಗಿರುವದಿಲ್ಲ. ಆದರೆ ಆ ಪವಾಡದ ಕಾರಣ ಅದರ ಪ್ರತಿಕ್ರಿಯೆ ಒಬ್ಬನಿಗಾದರೂ ತಿಳಿದಿರುವನಕ ಅದು ಪವಾಡವೇ ಅಲ್ಲ! ಪವಾಡ ಮಾಡುವವನಿಗೂ ಅದು ಅಗಮ್ಯವಿದ್ದರೇನೇ ಅದನ್ನು ನಿಜವಾದ ಪವಾಡವೆಂದು ಹೇಳಬಹುದು.

ಈ ಪವಾಡಗಳ ಒಂದು ಭಾಗ ಪರೇಂಗಿತ ಜ್ಞಾತೆ (ಕಾಲಜ್ಞಾನ) ಇತರರ ಮನಸ್ಸಿನಲ್ಲಿಯ ವಿಚಾರ ಅರಿತುಕೊಳ್ಳುವದು. Mind reading ಅಥವಾ telepathy ಇದೊಂದು ವಿಶಿಷ್ಟ ವಿರಳವಾದ ಮನಃಶಕ್ತಿ ( ಡಾ. ಕಾರಂತರ "ಮೂಕಜ್ಜಿ") ಕೆಲವರಿಗೆ ಈ "ಆರನೆಯ ಇಂದ್ರಿಯ" (Sixth sense) ಬಲಿತಿರುತ್ತದೆ. ನಾವು ಕೇಳಿದ ಕೇಳಬೇಕೆಂದಿದ್ದ ಪ್ರಶ್ನೆಗೆ ಅವರು ಉತ್ತರ ಕೊಡುತ್ತಾರೆ. ಆಗ ಅವರು ಮಾಡುವದೇನು? ನಮ್ಮ ಮನಸ್ಸಿನಲ್ಲಿಯೇ ಆ ಪ್ರಶ್ನೆಯ ಉತ್ತರಗಳ ಪರ್ಯಾಯಗಳೂ ಇರುತ್ತವೆ. ಅವನ್ನೇ ಅವರು ಆಯ್ದು ಹೇಳುತ್ತಾರೆ. ನಮ್ಮ ಕಾರಿನ ನಂಬರು ನಮಗೆ ಗೊತ್ತು. ಅದು ಅವರಿಗೂ ಗೊತ್ತಾಗುತ್ತದೆ. ಇದೊಂದು ಅಪರೂಪದ ಕೌತುಕವೆನಿಸ ಬಹುದಾದ ಸಂಗತಿ. ಆದರೆ ನಾವು ಏನೋ ಪೂಜ್ಯ ಭಾವ ತಾಳಬೇಕಾಗಿಲ್ಲ. ಆಲ್ಡಸ್ ಹಕ್ಸ್ಲೀ (Aldus Huxleay) ಹೇಳಿದಂತೆ ಭೌತ ಪ್ರಪಂಚ ಅತ್ಯಂತ ಜಟಿಲ ಸೂಕ್ಷ್ಮ ಮತ್ತು ಸಂಕೀರ್ಣ. ಅದು ಉಂಟಾದ ಎಷ್ಟೋ ದೀರ್ಘಕಾಲದ ನಂತರ ನಮ್ಮ ಮನಸ್ಸೆಂಬ ಸತ್ವ ವಿಕಾಸಗೊಂಡಿತು. ಅದು ಜಡದ ಹೋಲಿಕೆಯಲ್ಲಿ ಇನ್ನೂ ಬಹಳ ಸರಳ ಸಾದಾ. ಅದರ ಬೆಳವಣಿಗೆ ಕೆಲವರಲ್ಲಿ ನಮ ನಿಮಗಿಂತ ಹೆಚ್ಚಿನ ಅಂಶ ಗೋಚರವಾಗಬಹುದು. ಆದರೆ ಇದೊಂದು ವಿಶಿಷ್ಟ ಹಾಗೂ ವಿರಳ ಘಟನೆ ಆದ ಮಾತ್ರಕ್ಕೆ ಏನೋ ದೈವೀ ಚಮತ್ಕಾರವೆಂದು ತಿಳಿಯಲೇ ಬೇಕಾಗಿಲ್ಲ.

ನಮಗಿಂತ ಬೇರೊಬ್ಬ ಒಂದು ಅರ್ಧ ಅಡಿ ಎತ್ತರ ನಮಗಿಂತ ಮುಮ್ಮಡಿ ದಪ್ಪ ಇದ್ದ ಮಾತ್ರಕ್ಕೆ ನಾವು ಅವನ ಕಾಲಿಗೆ ಬೀಳುತ್ತೇವೆಯೇ? ನಮಗಿಂತ ನಾಲ್ಕು ಪಟ್ಟು ಹೆಚ್ಚು ತಿಂದು ದಕ್ಕಿಸಿಕೊಂಡ ಮಾತ್ರಕ್ಕೆ ಅಥವಾ ನಾಲ್ಕು ದಿನ ಉಪವಾಸ ಉಳಿಯಬಲ್ಲವನಾದ ಮಾತ್ರಕ್ಕೆ ಆತ ನಮಗೆ ಪೂಜ್ಯನಾಗಬೇಕೇ? ನಮಗೆ ತಿಳಿಯದ ಯಾವದೋ ಒಂದು ಬಗೆಯಲ್ಲಿ ಬೆಲೆಯುಳ್ಳ - ಉಪಯುಕ್ತ ವಸ್ತುಗಳನ್ನು "ಸೃಷ್ಟಿ"ಸಲು ಒಬ್ಬ ಬಲ್ಲೆನಂದಾಕ್ಷಣ ಆತ ಅಷ್ಟದಿಂದಲೇ ಮಹಾಪುರುಷನಾಗಬಹುದೇ? ಶ್ರೀಮತಿ ಶಕುಂತಲಾ ದೇವಿ ಮಾಡುವ ಗಣಿತ ಒಂದು ಕ್ಷಣದಲ್ಲಿ ಮನಸ್ಸಿನಲ್ಲಿಯೇ ಮಾಡುತ್ತಿದ್ದಾರೆ. ಆದರೆ ಈ ಅದ್ಭುತ ಶಕ್ತಿಗಾಗಿ ಅವರು ಭಗವತಿ ಆದರೆ?

ಈ ಬಗೆಗೆ ನಾವೇ ನಮ್ಮಲ್ಲಿ ಶಾಂತಚಿತ್ತದಿಂದ ನಿರ್ವಿಕಾರ ನಿರುದ್ವೇಗಗಳಿಂದ ಆಲೋಚನೆ

ಮಾಡಬೇಕು. ಬುದ್ಧ, ಗಾಂಧೀಜಿ, ಪ್ರಭೃತಿಗಳು ಇಂಥ ಯಾವ ಪವಾಡವನ್ನೂ ಮಾಡದೆ ಲೋಕದ ಅಲೌಕಿಕ ಅದ್ಭುತ ಮಹಾಪುರುಷರೆನಿಸಿಕೊಂಡರು.

ಹೇಗೆ? ಅವರ ಶೀಲ ಚಾರಿತ್ರ್ಯಗಳಿಂದ ತ್ಯಾಗ, ತಪಸ್ಸು ಲೋಕಕಲ್ಯಾಣದ ಅಹರ್ನಿಶ ಸಾಧನೆಯಿಂದ ಈ ಜಗತ್ತಿನಲ್ಲಿ ಮೊದಲಿಗೂ ಕೊನೆಗೂ ತಾಳಿ ಬಾಳಿ ನಿಲ್ಲುವದು ಸಾಧನೆ. ಅದರಿಂದ ರೂಪಗೊಂಡ ಚಾರಿತ್ರ್ಯ, ಸಜ್ಜನಿಕೆ, ಪ್ರಾಮಾಣಿಕ ಮನುಷ್ಯ ದಯಾಮಯ ಮನುಷ್ಯ ಸದಾಕಾಲವೂ ಸರ್ವರಿಗೂ (ಲೇಸನ್ನೇ) ಮಾಡುವ ಬಯಸುವ ಮನುಷ್ಯ ತನ್ನಿಂದ ಯಾರಿಗೂ ನೋವಾಗದಂತೆ ನೋಡಿಕೊಳ್ಳುವ ಮನುಷ್ಯ - ಇಂಥವನೇ ನಿಜವಾದ ಪವಾಡ ಪುರುಷ. ಅವನ ನಡತೆಯೇ ಒಂದು ಪವಾಡ. ಆದ್ದರಿಂದ ಯಾರು ಏನೇ ಪವಾಡ ಮಾಡಿದರೂ ಅದೊಂದು ಮಾಯೆ. ಸಂಕಲ್ಪದಿಂದ ಇನ್ನೊಂದು ಮನಸ್ಸಿನಲ್ಲಿ ಸಂಕಲ್ಪವೋ ವಿಕಲ್ಪವೋ ಉಂಟಾಗಬಹುದು. ಹೊರತು ಇದ್ದಕ್ಕಿದ್ದಂತೆ ಜಡವಸ್ತುಗಳ ಒಂದು ಸಂಯೋಗ ಅದರಿಂದ ಒಂದು ಸಿದ್ಧ ಸಂಗತಿ ಸ್ಥಾಪಿತವಾಗಲಾರದು. ಹಾಗೆ ಹೇಳುವದು ಓರೆ ಮಾತಿನ ಜಾಣತನ. ಒಬ್ಬ ವ್ಯಕ್ತಿಯಲ್ಲಿ ಕೆಲವೊಂದು ವಿಲಕ್ಷಣ ವಿಚಿತ್ರ ಅಸಾಮಾನ್ಯ ಶಕ್ತಿಗಳಿವೆಯೆಂದು ಕಂಡು ಬಂದರೂ ಒಪ್ಪಿಕೊಂಡರೂ ಮುಂದೇನು? ಈ ಪವಾಡ-ಪ್ರವಾದ ಒಂದು ಅಪವಾದ exception ನಿಯಮ, ಜೀವನದ ಧರ್ಮವಲ್ಲ. ಜೀವನವೇ ಒಂದು Miracle.



('ಸಹಚರ' ೧೯೭೬)

# ಸೇವಾ ನಿವೃತ್ತರ ಸಂಧ್ಯಾರಾಗ

ನಾ. ಕಸ್ತೂರಿ ತಮ್ಮ ಪೂರ್ವಾಶ್ರಮದಲ್ಲಿ ವಿನೋದಿ ಲೇಖನದ 'ಗೃಹದಾರಣ್ಯಕ'ರಾಗಿರುವಾಗ 'ವಾನಪ್ರಸ್ತ'ವನ್ನು 'ಶ್ವಾನಪ್ರಸ್ತ' ವೆಂದು ಕರೆದಿದ್ದರು. ಅಂದರೆ ಅದು ಪಿಂಚಣಿ ಪಡೆದು ಮಕ್ಕಳ ಮನೆಯಲ್ಲಿ ಸುಖವಾಗಿ ವಾಸಗ್ರಾಸ ಸೇವಿಸುತ್ತ ಸಂಜೆ ಯಾ ಮುಂಜಾನೆ ವಾಯುಸೇವನೆಗೆ ಹೊರಟಾಗ ಜತೆಗೆ ಮನೆಯ ಸಾಕಿದ ನಾಯಿಯನ್ನು ತಿರುಗಾಡಿಸಲು ಒಯ್ಯುವ ವಿರಾಮ ಕಾಲದ ಬದುಕು, ಈ ಶ್ವಾನಪ್ರಸ್ಥ.

ಆದರೆ ಇಂದಿನ ಮಾಯಾ ಕೋಲಾಹಲದ ಕರ್ಕಶ ಯುಗದಲ್ಲಿ ಈ ವಿಶ್ರಾಂತಿವೇತನ ಉಣ್ಣುವ ಸೇವಾನಿವೃತ್ತ ಮುದಿ ಮಂದಿಯ ಬದುಕು ಆ ಶ್ವಾನದ ಬಾಳಿಗಿಂತಲೂ ಕಡೆಯಾಗಿದೆ,- ವಿಶೇಷತಃ ನವ ನಾಗರಿಕತೆಯ ಶಿಖರದಲ್ಲಿ ಓಲಾಡುವ ನಗರಜೀವನದಲ್ಲಿ.

ಇಂದು ಈ ಸೇವಾನಿವೃತ್ತ ವಯೋವೃದ್ಧರ ಬಾಳು ಯಾವ ಬಗೆಯಾಗಿದೆ? ಈ ಬಗೆಗೆ ಈಚೆಗೆ ಶ್ರೀ ಇ.ಆರ್. ರಾಮಕುಮಾರ ಎಂಬ ಪತ್ರಿಕೋದ್ಯಮಿ ಮುಂಬಯಿ ನಗರದಲ್ಲಿಯ ಹಲಕೆಲವು ಬೇರೆ ಬೇರೆ ಬದುಕಿನ ಹಂತದ ಸೇವಾ ನಿವೃತ್ತರನ್ನು ಸಂದರ್ಶಿಸಿ ಅವರ ಅನುಭವಗಳನ್ನು ಸಂಗ್ರಹಿಸಿ ಒಂದು ಲೇಖನದಲ್ಲಿ ಪ್ರಕಟಿಸಿದ್ದಾರೆ. ಅದನ್ನೇ ಇಲ್ಲಿ ಸಂಗ್ರಹಿಸಿ ಕೊಡುತ್ತಿದ್ದೇನೆ-'ಉದಯ-ವಾಣಿ' ಗೆ ಅಸ್ತಮಿಸುವವರ ವಾಣಿಯೂ ಒಮ್ಮೆ ಕೇಳಿಬರಲಿ, ಎಂದು!

ಸೇವಾನಿವೃತ್ತರಿಗೆ ಇಂದಿನ ಕಾಲಮಾನ ಬದಲಾಗಿದೆ - ಹಿಂದಿನಂತೆ ಉಳಿದಿಲ್ಲ- ಚಾಕರಿಗೆಲಸದಿಂದ ನಿವೃತ್ತವಾದೊಡನೆ ಅವರಿಗೆ ದಿನೇ ದಿನೇ ತೀವ್ರವಾಗಿ ಅನಿಸುವುದೇನೆಂದರೆ- ತಮ್ಮ ಅಂತಸ್ತು, ಪ್ರತಿಷ್ಠೆಗಳಲ್ಲಿ ಒಮ್ಮೆಲೆ ಬದಲಾವಣೆ ಆಗಿದೆ. ಸಂಪಾದನೆ-ವರಮಾನಗಳಲ್ಲಿ ಇಳಿತಾಯ ಇಲ್ಲವೇ ಪೂರ್ತಿ ಹಾನಿ. ಅದೇ ರೀತಿ ಚಟುವಟಿಕೆಯಲ್ಲಿಯೂ, ಜತೆಗೆ ಆರೋಗ್ಯವೂ ಇಳಿಮುಖ. ಕುಟುಂಬದಲ್ಲಿಯೂ ಭಾವನಾತ್ಮಕವಾದ ತಿಕ್ಕಾಟ. ಸಮಾಜದಲ್ಲಿಯೂ ಒಂದು ರೀತಿ ಪ್ರತ್ಯೇಕತೆ ದೂರವಿಟ್ಟ ಭಾವನೆ. ಇವೆಲ್ಲವುಗಳ ದಟ್ಟ ನೆಳಲು ಈ ವೃದ್ಧರ ಬಾಳನ್ನು ಹಠಾತ್ತಾಗಿ ಕವಿಯುತ್ತದೆ.

ಅವರದು ಒಂದೇ ದೂರು- ಹಿಂದೆ ತಾವು ಗಳಿಸುತ್ತಿರುವಾಗ ಮನೆಯಲ್ಲಿ ಮಡದಿ-ಮಕ್ಕಳಲ್ಲಿ ತಮಗಿದ್ದ ಆದರ ಗೌರವ, ಅದೇಕೆ? ತಮ್ಮ ಹಳೆಯ ಹಿರಿಯರ ಬಗೆಗೆ ಅಂದು ತಮಗಿದ್ದ ಆದರ-ಗೌರವ ಇಂದು ಕಳೆದುಕೊಂಡಂತಾಗಿದೆ.

ಇಂಥ ಸೇವಾನಿವೃತ್ತ ಸದ್ಗೃಹಸ್ಥರ ಗುಂಪು - ಸುಕ್ಕುಮೋರೆ, ಬಡಕಲು ಮೈ, ಬಾಗಿದ ಬೆನ್ನು, ಕೃತಕ ಹಲ್ಲು, ಕೈಯಲ್ಲಿ ಬಡಿಗೆ- 'ಏವಂ ಗುಣ ವಿಶೇಷಣ ವಿಶಿಷ್ಟ' ರಾಗಿ ಹರಟುತ್ತ ದಿನಮಾನವನ್ನು ದೂರುತ್ತ, ಒಬ್ಬ ದಿನಪತ್ರಿಕೆ ಓದುತ್ತಿದ್ದರೆ ಅದನ್ನು ಕೇಳಿ ಟೀಕೆ ಟಿಪ್ಪಣಿ ಮಾಡುತ್ತ ಅಡಿಕೆ ಮೆಲ್ಲುತ್ತ, ಬೀಡಿ ಸೇದುತ್ತ ಒಟ್ಟು ಕೂತದ್ದನ್ನು ಯಾವುದೇ ಸಂಜೆಗೆ ಯಾವುದೇ ಸಾರ್ವಜನಿಕ ಉಪವನದಲ್ಲಿ ನಾವು ಕಾಣಬಹುದು. ಈ ಮಂದಿ ಎಷ್ಟೋ ಸಲ ಹಿಗ್ಗಿನ ನಗೆಮೊಗದ ಮುಖವಾಡ

ತೊಡುತ್ತಿದ್ದರೂ ಅದರ ಹಿಂದಿನ ಆಳವಾದ ದೈನ್ಯ-ಕಳವಳ-ಅಸ್ವಸ್ಥತೆಗಳು ಅವರ ದಣಿದ ನೋಟಗಳಲ್ಲಿ ಇಣುಕುತ್ತಿರುತ್ತದೆ. ಭಗ್ನ ಮನೋರಥಗಳ, ಆಡಲಾರದ ಅನಿಸಿಕೆಗಳ ಸರಳಿಕೆ ಅವರ ಉಸಿರಿನೊಂದಿಗೆ ಹೊರ ಸೂಸುತ್ತಿರುತ್ತದೆ. ಇವರು ಮಕ್ಕಳನ್ನು ಬೆಳೆಸಿದರು, ಸಮಾಜವನ್ನು ರೂಪಿಸಿದರು. ಅಧಿಕಾರವನ್ನು ಚಲಾಯಿಸಿದರು. ಆದರೇನು? ಈಗ ನಿವೃತ್ತ ಜೀವನದಲ್ಲಿ ಗಾಳಿ ಹೋದ ಪುಗ್ಗೆಯಂತೆ ಆದರು. ಅವರು ನೆಟ್ಟ ಗಿಡದ ಹಣ್ಣು ಈಗ ಅವರ ಬಾಯಿಯಲ್ಲಿಯೇ ಏನೋ ಮಣ್ಣಾದಂತೆ!

'ರುಚಿ ಇಲ್ಲದಿದ್ದರೂ ಇದೊಂದು ಕಟು ಸತ್ಯ. ಹಳೆಯದು ಇಂದು ಹೊನ್ನಲ್ಲ. ಹೊಸಬರ ಬೆನ್ನಿಗೆ ಅದೊಂದು ತೊನ್ನು. ಆಫೀಸಿಗೆ ಹೊರಟಾಗ ನಾನು ದಿನಾಲು ಮನೆಮಂದಿ ಮೇಲೆ ರೇಗಾಡುತ್ತಿದ್ದೆ. ಮುಂಜಾವಿನ ೮-೩೦ರ ಗಾಡಿ ಹಿಡಿಯಲು ತಡವಾಗುವುದೆಂದು, ರಾತ್ರಿ ೮-೨೦ಕ್ಕೆ ಮನೆ ಸೇರಿದಾಗ ಮಕ್ಕಳು ನಿದ್ದೆ ಹೋಗುತ್ತಿದ್ದರು. ನಾನೂ ಸೋತು ಸುಸ್ತಾಗಿ ಮಲಗುತ್ತಿದ್ದೆ. ಇದರಿಂದ ಆದದ್ದೇನು? ಜೀವಮಾನವೆಲ್ಲ ವರಮಾನ ಹೆಚ್ಚಿದರೂ ನಮ್ಮ ಮಕ್ಕಳನ್ನು ನಾನು ಸರಿಯಾಗಿ ಅರಿತುಕೊಳ್ಳಲಿಲ್ಲ! ಅವರನ್ನು ಅಷ್ಟು ನೆಚ್ಚಿಕೊಂಡಿದ್ದು ಕಡಿಮೆ!-ಅವರೂ ಹಾಗೆಯೇ!' ಅನ್ನುತ್ತಾನೆ ಶ್ರೀ ಆಗಸ್ಟಸ್ ಪಿಂಟೋ,- ಈಚೆಗೆ ಒಂದು ಬಸ್ ಸಾರಿಗೆಯ ಮೆನೆಜರ ಹುದ್ದೆಯಿಂದ ರಿಟಾಯರ್ ಆದವನು. ಆತ ಮುಂದೆ ಅಂದ: "ಈ ಮಕ್ಕಳು ತಾವು ದೊಡ್ಡವರಾದ ಮೇಲೆ ನಾವು ಅಂದು ನಡೆದುಕೊಂಡಂತೆಯೇ ನಮ್ಮೊಂದಿಗೆ ನಡೆಯುತ್ತಾರೆ!"

ಅಂದಾಗ ಇದೇನು ಸೋಜಿಗವಲ್ಲ-ಇಂದು ಎಷ್ಟೋ ಸೇವಾನಿವೃತ್ತರು ನಗರಗಳಲ್ಲಿ ಹೊಸದೊಂದು ಕೆಲಸ ಚಾಕರಿ ಹುಡುಕಿ ಗಂಟು ಹಾಕಿಕೊಳ್ಳುವರು. ಶ್ರೀ ಆರ್.ವಿ.ಬೋಸ ಎಂಬ ಒಬ್ಬ ನಿವೃತ್ತ ಅಕೌಂಟ್ ಆಫೀಸರ; ಈಗ ಪುನಃ ಒಂದು ಸಹಕಾರಿ ಸಂಸ್ಥೆಯ ಲೆಕ್ಕಿಗನಾಗಿದ್ದಾನೆ. ಆತ ಅಂದ, "ನಾನು ಅನೇಕರನ್ನು ಕಂಡಿದ್ದೇನೆ. ಕೆಲಸವಿಲ್ಲದೆ ಒಮ್ಮೆಲೆ ಬಿಡುವಿನ ಬೇಸರದಿಂದ ಅವರು ಶಾರೀರಿಕವಾಗಿಯೂ ಮಾನಸಿಕವಾಗಿಯೂ ಮನೆ ಮಂದಿಗೆ ಒಂದು ಸಮಸ್ಯೆ ಆಗಿಬಿಟ್ಟಿದ್ದಾರೆ!"

ಇನ್ನೊಬ್ಬ ನಿವೃತ್ತ ಸ್ಟೆನೋಗ್ರಾಫರ ಹೇಳಿದ; "ಅಲ್ಲ, ನಮ್ಮ ಈ ಪ್ರಾಯದಲ್ಲಿ ಶಹರದ ಜಡಿದು ತುಂಬಿದ ಪ್ರಯಾಣಿಕರ ಬಸ್ಸುಗಳಲ್ಲಿ, ಟ್ರೇನುಗಳಲ್ಲಿ ನಾವೂ ನುಗ್ಗಿ ಸಂಚಾರ ಮಾಡುವುದು ನಮಗೇನು ಇಷ್ಟವೇ? ಆದರೆ ನಿರ್ವಾಹವಿಲ್ಲ. ನಾವು ಮೈಗಳ್ಳರಾಗಿ ಕೂತರೆ ಯಾರಿಗೂ ಸೇರುವುದಿಲ್ಲ. ನಮ್ಮ ಹಳ್ಳಿಯ ಮಾತು ಬೇರೆ. ಅಲ್ಲಿ ಹೊತ್ತುಗಳೆಯಲು ಪೂಜೆ, ಪುನಸ್ಕಾರ, ಪುರಾಣ, ಪುಣ್ಯಕಾರ್ಯಗಳಿರುತ್ತವೆ. ಈ ಶಹರಗಳಲ್ಲಿ ಅಂಥ ಅನುಕೂಲ ಎಲ್ಲರಿಗೂ ಸಿಗುವುದಿಲ್ಲ. ಅಂಥ ಕೆಲಸ ಉತ್ಪಾದಕವೂ ಅಲ್ಲ - ಮನೆಯವರ ದೃಷ್ಟಿಯಲ್ಲಿ!"

ಇನ್ನು ಇದಕ್ಕೆ ವಿರುದ್ಧವಾಗಿ ಕೆಲವರ ಅನುಭವ, ಅವರ ಕೊರಗೇ ಬೇರೆ. ಅವರಿಗೆ ಮನೆಯಲ್ಲಿ ಯಾವ ಕೆಲಸ ಮಾಡಲೂ ಬಿಡುವುದಿಲ್ಲ. ಹೊರಗೆ ಹೋಗಿ ಏನಾದರೂ ಅರೆ-ದಿನದ ಕೆಲಸ ಮಾಡಲೂ ಕೊಡುವುದಿಲ್ಲ. ಇದಕ್ಕೆ ಕಾರಣ ಅವರ ಬಗ್ಗೆ ಮನೆಯವರ ಹದಗೆಟ್ಟ ಕನಿಕರ "ನಮಗೆ ಏನಾದರೂ ಚಟುವಟಿಕೆ ಬೇಕು. ಇಲ್ಲವಾದರೆ ನಾವು ತೀರ ನಿರುಪಯೋಗಿ ಎಂಬ

ಭಾವನೆ ನಮಗೆ ಸಹನವಾಗುವುದಿಲ್ಲ!"

ಆಧುನಿಕ ನಗರ ಜೀವನದ ಇನ್ನೂ ಒಂದು ಗಂಭೀರ ಮುಖವಿದೆ. ಸಾಮಾನ್ಯವಾಗಿ ಇನ್ನು ಅನೇಕ ಆಧುನಿಕ ಸುಶಿಕ್ಷಿತ ಸುಖವಸ್ತು ಮಂದಿ ಸಾಂಪ್ರದಾಯಿಕ ಕುಟುಂಬ ರೀತಿಗಳನ್ನು ಪೂರ್ತಿ ಬಿಟ್ಟಿರುವುದಿಲ್ಲ. ಮನೆಯಲ್ಲಿ ನಿವೃತ್ತ ನರೆತ ಮಂದಿಯ ಆರೈಕೆ ಮಾಡುತ್ತಾರೆ. ಆದರೆ ಅನೇಕ ಆರ್ಥಿಕ ಸ್ವಾತಂತ್ರ್ಯ ಪಡೆದ ಮಗಂದಿರು ಕ್ರಮೇಣ ತಮ್ಮ ಮಡದಿ ಮಕ್ಕಳೊಂದಿಗೆ ತಮ್ಮ ಇಷ್ಟದಂತೆ ತಂದೆ-ತಾಯಿಗಳಿಂದ ಬೇರೆ ಇರಲು ಬಯಸುತ್ತಾರೆ. ಆರಂಭಿಸುತ್ತಾರೆ. ತಲೆಮಾರಿನ ಕಂದಕ ('ಜನರೇಶನ್ ಗ್ಯಾಪ್') ಎಂಬ ಪ್ರಶಸ್ತಿ ಹೆಸರು ಕೊಟ್ಟು ಅತ್ತೆ ಸೊಸೆಯಂದಿರ 'ಕೂಡಲಾರದ ಕಣ್ಣು' ಬೇರೆ ಬೇರೆ ನೋಡಹತ್ತುತ್ತವೆ. ಏನಾದರೊಂದು ನೆವ ಒಡ್ಡಿ ತರುಣ ದಂಪತಿ ವೃದ್ಧ ತಾಯ್ತಂದೆಗಳಿಂದ ದೂರವಾಗುತ್ತಾರೆ. "ಇದಕ್ಕೆ ನಗರೀಕರಣವೇ ಹೊಣೆ" ಅನ್ನುತ್ತಾಳೆ ಶ್ರೀಮತಿ ನಯನಾ ವೈದ್ಯ (ಇವಳು ಸಮಾಜಶಾಸ್ತ್ರದ ಪ್ರಾಧ್ಯಾಪಿಕೆ). "ಈ ನಗರೀಕರಣದ ಸುಳಿಯಲ್ಲಿ ಸಿಲುಕಿ ಕುಟುಂಬಗಳು ಗಾಸಿ ಆಗುತ್ತವೆ- ಕೆಲ ಸಲ ಒಡೆದು ತುಂಡಾಗುತ್ತವೆ." (ಇಂಥ ಪ್ರಸಂಗಗಳಲ್ಲಿ ಕೆಲವು ವಿವೇಕಿಗಳೂ ದೂರದರ್ಶಿಗಳೂ ಸ್ಥಿತಿವಂತರೂ ಸದೃಢರೂ ಆದ ಮುದಿ ತಾಯ್ತಂದೆಗಳು ತಾವೇ ತಮ್ಮ ತರುಣ ಮಕ್ಕಳಿಗೆ ಬೇರೆ ಸಂಸಾರ ಹೂಡಲು ಹೇಳಿ ಅವರಲ್ಲಿ ಆಗಾಗ್ಗೆ ಹೋಗಿ ಬಂದು ದೂರ ಉಳಿಯುವುದುಂಟು.)

"ಇಂದಿನ ಮಿನಿ-ಕುಟುಂಬವೆಂದರೆ, ಗಂಡ ಹೆಂಡತಿ ಇಬ್ಬರು ಮಕ್ಕಳು. ಅದು ಉಳಿಯುವುದು ಎರಡು ಕೋಣೆಯ ಅಪಾರ್ಟ್‌ಮೆಂಟ್ ಹೌಸಿನಲ್ಲಿ. ಅಲ್ಲಿ ಅಜ್ಜ ಅಜ್ಜಿಗೆ ಸ್ಥಾನವಿರುವುದಿಲ್ಲ" ಅನ್ನುತ್ತಾನೆ ಶ್ರೀ ಎ. ವ್ಹಿ. ಎನ್. ಮೆನನ್. ಈ ವೃದ್ಧ ಒಂದು ಚಾಳಿನಲ್ಲಿ ಇರುವವನು. ಅಜ್ಜ ಅಜ್ಜಿ ಹೆಚ್ಚಾಗಿ ತಮ್ಮ ಹಳ್ಳಿಯಲ್ಲಿಯೇ ಮೂಲದ ಊರಿನಲ್ಲಿಯೇ ವಾಸಿಸುತ್ತಾರೆ. ಮಕ್ಕಳು ಸೂಟಿಯಲ್ಲಿ ಅಲ್ಲಿಗೆ ಹೋಗಿ ಉಳಿದು ಬರುತ್ತಾರೆ.

ಆದರೆ ಇದು ಸದ್ಯ ಸಾರ್ವತ್ರಿಕವಲ್ಲ. ಸಮಾಜಶಾಸ್ತ್ರದ ಟಾಟಾ ಇನ್‌ಸ್ಟಿಟ್ಯೂಟಿನ ಡಾ। ಕೆ.ಜಿ. ದೇಸಾಯಿ ಅವರ ಅಭಿಪ್ರಾಯ ಕೇಳಿ: "ನಗರದಲ್ಲಿ ಸಂಯುಕ್ತ ಕುಟುಂಬ ಒಡೆದು ತುಂಡಾಗುತ್ತಿದೆ ಎಂಬುದನ್ನು ನಾನು ಒಪ್ಪುವುದಿಲ್ಲ. ನಾವು ಸರ್ವೇ ಮಾಡಿ ನೋಡಿದ್ದೇವೆ. ಸರ್ವ ಸಾಮಾನ್ಯ ನೂರಕ್ಕೆ ೯೦ ಸೇವಾ ನಿವೃತ್ತ ವೃದ್ಧರೂ ತಮ್ಮ ಮಕ್ಕಳೊಂದಿಗೇ ವಾಸಿಸುತ್ತಾರೆ. ಈ ಮುಂಬಯಿಯಲ್ಲಿ." (ಅವರು ಮಾಡಿದ ಸರ್ವೆಗೆ ಒಳಪಟ್ಟವರು ಆರುನೂರು ನಿವೃತ್ತ ಅಧಿಕಾರಿಗಳು ಹಾಗೂ ಅಧ್ಯಾಪಕರು.)

ಆದರೂ ಇಷ್ಟೊಂದು ನಿಜ. ಶಹರುಗಳಲ್ಲಿ ಅನೇಕ ಮನೆಗಳಲ್ಲಿ ಈ ವೃದ್ಧ ತರುಣ ನಡುವಿನ ಬಂಧ ಕಡಿದು ಹೋದಂತಿದೆ. ಭಾವನಾತ್ಮಕ ಮತ್ತು ಆರ್ಥಿಕ ಘಟಕಗಳೂ ಕುಟುಂಬ ಬದಲಾದ ಮಾದರಿಯೂ ಮನೆಯಲ್ಲಿ ಮನೆಯ ಮಂದಿಯ ಮನಸ್ಸಿನಲ್ಲಿ ಸಾಕಷ್ಟು ಸ್ಥಳಾವಕಾಶವಿಲ್ಲದಿರುವುದೂ, ಆಳವಾದ ಸಹಾನುಭೂತಿ ಇಲ್ಲವೆ ಮಾನವೀಯ ಮರುಕ ಕೊರತೆಯೂ ಈ ಬಗೆಯ ಇವೆರಡು ತಲೆಮಾರುಗಳ ನಡುವಿನ ಸ್ನೇಹಪಾಶವನ್ನು ಕಡಿಯಲು ಕೆಲವು ಕಾರಣಗಳಾಗಿವೆ. 'ತರುಣಸ್ತಾವತ್ ತರುಣೀ ರಕ್ತಃ! ವೃದ್ಧಸ್ತಾವತ್ ಚಿಂತಾಸಕ್ತಃ

ಮನೆಯಲ್ಲಿಯೂ ಇದೇ ಚರ್ಪಟಪಂಜರಿ! ಮಕ್ಕಳೇ ಅಸಹ್ಯಪಡುವಾಗ ಅಸಹನೆ ತಾಳುವಾಗ ಮುದಿ ತಂದೆ ತಾಯಿ ಅಸಹಾಯಕರು.

ಗ್ರಾಮಾಂತರ ಪ್ರದೇಶಗಳಲ್ಲಿ ಇನ್ನೂ ಹಿರಿಯರಿಗೆ ತುಸು ವರ್ಚಸ್ಸು, ಪ್ರತಿಷ್ಠೆ ಇರಬಹುದು. ಆದರೆ ಶಹರದ ತರುಣ ಪೀಳಿಗೆಯಲ್ಲಿ ಅದು ಉಳಿದಿಲ್ಲ. ೭೩ ವರ್ಷದ ಶ್ರೀ ವ್ಹಿ. ರಾಮಚಂದ್ರ ಅನ್ನುತ್ತಾನೆ- "ಯುವಕರಿಗೆ - ನಮಗಾಗಿ ವೇಳೆಯೂ ಇಲ್ಲ. ತಾಳ್ಮೆಯೂ ಇಲ್ಲ. ಹಗಲೆಲ್ಲ ನಾವಾಯ್ತು ನಮ್ಮ ಚಿಂತೆಯಾಯ್ತು. ನಮ್ಮ ಪ್ರಾಯದ ಮಕ್ಕಳು ನಮ್ಮೊಂದಿಗೆ ದಿನದಲ್ಲಿ ಒಂದೆರಡು ಮಾತನಾಡಿದರೂ ಸಾಕು. ನಮ್ಮ ನಡುವಿನ ಬಾಂಧವ್ಯ ಕಾಪಾಡಿಕೊಳ್ಳುವುದರಲ್ಲಿ ಅದು ತುಂಬ ದೂರ ನೆರವಾಗಬಲ್ಲದು. ಆದರೆ ಬದುಕಿನ ಬಾಯಿಗೂಡಿಸುವ ನಿತ್ಯದ ಹೆಣಗಾಟದಲ್ಲಿ ನಮ್ಮ ಮಕ್ಕಳಿಗೆ ನಮ್ಮೊಂದಿಗೆ ಮಾತನಾಡಲು ವೇಳೆ ಮಾಡಿಕೊಳ್ಳಲೂ ಕಷ್ಟವಾಗುತ್ತದೆ. ಇದನ್ನು ನಾವು ಮುದುಕರೂ ಮನಗಾಣಬೇಕು. ವರ್ತಮಾನ ಸಮಸ್ಯೆಗಳೊಂದಿಗೆ ಹೊಂದಿಕೊಳ್ಳಲು ನಾವೂ ಹೆಣಗಬೇಕು."

ಇಲ್ಲಿ ಇನ್ನೂ ಒಂದು ದುರ್ದೈವವೆಂದರೆ ಇಂದಿನ ಸುಧಾರಿಸಿದ ವೈದ್ಯಕೀಯ ಚಿಕಿತ್ಸೆ ವಿಧಾನದಿಂದಾಗಿ ಮುದುಕರ ಜೀವಾವಧಿಯೂ ಹೆಚ್ಚಿದೆ! ಭಾರತೀಯರ ಸರಾಸರಿ ಆಯುರ್ಮಾನ ೧೯೨೧ರಲ್ಲಿ ೨೫ ವರ್ಷವಿತ್ತು. ಅದೀಗ ೧೯೭೧ರಲ್ಲಿ ೫೨ ಆಗಿದೆ. ಇಮ್ಮಡಿಯನ್ನು ಮೀರಿದೆ! ೧೯೨೧ರಲ್ಲಿ ಷಷ್ಟ್ಯಬ್ಧ ಪೂರ್ತಿ ಗೈಯುವವರು ಒಂದು ಹಿಡಿಯಷ್ಟೂ ಇದ್ದಿಲ್ಲ. ಆದರೆ ಜನಸಂಖ್ಯೆಯ ನೂರಕ್ಕೆ ೬ರಷ್ಟು ಮಂದಿ ಇಂದು ೬೦ ದಾಟಿರುತ್ತಾರೆ. "ಆದರೆ ಇದೆಲ್ಲ ಒಂದು ವರ ಪ್ರದಾನವಲ್ಲ"- ಡಾ। ಎ.ಬಿ. ಸರದೇಸಾಯಿ ಅನ್ನುತ್ತಾರೆ. ಆತ್ಮೀಯರೇ ಉಪೇಕ್ಷೆ ಮಾಡುತ್ತಿರುವಲ್ಲಿ ಇಂಥ ದೀರ್ಘಾಯುಷ್ಯ ಒಂದು ಜ್ವಲಂತ ಶಾಪ. ಡಾ। ಸರದೇಸಾಯಿಯರ ಅಂಬೋಣವೇನೆಂದರೆ "ಈ ಅಯುರ್ಮಾನದ ವಿಸ್ತರಣೆಯೊಂದಿಗೆ ಕೆಲವು ತೀವ್ರ ಸಮಸ್ಯೆಗಳೂ ಬಂದಿವೆ - ಮಾನಸಿಕ ಯಾತನೆ."

"ಕೊರೆಯುವ ಚಿಂತೆ, ಕೆರಳಿಕೆ-ಸಿಡುಕು, ಅಭದ್ರತೆಯ ಭಯ, ಅಸಂಗತ ನಡತೆ ಇತ್ಯಾದಿ. ಈ ಸಮಸ್ಯೆಗಳು ಕುಟುಂಬದಲ್ಲಿ ಮುದುಕರ ಬಾಳಿನ ತೊಡಕನ್ನು ಇನ್ನಿಷ್ಟು ಜಟಿಲಗೊಳಿಸುತ್ತವೆ."

ಈ ಸಮಸ್ಯೆ ಪಾಶ್ಚಾತ್ತ್ಯ ದೇಶಗಳಲ್ಲಿಯೂ ತೀವ್ರವಾಗಿದೆ. ಆದರೆ ಅಲ್ಲಿ ಅದನ್ನು ಬಗೆಹರಿಸಲಿಕ್ಕೆ ಕ್ಷೇಮ ಕ್ಲಬ್ಬುಗಳು, ಸಾಮಾಜಿಕ ಕೇಂದ್ರಗಳು, ವೃದ್ಧಾಶ್ರಮಗಳು ಉತ್ತಮ ಕೆಲಸ ಮಾಡುತ್ತವೆ. ಮುಂಬಯಿಯಲ್ಲಿಯೂ ಇಂಥ ಕೆಲವು ಸಂಸ್ಥೆಗಳಿರುತ್ತವೆ. ಉದಾಹರಣೆಗೆ ಬಾಯಕುಲಾ (ಭಯಾಕುಲ)ದಲ್ಲಿ ಶಫರ್ಡ್ ಹೋಂ ಫಾರ್ ವಿಮೆನ್, ಮಝುಗಾಂವದಲ್ಲಿ ಚೆಶಾಮರ್ ಹೋಂ, ಅಂಧೇರಿಯಲ್ಲಿ ಶ್ರದ್ಧಾ ವಿಹಾರ ಮುಂತಾದವು. ಇಂಥ ಕೆಲವೇ ಅಪವಾದಗಳು ಬಿಟ್ಟರೆ ಇಂದಿನ ಬದಲಾದ ಸಾಮಾಜಿಕ ಪರಿಸ್ಥಿತಿಯನ್ನು ಗಮನಿಸಿ ನಿವೃತ್ತ ವಯೋವೃದ್ಧರಿಗಾಗಿ ದೊಡ್ಡ ಪ್ರಮಾಣದಲ್ಲಿ ಆಶ್ರಮ-ಆಶ್ರಯ ಸಂಸ್ಥೆಗಳ ಸಂಘಟನೆ ಇನ್ನೂ ಆಗಬೇಕಾಗಿದೆ-ಸಮಾಜ ಕಾರ್ಯಕರ್ತರಿಗೆ ಈ ಕೊರಗು ಅನಿಸುತ್ತದೆ.

ವೃದ್ಧಾಪ್ಯ ಪಿಂಚಣಿ ನೀಡುವ ಇಂದಿನ ಕಲ್ಯಾಣರಾಜ್ಯ ಸರಕಾರಗಳು ಈ ದಿಶೆಯಲ್ಲಿ ದಿಟ್ಟ ಹೆಜ್ಜೆ ಇಡಬಾರದೇಕೆ? ಹರಿಜನ-ಗಿರಿಜನರಿಗಾಗಿ ಹಾಸ್ಟೆಲ್, ಅನಾಥಾಲಯಗಳನ್ನು ತೆರೆಯಲು ದಕ್ಷತೆಯಿಂದ ಧನ ವಿನಿಯೋಗ ಮಾಡುವ ಸರಕಾರಗಳು ತಮ್ಮ ಪ್ರಜೆಗಳಲ್ಲಿಯ ಈ ಉಳ್ಳವರಿಗಾಗಿಯೂ ತಬ್ಬಲಿಯಂತಾದ ವೃದ್ಧ ಜರಾಜರ್ಜರ ಜೀವಿಗಳಿಗಾಗಿ ಅಲ್ಲಲ್ಲಿ ಗ್ರಾಸ-ವಾಸಗಳ ಏರ್ಪಾಟಿನ ಆಶ್ರಮಗಳನ್ನು ಸ್ಥಾಪಿಸಲು ವಿಶೇಷ ಉತ್ತೇಜನ ನೀಡಬೇಕು. ದುಃಖದಲ್ಲಿಯೇ ಬಾಳಿ ಬೆಳೆದವರಿಗಿಂತ ಒಮ್ಮೆ ಸುಖ ಸಂಪತ್ತು ಸತ್ತೆಯ ಸಕಲ ಸೌಕರ್ಯ ಭೋಗಿಸಿ ನಿವೃತ್ತರಾದೊಡನೆ ಒಮ್ಮೆಲೇ ಅಸಹಾಕರಾದ ಈ ಒಂಟಿ ಜೀವಿಗಳನ್ನು ಮುದಿ ದಂಪತಿಗಳನ್ನು "ಅನಾಯಾಸೇನ ಮರಣಂ, ವಿನಾ ದೈನ್ಯೇನ ಜೀವನಂ" ಎಂಬ ಪ್ರಾರ್ಥನೆ ಸಾರ್ಥಕವಾಗುವಂತೆ ಶೇಷಾಯುಷ್ಯದಲ್ಲಿ ಬದುಕು ಸಹ್ಯವಾಗುವ ನೆಮ್ಮದಿ ಮತ್ತು ಸರಕ್ಷಿತತೆ ಒದಗಿಸಲು ಒಂದು ವ್ಯಾಪಕ ಕಾರ್ಯ ನಡೆಯಬೇಕು.

ನಮ್ಮಲ್ಲಿಯ ನೂರಾರು ಮಠಗಳ ಸಂಪತ್ತು ಈ ಪುಣ್ಯ ಕಾರ್ಯಕ್ಕೆ ವಿನಿಯೋಗವಾಗ ಬಾರದೇಕೇ? ಮುಪ್ಪಿನಲ್ಲಿ ಗುರುಮಠಕ್ಕಿಂತ ಇನ್ನಾವ ವಿಶ್ರಾಮ ಧಾಮ ಲೇಸಾದೀತು? ಪರೋಪಜೀವಿ ತುಷ್ಟ ಪುಷ್ಟ 'ಭೂಸುರ'ರಿಗಿಂತ ಈ ಮುದಿ ತಬ್ಬಲಿಗಳಿಗೇ ಈ ಮಠಮಾನ್ಯಗಳ ನೆರಳು ಹೆಚ್ಚು ಅಗತ್ಯ. ಈ ನಿಟ್ಟಿನಲ್ಲಿ ನಮ್ಮ ವಿಶ್ವಹಿಂದೂ ಪರಿಷತ್ತು ಗಮನ ನೀಡಬಹುದೇ? ಸರಕಾರೀ ಪೆನ್‌ಶನ್ನಿನ ಇಲ್ಲವೆ ವೃದ್ಧಾಪ್ಯ ವೇತನದ ಕೆಲ ಮೊತ್ತ ಈ ಸಂಸ್ಥೆಗಳಿಗೂ ಅವರು ಸಲ್ಲಿಸಿ, ಅಲ್ಲಿ ಕೊನೆಯ ಕಾಲಕ್ಷೇಪ ಮಾಡಬಹುದು. ಸಾಮಾಜಿಕ ಕೌಟುಂಬಿಕ ಕಷ್ಟಗಳಿಂದ ಈ ಮಠಗಳು ಅಭಯಾರಣ್ಯಗಳಾಗಿ ಅವರಿಗೆ ಮನಃಶಾಂತಿಯನ್ನು ಒದಗಿಸಿ ತಮ್ಮ ಅಸ್ತಿತ್ವವನ್ನು ಸಾರ್ಥಕ ಮಾಡಿಕೊಳ್ಳಬಹುದು. ಅದೇ ರೀತಿ ದೊಡ್ಡ ದೊಡ್ಡ ರೋಟರಿ, ಲಯನ್ಸ್, ಜೆಸಿ ಕ್ಲಬ್ಬುಗಳೂ ಈ ಕಾರ್ಯ ಕೈಗೊಳ್ಳಬಹುದು.

ಈಗ ಮುಂಬಯಿ ಮಹಾನಗರದಲ್ಲಿ ನಡೆಯುವ ಇಂಥ ವೃದ್ಧಾಶ್ರಮಗಳಲ್ಲಿ 'ಹಾಸಿಗೆ'ಗಳು ತೀರ ಪರಿಮಿತ. ಉದಾಹರಣೆಗೆ ಮಹಾಕಾಲಿ ರೋಡಿನ 'ಹೋಂ ಫಾರ್ ದಿ ಏಜೆಡ್' ದಲ್ಲಿ ಬರೇ ೬೦ ಹಾಸಿಗೆಗಳಿವೆ. 'ಕಾರ್ಡಿನಲ್ ಗ್ರೇಶಮನ್ ಹೋಂ' ನಲ್ಲಿ ೬೨. ಮೇಲೆ ಹೇಳಿದ ಶೆಫರ್ಡ್ಸ್ ವಿಧವಾಶ್ರಮದಲ್ಲಿ ೨೮! ಆದ್ದರಿಂದ ಈ ಸಂಸ್ಥೆಗಳಿಗೆ ಬರುವ ನೂರಾರು ಅರ್ಜಿಗಳಲ್ಲಿ ಕೇವಲ ತೀರ ನಿರ್ಗತಿಕ, ಅತಿ ಬಡವ, ಮುದುಕ ಮುದುಕಿಯರನ್ನೇ ಆಯ್ಕೆ ಮಾಡಬೇಕಾಗುತ್ತದೆ. ಇವರ ಸಂಖ್ಯೆಯೂ ದೇವರ ದಯೆಯಿಂದ ಈ ದೇಶದಲ್ಲಿ ಏನೇನೂ ಕಡಿಮೆ ಇಲ್ಲ.

ಆಶ್ರಯ ದೊರೆಯುವವರಿಗೂ ಸಾಕಷ್ಟು ಸೌಕರ್ಯ ಸಿಗುವುದಿಲ್ಲ. ಕೆಲವು ಕಡೆ ದಿನಕ್ಕೆ ಒಂದೇ ಊಟ. ಔಷಧೋಪಚಾರವಿಲ್ಲ. ಯಾವುದೇ ಕಸಬು, ಕೈಗಾರಿಕೆ, ಬಿಡುವಿನ ಕೆಲಸದ ಗಳಿಕೆ, ಸಾಂಸ್ಕೃತಿಕ, ಸಾಮಾಜಿಕ ಮನೋ ವಿನೋದ ಕೇಳಬೇಡಿ. ಏಕೆಂದರೆ ಇದಕ್ಕೆಲ್ಲ ಬೇಕಾದ ಹಣದ ನೆರವು ಈ ಸಂಸ್ಥೆಗಳಿಗೆ ಕಡಿಮೆ. ಇಂಥ ಒಂದು ವೃದ್ಧಾಶ್ರಮದ ವೃದ್ಧರು ಅಂದರು: "ನಾವು ನಮ್ಮ ಮನೆ ಮಂದಿಯನ್ನು ಸೇರಿಕೊಳ್ಳಲು ಮರಳಿ ಹೋಗಲು ಸಿದ್ಧ. ಆ ಮಂದಿ ನಮ್ಮನ್ನು ಹೇಗೂ ನೋಡಿಕೊಳ್ಳಲಿ, ಇಲ್ಲಿಗಿಂತ ಅದು ವಾಸಿ. ಆದರೆ - ನಮಗೆ ಬೇರೆ ಮನೆಗಳೇ ಇಲ್ಲ. ನಮ್ಮವರೆಂಬ ಮಂದಿಯೂ ಇಲ್ಲ!"

ಇದರ ಒಂದು ವಿಪರೀತ ಪರಿಣಾಮವೆಂದರೆ, ಮುಂಬಯಿಯ ಕೆ.ಇ.ಎಂ.ದಂಥ ದೊಡ್ಡ ಸಾರ್ವಜನಿಕ ಆಸ್ಪತ್ರೆಗಳಲ್ಲಿ ದಿನ ಹೋದಂತೆ ಹೆಚ್ಚು ಹೆಚ್ಚು ಮುದುಕರು, ರೋಗಿಗಳು, ನಿತ್ಯ ನರಳುವವರು ಚಿಕಿತ್ಸೆಗೆ ಬಂದು ಸೇರಿಕೊಂಡ ಮೇಲೆ ಅವರು ಮರಳಿ ಹೋಗುವುದೇ ಇಲ್ಲ. ಕೇಂದ್ರದಲ್ಲಿ ಮಂತ್ರಿತ್ವ ಹೋದರೂ ಮನೆ ಬಿಟ್ಟುಕೊಡದ ನಮ್ಮ ತಬ್ಬಲಿ ರಾಜಕಾರಣಿಗಳಂತೆ ಅಲ್ಲಿಯೇ ಇದ್ದು ಬಿಡುತ್ತಾರೆ! ಇದು ಕೆ ಇ ಎಂ ಆಸ್ಪತ್ರೆಯಲ್ಲಿ ಕೆಲಸ ಮಾಡುವ ಡಾ। ರೋಶನ್ ದಸ್ತೂರರ ದೂರು. (ಅವರು ಇನ್‌ಸ್ಟಿಟ್ಯೂಟ್ ಆಫ್ ಸೋಶಲ್ ಸರ್ವಿಸ್ ಸಂಸ್ಥೆಯ ಕೆಲಸಗಾರ್ತಿ.) ಇದರಿಂದ ಈ ಆಸ್ಪತ್ರೆಗಳಿಗೂ ಪೇಚು. ಹೊಸ ರೋಗಿಗಳನ್ನು ಒಳಗೆ ತೆಗೆದುಕೊಳ್ಳಲು ಕಷ್ಟ.

ಇಂಥ ವೃದ್ಧ ಸೇವಾನಿವೃತ್ತರು ಕಾಯಿಲೆ ಬಿದ್ದರಂತೂ ಅವರ ಪಾಡು ಯಾರಿಗೂ ಬೇಡ. ಒಬ್ಬ ನಿವೃತ್ತ ಎಂಜಿನಿಯರ ಮುದುಕ ವಾತರೋಗದಿಂದ ಹಾಸಿಗೆ ಹಿಡಿದವರು. ಆತ ಗಳಿಸಿದ್ದು ಉಳಿಸಿದ್ದು ಎಲ್ಲ ತೀರಿಹೋಗಿದೆ. ಮೂರು ಹುಡುಗಿಯರ ಮದುವೆ ಮತ್ತು ಏಳು ಮಂದಿಯ ಕುಟುಂಬ ಪೋಷಣೆಯ 'ಗೃಹಮೇಧ' ದಲ್ಲಿ ಈಗ ಮದ್ದಿಗೆ ಉಪಚಾರಕ್ಕೆ ರೊಕ್ಕವಿಲ್ಲದೆ ಆಸ್ಪತ್ರೆಗೆ ಬಂದು ಬಿದ್ದಿದ್ದಾನೆ-ಕೆಇಎಂ ದಲ್ಲಿ. ಆತನ ತಕರಾರು ಇಷ್ಟೇ- "ನಾವು ನಮ್ಮ ಮಕ್ಕಳಿಗೆ ವಿದ್ಯೆ ವೃತ್ತಿ ಕೊಟ್ಟು ಬೆಳೆಯಿಸಲು ದುಡಿದದ್ದೆಲ್ಲ ಸೂರೆ ಮಾಡಿಯೂ ಇಂದು ಕುಟುಂಬಕ್ಕೂ ಸಮಾಜಕ್ಕೂ ಹೊರೆಯಾಗಿದ್ದೇನೆ."

ಅನೇಕ ವೃದ್ಧ ನಿವೃತ್ತರು ತಮ್ಮ ಮಕ್ಕಳೊಂದಿಗೆ ಅನುಕ್ರಮವಾಗಿ ಒಬ್ಬೊಬ್ಬರಲ್ಲಿ ಕೆಲವು ತಿಂಗಳು ವಾಸಿಸುತ್ತಾರೆ. ಆದರೆ ಇದು ಹಲವು ಮಕ್ಕಳನ್ನು ಹಡೆದವರಿಗೇ ಸಿಗುವ ಸೌಲಭ್ಯ. ಇನ್ನು ಮುಂಬರುವ ಚೊಕ್ಕ ಸಂಸಾರಗಳು ಚಿಕ್ಕ ಸಂಸಾರಗಳು, ಎರಡೋ ಮೂರೋ ಮಕ್ಕಳು ಬೆಳೆದು ಹೂಡಿದಂಥವು. ಈ ಕುಟುಂಬಕಲ್ಯಾಣದಲ್ಲಿ ಮುದಿ ತಾಯ್ತಂದೆಗಳ ಕಲ್ಯಾಣದ ಅವಕಾಶ ಆ ಮಟ್ಟಿಗೆ ಕಡಿಮೆ ಆಗುತ್ತ ಹೋಗುತ್ತದೆ. (ಈಗಲೂ ಹತ್ತು ಮಕ್ಕಳ ತಾಯಿ ಕಟ್ಟೆಯಲ್ಲಿ ಪ್ರಾಣ ಬಿಟ್ಟಳೆಂಬ ಗಾದೆಗೆ ಉದಾಹರಣೆಗಳೂ ಸಿಗದೆ ಇಲ್ಲ.)

ಅದೇನೆ ಇರಲಿ. ಈ ಸೇವಾ ನಿವೃತ್ತ ಕುಲವೃದ್ಧರ ಯೋಗಕ್ಷೇಮ ಹೊರುವ ಮೂಲ ಹೊಣೆ ಅವರ ಕುಟುಂಬದ್ದೇ ಆಗಿದೆ. ಅದಕ್ಕೆ ಸರಕಾರ, ಸಮಾಜ ಕೆಲಮಟ್ಟಿಗೆ ನೆರವು ನೀಡಬಹುದು-ಬೇಕು. ಸರಕಾರ ಕೊಡುವ ಪೆನ್‌ಶನ್ ಅವರ ಹಿಂದಿನ ಸಂಬಳಕ್ಕಿಂತ ಇಂದಿನ ಅವರ ಜೀವನಮಟ್ಟಕ್ಕೆ ಔಷಧೋಪಚಾರಕ್ಕೇ ಸರಿಹೊಂದುವ ಒಂದು ಆಕಾರದಲ್ಲಿ ಒದಗಿಸುವಂತೆ ಆಗಬೇಕು. ಸಮಾಜವೂ ಕ್ಲಬ್ಬು, ವಾಚನಾಲಯ, ಗ್ರಂಥಾಲಯ, ಸಾಂಸ್ಕೃತಿಕ ಚಟುವಟಿಕೆಗಳೇ ಮುಂತಾದ ಕೇಂದ್ರಗಳಲ್ಲಿ ಈ ಮುದಿ ಮಂದಿ ತಮ್ಮ ಹೊತ್ತು ಕಳೆಯುವಂತೆ ಅನುವು ಮಾಡಿಕೊಡಬೇಕು. ಹಿರಿಯ ಆಸ್ಪತ್ರೆಗಳಲ್ಲಿ ಈ ಮುದುಕರ ಶುಶ್ರೂಷೆಗೆ ಪ್ರತ್ಯೇಕ ಹಾಗೂ ಯೋಗ್ಯ ವ್ಯವಸ್ಥೆ ಆಗಬೇಕು.

ಸಂತ ತುಕಾರಾಮರ ಅಭಂಗ ವಾಣಿ ಹೀಗೆ ಹೇಳಿ ಶತಮಾನಗಳಾದವು: "ಬದುಕಿದಾಗ ತಂದೆಗೆ ಇಲ್ಲ ನೀರು! ಸತ್ತ ಮೇಲೆ ತರ್ಪಣಕ್ಕೆ ಕೊಡುವರು." ('ಜಿತ್ಯಾ ಜಿತ್ಯಾ ನದೇ ಪಾಣಿ ಮೇಲ್ಯಾ ಬೈಸತೀ ತರ್ಪಣೀಂ'.) ಒಬ್ಬ ಸಮಾಜ ಕಾರ್ಯಕರ್ತನ ದೊಡ್ಡಪ್ಪ ಹೆಂಡತಿಗೆ ಹೇಳಿದನಂತೆ,

"ಮಾರಾಯ್ತೀ, ನಾನು ಸತ್ತ ಮೇಲೆ ನನ್ನ ಚಿತೆಗೆ ಹೊಯ್ಯುವ ತುಪ್ಪ ಈಗ ನನಗೆ ಊಟಕ್ಕೆ ಎರೆ. ಬದುಕಿಕೊಳ್ತೇನೆ!" ನಮ್ಮ ಸುಸಂಸ್ಕೃತ ಪಿತೃಭಕ್ತರು ತಂದೆ ತಾಯಿಗಳ ಕ್ರಿಯಾಕರ್ಮಕ್ಕೆ ಆತ್ಮಪ್ರತಿಷ್ಠೆಗಾಗಿ ಸಾವಿರಗಟ್ಟಲೆ ವೆಚ್ಚ ಮಾಡುವರು. ವೈಕುಂಠ ಸಮಾರಾಧನೆಗೆ ಸಾಂತ್ವನೆಯ ಬಗೆಗೆ ಆದಾರ ಮನ್ನಣೆಗೆ ಪತ್ರಿಕಾ ಪ್ರಕಟಣೆಗಳಲ್ಲಿಯೂ ಅಷ್ಟೇ ಹಣ ಚೆಲ್ಲುವರು. ಆದರೆ ಬಡ ಜೀವಿ ಬದುಕಿದ್ದಾಗ ಅವರ ಪಾಲಿಗೆ ಸುಪುತ್ರರಿಂದ ಸಿಗುವ ಮರ್ಯಾದೆ, ಮರುಕ, ಆರೈಕೆ ಎಷ್ಟು? ಮರಣೋತ್ತರ ಆಗುವ ವೆಚ್ಚ ಕಡಿಮೆ ಮಾಡಿ ಈ ವೃದ್ಧ ಮಾತಾಪಿತೃಗಳು ತಮ್ಮನ್ನು ಅವಲಂಬಿಸಿ ಬದುಕಿರುವಾಗಲೇ ನಾಲ್ಕು ದಿನ ನೆಮ್ಮದಿಯಲ್ಲಿ ಆತ್ಮೀಯ ವಾತಾವರಣದಲ್ಲಿ ನೆಟ್ಟಗೆ ಬೆಚ್ಚಗೆ ಬಾಳುವಂತೆ ತುಸು ಹೆಚ್ಚು ಹಣ ವಿನಿಯೋಗಿಸುವುದರಿಂದಲೂ ಈ ಸೇವಾನಿವೃತ್ತರ ಸಮಸ್ಯೆಗೆ ಯೋಗ್ಯ ಪರಿಹಾರ ಒದಗಿಸುವುದಕ್ಕೆ ಸಾಕಷ್ಟು ಸಹಾಯವಾಗಬಹುದು.

ಇಲ್ಲವಾದರೆ ಆಧುನಿಕ ನಗರ ಜೀವನದ ಜನಾರಣ್ಯದಲ್ಲಿ ಈ ನಿವೃತ್ತ ಮುದಿಜೀವಗಳಿಗೆ ಅಸಹಾಯ ಏಕಾಕಿತನದ ಜೀವಂತ ನರಕವಾಸವೇ ಅವಸ್ಥಾಭೋಗ.

●

('ಉದಯವಾಣಿ' ೧೯೭೭)

# ಜನತೆ ಮತ್ತು ಸೇನೆ

ಹೊಸ ಕೇಂದ್ರ ಸರಕಾರದ ಜಾಯಮಾನದಲ್ಲಿ ನಮ್ಮ ಭಾರತೀಯ ಸೇನೆಗೆ ಹೊಸ ಧೋರಣೆ, ಹೊಸ ಏರ್ಪಾಟು, ಹೊಸ ಸನ್ನಾಹ ಸಜ್ಜಿಕೆ ಮತ್ತು ಹೊಸ ಶಸ್ತ್ರಾಸ್ತ್ರಗಳು ದೊರೆಯಲಿವೆ.

ಇವೆಲ್ಲರ ಜತೆಗೆ ನಮ್ಮ ಸೇನೆ ತನ್ನದೇ ಆದ ಪ್ರತ್ಯೇಕವಾದ ಹೊಸ ವಿಮಾನ ಪಡೆಯನ್ನು ಬೇಡುತ್ತದೆ. ಈ ಬೇಡಿಕೆಗೆ ಅದರದೇ ಆದ ಒಂದು ಯುಕ್ತಿವಾದ ಇಲ್ಲದಿಲ್ಲ. ನಮ್ಮ ನೌಕಾಸೇನೆಗೆ ಅದರದೇ ಆದ ಒಂದು ವಿಮಾನ ವಿಭಾಗವಿದೆ. ಅಂದಾಗ ಸೇನೆಯ ಆತ್ಮಸಂರಕ್ಷಣೆ, ದಕ್ಷ ವೀಕ್ಷಣೆ ಮತ್ತು ಆಕ್ರಮಣದ ಶಕ್ತಿಗಳನ್ನು ಹೆಚ್ಚಿಸಲು, ಹುರಿಗೊಳಿಸಲು ತನ್ನದೇ ಆದ ವಿಮಾನ ದಳ ಏಕೆ ಇರಬಾರದು?

ಆದರೆ ಭಾರತದ ಜನತೆಯ ಹಿತದ ದೃಷ್ಟಿಯಿಂದ ಒಮ್ಮೆ ಈ ರೀತಿ ಹೊಸ ಧೋರಣೆ ಕಾರ್ಯಗತವಾಗಲು ಆರಂಭವಾದರೆ ಅದು ಹೀಗೆ ಶಸ್ತ್ರಾಸ್ತ್ರ ಮದ್ದು ಗುಂಡು, ವಿಮಾನ ಭುಜ ಮತ್ತು ತೋಪುಗಳ ಆಯ, ಅಳತೆಗಳ ಮಟ್ಟಿಗೇ ಸೀಮಿತವಾಗಿರಬೇಕೆ? ಈ ಧೋರಣೆಯ ಪುನರ್ನವೀಕರಣಕ್ಕೆ ಇನ್ನೂ ಆಳವಾದ ವಿಶಾಲವಾದ ತಿರುವು ಕೊಟ್ಟು ನಮ್ಮ ಸೇನೆಯನ್ನು ಜನತೆಗೆ ಅಭಿಮುಖವಾಗಿ ಜನತೆಯ ನಿಜವಾದ ಶಕ್ತಿ ಭುಜವಾಗಿ ಮಾರ್ಪಡಿಸಬಾರದೇಕೆ? ಜಾಣರೊಬ್ಬರು ಲೆಕ್ಕ ಹಾಕಿದ್ದುಂಟು. ಸ್ವಾತಂತ್ರ್ಯ ಬಂದಂದಿನಿಂದ ಭಾರತವು ಹೂಡಿ ಗೆದ್ದ ಎರಡು ಪಾಕಿಸ್ಥಾನ ಮತ್ತು ಗೋವೆಯ ಪೋರ್ಚುಗೀಜರ ವಿರುದ್ಧ ಎಲ್ಲ ಯುದ್ಧಗಳಲ್ಲಿ ನಮ್ಮ ಸೇನೆ ಹೋರಾಡಿದ್ದೂ ಒಟ್ಟು ಐವತ್ತು ದಿನ ಮಾತ್ರ! ಅಂದರೆ ಒಂದೊಂದು ಹೋರಾಟದ ದಿನದ ವೆಚ್ಚ ದಶಲಕ್ಷಗಟ್ಟಲೆ ರೂಪಾಯಿ! ಉಳಿದ ಕಾಲವೆಲ್ಲ ನಮ್ಮ ಸೇನೆ ತನ್ನ ಬರಾಕುಗಳಲ್ಲಿ ಸೇನಾಧಿಕಾರಿಗಳು ತಮ್ಮ ಕಂಟೋನ್‌ಮೆಂಟುಗಳಲ್ಲಿ ಸುಕ್ಷೇಮದಲ್ಲಿ, ನಿತ್ಯದ ಕವಾಯತ್ತು, ಕೂಚು, ಹುಸಿಕಾಳಗ, ವಿಶ್ರಾಂತಿಗಳ ಕೇಳಿಯಲ್ಲಿ. ಈ ಪಾಡಿಗೆ ಈ ಪ್ರಪಂಚ ಶಕ್ತಿಯನ್ನು ಸಡಿಲುಬಿಟ್ಟರೆ ಅದು ನಿಷ್ಕ್ರಿಯ ಸೋಮಾರಿತನದಲ್ಲಿ ಜಂಗುಪತ್ತಿ ಲಡ್ಡಾಗುವ ಭಯವಿದೆ. ಅದಕ್ಕೂ ಮಿಗಿಲಾಗಿ, ಕೆಡುಕಾಗಿ ಈ ಸೇನಾಬಲವು ತಾನು ಮೈತಾಳಿ ಎದ್ದು ಬಂದ ಜನತೆಯ ಬದುಕಿನಿಂದ ಸಿಡಿದು ದೂರ ಸರಿದು ಉಳಿಯುವ ಭಯವಿದೆ!

ಅಂದರೆ ಇದರ ಅರ್ಥ ಸೇನೆಗೆ ಕೆಲಸ ಕೊಡಬೇಕೆಂತಲೇ ನಾವು ನೆರೆಯ ರಾಷ್ಟ್ರಗಳೊಂದಿಗೆ ಕಾಲು ಕೆದರಿ ಕಲಹ ಕಟ್ಟಿಕೊಳ್ಳಬೇಕೆಂದಲ್ಲ. ಅಗ್ನಿಶಾಮಕ ದಲ ಬರಿದೆ ಕೆಲಸವಿಲ್ಲದೆ ಸಂಬಳ ತಿನ್ನುತ್ತದೆಂದು ಯಾರೂ ಪ್ರತಿವಾರ ಮನೆಗೋ ಮಹಡಿಗೋ ಮಳಿಗೆಗೋ ಬೆಂಕಿಹಾಕುವುದಿಲ್ಲ. ಕರ್ತವ್ಯದ ಕರೆಗೆ ಓಗೊಡಲು ಸದಾಕಾಲ ಸಜ್ಜಾಗಿ ನಿಲ್ಲುವುದೂ ಒಂದು ದಕ್ಷ ಕರ್ತವ್ಯಪಾಲನೆಯೇ ಸರಿ.

ಸೈನ್ಯವಿದೆಯೆಂದೇ ಯುದ್ಧ ಹೂಡುವುದು, ಯುದ್ಧ ಹೂಡಲೆಂದೇ ಸೈನ್ಯಶಕ್ತಿ ಬೆಳೆಯಿಸುವುದು ಬಂಡವಾಳಗಾರಿಕೆಯ ಕೊನೆಯ ಹಂತದ ಸರ್ವಾಧಿಕಾರಿ ರಾಷ್ಟ್ರಗಳು ಮುಸೋಲಿನಿ, ಹಿಟ್ಲರನ ಆಳಿಕೆಯಲ್ಲಿ ಇಟಲಿ, ಜರ್ಮನಿ, ಈ ಹಾದಿ ಹಿಡಿದವು. ದೇಶದ ಯುವಕರ ನಿರುದ್ಯೋಗ ನಿವಾರಣೆಗಾಗಿ ಭಾರಿ ಮೊತ್ತದಲ್ಲಿ ಶಸ್ತ್ರಾಸ್ತ್ರ ತಯಾರಿಕೆ, ಸೈನ್ಯ ಸಂಗ್ರಹ ಸಂಘಟನೆಯ ನಿರುತ್ಪಾದಕವಾದ ಪ್ರಚಂಡ ಉದ್ಯೋಗ ಪರ್ವವನ್ನೇ ಆರಂಭಿಸಿದರು. ಇಂಥ ಮಾರಕ ಸಾಮಗ್ರಿಯ

ಪ್ರಯೋಜನ ಮತ್ತು ಪೇಟೆ ಯುದ್ಧವೇ. ಭಾರತ ಈ ದಾರಿ ತುಳಿಯಲು ಹೊರಟಿಲ್ಲ. "ವಿಶ್ವ ವಿಜಯ ಕರಕೇ ದಿಖಲಾಯೇಂ!" ಎಂದು ನಮ್ಮ ಧ್ವಜಗೀತ ಹಾಡಿದರೂ ಈ ವಿಶ್ವವಿಜಯ ಕೇವಲ ನೈತಿಕ, ಹೊರತು ಸೈನಿಕವಲ್ಲ. ಅಕ್ರಮಕವೂ ಅಲ್ಲ. ನಮ್ಮ ಭೂ ಜಲ ವಾಯುಸೇನಾಶಕ್ತಿ ಮುಖ್ಯವಾಗಿ ಆತ್ಮಸಂರಕ್ಷಕ. ಆಕ್ರಮಣವೆನಿಸುವ ಸಂದರ್ಭದಲ್ಲಿಯೂ ಅದು ಆತ್ಮಸಂರಕ್ಷಣೆಯದೇ ಒಂದು ಅಂಗ. ಕೆಲವು ಸಲ Attack is the best defence (ಆಕ್ರಮಣವೇ ಉತ್ತಮ ಆತ್ಮರಕ್ಷಣೆ ಅನಿಸುತ್ತದೆ!) ಇರಲಿ.

ನಮ್ಮ ಜವಾನರು, ಭಾರತೀಯ ಸೇನಾದಲಗಳು ಅರಾಜಕೀಯರು ಎಂದು ಲೋಕಪ್ರಸಿದ್ಧ. ಇದು ಹಾಗಿರುವುದು ಯೋಗ್ಯವೇ ಸರಿ. ಪಾಕಿಸ್ತಾನದಂತೆ ಕಾಲಕಾಲಕ್ಕೆ ದಂಡನಾಯಕರು ದೇಶದ ರಾಜಕೀಯ ರಂಗದಲ್ಲಿ ಮುಸಲ ಪ್ರವೇಶ ಮಾಡುವುದು ಭಾರತದ ಸಂಪ್ರದಾಯವಲ್ಲ. ಪಾಕಿಸ್ತಾನ ಇಜಿಪ್ತಗಳ ಆ ಪರಿಪಾಟಿ ನಮಗೆ ಬೇಕಿಲ್ಲ. (ನಮ್ಮ ಲೋಕ ನಾಯಕ ಜಯಪ್ರಕಾಶ ನಾರಾಯಣರು ಆಪತ್ಕಾಲೀನ ಪರಿಸ್ಥಿತಿ ಬರುವ ಮುನ್ನ ನಮ್ಮ ಸೇನೆಗೆ ಹಾಗೆ ರಂಗಪ್ರವೇಶ ಮಾಡಲು ಬಹಿರಂಗವಾಗಿಯೇ ಆದೇಶವಿತ್ತಿದ್ದರು. ಆದರೂ ಅದಕ್ಕೆ ನಮ್ಮ ಸೇನಾನಾಯಕರು ಪ್ರತಿಕ್ರಿಯೆ ತೋರಿಸಲು ಯಾವ ಆತುರವನ್ನೂ ಪ್ರಕಟಿಸಲಿಲ್ಲ.)

ಆದರೆ ನಮ್ಮ ಸೇನಾದಲಗಳು ಜನತೆಯ ಆಗುಹೋಗುಗಳಲ್ಲಿ ಆಸಕ್ತಿವಹಿಸಬಲ್ಲವು. ಈ ಬಗೆಗೆ ಕ್ರಿಯಾಶೀಲರಾಗಬಲ್ಲವು. ಏಕೆಂದರೆ ಈ ಜನತೆಯಿಂದಲೇ ಈ ಜವಾನರ ಜನ್ಮ. ಜನತೆಯೊಂದಿಗೇ ಈ ಸೈನಿಕ, ನಾವಿಕ, ವೈಮಾನಿಕ ಶಿಸ್ತಿನ ಬಂಟರ ಜೀವದ ನಂಟು.

ನಮ್ಮ ಸೇನಾ ವಿಭಾಗಗಳು ಪಂಜಾಬ ಹರಿಯಾನಗಳಲ್ಲಿ, ಬಂಗಾಲ, ಕೇರಳಗಳಲ್ಲಿ ಮಾಗಿಯ ಹಂಗಾಮಿನಲ್ಲಿ ಪೈರು ಕೊಯ್ಯಲು ತಮ್ಮ ರೈತಬಾಂಧವರಿಗೆ ಬಲವಾಗಿ ನೆರವಾಗಬಹುದು. ಸೊವ್ಹಿಯತ್ ರಶಿಯಾದಲ್ಲಿ ಕೆಂಪುಸೇನೆ ಹಾಗೆ ಮಾಡುತ್ತದೆ. ಇದು ಕೇವಲ ನೆರಹಾವಳಿ ಬರಗಾಲದಂಥ ಸಂಕಟ ಸಂದರ್ಭದಲ್ಲಿ ಮಾತ್ರ ಜವಾನರು ಹೀಗೆ ಜನತೆಯ ಸೇವೆಗೆ ಸಲ್ಲುತ್ತಾರೆ. ಆದರೆ ಹೀಗೆ ಬೇಸಾಯದಲ್ಲಿ ರೈತರೊಂದಿಗೆ ಹಳ್ಳಿಗರೊಂದಿಗೆ ಕೂಡಿ ದುಡಿಯುವುದು ನಮ್ಮ ಸೈನ್ಯದ ನಿತ್ಯದ ಒಂದು ಸಕಾಲಿಕ ಸೇವೆ ಆಗಬಾರದೇಕೆ? (ಕ್ಷೇತ್ರ ಮತ್ತು ಕ್ಷತ್ರಿಯ ಅವೆರಡು ಶಬ್ದಗಳಲ್ಲಿ ಒಂದು ಆಳದ ಹೊಂದಾಣಿಕೆ ಇರಬೇಕು! ಇಲ್ಲವಾದರೆ, ಗದಾಯುದ್ಧದ ಗುರು ಬಲರಾಮ ಹಲಧರನೂ ಆಗಿರುತ್ತಿದ್ದಿಲ್ಲ!) ಪ್ರತಿ ವರ್ಷ ನಿವೃತ್ತರಾಗುವ ೬೦,೦೦೦ ಜವಾನರನ್ನು ಹೀಗೆ ತೊಡಗಿಸಬೇಕು.

ಇದೂ ಅಲ್ಲದೆ ಸೇನಾ ಪಡೆಗಳಿಗೆ ಶಾಂತಿ ಕಾಲದಲ್ಲಿ ತಮ್ಮ ಆಹಾರ ತಾವೇ ಬೆಳೆಯುವಂತೆ ಹೊಲ ಗದ್ದೆಗಳನ್ನು ಹಾಕಿ ಕೊಡಬೇಕು. ಇಂದು ಈಶಾನ್ಯದ ಗಡಿಯಲ್ಲಿ ಸರಕಾರ ನಿವೃತ್ತ ಸೈನಿಕರಿಗೆ ಇಂಥ ಜಮೀನುಗಳನ್ನು ಕೊಟ್ಟು ನೆಲೆಸುವಂತೆ ಮಾಡಿದೆ. ಇದೇ ಯೋಜನೆಯನ್ನು ಕ್ರಿಯಾಶೀಲ ಜವಾನರಿಗೂ ಅನ್ವಯಿಸಬಹುದು. ಶಿಸ್ತಿನ ಮತ್ತು ದಕ್ಷಕಾರ್ಯಕ್ಷಮತೆಯ ಜವಾನರು ಇಂಥ ಯೋಜನೆಯಿಂದ ತಮಗೆ ಬೇಕಾದ ಎಲ್ಲ ಆಹಾರ ಧಾನ್ಯಗಳನ್ನು ಬೆಳೆಯುವುದಲ್ಲದೆ, ಇತರ ಬೇಸಾಯಗಾರರಿಗೆ ಸಾಮುದಾಯಿಕ ಕೃಷಿಯ ಒಳ್ಳೆಯ ಮಾದರಿಗಳನ್ನು ನಡೆಯಿಸಿ ಕಾಣಿಸಬಹುದು. ಸೈನಿಕ ದಲಗಳಿಗೆ ಬಿಡಿ ರೈತರಿಗಿಂತ ಹೆಚ್ಚಾಗಿ ಚೆನ್ನಾಗಿ ಸಾಮುದಾಯಿಕ ಕೃಷಿಯ ತಂತ್ರ ಒಗ್ಗಬಹುದು. ಶಾಂತಿ ಕಾಲದ ಈ ಸಹಕಾರ, ಸಹಭೋಜನದಿಂದ ಸೈನ್ಯಕ್ಕೂ ಜನತೆಗೂ ಹೆಚ್ಚು ಘನಿಷ್ಠವಾದ ಜೀವನ ನಿಷ್ಠವಾದ ಸಂಬಂಧ ಋಣಾನುಬಂಧ ಸ್ಥಾಪಿತವಾಗಬಲ್ಲದು.

ಇದೇ ರೀತಿ ಜವಾನರು ನಮ್ಮ ನವಯುವಕರಿಗೆ, ಆತ್ಮ ರಕ್ಷಣೆಗೆ ಗ್ರಾಮ ರಕ್ಷಣೆಗೆ ಅಗತ್ಯವಿರುವ ರೈಫಲ್ ತರಬೇತಿ ಕೊಡಬಹುದು. ನೂರಾರು ವರ್ಷಗಳ ನಿಃಶಸ್ತ್ರೀಕರಣದ ಫಲವಾಗಿ ನಮ್ಮ ಜನತೆಯನ್ನು ಒಂದು ಅಸಹಾಯತೆ ಮತ್ತು ತೇಜೋಹೀನತೆಯ ಕಳೆ ಕವಿದು ನಿಂತಿದೆ. ಗಾಂಧೀಜಿ ಪ್ರಣೀತ ನಿಃಶಸ್ತ್ರ ಪ್ರತೀಕಾರದ ಚಳವಳಿ ನಮಗೆ ಸಾಮೂಹಿಕವಾಗಿ ಶಕ್ಯವೂ ಇಷ್ಟವೂ ಆಗಿ ಅನಿಸಲೂ ಇದು ಒಂದು ಕಾರಣ. ಅಂತೆಯೇ ಬ್ರಿಟಿಷ ಆಡಳಿತದಲ್ಲಿರುವಾಗಲೂ ನಮ್ಮ ಯುವಜನರಿಗಾಗಿ ಅಲ್ಲಲ್ಲಿ ರೈಫಲ್ ಕ್ಲಬ್ಬುಗಳನ್ನು ಏರ್ಪಡಿಸಿ ಗುಂಡುಗಾರಿಕೆಯ ತರಬೇತಿ ಕೊಡುವಂತೆ ಒಂದು ಆಂದೋಲನವನ್ನೇ ಹೂಡಬೇಕೆಂದು ಸ್ವಾತಂತ್ರ್ಯವೀರ ಸಾವರಕರರು ತಮ್ಮ ರತ್ನಗಿರಿಯ ಸ್ಥಾನಬದ್ಧತೆಯ ಕಾಲದಲ್ಲಿಯೇ ಪ್ರಚಾರ ಆರಂಭಿಸಿದ್ದರು. ಮುಂದೆ ಐದಾರು ವರ್ಷ ಹಿಂದೂ ಮಹಾಸಭೆಯ ಅಧ್ಯಕ್ಷ ಪೀಠದಿಂದಲೂ ಇದರ ಕುರಿತು ಜನಜಾಗೃತಿ ಮಾಡುತ್ತ ಸಂಚರಿಸಿದ್ದರು. ನೇತಾಜಿ ಸುಭಾಸಚಂದ್ರರೂ ಹರಿಪುರ ಕಾಂಗ್ರೆಸ್ಸಿನ ಅಧ್ಯಕ್ಷ ಪೀಠದಿಂದ ಇದೇ ಆದೇಶ ನೀಡಿದ್ದರು. ಯುದ್ಧಕಾಲದ ಪರ್ವವನ್ನು ಸಾಧಿಸಿ, ಕಾಂಗ್ರೆಸ್ಸು ರಾಷ್ಟ್ರೀಯ ಸೈನಿಕ ದಲಗಳನ್ನು (National Militias) ಸಂಘಟಿಸಬೇಕೆಂದು.

ಆದರೆ ಶಾರೀರಿಕ ಹಿಂಸೆಯ ಬಗೆಗೆ ತೀವ್ರ ಅಲರ್ಜಿ ಇರುವ ಗಾಂಧೀವಾದಿಗಳು ಅದನ್ನು ತಳ್ಳಿಹಾಕಿದರು. ಅಲ್ಲದೆ ಕಾಂಗ್ರೆಸು ಅಧಿಕೃತವಾಗಿ ಅಹಿಂಸಾತ್ಮಕ ಆದ್ದರಿಂದಲೇ ಡಾ। ಹಡೀಕರರ ಹಿಂದುಸ್ತಾನೀ ಸೇವಾದಲ ತನ್ನ ಬಾಗಲಕೋಟೆಯ ಕೇಂದ್ರದಲ್ಲಿ ಸ್ವಯಂಸೇವಕರಿಗೆ ಗುಂಡುಗಾರಿಕೆಯ ಶಿಕ್ಷಣವನ್ನು ಕೊಡುವರೆಂಬ ವದಂತಿಯನ್ನು ಕೇಳಿಯೇ ಆ ಸೇವಾದಲವನ್ನು ವಿಸರ್ಜಿಸಲು ಗಾಂಧೀಜಿ ಅಂದು ಸಲಹೆ ಇತ್ತಿದ್ದರು.

ಈಚೆಗೆ ಪಾಕಿಸ್ತಾನದೊಂದಿಗೆ ನಡೆದ ಯುದ್ಧದ ದಿನಗಳಲ್ಲಿ ಕೆಲವು ಪಟ್ಟಣಗಳಲ್ಲಿ ಪೊಲೀಸ್ ಅಧಿಕಾರಿಗಳಿಂದ ನಾಗರಿಕರಿಗೆ ರೈಫಲ್ ತರಬೇತಿ ಕೊಡುವ ಒಂದು ಅಭಿನಯ ನಡೆಯಿತು. ಆದರೆ ರೈಫಲ್ ಹೆಗಲಿಗೆತ್ತಿ ಗುರಿಗೆ ನೇರವಾಗಿ ಹಿಡಿಯುವ ಅಭ್ಯಾಸ ಮುಗಿಯುವಷ್ಟರಲ್ಲಿಯೇ ಅಲ್ಲಿ ಯುದ್ಧವೇ ಮುಗಿದು ಹೋಯಿತು! ಆ ಮಾತು ಬೇರೆ.

ಒಟ್ಟಾರೆ ನಮ್ಮ ತರುಣ ಪ್ರಜೆಗೆ ಈ ತರಬೇತಿ ಅತ್ಯಗತ್ಯ. ಇಂದಿನ ಗ್ರಾಮಾಂತರ ಪ್ರದೇಶದ ಕಳ್ಳಕಾಕರ, ಕೊಲೆಗಡುಕರ ಸ್ವಚ್ಛಂದ ಹಾವಳಿಯಲ್ಲಿ! ವಾರಕ್ಕೆ ಒಂದು ದಿನ ಇಲ್ಲವೇ ದಿನಕ್ಕೆ ಒಂದು ತಾಸು ನಮ್ಮ ತರುಣರಿಗೆಲ್ಲ ಈ ರೀತಿ ರೈಫಲ್ ಪ್ರಾಕ್ಟೀಸ್ ಮತ್ತು ಡ್ರಿಲ್ ಕಲಿಸಲು ನಮ್ಮ ಸೇನೆಯ ನಿಯೋಜನೆ ಆದರೆ ಈ ಹೊಸ ಪೀಳಿಗೆಯಲ್ಲಿ ಆತ್ಮರಕ್ಷಣೆಯ, ಅದಕ್ಕೂ ಹೆಚ್ಚಾಗಿ ಆತ್ಮ ವಿಶ್ವಾಸದ, ಮನೋಧೈರ್ಯದ ಪ್ರಸಂಗಾವಧಾನಗಳ ಹಾಗೂ ಒಟ್ಟು ಶಿಸ್ತಿನ ಸಂಸ್ಕಾರ ಉಂಟಾಗಬಹುದು. ಇಂದು ಎನ್.ಸಿ.ಸಿ. ರೂಪದಲ್ಲಿ ಈ ಶಿಕ್ಷಣ ಕೇವಲ ಔಪಚಾರಿಕವಾಗಿ ಕೊಡಲಾಗುತ್ತದೆ. ಅದರಲ್ಲಿ ಆಡಂಬರ, ಸರಂಜಾಮು, ಸರಬರಾಜುಗಳ ಅಂಗವೇ ಪ್ರಧಾನ. ನವ ಯುವಕರಿಗೆ ಅದರಿಂದ ಸಿಗುವ ಪ್ರಯೋಜನ ಆ ಮಾನದಲ್ಲಿ ಕಡಿಮೆ. ಇಲ್ಲಿ ನಾನು ಸೂಚಿಸುವ ಯೋಜನೆ ಅದಕ್ಕೂ ಘನವಾದ ಸೈಜವಾದ ಸೈನಿಕ ಶಿಕ್ಷಣದ ಒಂದು ಕ್ರಮ. ಇದರಿಂದಲೂ ಸೈನಿಕ ವೃತ್ತಿ ಕೇವಲ ಊರ ಉಂಡಾಡಿ ಪುಂಡರಿಗಾಗಿ ಅಲ್ಲ. ಅದರಲ್ಲಿ ಗೌರವವಿದೆ, ಗುಣವಂತಿಕೆ ಇದೆ ಎಂಬ ಒಂದು ಮನೋಭಾವ ನಮ್ಮ ಹೊಸ ಪೀಳಿಗೆಯಲ್ಲಿ ಮೂಡಬಲ್ಲದು, ದೃಢವಾಗಬಲ್ಲದು.

ಅಲ್ಲದೆ ನಮ್ಮ ಅಧಿಕೃತ ಸೇನಾ ಸಂಘಟನೆಗೆ ಬೆಂಬಲ-ಹಿಂಬಲವಾಗಿ ಒಂದು ಪ್ರಾದೇಶಿಕ ಸೇನೆ ಎದ್ದು ನಿಲ್ಲಲೂ ಈ ಬಗೆಯ ನಾಗರಿಕ ಯುವಜನ ಸೈನ್ಯ ತರಬೇತಿಯಿಂದ ತುಂಬ

ಸಹಾಯವಾಗುವುದು. ಇದರಿಂದಲೂ ಜನತೆ ಮತ್ತು ಸೇನಾದಲಗಳ ನಡುವಿನ ಸಂಪರ್ಕ ಹೆಚ್ಚು ನಿಕಟವಾಗಬಹುದು. ಬಾಂಧವ್ಯ ಹೆಚ್ಚು ಉತ್ಕಟವಾಗಬಲ್ಲದು.

ನಾಗರಿಕರ ಕೈಗೆಲ್ಲ ರೈಫಲ್‌ಗಳನ್ನು ಹಂಚಿಡಬೇಕಾಗಿಲ್ಲ. ಆದರೆ ಯುದ್ಧ ಬಾಗಿಲಿಗೆ ಬಂದಾಗ ರಾಷ್ಟ್ರದ ಸಂರಕ್ಷಣೆಯ ಹೊಣೆಗೆ ಪ್ರತಿಯೊಬ್ಬನೂ ಹೆಗಲು ಕೊಡುವಂತೆ ಅವರಿಗೆ ಈ ತರಬೇತಿ ಅಗತ್ಯ. ರೈಫಲ್ ತರಬೇತಿ, ಲಷ್ಕರಿ ಕವಾಯತು ಇವುಗಳ ಸಂಸ್ಕಾರದಿಂದ ಒಂದು ವಿಶಿಷ್ಟ ಶಿಸ್ತಿನ ಮನೋವೃತ್ತಿಯೇ ತಯಾರಾಗಬಲ್ಲುದು-ಈ ಶಿಕ್ಷಣ ಪರಿಣಾಮಕಾರಿಯಾಗಿ ಗಂಭೀರವಾಗಿ ಕೊಟ್ಟರೆ.

ಅದೇ ರೀತಿ ನಮ್ಮ ಹಿರಿಯ ನದೀನೀರ ಯೋಜನೆಗಳು. ಗಂಗಾ-ಕಾವೇರಿ ಸಂಗಮ ಯೋಜನೆಯಂತಹದು. ಇಂಥ ಕಾರ್ಯದಲ್ಲಿ ತೊಡಗುವ ಲಕ್ಷಾಂತರ ಕೆಲಸಗಾರರಿಗೆ ತಾಂತ್ರಿಕ ತರಬೇತಿಯನ್ನು ನಮ್ಮ ಸೇನೆಯ ದಲಗಳೇ ಸರಿಯಾಗಿ ಕೊಡಬಲ್ಲವು. ಈ ಸೇನಾ ವಿಭಾಗದಿಂದಲ್ಲದೆ ಮಹರ್ಷಿ ವಿಶ್ವೇಶ್ವರಯ್ಯನವರ ಹೆಗ್ಗನಸು ಹೆಗ್ಗಲಸವಾಗಿ ಕಟ್ಟಿ ನಿಲ್ಲದು.

ಅದೇ ರೀತಿ ಸಾರ್ವಜನಿಕ ರಂಗದ ಉದ್ದಿಮೆಗಳಲ್ಲಿಯೂ ಶಾಂತಿಕಾಲದಲ್ಲಿ ನಮ್ಮ ಜವಾನರನ್ನು ಶಿಸ್ತಿನಿಂದ ದಕ್ಷತೆಯಿಂದ ಕೆಲಸಕ್ಕೆ ತೊಡಗಿಸುವುದು ಶಕ್ಯವಿದೆ. ಉಕ್ಕಿನ ಹಾಗೂ ತತ್ಸಮ ಇತರ ಕಾರಖಾನೆಗಳಲ್ಲಿ ನಮ್ಮ ಜವಾನರು ರಾಷ್ಟ್ರೀಯ ಗುರಿಗಳಿಗೆ ಮುಟ್ಟುವ ಉತ್ಪಾದನೆಯ ಮಟ್ಟಗಳನ್ನು ಕಾಪಾಡಿಕೊಳ್ಳಲು ಅಗತ್ಯವಾದ ಹುರಿಕಟ್ಟು ಅಚ್ಚುಕಟ್ಟುಗಳನ್ನು, ಕೆಲಸದ ವೇಗ ಪರಿಮಾಣಗಳನ್ನು ಹೆಚ್ಚಿಸಲು ನೆರವಾಗಬಹುದು.

ನಮ್ಮ ನೌಕಾದಲದ ನಾವೆಗಳು ನಾಗರಿಕ ಜೀವನದ ಜೀವಾಳದ ಅಗತ್ಯಕ್ಕೆ ನೆರವಾಗಬಹುದು. ನಮ್ಮ ವರ್ಷಾನುವರ್ಷದ ಒಂದು ಪಿಡುಗು ಮಳೆಗಾಳಿಗಳ ಹದಗೆಟ್ಟ ಅಂದಾಜು. ನೌಕಾಪಡೆಯ ನಾವೆಗಳು ಮನ್‌ಸೂನ್ ಗಾಳಿಗಳ ಚಂಡಮಾರುತಗಳ ಕಡಲ ಕುತ್ತುಗಳ ಖಚಿತವಾದ ವಿವರವಾದ ಅಂದಾಜು ಸಕಾಲಿ ನಿರೀಕ್ಷೆಗಳನ್ನು ಸಿದ್ಧಪಡಿಸಲು ಸುಯೋಗ್ಯವಾಗಿ ನೆರವಾಗಬಹುದು (ಸೊವ್ಹಿಯತ್ ನೌಕಾದಲವು ಈ ರೀತಿ ನೆರವಾಗುತ್ತದೆ.) ಕಡಲಾಳದಲ್ಲಿ ಸುಳಿದಾಡುವ ಮೀನುಗಳ ಗುಂಪುಗಳನ್ನು ಪತ್ತೆ ಹಚ್ಚಲು ಅವುಗಳ ರಕ್ಷಣೆಗೆ ರಾಡರ ಕಿರಣದಿಂದ ಬಿರುಗಾಳಿಯ ಮುನ್‌ಸೂಚನೆ ಕೊಡಲು ನೌಕಾದಲದ ನಾವೆಗಳು ಸಹಕರಿಸಬಹುದು.

ವಿಮಾನದಲವೂ ಸೈನಿಕ ದಲದಂತೆ ನಮ್ಮ ಯುವ ಜನಾಂಗಕ್ಕೆ ವೈಮಾನಿಕ ವೃತ್ತಿಗೆ ಹುರಿದುಂಬಿಸಬಲ್ಲುದು. ಸಾಹಸಿ ಉತ್ಸಾಹಿ ಯುವಕರಿಗೆ ಕೊಡೆ ವಿಮಾನ ತರಬೇತಿ ನೀಡಬಲ್ಲುದು. ದಲದ ವಿಮಾನಗಳು ಮೋಡ-ಮುಗಿಲುಗಳ ನಡೆಯ ಬಗೆಗೆ, ಬಿರುಗಾಳಿಗಳ ಬಗೆಗೆ ಮಹತ್ವದ ಸೂಚನೆಗಳನ್ನು ಹವಾಮಾನದ ಅಂದಾಜಿಗಾಗಿ ಪೂರೈಸಬಲ್ಲವು.

ಇವೆಲ್ಲ ಸಹಾಯ ಸಹಕಾರಗಳ ಸೇವೆ ನಮ್ಮ ಸಂರಕ್ಷಕ ಪಡೆಗಳು ಸಂರಕ್ಷಣೆಯ ಆದ್ಯ ಕರ್ತವ್ಯವನ್ನು ಬಿಡದೆ, ಬಿಡುವಿನ ಸಮಯದಲ್ಲಿ ಜನತೆಗೆ ಸಲ್ಲಿಸಬೇಕು. ಇದರಿಂದ ಜನತೆಯ ಈ ಶಕ್ತಿಭುಜವು ಅದರ ಶರೀರದಿಂದ ದೂರವಿರದೆ ಜೀವಂತ ಘನಿಷ್ಠ ಸಂಬಂಧ ಪಟ್ಟುಕೊಳ್ಳಬಹುದು.

●

('ಉದಯವಾಣಿ' ೧೯೭೭)

# ನಮ್ಮ ನಾಟ್ಯದ ಈ ವಿಚ್ಛಿನ್ನ ಪರಂಪರೆ

"ಕರ್ನಾಟಕದ ನಾಟ್ಯ ಪರಂಪರೆ" ಎಂದೊಡನೆ ನಮ್ಮ ರಂಗಭೂಮಿಯ ಇತಿಹಾಸದ ಮೈಲುಗಲ್ಲುಗಳನ್ನು ನಾನು ಎಣಿಸಲು ಹೊರಟನೆಂದು ಭಾವಿಸಬೇಕಾಗಿಲ್ಲ, ಅಲ್ಲದೆ, ಈ ಪ್ರಸ್ತಾಪದಲ್ಲಿ ನನ್ನ ಅನುಭವ ಹಾಗೂ ಅರಿವಿನ ಅಳವಿನ ಆಚೆಗೆ ನಾನು ಹಾಯಲು ದುಡುಕುವದಿಲ್ಲ. ಉತ್ತರ ಕರ್ನಾಟಕದ-ಇದೇ ಹಿಂದೆ ದಕ್ಷಿಣ ಮಹಾರಾಷ್ಟ್ರವೆಂದು ಕರೆಯಲ್ಪಟ್ಟಿತ್ತು! -ನನ್ನ ಗಮನದ ಹಾಸುಬೀಸು.

ಮರಾಠೀ ರಂಗಭೂಮಿಗೆ ನಮ್ಮ ಉತ್ತರಕನ್ನಡ ಜಿಲ್ಲೆಯ ಯಕ್ಷಗಾನ ದಶಾವತಾರದ 'ಆಟ'ಗಳ 'ಪ್ರಸಂಗ' ವೇಷಭೂಷಣೆಗಳೇ ಮೂಲದ ಪ್ರೇರಣೆ ಆಗಿದ್ದವೆಂಬುದು ಇಂದು ಮಹಾರಾಷ್ಟ್ರದಲ್ಲಿಯೂ ಸರ್ವಶ್ರುತ ಸಾಮಾನ್ಯ. ಕರ್ಕಿಯ ಮೇಳ ಸಾಂಗಲಿ ಸಂಸ್ಥಾನದ ದರಬಾರಿನಲ್ಲಿ ತಮ್ಮ ಆಟಗಳನ್ನು ಮೊತ್ತಮೊದಲಿಗೆ ಆಡಿತೋರಿಸಿದಾಗ ಅವುಗಳ ಅಂದಚೆಂದಕ್ಕೆ ಮನಸೋತು ದೊರೆ ಶ್ರೀಮಂತ ಪಟವರ್ಧನರು ತಮ್ಮ ಆಸ್ಥಾನದ ಶ್ರೀವಿಷ್ಣುದಾಸ ಭಾವೆ ಅವರಿಗೆ ಮರಾಠಿಯಲ್ಲಿಯೂ ಅದೇ ಮಾದರಿಯ ರಾಗ, ಸಂಗೀತ ನಾಟ್ಯಕೃತಿಗಳನ್ನು ರಚಿಸಲು ಅಪ್ಪಣೆ ಕೊಡಿಸಿದರು. ಆಗ ವಿಷ್ಣುದಾಸರು ತಮ್ಮ ಪ್ರಥಮ ಮರಾಠೀ ನಾಟಕ 'ಸೀತಾಸ್ವಯಂವರ'ದ ಪ್ರಯೋಗವನ್ನು ಸಾದರಪಡಿಸಿದರು. ಇದು ೧೮೪೩ರಲ್ಲಿ ಆಗ ರಾಜಾಶ್ರಯದಲ್ಲಿ ಶ್ರೀಭಾವೆ ಒಂದು ಕಂಪನಿಯನ್ನು ಕಟ್ಟಿ ಗೋವಾ ಮುಂಬಯಿ ಪುಣೆಗಳಲ್ಲಿ ಅನೇಕ ಪ್ರಯೋಗಗಳನ್ನು ಆಡುತ್ತ ಸಂಚರಿಸಿದರು. ಅಂದಿನ ಅವರ ನಾಟಕಗಳೆಂಬವೆಲ್ಲ ನಮ್ಮ ಯಕ್ಷಗಾನ ಪ್ರಸಂಗಗಳಂತೆಯೇ ನೂರಾರು ಪದ್ಯಗಳಿಂದ ತುಂಬಿದ್ದವು. ಅಷ್ಟೇ ಅಲ್ಲ ಆ ಪೌರಾಣಿಕ ನಾಟಕಗಳಲ್ಲಿಯ ಪಾತ್ರಗಳ ವೇಷಭೂಷಣಗಳೂ ನಮ್ಮ ಬಯಲಾಟದ ಮೇಳದಂತೆಯೇ ಇರುತ್ತಿದ್ದವು. (ಭಾಗವತನ ಬದಲು ಪಾತ್ರಧಾರಿಗಳೇ ಪದ್ಯಗಳನ್ನು ಹಂಚಿಕೊಂಡು ಸಾಭಿನಯವಾಗಿ ಹಾಡುತ್ತಿದ್ದರು. ಜತೆಗೆ ನರ್ತನವಿರುತ್ತಿದ್ದಿಲ್ಲ.)

ಮುಂದೆ ಆಧುನಿಕವೆಂಬ ಮರಾಠೀ ನಾಟಕದ ಆರಂಭ ಬೆಳಗಾಂವಿ ಜಿಲ್ಲೆಯ ಗುರ್ಲ ಹೊಸೂರಿನ ಶ್ರೀ ಅಣ್ಣಾಸಾಹೇಬ ಕಿರ್ಲೋಸ್ಕರರು ರಚಿಸಿ ರಂಗಕ್ಕೆ ತಂದ 'ಶಾಕುಂತಲ' ಮತ್ತು ಅವರದೇ ಸ್ವತಂತ್ರ ಕೃತಿ 'ಸೌಭದ್ರ' ದೊಂದಿಗೆ ಆಯಿತು. (ಶ್ರೀ ಕಿರ್ಲೋಸ್ಕರರು ೧೮೪೩ ರಲ್ಲಿಯೇ ಹುಟ್ಟಿದ್ದು, "ಸೀತಾಸ್ವಯಂವರದೊಂದಿಗೇ!)

ಇದೇ ರೀತಿ ಮೈಸೂರ ಸಂಸ್ಥಾನದಲ್ಲಿಯೂ ನಟವರ್ಯ ಶ್ರೀ ವರದಾಚಾರ್ಯರು ನಾಟಕಗಳ ಆರಂಭ ಶ್ರೀಹರ್ಷನ 'ರತ್ನಾವಲಿ'ಯ ಕನ್ನಡ ರೂಪಾಂತರದೊಂದಿಗೆ ಮಾಡಿದರು. ಮೈಸೂರಿನ ಲ್ಲಿಯೂ ಅರಮನೆಯ ಆಶ್ರಯದಿಂದಲೇ ನಾಟಕ ಮಂಡಳಿಯೊಂದು ರೂಪಗೊಂಡಿತು. ಶ್ರೀ ವರದಾಚಾರ್ಯರ ಕಂಪನಿ ರತ್ನಾವಳಿ ನಾಟಕಮಂಡಳಿಯೆಂದೇ ಹೆಸರಾಯಿತು. ಶ್ರೀ ವರದಾಚಾರ್ಯರೂ "ಶಾಕುಂತಲ"ವನ್ನು ಆಡುತ್ತಿದ್ದರು. ಅವರ 'ದುಷ್ಯಂತ'ನ ಪಾತ್ರದ ಶ್ರೀಮದ್ಗಾಂಭೀರ್ಯ ಹಾಗೂ ಅಭಿನಯದ ಔನ್ನತ್ಯ ತತ್ಸಮ ಮರಾಠೀ ದುಷ್ಯಂತನಕ್ಕಿಂತ ಹಿರಿದಾಗಿತ್ತೆಂದು ಹಿಂದೆ ಕಿರ್ಲೋಸ್ಕರ ಹಾಗೂ ಗಂಧರ್ವ ಕಂಪನಿಯಲ್ಲಿ ದುಷ್ಯಂತನ ಪಾತ್ರವನ್ನೂ ಮಾಡುತ್ತಿದ್ದ ಹಿರಿಯ ನಟ, ನಾಟಕಕಾರ ಸಂಗೀತ ವಿದ್ವಾನ್ ಶ್ರೀ ಗೋವಿಂದರಾವ ಟೇಂಬೆ

ಅವರು ತಮ್ಮ ಆತ್ಮಚರಿತ್ರೆಯಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. ಶ್ರೀ ಟೇಂಬೆಯವರು ಅಂದು ಮೈಸೂರ ಯುವರಾಜರ ರಸಿಕ ಕೂಟದ ಆಪ್ತಮಿತ್ರರಲ್ಲಿ ಒಬ್ಬರಾಗಿ ಒಡನಾಡಿದವರು. ಅವರೊಂದಿಗೆ ಜಪಾನಯಾತ್ರೆಯಲ್ಲಿ ಇದ್ದವರು. ಅವರ ಅಂತ್ಯಕಾಲದಲ್ಲಿ ನಿಕಟವರ್ತಿಗಳಾಗಿದ್ದರು.)

## ವಿಲಕ್ಷಣ ಸೊಗಸು

ಮುಂದೆ ಶ್ರೀ ಗೋವಿಂದರಾವ್ ಟೇಂಬೆಯವರು ಕಿರ್ಲೋಸ್ಕರ ಕಂಪನಿಯಲ್ಲಿ ಅದರಿಂದ ಒಡೆದೆದ್ದ ಗಂಧರ್ವ ಕಂಪನಿಯಲ್ಲಿ "ಮಾನಪಮಾನ" "ವಿದ್ಯಾಹರಣ" ಮುಂತಾದ ಹಂಸಧ್ವನಿಯ 'ರಭಾಲೇಂ ಯುವತಿಮನಾ' ಆರಬೀರಾಗದ 'ಚಂದ್ರಿಕಾ ಹೀಜಣಾಂ' ಕರ್ನಾಟಕೀ ರಾಗದ 'ದೇ ಹಾತಾಯ ಶರಣಾಗತಾ' ಕೀರ್ವಾಣಿಯ 'ಸುರಸುಖಖನಿ' ಪಂಚಮ ಮೂಲಕಂತಿನ 'ಹೇಮಾಧವಾ' ಹಾಗೆಯೇ ಶಂಕರಾಭರಣದ 'ಸೇವಿಮಧುಕರಾ' ಮುಂತಾದ ಪ್ರಸಿದ್ಧ ಮರಾಠೀ ರಂಗಗೀತೆಗಳ ಸ್ವರ ರಚನೆ ದಿ. ಶ್ರೀ ಟೇಂಬೆಯವರು ಪಡೆದುಬಂದ ಕರ್ನಾಟಕದ ಸಂಗೀತ ಬಳುವಳಿ.

ನಾಟಕಗಳಿಗೆ ತಾವೂ ಮೈಸೂರಿನಲ್ಲಿ ಶ್ರೀ ಬಿಡಾರ ಕೃಷ್ಣಪ್ಪನವರೊಂದಿಗೆ ಇದ್ದಾಗ ಸಂಗ್ರಹಿಸಿದ ದಕ್ಷಿಣಾದಿ ಕೃತಿಗಳ 'ಚಾಲು'ಗಳನ್ನೇ ಮರಾಠೀ ರಂಗಗೀತೆಗಳಿಗೆ ಹೆಚ್ಚು ಅತ್ಯಂತ ಜನಪ್ರಿಯ ಗೊಳಿಸಿದರು. (ಹಿಂದುಸ್ತಾನೀ ಶೈಲಿಯಲ್ಲಿ ಹಾಡಿದ ಕರ್ನಾಟಕೀ ಧಾಟಿಗಳು ವಿಲಕ್ಷಣ ಸೊಗಸನ್ನು ಸೂಸುತ್ತವೆ!)

ಮುಂದೆ ದತ್ತಾತ್ರೇಯ ನಾಟಕ ಮಂಡಳಿಯ ಶ್ರೀ ಗರೂಡ ಸದಾಶಿವರಾಯರೂ ಶಿರಹಟ್ಟಿ ಕಂಪನಿಗಳ ವಾಮನರಾವ್ ವೆಂಕೋಬರಾಯರೂ ತಮ್ಮ ನಾಟಕಗಳಲ್ಲಿ ಮರಾಠೀ ನಾಟಕಗಳ ಸಂಗೀತ ಕನ್ನಡಕ್ಕೆ ಇಳಿದು ಬಂದಿತು. "ಚಂದ್ರಿಕಾ ಹೀಜಣಾಂ" "ಸಂಶಯ ಕಾಮನಿಅಲಾ" "ಧೀಕಾರಮನ ಸಾಹಿನಾ" "ಹಾಗಗಮಪತಿ ತಮಾರಿ" "ತೇಜಾನಘೀಯಾ ಸಾಹವೇನಾ" "ಪರವಶತಾ" "ಅತಾರಾಗದೇಯೇ" "ಕವಿತಾಸುತಾ" "ನಯನೀಲಾಜವಿತ" "ಮಲಾಮದನಭಾಸೆ" ಮುಂತಾದ ನೂರಾರು ಧಾಟಿಗಳು ಗರೂಡ ಸದಾಶಿವರಾಯರ ಹಾಗೂ ವಾಮನಮಾಸ್ತರರ ಮತ್ತೂ ಇನ್ನಿತರರ ನಾಟಕಗಳಲ್ಲಿ ನಟನಟಿಯರ ನಾಲಿಗೆಯ ಮೇಲ ನಲಿದಾಡತೊಡಗಿದವು.

## ನೆರಳು-ಬೆಳಕು

ಹೀಗೆ ಮರಾಠೀ ರಂಗಗೀತೆಗಳ ಛಾಯೆ ಅಡ್ಡವಾಗಿಯೂ ಅಗಲವಾಗಿಯೂ ಬೀಳಲು ಒಂದು ಕಾರಣ ಅಲ್ಲಿಯ ನಾಟಕಗಳ ಅನುವಾದ-ಅನುಕರಣ. (ಮೈಸೂರು ನಿಜಾಂ ಕರ್ನಾಟಕದ ಮಟ್ಟಿಗೆ ಇಂಥ ಪ್ರಭಾವ ಬೇರೆ (ಉರ್ದೂ ಫಾರ್ಸಿ? ಮೂಲಗಳಿಂದ ಬಂದಿರಬಹುದು. ಅದು ನನ್ನ ತಿಳುವಳಿಕೆಯ ತೆಕ್ಕೆಗೆ ಹೊರತು.) 'ನಾಟಕಾಲಂಕಾರ' ಶ್ರೀ ಗರೂಡಸದಾಶಿವರಾಯರು ಕೇವಲ ತಾನೇ ಬರೆದ ನಾಟಕಗಳನ್ನು ತಮ್ಮ ಕಂಪನಿಯಲ್ಲಿ ಆಡುತ್ತಿದ್ದರು. ಆದರೂ ಮರಾಠಿಯ ರಂಗ ಸಂಗೀತವನ್ನು ಅವರು ಸ್ವೀಕರಿಸಲು ಹಿಂಜರಿದಂತಿಲ್ಲ. ಆದರೆ ಶ್ರೀ ಶಿರಹಟ್ಟಿ ವಾಮನರಾಯರ "ವತ್ಸಲಾಹರಣ" ಹಲಗೇರಿ ಕಂಪನಿಯವರ ಅತ್ಯಂತ ಜನಪ್ರಿಯ "ರಾಕ್ಷಸೀ ಮಹತ್ವಾಕಾಂಕ್ಷಾ ಮತ್ತು ಸಹಶಿವಾಜೀ' ಮರಾಠೀ ನಾಟಕಗಳ ರೂಪಾಂತರಗಳೇ ಆಗಿದ್ದವು. (ಹಲಗೇರಿ ಕಂಪನಿ ವೀರವಾಮನರಾವ್ ಜೋಶಿಯವರ 'ರಾಕ್ಷಸೀ ಮಹತ್ವಾಕಾಂಕ್ಷೆ' ಯ ಅನುವಾದವನ್ನು

ಶಿವರಾಮ ಕಾರಂತರೇ ಅಂದು ತಿದ್ದಿಕೊಟ್ಟಿದ್ದರು!) ಮರಾಠಿಯ 'ಪಂತಾಂಚಿಸೂನ" ಅಂಬಾಪ್ರಾಸಾದಿಕ ಕಂಪನಿಯಲ್ಲಿ "ರಾಯರ ಸೊಸೆ" ಆಯಿತು. ಜಯಕರ್ನಾಟಕ ಕಂಪನಿಯಲ್ಲಿ "ವರದಕ್ಷಿಣೆ" ಆಯಿತು. ಶ್ರೀ ದೇವಲರ "ಸಂಶಯಕಲ್ಲೋಳ" ವಾಮನಮಾಸ್ತರ ಕಂಪನಿಯಲ್ಲಿ "ಸಂದೇಹ ಸಾಮ್ರಾಜ್ಯ"ವಾಯಿತು. ಹಾಗೆಯೇ ನಟವರ್ಯ ಶ್ರೀ ಬಾಳಪ್ಪಾ ಏಣಗಿಯವರು "ಸ್ಕೂಲ್‌ಮಾಸ್ತರ್" "ಡಾಕ್ಟರ್" ಮರಾಠೀ ನಾಟಕಗಳನ್ನು ರೂಪಾಂತರಿಸಿ ಕನ್ನಡ ರಂಗಕ್ಕೆ ತಂದವು. ಶ್ರೀ ಲಕ್ಷ್ಮಣರಾವ್ ಬೇಂದ್ರೆ ಮರಾಠೀ 'ಖಿಡಾಷ್ಟಕ' ವನ್ನು 'ಬಾಯ ಬಂಡಾಯ' ವಾಗಿಸಿದರು. ಶ್ರೀ ಟೇಂಬೆಯವರ 'ಪಟವರ್ಧನ' ಶ್ರೀ ಕಂದಗಲ್ಲ ಹನುಮಂತರಾಯರ 'ಅಕ್ಷಯಾಂಬರ್'ದಲ್ಲಿ ಛಾಯೆಗಾಣಿಸಿತು. ಮಾಮಾವರೇಕರರ "ಹಾಚ ಮುಲಾಚಾ ಬಾಪ" ನಾಟಕವನ್ನು ಪಂಡಿತ ತಾರಾನಾಥರೇ "ಸಂಮೋಹನಾಸ್ತ್ರ" ವೆಂಬ ಹೆಸರಿನಲ್ಲಿ ಕನ್ನಡಿಸಿದರು. ಒಂದೇ? ಎರಡೇ? ಹೀಗೆ ಉತ್ತರ ಕರ್ನಾಟಕದ ನಾಟ್ಯ ಪರಂಪರೆ ಬಹುಮಟ್ಟಿಗೆ ಮರಾಠೀ ರಂಗಭೂಮಿಯ ನೆಳಲಾಯಿತು. ಬೆಳಕೂ ಪಡೆಯಿತು. ಆದರೇನು? ಅಲ್ಲಿಯ ಒಂದು ಶ್ಲಾಘ್ಯ ಹಾಗೂ ಯೋಗ್ಯ ಪರಂಪರೆಯನ್ನು ಮಾತ್ರ ನಾವು ಗೀರಲಿಲ್ಲ. ನಮ್ಮ ವೃತ್ತಿ ರಂಗಭೂಮಿಯಲ್ಲಿ ಹೊಸ ಹೊಸ ನಾಟಕಗಳು ಹುಟ್ಟಿ ೫-೬ ವರ್ಷಗಳಲ್ಲಿ ಮಾಯವಾಗುತ್ತವೆ. ಮರಾಠೀ ರಂಗಭೂಮಿಯಲ್ಲಿ ಈ ಇಪ್ಪತ್ತನೆಯ ಶತಮಾನದ ಕೊನೆಯ ಹಂತದಲ್ಲಿಯೂ ಹಳೆ ಹೊಸ ಎರಡೂ ಬಗೆಯ ನಾಟ್ಯಕೃತಿಗಳಿಗೆ ಇಂದಿಗೂ ಪ್ರfull- 'ಹೌಸ್‌ಫುಲ್'ಸ್ವಾಗತವಿದ್ದೇ ಇದೆ. ಎಪ್ಪತ್ತು-ಎಂಬತ್ತು ವರ್ಷಗಳ ಹಿಂದಿನ ಕೆಲವು ಯಶಸ್ವೀ ನಾಟಕಗಳು ಸೌಭದ್ರ, ಮೃಚ್ಛಕಟಿಕ ಶಾರದಾ, ಸಂಶಯ ಕಲ್ಲೋಳ ಮುಂತಾದವು ಇಂದಿಗೂ ವಿಜಯ ತೇಂಡೂಲಕರ, ಜಯವಂತ ದಳವಿ, ವಸಂತ ಕಾನೀಟರರಂಥವರ ಅತ್ಯಾಧುನಿಕ ನಾಟಕಗಳೊಂದಿಗೇ ಜತೆಜತೆಯಾಗಿ ರಸಿಕ ಸಮುದಾಯವನ್ನು ಸೆಳೆಯುತ್ತದೆ. ಹಳೆಯ ನಾಟಕಗಳ ಹಳೆಯ ಪದ್ಯಗಳನ್ನು ಅವೇ ಧಾಟಿಯಲ್ಲಿ ಸರ್ವಶ್ರೀ ರಾಮದಾಸ ಕಾಮತ, ವಸಂತರಾವ ದೇಶಪಾಂಡೆ, ವಿಶ್ವನಾಥ ಬಾಗುಲ, ರಾಮಮರಾಠೆ ಛೋಟಾ ಗಂಧರ್ವರಂಥ ಗಾಯಕರೂ (ನಟರೂ) ಶ್ರೀಮತಿಗಳಾದ ಮಾಣಿಕವರ್ಮಾ, ಇಂದಿರಾ ಕೇಳಕರ ಬಕುಲ ಪಂಡಿತ, ಉಷಾ ಖಾಟೇಕರ, ಜಯಮಾಲಾಶಿಲೇದಾರ, ಮೀನಾಕ್ಷಿ, ಆಶಾಬೋಸಲೆ ಮುಂತಾದ ಗಾಯಕಿಯರೂ ಹಾಡಿ ಹೊಸ ಪೀಳಿಗೆಯಲ್ಲಿ ಭಾರೀ ಜನಪ್ರಿಯಗೊಳಿಸಿದ್ದಾರೆ. "ಸಖಾರಾಂ ಬೈಂಡರ"ದಷ್ಟೇ 'ಏಕಚಪ್ಯಾಲಾ', 'ಕನ್ಯಾದಾನ'ದಷ್ಟೇ 'ಸ್ವಯಂವರ', 'ಸಖ್ಖೆ ಶೇಜಾರಿ'ಯಷ್ಟೇ 'ಸೌಭದ್ರ' ಈ ಹೊತ್ತಿಗೂ ರಂಗದಲ್ಲಿ ರಸಿಕರಲ್ಲಿ ಪರಿಣಾಮಕಾರಿಯಾಗುತ್ತಿದೆ. ಇದು ನಾಟ್ಯ ಪ್ರತಿಭೆ ಹಾಗೂ ಪ್ರಜ್ಞೆಗಳ ಅವಿಚ್ಛಿನ್ನ ಜೀವಂತ ಪರಂಪರೆ!

ಆದರೆ ನಮ್ಮಲ್ಲಿ ? ೩೦-೪೦ರ ದಶಕದ ವಿಷಮವಿವಾಹ. ಚವತಿಯ ಚಂದ್ರ ಸಂಸಾರನೌಕಾ, ಸತ್ಯಸಂಕಲ್ಪ, ಸದಾರಮೆ, ಸುದಾಮದೇವ, ಗೌತಮಬುದ್ಧ, ರಾಯರಸೊಸೆ, ಶಾಕುಂತಲ ಮುಂತಾದ ಪ್ರಭಾವೀ ನಾಟಕಗಳಿಗೆ ಇಂದು ಸ್ಥಾನವೆಲ್ಲಿ ಮಾನವೇನು? ಶೇಕ್ಸಪಿಯರನ "ಒಥೆಲೊ" ೭೦ ವರ್ಷಗಳ ಹಿಂದೆಯೇ ಮರಾಠಿಯಲ್ಲಿ ಶ್ರೀ ಗೋವಿಂದ ಬಲ್ಲಾಳ ದೇವಲರಿಂದ 'ಝುಂಜಾರರಾವ್" ಎಂಬ ಹೆಸರಿಟ್ಟು ಅನುವಾದಿಸಲಾಯಿತು. ಅಂದು ಅದನ್ನು ನಟಶ್ರೇಷ್ಠ ಗಣಪತರಾವ ಜೋಶೀ ಆಡಿ ಪ್ರಸಿದ್ಧಿಗೆ ತಂದರು. ಅನಂತರ ಅದು೨೦-೨೫ ವರ್ಷ ಮೂಲೆಗುಂಪಾಯಿತು. ಆದರೆ ಖ್ಯಾತ ಸಿನೇನಟ ಬಾಬೂರಾವ ಪೆಂಢಾರಕರರು 'ಝುಂಜಾರರಾವ್" ಕೈಗೆತ್ತಿಕೊಂಡು ಅದನ್ನೊಂದೇ ಮಹಾರಾಷ್ಟ್ರದಲ್ಲಿ ನೂರಾರು ಪ್ರಯೋಗಗಳಲ್ಲಿ

ವೈಭವದಿಂದ ಆಡಿ ಮೆರೆಯಿಸಿದರು. ಆದರೆ ಅದೇ "ಒಥೆಲೊ" ಅಷ್ಟೇ ಹಳೆಯ ಅನುವಾದ "ಶೂರಸೇನಚರಿತೆ" ಇಂದಿಗೂ ಗೆದ್ದಲ ಕೂಳಾಗಿಯೇ ಬಿದ್ದಿದೆ!

ಹೊಸ ವರ್ಷಕ್ಕೆ ಹೊಸ ಹರ್ಷವೆಂಬಂತೆ ನಮ್ಮಲ್ಲಿ ಪ್ರತಿ ಹಂಗಾಮಿಗೆ ಹೊಸ ಹೊಸ ನಾಟಕಗಳು ಅಣಬೆಯಂತೆ ಎದ್ದು ನಿಲ್ಲುತ್ತವೆ. ಹಳೆಯವು ಅವುಗಳಿಗೆ ಗೊಬ್ಬರವಾಗುತ್ತವೆ! ಇದು ನಿಜವಾದ ಅವಿಚ್ಛಿನ್ನವಾದ ಜೀವಂತ ಸಂಸ್ಕೃತಿಯ ಅಥವಾ ಕಲೆಯ ಧರ್ಮವಲ್ಲ, ಆದರೆ ಇದನ್ನು ಯಾರು ಹೇಳಬೇಕು? ಯಾರು ಕೇಳಬೇಕು?

ಇದೇ ಕರ್ಮಕಥೆ ನಮ್ಮ ನಾಟ್ಯ ಸಂಗೀತದ್ದೂ. ಬಾಲಗಂಧರ್ವ, ಹೀರಾಬಾಯಿ ಬಡೋದೆಕರ, ಮಾಸ್ಟರ್ ದೀನಾನಾಥ ಮಂಗೇಶಕರ, ಸವಾಯಿಗಂಧರ್ವ, ಬಾಪೂರಾವ ಪೆಂಢಾರಕರ ಪ್ರಭೃತಿಗಳು ಐವತ್ತು ವರ್ಷಗಳ ಹಿಂದೆ ಹಾಡಿದ ರಂಗಗೀತೆಗಳು ಇಂದಿಗೂ ಮಹಾರಾಷ್ಟ್ರದಲ್ಲಿ ಅತ್ಯಂತ ಜನಪ್ರಿಯವಾಗಿವೆ. ಬಾಲಗಂಧರ್ವರ ಎಷ್ಟೋ ಹಾಡುಗಳನ್ನು ಮೂಲತಃ ಕನ್ನಡಿಗರೇ ಆದ ಮಾನ್ಯ ಕುಮಾರ ಗಂಧರ್ವರು "ಮಲಾ ಉಮಜಲೆಲೇ ಬಾಲಗಂಧರ್ವ" (ನನಗೆ ಮನವರಿಕೆಯಾದ ಬಾಲಗಂಧರ್ವರು) ಎಂಬ ಹೆಸರಿನಲ್ಲಿ ಹೊಸತಾಗಿ ಹಾಡಿ ಧ್ವನಿ ಮುದ್ರಿಕೆಗಳ ಕ್ಯಾಸೆಟ್ಟುಗಳನ್ನು ಪ್ರಚಾರಗೊಳಿಸಿದ್ದಾರೆ. ಕಣ್ಮರಾಠದ ಲಕ್ಷಾಂತರ ರಸಿಕರನ್ನು ತಣಿಸಿರುತ್ತಾರೆ.

**ಜಾತ್ರೆ ಮರುಳಿನ ಜಾಡು**

ಆದರೆ ನಮ್ಮಲ್ಲಿ ಈ ಹಿಂದೆ, ಒಂದೊಮ್ಮೆ ಜನರ ಮೆಚ್ಚಿಗೆ ಪಡೆದ ಹಳೆಯ ನಾಟಕಗಳ ರಂಗಗೀತೆಗಳು ಎಲ್ಲೂ ಕೇಳಸಿಗುವದಿಲ್ಲ, ಆಕಾಶವಾಣಿಯಲ್ಲಿ, - ಕೆಲ ಹಳೆಯ ನಟನಟಿಯರು ರಂಗಗೀತೆಗಳೆಂದು ಹಾಡಿದ್ದು ಬಿಟ್ಟರೆ. ಆದರೆ ಆ ಗೀತೆಗಳೂ ರಂಗೇರಿದುವಲ್ಲ, ಮೈಸೂರು ಕಡೆಯ ರಂಗ ಪ್ರಪಂಚದ ಅವಸ್ಥೆಯೂ ಇದೆ. ಗುಬ್ಬಿ ಕಂಪನಿ ಶತಮಾನ ಮುಗಿಸಿತು. ಆದರೆ ಅವರ ರಂಗಗೀತೆಗಳು ಅದೆಷ್ಟು ಅಭಿರುಚಿಯ ಪರಂಪರೆಯನ್ನು ಸಾಧಿಸಿದ್ದಾವೆ? ಆ ಗರಡಿಯಲ್ಲಿ ಪಳಗಿ ಹೊರಬಿದ್ದ ರಾಜಕುಮಾರ, ವಾಸುದೇವರಾವ್, ಜಯಮ್ಮ ಪ್ರಭೃತಿ ನಾಟ್ಯವೀರರು ಸಿನೇಪ್ರಪಂಚದಲ್ಲಿ ಹೊಸ ಇತಿಹಾಸವನ್ನು ರಚಿಸಿದ್ದಾರೆ. ನಟಸಾರ್ವಭೌಮರು ಶ್ರೀ ರಾಘವೇಂದ್ರಸ್ವಾಮಿಗಳ ಕುರಿತ ಭಕ್ತಿಗೀತೆಗಳ ಗಾನಸುಧೆಯನ್ನೇ ಹರಿಸಿದ್ದಾರೆ. ಆದರೆ ಕಂಪನಿಯ ವೈಭವ ಕಾಲದ ರಂಗಗೀತೆಗಳ ಪಾಡೇನಾಯಿತು? ಅದೇ ಇಂದಿಗೂ ಮರಾಠೀ ರಂಗದಲ್ಲಿ ಮೊಳಗಿ ಕನಿಷ್ಠ ನೂರು ಹಾಡುಗಳಾದರೂ ಈ ಶತಮಾನದುದ್ದಕ್ಕೂ ನಾದಲುಬ್ಧರನ್ನು ಮೋಹಗೊಳಿಸು ಬಂದಿವೆ: ದೇ ಹಾತಾ ಯಾ ಶರಣಾಗತಾ, ನಟಸುಂದರಿ ಕರಿಕೋವಾ, ಝೂಲೇ ಯುವತಿಮನಾ ಪರವಶತಾ, ಕಿತಿಕಿತಿ ಸಾಂಗೂತುಲಾ, ಅನೃತಜಿ ಗೋಪಾಲಾ, ಕರಿನಯದುಮನೀ, ರೂಪಬಲಿತೋ ನರಶಾರ್ದುಲ, ಸ್ವಾಕುಲತಾರಕ ಸುತಾ ಇತ್ಯಾದಿ ಸುಲಭವಾಗಿ ನೆನಪಾಗುತ್ತವೆ. ಹೊಸ ಗೀತೆಗಳೊಂದಿಗೆ ಈ ಹಳೆಯ ಹಾಡುಗಳಲ್ಲಿ ಹೊಸ ಜೀವಕಳೆ ತುಂಬಿ ಹಾಡುತ್ತಿರುವುದು ಕೇಳಬರುತ್ತದೆ. ಆದರೆ ನಮ್ಮಲ್ಲಿ ಹಳೆಯದೆಲ್ಲ ಒಂದು ಹಾಳುಗನಸು. ಹೊಸ ರಂಗಗೀತೆಗಳು ಫಿಲ್ಮೀಯ ಧಾಟಿಯಲ್ಲಿ ರಿಂಗಣ ಹಾಕುತ್ತವೆ. ಜನಕ್ಕೆ ಅದೇ ಬೇಕು. ಇದು ಸದಭಿರುಚಿಯ ಎಂಥ ವ್ಯಭಿಚಾರ.

ಈ ಮಟ್ಟಿಗೆ ನಮ್ಮ ನಾಟ್ಯ ಪರಂಪರೆಯಲ್ಲಿ ಉತ್ತರ-ದಕ್ಷಿಣವೆಂಬ ತಾರತಮ್ಯವಿಲ್ಲ. ಕನ್ನಡ ಕುಲರಸಿಕರಲ್ಲಿ ಎಲ್ಲ ಇದೇ ಹಾಡು-ಜಾತ್ರೆ ಮರುಳಿನ ಜಾಡು.

ಹೊಸ ನಾಟಕ ಹೊಸ ರೀತಿಯ ರಂಗಪ್ರಯೋಗ ಅಸಂಗತವೋ ಅಮೂರ್ತವೋ ಸಮಗ್ರವೋ ಆದ ರಂಗಭೂಮಿಯ ಪಂಚರಂಗಿ ಕ್ರಾಂತಿ ನಡೆಯಲೇಬೇಕು. ನಡೆಯುತ್ತಲೇ ಇರಲಿ. ಆದರೆ ಅದರ ತುಳಿತಕ್ಕೆ ಹಿಂದೆಲ್ಲ ಪರಿಶುದ್ಧ ಆನಂದವನ್ನು ತಲೆಮಾರಿನಿಂದ ತಲೆಮಾರಿಗೆ ಉಣಿಸಿ ಬಂದು ಕ್ಲಾಸಿಕಲ್ (ಅಭಿಜಾತ) ಮಟ್ಟಕ್ಕೆ ಏರಿದ ನಾಟ್ಯ ಕೃತಿಗಳೂ ರಂಗಗೀತೆಗಳೂ ನಾಚಿಕೆಯಿಂದಲೋ ಹೇಸಿಗೆಯಿಂದಲೋ ಕಾಲದ ತೆರೆಯ ಹಿಂದೆ ಶಾಶ್ವತವಾಗಿ ಸರಿದು ಮರೆಯಾಗುವುದು ಸರಿಯೇ?

ಇದೇಕೆ ಹೀಗೆ? ಮಹಾರಾಷ್ಟ್ರದಲ್ಲಿ ಗಡಕರಿಯವರ 'ಏಕಚ ಪ್ಯಾಲಾ' ವರೇಕರರ 'ಸತ್ತೇ ಚೋ ಗುಲಾಂ' ದಂಥ ನಾಟಕಗಳು ವೃತ್ತಿ ರಂಗಭೂಮಿಯನ್ನು ಎತ್ತಿ ಹಿಡಿಯುವ ಬಾಕ್ಸಾಫೀಸ್ ಆಕರ್ಷಣೆ ಆದಂತೆಯೇ ಬಿ.ಎ.ಎಂ.ಎ. ಪದವೀ ಪರೀಕ್ಷೆಗಳಿಗೆ ಪಠ್ಯಗಳೂ ಆದವು. ನಮ್ಮಲ್ಲಿ ಆ ಭಾಗ್ಯ ಗರುಡಸದಾಶಿವರಾಯರ "ವಿಷಮ ವಿವಾಹ" ಕ್ಕಾಗಲಿ "ಸತ್ಯಾಸಂಕಲ್ಪಕ್ಕೆ" ಆಗಲಿ ಹಿರಣ್ಣಯ್ಯನವರ 'ದೇವದಾಸಿ'ಗೆ, ಸಿಂಹರ 'ಸಂಸಾರ ನೌಕೆ'ಗೆ ಆಗಲಿ ಲಭಿಸಿದೆಯೇ? ನಮ್ಮಲ್ಲಿ ವೃತ್ತಿ ನಾಟಕ ಹಾಗೂ ಹವ್ಯಾಸೀ ನಾಟಕ ಇವುಗಳ ನಡುವೆ ಸಂಕವಿಲ್ಲದ ಕಂದರ ಚಾಚಿದೆ. ಅಲ್ಲಿ ಸಲ್ಲುವವರು ಇಲ್ಲಿ ಸಲ್ಲುವುದಿಲ್ಲ. ಹಿಂದೊಮ್ಮೆ ಶ್ರೀರಂಗರು ತಮ್ಮ "ಸಿರಿಪುರಂದರ" ನಾಟಕವನ್ನು "ಮೋರ್ನಿಂಗ್" ಅಥವಾ "ಮ್ಯಾಟಿನಿ" ಶೊ ಆಗಿ ಹಾಕಿನೋಡಿ ಎಂದು ನಟವರ್ಯ ಶ್ರೀ ಏಣಗೀ ಬಾಳಪ್ಪನವರಿಗೆ ಬೆಂಗಳೂರಿನ ಮುಕ್ಕಾಮಿನಲ್ಲಿ ಹೇಳಿದ್ದರಂತೆ. ಆದರೆ ಆ ಪ್ರಯೋಗಪ್ರಿಯ ಸಾಹಸೀ ರಂಗಚಾಲಕರು ಇದನ್ನು ಒಪ್ಪಲಿಲ್ಲ.

ಮಹಾರಾಷ್ಟ್ರದಲ್ಲಿ ಹಿಂದಿನಿಂದಲೂ ಗಣ್ಯ ಜನನಾಯಕರು ಪ್ರಾಧ್ಯಾಪಕರು ಸಾರ್ವಜನಿಕ ಕಾರ್ಯಕರ್ತರು ರಂಗಭೂಮಿಯೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡು ಬಂದಿದ್ದಾರೆ. ಲೋಕಮಾನ್ಯ ತಿಲಕರು ಕಿರ್ಲೋಸ್ಕರ್ ಕಂಪನಿಯ ಮಾರ್ಗದರ್ಶಕರಿದ್ದರು. ಸ್ವಾತಂತ್ರ್ಯವೀರ ಸಾವರಕರರು ಮಾಸ್ಟರ್ ದೀನನಾಥರ ಬಲವಂತ ನಾಟಕ ಮಂಡಲಿಗಾಗಿ 'ಸಂವ್ಯಸ್ತ ಖಡ್ಗ' ನಾಟಕ ಬರೆದುಕೊಟ್ಟರು. ಹಾಗೆಯೇ ನ. ಚಿಕೇಳಕರ್ ಕೃಷ್ಣಾಜೀ ಪ್ರಭಾಕರ, ವೀರವಾಮನರಾವ್ ಜೋಶೀ ಶ್ರೀಪಾದ ಕೃಷ್ಣ ಕೊಲ್ಲಟಕರ ಮುಂತಾದ ಹಿರಿಯ ಮೇಧಾವಿಗಳು ನಾಟಕಗಳನ್ನು ಬರೆದಿತ್ತು ವೃತ್ತಿ ಕಂಪನಿಗಳಲ್ಲಿ ಕುಳಿತು ಪ್ರೋತ್ಸಾಹವಿತ್ತರು. ಈ ಶ್ರೇಣಿಯಲ್ಲಿ ನಮ್ಮಲ್ಲಿ ನೆನಪಿನಲ್ಲಿ ನಿಲ್ಲಬಲ್ಲವರು ಮೈಸೂರು ಸಂಸ್ಥಾನದಲ್ಲಿ ದಿ. ಯುವರಾಜರು ಮತ್ತು ಧಾರವಾಡದಲ್ಲಿ ದಿ. ಮುದುವೀಡು ಕೃಷ್ಣರಾಯರು. ಬುದ್ಧಿಜೀವಿವರ್ಗದ, ಸಾರ್ವಜನಿಕ ಧುರೀಣರ ಸಂಪರ್ಕ ಆಶ್ರಯಗಳಿಂದಾಗಿ ಮಹಾರಾಷ್ಟ್ರದಲ್ಲಿ ಜನಪ್ರಿಯ ನಾಟಕ ಮತ್ತು ವಿದ್ಯನ್ಮಾನ್ಯ ನಾಟಕವೆಂಬ ಮಡಿ ಮೈಲಿಗೆಯ ಭೇದಭಾವ ಬೆಳೆದು ಬರಲು ಅವಕಾಶ ಸಿಗಲಿಲ್ಲ. ಆದರೆ ಕನ್ನಡರಂಗ ಪರಂಪರೆಯೋ "ಗಂಗೆಯಮುನೆ ಕೂಡಿ ಹರಿದು ಸಂಗಮ ಜನ ಬಿಳಿದು ಕರಿದು". ಹೀಗಿದೆ ನಮ್ಮ ರಂಗಭೂಮಿಯ ನಾಟ್ಯ ಹಾಗೂಸಂಗೀತದ ವಿಚ್ಛಿನ್ನ ಪರಂಪರೆ.

●

('ಪ್ರಜಾವಾಣಿ' ೧೯೭೭)

# ಹಿಂದುಳಿದ ಸಮಾಜಗಳಲ್ಲಿ ಬುದ್ಧಿಜೀವಿಗಳ ಪಾತ್ರ

ಇದೇ ಕಳೆದ ಅಕ್ಟೋಬರ ೨೩ರ ದಿನ ಸಂಜೆಗೆ ಕುಂದಾಪುರದಲ್ಲಿ - ಅಲ್ಲಿಯ ಪ್ರಶಸ್ತವಾದ ಪ್ರವಾಸಿ ಬಂಗಲೆಯಲ್ಲಿ ಒಂದು ಉದ್ಬೋಧಕವಾದ ವಿಚಾರಗೋಷ್ಠಿ ಬಹಳ ಅಚ್ಚುಕಟ್ಟಾಗಿ ನಡೆಯಿತು. ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿಯೇ ತೀರ ಹಿಂದುಳಿದವರಾದ ಕೊಂಕಣಿ ಮೀನುಗಾರ (ಖಾರ್ವಿ) ಸಮಾಜದವರು ತಮ್ಮ ಹಿಂದುಳಿವಿಸ ಹೀನ ದೀನ ಸ್ಥಿತಿಗತಿಗಳ ಬಗೆಗೆ ಈ ಗೋಷ್ಠಿಯಲ್ಲಿ ಕಳಕಳಿಯಿಂದಲೂ ಕಳವಳದಿಂದಲೂ ಗಂಭೀರವಾಗಿ ಚರ್ಚೆ ನಡೆಯಿಸಿದರು. ಅದರಲ್ಲಿ ಅತಿಥಿಯಾಗಿ ಸಕ್ರಿಯವಾಗಿ ಭಾಗವಹಿಸುವ ಭಾಗ್ಯ ನನ್ನದಾಗಿತ್ತು.

ನಾನೇನು ಮೀನುಗಾರನಲ್ಲ, ಖಾರ್ವಿ ಸಮಾಜದವನೂ ಅಲ್ಲ. ಆದರೆ ಅವರಂತೆಯೇ ನನಗೂ ಕೊಂಕಣಿ ಭಾಷೆ ತಾಯ್ನುಡಿ. ನಿಜವಾಗಿಯೂ ಈ ಒಂದು ಭಾಷೆಯ ಆತ್ಮೀಯವಾದ ಉಡಿಯಲ್ಲಿ ಬದುಕಿ ಬೆಳೆದ ಎಲ್ಲ ಸಮಾಜಗಳು-ಮೇಲು ಕೀಳೆಂಬ ಜಾತೀಯ ತಾರತಮ್ಯವನ್ನು ಮರೆತು ಒಂದಾಗಿ ಸರ್ವಾಂಗೀಣ ಅಭಿವೃದ್ಧಿಗೆ ಆಸ್ಥೆಯಿಂದ ದುಡಿಯಬೇಕಾಗಿದೆ.

ಇದೊಂದೇ ಭಾವನೆಯಿಂದ ಐದು ವರ್ಷಗಳ ಹಿಂದೆ ನಾನು ಇದೇ ಪ್ರತಿಕೆಯಲ್ಲಿ ಈ ಕೊಂಕಣಿ ಮೀನುಗಾರರ ವಿಶಿಷ್ಟ ಸಮಸ್ಯೆಯ ಬಗೆಗೆ ಒಂದು ಲೇಖನವನ್ನು ಪ್ರಕಟಿಸಿದ್ದೆ. ಈ ಲೇಖಕ್ಕೆ ಪ್ರೇರಣೆಯನ್ನು ವಿಷಯ ವಿವರಗಳನ್ನು ನನಗೆ ತಾನಾಗಿ ಒದಗಿಸಿದ ಗಂಗೊಳ್ಳಿಯ ಕೊಂಕಣಿ ಮೀನುಗಾರರ ಸಂಘದ ಹಿರಿಕಿರಿ ಕಾರ್ಯಕರ್ತರೇ ಈ ವಿಚಾರ ಗೋಷ್ಠಿಯನ್ನು ಏರ್ಪಡಿಸಿದ್ದು.

ಗೋಷ್ಠಿಯ ಹಿರಿಯರಾಗಿ ಕಾರ್ಯನಿರ್ವಹಿಸಿ ಕೊಟ್ಟವರು ಶ್ರೀ ಕೆ. ನರಸಿಂಹ ಆರ್ಕಾಟೆ. ಈ ತಪೋವೃದ್ಧರು ಸುದೈವದಿಂದ ವಿಶೇಷ "ಸುಶಿಕ್ಷಿತ"ರಲ್ಲ. ಇಂದಿನ ಅಶಿಕ್ಷಿತ, ಅಸಂಸ್ಕೃತ ಪದವೀಧರರ ಜಾತಿಯೂ ಅಲ್ಲ ! ತುಂಬ ಅನುಭವಿಕರು. ಹಿತಮಿತ ನಡೆನುಡಿಯ ಸಾತ್ವಿಕ ವೃತ್ತಿಯ ತಾತ್ವಿಕ ದೃಷ್ಟಿಯ ನಿರಾಡಂಬರ ನಿರಲಸ ಸಮಾಜ ಸೇವಕರು. ೧೯೬೭ ರಿಂದಲೂ ಗಂಗೊಳ್ಳಿಯ ಕೊಂಕಣಿ ಮೀನುಗಾರರ ಸಂಘಕ್ಕೆ ಇವರೇ ಅಧ್ಯಕ್ಷರು. "ನಾವು ಇನ್ನೆಷ್ಟು ಕಾಲ ಈ ನಮ್ಮ ವಯೋವೃದ್ಧ ಹಿರಿಯರನ್ನು ಈ ಸ್ಥಾನಕ್ಕೆ ಕಟ್ಟಿ ಹಾಕಿ ದುಡಿಸುವುದು? ಇವರ ನೊಗ ಹೊರಲು ನಾವು ಯಾರೂ ತರುಣ ಕಾರ್ಯಕರ್ತರೆಂಬವರು ಮುಂದೆ ಬರುವುದೇ ಇಲ್ಲ. ಹೊಗಳಿ ಹೊಗಳಿ ಆರ್ಕಾಟೆಯವರನ್ನೇ ಈ ಹೊನ್ನಶೂಲಕ್ಕೆ ಮತ್ತೆ ಮತ್ತೆ ಏರಿಸಿಟ್ಟು ನಮ್ಮ ಹೊಣೆ ಅವರ ಮುದಿ ಹೆಗಲಿಗೇ ಹೊತ್ತು ಹಾಕಿ ದೂರ ನಿಂತು ಬಿಡುತ್ತೇವೆ ಎಂದರು ಗೋಷ್ಠಿಯಲ್ಲಿ ಸಹ ಕಾರ್ಯದರ್ಶಿ ಶ್ರೀ ಶಿಪಾಯಿ ಗಣಪತಿ ಖಾರ್ವಿ.

ಇದೇ ರೀತಿ ಆತ್ಮವಿಮರ್ಶೆಯಲ್ಲಿ ಈ ಗೋಷ್ಠಿಯಲ್ಲಿ ಭಾಗವಹಿಸಿದ ನಾಲ್ವತ್ತೈದು-ಐವತ್ತು ಬುದ್ಧಿಜೀವಿಗಳಲ್ಲಿ ಪ•ಸ್ಪಮ ಮಂದಿ ಮನಬಿಚ್ಚಿ ಮನಮುಟ್ಟುವಂತೆ ಮಾತನಾಡಿದರು.

ಕೊಂಕಣಿಗರಾಗಿದ್ದರೂ ನೇರವಾದ ಕನ್ನಡದಲ್ಲಿ ತಮ್ಮ ಎದೆಗುದಿಯನ್ನು ತೆರೆದಿಟ್ಟರು. ಒಬ್ಬರನ್ನೊಬ್ಬರು ಆಕ್ಷೇಪಿಸಲಿಲ್ಲ. ಇತರ ಮುಂದುವರಿದ ಸಮಾಜಗಳನ್ನಾಗಲಿ, ಕನ್ನಡ ಮೀನುಗಾರರ ಪಂಗಡಗಳನ್ನಾಗಲಿ ಆಕ್ಷೇಪಿಸಲಿಲ್ಲ. ತಮ್ಮ ಸಮಾಜದ ಅಧಃಪಾತದ ಲಕ್ಷಣಗಳನ್ನು, ಕಾರಣಗಳನ್ನು ಅವರು ಸರಿಯಾಗಿಯೇ ಗುರುತಿಸಿದರು; ನಿತ್ಯ ದಾರಿದ್ರ್ಯ, ಕುಡುಕುತನ, ನಿರಕ್ಷರತೆ, ಸಾಲಗಾಕೆ ಮತ್ತು ಒಟ್ಟಿನ ಪ್ರಗತಿ ಪರಾಙ್ಮುಖಪ್ರವೃತ್ತಿ-ಮಾತನಾಡಿದವರೆಲ್ಲ ಮತ್ತೆ ಮತ್ತೆ ಸುತ್ತುಬಳಸಿ ಈ ಪಂಚಮಹಾಪಾತಕಗಳನ್ನೇ ಎತ್ತಿ ಎತ್ತಿ ಹೇಳುವವರೇ.

ಯಮುನಾ ಸಾರಂಗ ಎಸ್. ಎಸ್. ಎಲ್. ಸಿ. ಓದಿದ ಒಬ್ಬ ಕುಮಾರಿಕೆ. ಆಕೆ ಎದ್ದುನಿಂತು ಅಂದಳು: "ನನ್ನಂಥ ಹೆಣ್ಣು ಮಗಳು ಇಂಥ ಸಭೆಗೆ ಬಂದದ್ದು ಇದೇ ಮೊದಲು. ನನಗೆ ಎಲ್ಲೂ ಮುಂದೆ ಬರಲು ನಮ್ಮ ಜನ ಗಂಡಸರಿರಲಿ, ಹೆಂಗಸರಿರಲಿ ಅವಕಾಶ ಕೊಡುವದಿಲ್ಲ. ನಮ್ಮಲ್ಲಿಯ ಬುದ್ಧಿ ಜೀವಿಗಳೆನ್ನುವವರು ಮುಂದೆ ಬರುವವರಿಗೆ ಅಡ್ಡಗಾಲು ಹಾಕುತ್ತಾರೆ. ಅದಕ್ಕೇನು ಮಾಡಬೇಕು?"

ಈ ಹಿಂದುಳಿಯುವಿಕೆಗೆ ಕಾರಣ ಶಿಕ್ಷಣದ ಅಭಾವ. ಅಧ್ಯಕ್ಷರು ಮುಂದೆ ಸಮಾರೋಪ ಭಾಷಣದಲ್ಲಿ ಕೆಲವು ಮನನೀಯ ಅಂಶಗಳನ್ನು ಎತ್ತಿ ಹೇಳಿದರು. ಕುಂದಾಪುರದ ಕರಾವಳಿಯಲ್ಲಿಯೇ ಈ ಖಾರ್ವಿ ಸಮಾಜದ ಮೂರು ಬೇರೆ ಬೇರೆ ವಸತಿಗಳಿವೆ. ನಡುವಿನ ಹಳ್ಳಿಗೆ ಸುತ್ತು ಹೊಳೆ ಹರಿದಿದೆ. ಅಲ್ಲಿಯ ತಮ್ಮ ಇಪ್ಪತ್ತು ಮನೆಗಳಿಗೆ ಒಂದು ಪ್ರಾಥಮಿಕ ಶಾಲೆ ತೆರೆಯಬೇಕೆಂದು ತಾನು ಮಾಡಿದ ಶತಪ್ರಯತ್ನಗಳ ಕರ್ಮಕಥೆ ಅವರು ಹೇಳಿದರು. ಹಿಂದೆ ಬಹುಕಾಲ ಡಿಸ್ಟ್ರಿಕ್ಟ್ ಬೋರ್ಡಿನಲ್ಲಿ ಸದಸ್ಯರಾಗಿ ಅಭಿವೃದ್ಧಿ ಕಾರ್ಯಕ್ಕೆ ಪಳಗಿದವರು ಅಧ್ಯಕ್ಷ ಆರ್ಕಾಟೆ. ಆದರೆ ಇಲ್ಲಿ ಅವರು ಸೋತರು. ಶಾಲೆ ಮಂಜೂರು ಆದರೂ ತಮ್ಮ ಜನ ಪ್ರತಿ ಮನೆಗೆ ಮೂವತ್ತು ರೂಪಾಯಿ ವರ್ಗಣಿ ತೆರಲು, ಆರಂಭಕ್ಕೆ ಮುನ್ನೂರು ರೂಪಾಯಿ ಸಂಗ್ರಹಿಸಿ ಕೊಡಲು ಸಾಧ್ಯವಾಗದೇ ಹೋಯಿತು!

ನಮ್ಮ ಉತ್ತರ ಕನ್ನಡ ಜಿಲ್ಲೆಯ ಮಂಜಗುಣಿಯಿಂದ ಬಂದ ತರುಣ ಪ್ರತಿನಿಧಿ ಶ್ರೀ ಕೆ. ಎಚ್. ತಾಂಡೇಲ ಅವರದೂ ಅದೇ ದೂರು. ಮಂಜಗುಣಿಯಲ್ಲಿ ಈ ಸಮಾಜದವರ ಸಂಖ್ಯೆ ೩೦೦. ಆದರೆ ಎಸ್.ಎಸ್.ಎಲ್.ಸಿ. ದಾಟಿದವರು ಬರೇ ಇಬ್ಬರು. ಹೈಸ್ಕೂಲ್ ತನಕ ತಲುಪಿದವರು ಇಪ್ಪತ್ತು ಮಕ್ಕಳು! ಈ ಪರಿಯ ಉದಾಸೀನತೆ ಕಿತ್ತೊಗೆಯುವುದು ಹೇಗೆ?

ಅಧ್ಯಕ್ಷರು ಕಳಕಳಿಯಿಂದ ಬಿನ್ನವಿಸಿಕೊಂಡರು: "ನಿಮ್ಮಲ್ಲಿ ಮನೆಗೆ ಒಬ್ಬ ಹುಡುಗನನ್ನಾದರೂ ಶಾಲೆಗೆ ಕಳುಹಿಸಿರಿ. ಕನಿಷ್ಠ ಒಬ್ಬ ಹುಡುಗಿಯನ್ನು ಕಳುಹಿಸಿರಿ. ಹೆಣ್ಣುಮಕ್ಕಳು ಓದು ಬರಹ ಕಲಿತರೆ ಮುಂದೆ ಅವಳ ಮಕ್ಕಳಿಗೆ ಒಳ್ಳೆಯ ಸಂಸ್ಕಾರ ಒದಗುವಂತೆ ಆಗುತ್ತದೆ."

ವೈಶ್ಯ ಬ್ಯಾಂಕಿನಲ್ಲಿ ಚಾಕರಿ ಹಿಡಿದ ವಾಣಿಜ್ಯ ಪದವೀಧರರೊಬ್ಬರ ತಕರಾರು! "ಸರಕಾರಿ

ನೌಕರಿಯಲ್ಲಿದ್ದವರು ನಮ್ಮ ಸಮಾಜ ಕಾರ್ಯದಲ್ಲಿ ಭಾಗವಹಿಸಲು ಹಿಂಜರಿಯುತ್ತಾರೆ. ಜಾತೀಯ ಚಟುವಟಿಕೆಗಳಲ್ಲಿ ಸರಕಾರ ಭಾಗವಹಿಸಲು ಅವಕಾಶ ಕೊಡುವುದಿಲ್ಲ! ಆದರೆ ಪ್ರೌಢ ಶಿಕ್ಷಣ ಮದ್ಯಪಾನ ಪ್ರತಿಬಂಧಗಳಂಥ ಕೆಲಸಕ್ಕೆ ಯಾವ ಸರಕಾರಿ ಇಲಾಖೆಯವರು ಅಡ್ಡ ಬರುತ್ತಾರೆ? ತದಡಿ ಬಂದರದಿಂದ ಹೋದ ಡಿ.ಎಸ್. ಜೋಡನಕರರು ಪದವೀಧರ ಶಿಕ್ಷಕರು. ಆ ಕುರಿತ ಒಂದು ಸೂಚನೆ ಮುಂದಿಟ್ಟರು. 'ನಮ್ಮ ಹಳೆಯ ಒಕ್ಕೂಟ ಪುನಃ ಚೇತನಗೊಳಿಸಬೇಕು. ಮಕ್ಕಳನ್ ಶಾಲೆಗೆ ಕಳುಹಿಸಲು ಒಪ್ಪದಿದ್ದ ಹಾಗೂ ಸರಾಯಿ ಕುಡಿಯುವ ಮಂದಿಯ ಮೇಲೆ ಬಹಿಷ್ಕಾ ಹಾಕಬೇಕು. 'ಇದಕ್ಕೆ ಒಬ್ಬಿಬ್ಬರ ಆಕ್ಷೇಪ: "ಆ ರೀತಿ ಜಾತಿಕಟ್ಟು ಮಾಡಿದರೆ ಪೊಲೀಸರು ಪ್ರ ಬಂಧಿಸುತ್ತಾರೆ." ಆದರೆ ಇಲ್ಲಿ ಜಾತಿಕಟ್ಟು ಮುಖ್ಯವಲ್ಲ; ಅದರ ಬೆದರಿಕೆಯೇ ಮುಖ್ಯ. (ಅಂಕೋಲ ಬಳಿಯ ಚೆಂಡಿಯೇದಲ್ಲಿಯ ಈ ಸಮಾಜದವರು ಇದೇ ಉಪಾಯದಿಂದ ತಮ್ಮ ಮಕ್ಕಳನ್ನೇ ಶಾಲೆಗೆ ಕಳಿಸುವುದರಲ್ಲಿ ಯಶಸ್ವಿಯಾಗಿದ್ದಾರೆ! ಇದೇ ರೀತಿ ಬೇರೆ ಕಡೆಗೂ ಏಕಾಗಬಾರದು? ಅಲ್ಲದೆ ಪ್ರೌಢ ಶಿಕ್ಷಣ, ಮದ್ಯಪಾನ ಪ್ರತಿಬಂಧ ಮುಂತಾದವು ಸರಕಾರವೇ ಕಲ್ಯಾಣ ರಾಜ್ಯ ಕರ್ತವ್ಯಗಳಾಗಿ ಮುಂದಿಟ್ಟುಕೊಂಡ ಗುರಿಗಳು - ಅಂದಾಗ ಅವುಗಳ ಪುರಸ್ಕಾರಕ್ಕಾಗಿ ಸಾಮಾಜಿ ಒತ್ತಾಯ ತರುವ ಯಾವದೇ ವಿಧಾನವನ್ನು ಸರಕಾರ ಏಕೆ ನಿಷೇಧಿಸಬೇಕು? ಆದ್ದರಿಂದ ಸಾಮಾಜಿ ಬಹಿಷ್ಕಾರದ ಉಪಾಯವನ್ನು ಪೊಲೀಸರು ಏಕೆ ವಿರೋಧಿಸಬೇಕು?

ಮುಖ್ಯವಾಗಿ ಬೇಕಾದದ್ದು ಕಲಿತವರಲ್ಲಿ, ಕಾರ್ಯಕರ್ತರಲ್ಲಿ ಸಾಮಾಜಿಕ ಪ್ರಜ್ಞೆ. ಈ ಪ್ರಜ್ಞೆಯನ್ನು ಪ್ರೇರಿಸಬೇಕಾದದ್ದು ಬುದ್ಧಿ ಜೀವಿಗಳೆಂಬವರು. ಆದರೆ ಬುದ್ಧಿಜೀವಿಗಳೆಂದರೆ ಯಾರು ಈ ಬಗ್ಗೆಯೇ ಬಹಳಷ್ಟು ಚರ್ಚೆ ನಡೆಯಿತು. ಗೋಷ್ಠಿಯ ಒಟ್ಟಭಿಪ್ರಾಯದಲ್ಲಿ ಬುದ್ಧಿಜೀವಿಯೆಂದ ಬುದ್ಧಿ ಪ್ರಧಾನರೆಂಬಂತೆ ತೋರಿತು. ಭಾವಜೀವಿಯ ವಿರುದ್ಧ ಮಾದರಿ ಬುದ್ಧಿಜೀವಿ ಎಂಬಂ ಸಭೆಯಲ್ಲಿ ಆ ಶಬ್ದಾರ್ಥದ ವಿಶ್ಲೇಷಣೆ ನಡೆಯಿತು. ಅಂದರೆ ಬುದ್ಧಿ ಪ್ರಾಮುಖ್ಯವಾದಿಗಳೆಂಬಂ ಬುದ್ಧಿಜೀವಿಯ ಇತ್ಯರ್ಥವಾಯಿತು.

ಆದರೆ ಇದು ಸರಿ ಅಲ್ಲ, ಸಮಾಜದಲ್ಲಿ ನಾಲ್ಕು ವಿಧ ಜನವರ್ಗಗಳು: ಅವರು ಶ್ರಮ ಜೀವಿಗಳು, ಬುದ್ಧಿಜೀವಿಗಳು, ಅರ್ಥಜೀವಿಗಳು ಮತ್ತು ಪರಮಾರ್ಥಜೀವಿಗಳು. ಇವರೆಲ್ಲರು ಅಂಶತಃ ಬುದ್ಧಿಜೀವಿಗಳೇ ಆದರೂ ಎಲ್ಲ ವರ್ಗಗಳಲ್ಲಿಯೂ ಬುದ್ಧಿವಂತರಿರುವರಾದರೂ ಇ "ಬುದ್ಧಿಜೀವಿ" ಎಂಬ ಪದಕ್ಕೆ ಒಂದು ಪಾರಿಭಾಷಿಕ ಅರ್ಥವಿದೆ. ರೈತ, ಕೂಲಿಕಾರ ಕೆಲಸಗಾರರ ಸ್ನಾಯು ಬಲದಿಂದ ಶಾರೀರಿಕ ದುಡಿಮೆಯಿಂದ ಬದುಕುವವರು-ಶ್ರಮಜೀವಿಗಳು. ಇದ ವಿರುದ್ಧವಾಗಿ ಕೂರಕೂನ, ಅಧ್ಯಾಪಕ, ವಕೀಲ, ಡಾಕ್ಟರ, ಇಂಜಿನಿಯರ ಪ್ರಭೃತಿಗಳೂ ರಾಜಕೀಯ ಶಾಸಕ ವಲಯದವರೂ ಬುದ್ಧಿಯಿಂದಲೇ ಹೆಚ್ಚಾಗಿ ಕೆಲಸ ಮಾಡುವವರು-ಬುದ್ಧಿಜೀವಿಗಳು ಅದೇ ರೀತಿ ಹಣಕಾಸಿನ ವಾಣಿಜ್ಯ ವ್ಯವಹಾರದಿಂದ ಬದುಕುವವರು ಅರ್ಥಜೀವಿಗಳು. ಇವೆಲ್ಲದ ಆಚೆಗೆ ಧರ್ಮ, ಪಾಪ-ಪುಣ್ಯ, ದೇವ-ದೈವಗಳ ಮೂಲಕ ಉಪಜೀವಿಸುವವರು ಪರಮಾರ್ಥ ಜೀವಿಗಳು - ವೈದಿಕರು, ಬ್ರಾಹ್ಮಣರು, ಪುರೋಹಿತರು, ಪಾದರಿ, ಕಾಜಿ, ಮುಲ್ಲಾ ಪ್ರಭೃತಿಗಳ

ಪರಾಮಾರ್ಥಜೀವಿಗಳು. ಈ ಪ್ರಪಂಚದ ವ್ಯಾವಹಾರಿಕ "ಅರ್ಥ" ಗಳಿಗೆ ಮೀರಿದ "ಆಚೆ"ಯ ಹಿತಾಸಕ್ತಿಗಳ ಪುರಸ್ಕರ್ತರು.

ಸಾಮಾನ್ಯವಾಗಿ ನಮ್ಮ ಬುದ್ಧಿಜೀವಿಗಳೂ ಪರಮಾರ್ಥಜೀವಿಗಳೂ ಅರ್ಥಜೀವಿ ವರ್ಗವನ್ನೇ ಅವಲಂಬಿಸಿ ಉಪಜೀವಿಸುವವರು. ಇದು ನಮ್ಮಲ್ಲಿಯೇ ಅಲ್ಲ, ಪ್ರಪಂಚದ ಎಲ್ಲೆಡೆಯಲ್ಲಿಯೂ ಇದೇ ರೀತಿ. ಹೀಗೆ ಸಾಮಾಜಿಕ ಜೀವನದಲ್ಲಿ ಬುದ್ಧಿಜೀವಿಗಳು ಶಾರೀರಿಕ ಶ್ರಮಕ್ಕಿಂತ ಹೆಚ್ಚಾಗಿ ಬೌದ್ಧಿಕ ಕೆಲಸದಿಂದಲೇ ಬದುಕುವವರು. ಇದಕ್ಕೆ ಪ್ರತಿಯಾಗಿ ಈಚೆಗೆ ನಾವು "ಬುದ್ಧಿಜೀವಿ" ಪದವನ್ನು ಕವಿ-ಕಲಾವಿದ-ಅನುಭಾವಿಗಳಂಥ "ಭಾವಜೀವ"ಗಳಿಗೆ ಪ್ರತಿಯಾಗಿ ಭಾವನೆಗಿಂತ ಬುದ್ಧಿಗೆ, ವೈಚಾರಿಕತೆಗೆ, ತರ್ಕಶುದ್ಧಿಗೆ ಪ್ರಾಧ್ಯಾನ ಕೊಡುವ ಮಂದಿಯನ್ನು ವರ್ಣಿಸಲು ಬಳಸುವುದುಂಟು.

ಖಾರ್ವಿಗಳಂಥ ಹಿಂದುಳಿದ ಸಮಾಜದಲ್ಲಿ ಬುದ್ಧಿಜೀವಿಗಳ ಪಾತ್ರವೇನೆಂಬುದನ್ನು ಈ ವಿಶೇಷಾರ್ಥದಲ್ಲಿಯೇ ಅಂದಿನ ಸಭೆಯಲ್ಲಿ ಬಹಳಷ್ಟು ಚರ್ಚೆ ವ್ಯಾಪಿಸಿತ್ತು. ವಿದ್ಯಾಂವತರೇ ಬುದ್ಧಿಜೀವಿಗಳಲ್ಲ. ಗುರುಹಿರಿಯರನ್ನು ಮನ್ನಿಸುವವರು, ತಮ್ಮ ಸಮಾಜದ ಹಿತೈಷಿಗಳು - ಇವರೇ ನಿಜವಾದ ಬುದ್ಧಿ ಜೀವಿಗಳು-ಎಂಬ ವಿಚಾರ ಸರಣಿಯು ಆ ಚರ್ಚೆಯಲ್ಲಿ ಮತ್ತೆ ಮತ್ತೆ ವ್ಯಕ್ತವಾಯಿತು. ಈ ವ್ಯಾಖ್ಯೆ ಶುದ್ಧವಿದ್ದಿಲ್ಲ. ಆದರೆ ಈ ವ್ಯಾಖ್ಯಾನ ಅಂದಿನ ಆ ಬಡ ಜನರ ನೋವು ಕಾವುಗಳ ಕಳವಳಕ್ಕೆ ನಾಲಿಗೆ ನೀಡಿತ್ತು. ಅವರಲ್ಲಿ ಕಲಿತವರೆಂಬವರು ಬ್ಯಾಂಕು, ಪಿ.ಡಬ್ಲ್ಯೂ.ಡಿ. ಇತ್ಯಾದಿ ಸರಕಾರಿ ಇಲಾಗೆಳಲ್ಲಿ ಚಾಕರಿ ಹಿಡಿದವರು ಸಮಾಜದ ಯಾವ ಪ್ರಯೋಜನಕ್ಕೂ ಸಲ್ಲದೆ ಸ್ವಪ್ರತಿಷ್ಠೆಯಲ್ಲಿ ಏನೋ ಒಂದು ಆಢ್ಯತೆಯಿಂದ ದೂರಕ್ಕೆ ಮೇಲಕ್ಕೆ ಉಳಿದು ಬಿಡುವರು.

ಇದಕ್ಕೇನು ಉಪಾಯ? ಒಂಥರ್ಥದಲ್ಲಿ ಇದು ಅನಿವಾರ್ಯ. ವಿಶ್ವಾಮಿತ್ರನೂ ಶಂಬೂಕನೂ ಬ್ರಹ್ಮವರ್ಚಸ್ವಿಯಾಗಬೇಕೆಂದು ಹೆಣಗಿದಂತೆ ಇಂದಿನ ನಿಮ್ನ ವರ್ಗದವರು ಆಧುನಿಕ ಶಿಕ್ಷಣ ಪಡೆದು ನವನಾಗರಿಕತೆಯ ಬ್ರಾಹ್ಮಣಿಕೆ ಗಳಿಸಲು ಒತ್ತಾಸೆ ಪಡುವುದು ಅಪರಿಹಾರ್ಯ. ಬಹುಸಂಖ್ಯ ಹಿಂದುಳಿದವರಲ್ಲಿ ತೀರ ಅಲ್ಪಸಂಖ್ಯ ವಿದ್ಯಾವಂತರು ಕಂಡುಬಂದಲ್ಲೆಲ್ಲ ಈ ವೈಷಮ್ಯ, ಅಂತಸ್ತಿನ ತಾರತಮ್ಯ ತಪ್ಪಿದ್ದೇ ಅಲ್ಲ. ನಮ್ಮ ಜಿಲ್ಲೆಯ ಹಾಲಕ್ಕಿ ಒಕ್ಕಲಲ್ಲಿಯೂ ಕೆಲವೇ ಪದವೀಧರರು ತಮ್ಮ ಸಮಾಜದಿಂದ ಸಿಡಿದು ನಿಂತಂತೆ ವರ್ತಿಸುತ್ತಾರೆ. ಮುಕ್ರಿಗಳಲ್ಲಿಯೂ ಹಾಗೆಯೇ. ಈ ವೈಪರೀತ್ಯ ಹೋಗಬೇಕಾದರೆ ಕ್ರಮೇಣ ಆದಷ್ಟು ಬೇಗ ಉಳಿದ ಎಲ್ಲ ಹಿಂದುಳಿದ ಮಕ್ಕಳೂ ಹೀಗೆಯೇ ವಿದ್ಯಾವಂತರಾಗಬೇಕು. ಹಳ್ಳಿಗಳ ನಗರೀಕರಣದಂತೆ ಹಳೆ ಸಮಾಜಗಳ ಆಧುನೀಕರಣದಂತೆ ಇದೂ ಒಂದು ಸಂಕ್ರಮಣಾವಸ್ಥೆಯ ಪರಿಪಾಕ, ಆಧುನಿಕ ಶಿಕ್ಷಣದಿಂದ ಬರುವ ಪ್ರತ್ಯೇಕತೆಯ ನಿವಾರಣೆಗೆ ಇನ್ನೂ ಹೆಚ್ಚಿನ, ಇನ್ನೂ ವ್ಯಾಪಕವಾದ ಆಧುನಿಕ ಶಿಕ್ಷಣದ ಪ್ರಸಾರ ಒಂದೇ ಪರಿಹಾರದ ಉಪಾಯ. ಇದಕ್ಕೆ ಬೇರೆ ದಾರಿ ಇಲ್ಲ. ಕಲಿತವರೇ ಹೆಚ್ಚಾದ

ಸಂಖ್ಯೆಯಲ್ಲಿ ಇದ್ದರೆ ಅವರಲ್ಲಿ ಯಾರು ಹೆಚ್ಚು, ಯಾರು ಕಡಿಮೆ?

ಇನ್ನೂ ಒಂದು ಕುತ್ತು ಈ ಬುದ್ಧಿಜೀವಸರಲ್ಲಿ ಇದೆ. ಹೀಗೆ ಕಲಿತು ವಿದ್ಯಾವಂತರಾದವರೆಲ್ಲ ತಮ್ಮ ಕುಲಕಸಬಿಗೆ ಪೂರ್ತಿ ಹೊರತಾಗಿ ಬಿಳಿ ಅಂಗಿಯ ಕಚೇರಿ ಚಾಕರಿಗೆ ಹೋಗಿ ಬಿಡುತ್ತಾರೆ. ಕಲಿತವರು ಮಾಧ್ಯಮಿಕ ಶಿಕ್ಷಣ ಮುಗಿಸಿದವರಾದರೂ ತಿರುಗಿ ತಮ್ಮ ಮನೆತನದ ಮೀನುಗಾರಿಕೆಯ ಕೆಲಸಕ್ಕೆ ನಿಂತರೆ ಅದೇ ಹೊರೆಯನ್ನು ಆಧುನಿಕ ಯಂತ್ರ ತಂತ್ರಗಳಿಂದ ಸಂಸ್ಕರಣಗೊಳಿಸಿ ಮುಂದುವರಿಸಿದರೆ ಅದರಿಂದಲೂ ಈ ವ್ಯವಸಾಯದ ಹಿಂದುಳಿವು ಹಿಂಜರಿಕೆ ದೂರವಾಗಿ ಅದರ ಒಟ್ಟು ಪಾತಳಿಯೇ ಎತ್ತರಿಸಿದಂತೆ ಆಗುವುದು. ಏಕೆಂದರೆ ಮೀನುಗಾರಿಕೆಯನ್ನು ಆಧುನಿಕ ಸಲಕರಣೆಗಳಿಂದ ಸಜ್ಜುಗೊಳಿಸಿ ಸಾಗಿಸ ಹತ್ತಿದಾಗ ಅದೊಂದು ಆಧುನಿಕ ಉದ್ದಿಮೆ ಆಗಿ ಬಿಡುತ್ತದೆ. ಅದರ ಹಿತ ಸಂಬಂಧಗಳು ಇನ್ನಿತರ ಇಂಥ ಉದ್ದಿಮೆಗಳ ಸರಿಸಾಟಿಯಲ್ಲಿ ಹೆಚ್ಚು ಸಂಕೀರ್ಣವಾಗಿ, ಹೆಚ್ಚು ವಿದ್ಯಾವಂತಿಕೆಯನ್ನು ಅಪೇಕ್ಷಿಸಿ ಆ ಪ್ರಮಾಣದಲ್ಲಿ ಹೆಚ್ಚು ಪ್ರತಿಷ್ಠಿತವಾಗಲು ದಾರಿ ತೆರೆಯುತ್ತದೆ. ಇಂಥ ಸುಧಾರಣೆಯೊಂದಿಗೆ ಈ ಸಮಾಜದ ಪರಂಪರಾಗತ ಕಂದಾಚಾರ, ಕುಲಕಟ್ಟಳೆಗಳ ಸಂಕುಚಿತ ಮತ್ತು ಪರಿಮಿತಿ ಪ್ರಜ್ಞಾಪ್ರಪಂಚವು ಭಂಗವಾಗಿ ಅದು ಇತರ ಆಧುನಿಕ ಸಮಾಜಗಳ ಸಂಸ್ಕಾರಗಳಿಗೆ ಮೈ ಕೊಟ್ಟು ಕ್ರಮೇಣ ಹೊಸ ಚರ್ಯೆ ಪಳಗಿಸಿಕೊಳ್ಳುತ್ತದೆ.

ಆದ್ದರಿಂದ ಖಾರ್ವಿ ಸಮಾಜದ ಈ ಸಮಸ್ಯೆಗಳು ಇವರಿಗೇ ವಿಶಿಷ್ಟವಾದವುಗಳಲ್ಲ. ಹಿಂದುಳಿದ ಕುಲಕಸುಬಿನ ಎಲ್ಲ ಗ್ರಾಮೀಣ ಸಮಾಜಗಳಿಗೂ ಇದೇ "ಭೂತ" ಬಾಧೆ ಕಾಡಿದೆ. ಇವೆಲ್ಲವಕ್ಕೆ ಪರಿಹಾರದ ದಾರಿಯು ಒಂದೇ - ಶಿಕ್ಷಣ ಮತ್ತು ಜೀವನ ಸಂಸ್ಕಾರದ ಸರ್ವಾಂಗೀಣ ಆಧುನೀಕರಣ. ಇದು ಕಷ್ಟದ ಹಾದಿ. ತುಸು ದೂರದ ಹಾದಿ. ಆದರೂ ಇದೊಂದೇ ನೇರ ದಾರಿ.

ಈ ಮೀನುಗಾರರ ಮಕ್ಕಳು ಶಾಲೆಗೆ ಹೋಗದಿರಲು ಇನ್ನೂ ಒಂದು ಕಾರಣ, ಇದು ಈ ಪ್ರಾಚೀನ ವ್ಯವಸಾಯದ ಬದುಕಿನೊಂದಿಗೇ ಅಂಟಿಕೊಂಡು ಬಂದದ್ದು. ಮೀನುಗಾರಿಕೆ ಒಂದು ನೆಲದಿಂದ, ಸಮಾಜದಿಂದ ದೂರ ಹೆಗ್ಗಡಲಲ್ಲಿ ಹಗಲಿರುಳೂ ದುಡಿಯುವ ಸಾಹಸದ ದುಡಿಮೆ. ಅಷ್ಟೇ ಏಕಾಂತ ಜೀವಿಯಾದ ಉದ್ದಿಮೆ. ನೆರೆ ತೆರೆ, ಮಸ್ಸೂನ್ ಬಿರುಗಾಳಿ, ಕಡಲುಬ್ಬರಗಳಲ್ಲಿಯೇ ಈ ಬಡ ಜೀವಿಗಳು ಪ್ರಾಣವನ್ನೇ ಪಣಕ್ಕೆ ಹಚ್ಚಿ ತಮ್ಮ ವ್ಯವಸಾಯ ನಡೆಯಿಸುತ್ತಾರೆ. ಇದರಿಂದ ಈ ಜನರ ಮನೋಧರ್ಮ ಪ್ರತ್ಯೇಕತೆಗೆ ತನ್ನೊಟ್ಟಿಗೆ ತಾನು ಉಳಿದ ಬಿಡುವ ಎಗ್ಗತನಕ್ಕೆ ಇಂಬು ಕೊಡುತ್ತದೆ.

ಇದಕ್ಕೂ ಮಿಗಿಲಾಗಿ ಈ ವ್ಯವಸಾಯದಲ್ಲಿ ಎಷ್ಟೇ ಪೈಪೋಟಿ ಇದ್ದರೂ ಗಳಿಕೆಯ ಆಸೆಗೆ ಇತಿಮಿತಿ ಇಲ್ಲ. ಗದ್ದೆ ಗೈಮೆಗೆ ಒಂದು ಮಿತಿ ಇದೆ. ಅಂಗಡಿಕಾರಿಕೆಗೂ ಹಾಗೆಯೇ. ಕಡಲಲ್ಲಿ ಈ ಮಿತಿ, ಈ "ಸೀಲಿಂಗು" ಇಲ್ಲ. ಕಡಲಲ್ಲಿ ಯಾರಿಗೂ ಯಾವಾಗಲೂ ಎಷ್ಟೇ ಮೀನು ಸಿಗುವ

ಸಾಧ್ಯತೆ ಅಥವಾ ಆಸೆ ಇದ್ದೇ ಇದೆ. ಅಂದರೆ ಅಲ್ಲಿ ದುಡಿಮೆ ಗಳಿಕೆಗಳಿಗೆ ಎಷ್ಟೇ ಕೈಗಳೂ ಸಾಲವು. ಇದ್ದಷ್ಟೂ ಬಂದಷ್ಟೂ ಆಳು ಈ ಹೋರೆಗೆ ಬೇಕು. ಅಂದಾಗ ಮನೆಯ ಮಕ್ಕಳನ್ನು ಶಾಲೆಗೆ ಕಳುಹಿಸಿ ತಮ್ಮ ಗಳಿಕೆಯ ಸಾಧನಗಳನ್ನೇ ಕಳೆದು ಕೊಳ್ಳುವ ಮನಸ್ಸು ಯಾವ ಮೀನುಗಾರ ಮಾಡಬಲ್ಲ? ಈ ಜನಕ್ಕೆ ಕಡಲಿನ ಈ ಕಸಬಿನ ಸೆಳೆತದ ಮುಂದೆ ಶಾಲೆ - ಕಲಿಕೆ ಏನೂ ಅಲ್ಲ. ಸಾಮಾನ್ಯ ಗದ್ದೆಗೆಲಸದ ಒಕ್ಕಲಿಗೂ ಅದು ಕಡಿಮೆ.

ಈ "ದರ್ಯಾ ದೌಲತ್ತಿ"ನ ಧನಲೋಭಿಗಳಿಗಂತೂ ಅದರ ಮೋಹ ಇನ್ನೂ ಕಡಿಮೆ ಇದ್ದರೆ ಅದು ಸ್ವಾಭಾವಿಕವೇ ಸರಿ. ಆದರೂ ಮನೆಗೊಬ್ಬನಾದರೂ ಶಾಲೆಗೆ ಹೋಗುವಂತೆ ಸಮಾಜದ ಹೊಣೆಗಾರರೂ ಹೊಂತಗಾರರೂ ಕಟ್ಟುನಿಟ್ಟು ಮಾಡಬೇಕು. ಆಧುನಿಕ ಉದ್ದಿಮೆಯಾಗಿ ಮೀನುಗಾರಿಕೆಯನ್ನು ಮಾರ್ಪಡಿಸುವಾಗ ಇಂಥ ವಿದ್ಯಾವಂತರ ಅಗತ್ಯ ಅಷ್ಟಿಷ್ಟಲ್ಲ ಎಂಬ ಮನವರಿಕೆ ಅವರಿಗೆ ಮಾಡಿಕೊಡಬೇಕು.

ಈ ಜನಕ್ಕೆ ಒಟ್ಟಾರೆ ಸ್ವಹೀನತೆಯ ನ್ಯೂನಗಂಡ (Inferiority Complex) ತೀರ ತೀವ್ರ. ಅದು ಮೊದಲು ಉಚ್ಚಾಟನೆ ಆಗಬೇಕು. ಸಮಾಜದಲ್ಲಿ ವಿಶೇಷತಃ ಹೊಸ ಪೀಳಿಗೆಯಲ್ಲಿ ಆತ್ಮವಿಶ್ವಾಸ ಕುದುರಿಸಬೇಕು. ಇದಕ್ಕಾಗಿ ಅವರಲ್ಲಿ ಐತಿಹಾಸಿಕ ಪ್ರಜ್ಞೆ ಮೂಡಿ ಬಲಿತು ಬರಬೇಕು. ಈ ದಿಶೆಯಲ್ಲಿ ಗೋಮಾಂತಕ - ಸಾವಂತವಾಡಿ ಕಡೆಯ ಕೊಂಕಣಿ ಮೀನುಗಾರ('ಗಾಬಿತ')ರು ತುಂಬ ಕೆಲಸ ಮಾಡಿದ್ದಾರೆ. ಗಾಬಿತ ಸಮಾಜದ ಕುಲಪರಂಪರೆ ಪತ್ತೆಹಚ್ಚೆ ಅವರಲ್ಲಿಯ ವಿದ್ಯಾವಂತರು ತಮ್ಮ ಸಮಾಜದ ಇತಿಹಾಸವನ್ನೇ ಸಂಗ್ರಹಿಸಿ, ಸಂಶೋಧಿಸಿ ಪ್ರಕಟಿಸಿದ್ದಾರೆ. ಅಂಥಕಾರ್ಯ ನಮ್ಮ ಕನ್ನಡ ಕರಾವಳಿಯ ಈ ಖಾರ್ವಿ ಸಮಾಜದ ವಿದ್ಯಾವಂತರೂ ಕೈಗೊಳ್ಳಬೇಕು.

ಒಂದು ಸಮಾಜಕ್ಕೆ, ಇತಿಹಾಸದ ಅರಿವು ಶಾಪವೂ ಆಗಬಹುದು, ವರಪ್ರದಾನವೂ ಆಗಬಹುದು. ತಾವು ಯಾರು, ತಮ್ಮ ಹಿರಿಮೆ ಏನು ಎಂಬುದರ ಪ್ರಜ್ಞೆ ಆತ್ಮಾಭಿಮಾನದ ಬೆನ್ನುಹುರಿಯನ್ನು ಬಲಪಡಿಸಲು ಚುಚ್ಚುಮದ್ದಿನಂತೆ ಕೆಲಸ ಮಾಡಬಲ್ಲದು. ತಮ್ಮ ಹಳೆಯ ಮನೆತನಗಳ 'ಮೂಲ ಪುರುಷ', ಕುಲದೇವತೆ ವಿವಾಹಾದಿಗಳಲ್ಲಿಯ ಕುಲಾಚಾರ ಇತ್ಯಾದಿಗಳ ತುಲನಾತ್ಮಕ ಪರಿಶೀಲನೆಯಿಂದ ಇವೆಲ್ಲ ಕೊಂಕಣಿ ಮೀನುಗಾರರ ಬುನಾದಿಯ ಬುಡಕಟ್ಟನ್ನು ಗುರುತು ಹಾಕಲು ಸಾಧ್ಯ. ಈ ಕಾರ್ಯದಿಂದಲೇ ಗಾಬಿತರ ಸಮಾಜದವರು ತಮ್ಮ ವಂಶವನ್ನು ಮರಾಠಾ ಕ್ಷತ್ರಿಯರ ಮೂಲಕ್ಕೆ ಮುಟ್ಟಿಸಿದ್ದಾರೆ - ಸಾಧಾರವಾಗಿ.

ಖಾರ್ವಿಗಳಲ್ಲಿ ಇದು ಸ್ವಂಯಪ್ರಜ್ಞೆ ಮೂಡಿದೆ. ಕಲಿತ ತರುಣರೆಲ್ಲರೂ ತಮ್ಮ ಅಡ್ಡ ಹೆಸರು ಬರೇ 'ಖಾರ್ವಿ' ಎಂದೇ ಬರೆಯುತ್ತಾರೆ. (ಆದರೆ ಐತಿಹಾಸಿಕ. ದೃಷ್ಟಿಯಿಂದ ಇದೊಂದು ತೊಡಕೂ ಆಗಬಹುದು!) ಹಾವನೂರ ಸಮಿತಿ ಈ ಜನಕ್ಕೆ ತುಂಬ ಅನ್ಯಾಯ ಬಗೆದಿದೆ-ಒಟ್ಟಾಗಿ "ಗಂಗಾಮತಸ್ಥ"ರ ಯಾದಿಯಲ್ಲಿ ಸೇರಿಸಿ. ಹಾವನೂರ ಸಮಿತಿ ದಕ್ಷಿಣ ಕನ್ನಡಕ್ಕೆ ಬಂದಾಗ ಈ ಗಂಗೊಳ್ಳಿ ಖಾರ್ವಿ ಸಮಾಜದ ಮುಂದಾಳುಗಳು ಅವರನ್ನು ತಮ್ಮ ವಸತಿಗಳಿಗೆಲ್ಲ ಒಯ್ದು ಜನರ

ಸ್ಥಿತಿಗತಿ ಕಣ್ಣಾರೆ ಕಾಣಿಸಿದರು. ಅದನ್ನು ಕಂಡು ಶ್ರೀ ಹಾವನೂರರೇ ಮರುಗಿದರು, "ನಮ್ಮ ಕಡೆಯ ಹರಿಜನರಿಗಿಂತ ನಿಮ್ಮ ಮಂದಿಯ ಸ್ಥಿತಿ ನಿಕೃಷ್ಟವಾಗಿದೆ!" ಎಂದು ಉದ್ಗಾರವನ್ನು ತೆಗೆದರು. ಸಮಿತಿಯ ಸಂಚಾರ, ಸಂದರ್ಶನ ಸರಬರಾಜುಗಳಿಗಾಗಿ ಸಮಾಜದವರು 500-600 ರೂಪಾಯಿ ವೆಚ್ಚ ಮಾಡಿದರು, ಮನವಿ ಅರ್ಪಿಸಿದರು. ಮಾತ್ರವಲ್ಲ, ಬೆಂಗಳೂರಿಗೆ ಹೋಗಿ ಅಲ್ಲಿಯ ಎಲ್ಲ ಮಂತ್ರಿಗಳಿಗೂ ಎರಡೂ ಸದನಗಳ ಶಾಸಕರಿಗೂ ತಮ್ಮ ಮನವಿ ಕೊಟ್ಟು ಕೂಗು ಕೇಳಿಸಿದರು. ಆದರೂ ಇವರ ಹಿತಸಾಧನೆಗೆ ಯಾವ ವಿಶೇಷ ಪ್ರಯೋಜನವೂ ಆಗಲಿಲ್ಲ. ಈ ಜನರನ್ನು ಬರೇ ಹಿಂದುಳಿದ ಸಮಾಜವೆಂದಲ್ಲ ಪರಿಶಿಷ್ಟ ಜಾತಿ ಎಂದೇ ಪರಿಗಣಿಸಬೇಕು. ಅಂದಾಗಲೇ ಈ ಖಾರ್ವಿ ಜನರ ಅಭಿವೃದ್ಧಿ ಸುಧಾರಣೆ ಸಾಧ್ಯ. ಇಲ್ಲವಾದರೆ ಮೀನುಗಾರಿಕೆಗೆಂದು ಸರಕಾರ ಒದಗಿಸುವ ಸಕಲ ಸೌಕರ್ಯ ಸೌಲಭ್ಯಗಳೂ ಬಹುಸಂಖ್ಯರೂ ಬಲವಂತರೂ ಆದ ಇತರ ಮೀನುಗಾರರಿಗೇ ಅನುಕೂಲವಾಗಿ ಬಿಡುತ್ತವೆ. ಅಲ್ಪಸಂಖ್ಯ ಕೊಂಕಣಿ ಮೀನುಗಾರರ ಕಣ್ಣೀರ ಕೋಡಿ ಹರಿದು ಕಡಲ ಉಪ್ಪನ್ನೇ ಹೆಚ್ಚಿಸುವಂತೆ ಆಗುತ್ತದೆ.

ಹೀಗಿದೆ ಈ ಖಾರ್ವಿಗಳ ಹಿಂದುಳಿವಿನ ದಾರುಣ ಚಿತ್ರ. ಜಡತನ ಬಡತನ ಅದನ್ನು ಮರೆಯಲು ಕುಡುಕತನ, ಅದರಿಂದ ಇನ್ನಷ್ಟು ದುರ್ದಶೆ. ಈ ವಿಷಚಕ್ರದ ವ್ಯೂಹದಿಂದ ಇವರನ್ನು ಪಾರು ಮಾಡುವ ಅಭಿಮನ್ಯುಗಳಾಗಿ ಅವರಲ್ಲಿಯ ಬುದ್ಧಿಜೀವಿ ನವಯುವಕರು ಧುರವೀಳ್ಯ ಹಿಡಿದು ಮುಂದೆ ಬರಬೇಕು. ಮಹಾಭಾರತದ ಅಭಿಮನ್ಯು ಈ ವ್ಯೂಹವನ್ನು ಹೊಕ್ಕು ಹೊರ ಬೀಳದಾದ. ಆದರೆ ಈ ನಮ್ಮ ಅಭಿಮನ್ಯುಗಳು ಈ ವ್ಯೂಹದಲ್ಲಿಯೇ ಹುಟ್ಟಿ ಬೆಳೆದವರು, ಮನಸ್ಸು ಮಾಡಿದರೆ, ಸಂಘಟಿತ ಪ್ರಯತ್ನ ಮಾಡಿದರೆ ಅದನ್ನು ಒಡೆದು ಹೊರ ಬರಬಲ್ಲರು.

●

(ಉದಯವಾಣಿ ೧೯೭೭)

# ಕುಮಾರವ್ಯಾಸ ಮತ್ತು ಭಗವದ್ಗೀತೆ

ಭಗವದ್ಗೀತೆ ಸಂದೇಶವೇನು? ಇದೆಂಥ ಪ್ರಶ್ನೆ! ಆ ಸಂದೇಶ 'ಕರ್ಮಯೋಗ'-'ಅನಾಸಕ್ತಿಯೋಗ'-ಫಲಾಶಾ ರಹಿತವಾಗಿ ಕರ್ಮವನ್ನು ಮಾಡುತ್ತಿರಬೇಕೆಂಬ ಉಪದೇಶ-ಎಂದು ಯಾರೂ ಹೇಳಬಹುದು - ಮರು ವಿಚಾರವಿಲ್ಲದೇ.

ಆದರೆ ಮರು ವಿಚಾರ ಮಾಡಿಸಿದಾಗ? ಆಗ ಹೊಳೆಯುವುದೇನು? ಭಗವದ್ಗೀತೆಯ ಆಶಯಕ್ಕೆ ಮೂರು ಮುಖ-ಇಲ್ಲವೇ ಮೂರು ಪಾತಳಿಗಳು. ಶ್ರೀಕೃಷ್ಣ ಅರ್ಜುನನಿಗೆ ನೀಡಿದ ನೇರವಾದ ಆದೇಶ. ಅದರ ಸಮರ್ಥನೆಗೆ ಆತ ಹೂಡಿದ ದಾರ್ಶನಿಕ ತತ್ವಾರ್ಥ ಸಮನ್ವಯದ ಉಪದೇಶ ಮತ್ತು ಅಂದಿನಿಂದ ಇಂದಿನವರೆಗೂ ಲೋಕದಲ್ಲಿ ಪ್ರಭಾವಿಯಾಗಿ ವಿಜೃಂಭಿಸಿ ನಿಂತಿರುವ ಭಗವದ್ಗೀತೆಯ ಸಂದೇಶ, ಅಂದರೆ ಶ್ರೀಕೃಷ್ಣನ ಆದೇಶ - ಕರ್ಮಯೋಗ. ಆದರೆ ಲೋಕಮಾನ್ಯರು ಹೇಳಿದ 'ಗೀತಾ ರಹಸ್ಯ', ಅದರ ಬೆನ್ನಿಗೆ ಬಲವಾಗಿ ನಿಂತ ಯೋಗೀಶ್ವರನ ಉಪದೇಶ ಸರ್ವೋಪನಿಷದಗಳ ಸಾರಸಮನ್ವಯವಾದ 'ದುಗ್ಧಾಮೃತ'-ಹಸಿವಾದ ಪಾರ್ಥನಿಗೆ ಆ ಉಪನಿಷತ್ - ಗೋವುಗಳನ್ನು ಹಿಂಡಿ ಆ ಗೋಪಾಲನಂದನನು ನೀಡಿದ ಹೊಸದರ್ಶನ. ಅದುವೆ ಅರವಿಂದರ 'ಪೂರ್ಣಯೋಗ'. ಆದರೆ ಗೀತೆಯಲ್ಲಿ ಆ ಭಗವಂತನು ಘಂಟಾಘೋಷವಾಗಿ ಸಾರಿದ್ದು ಶತಮಾನಗಳಿಂದಲೂ ಲಕ್ಷಾಂತರ ಜೀವಿಗಳಿಗೆ ಆಶೆಯನ್ನು-ಆನಂದವನ್ನು, ಬಾಳಿಗೊಂದು ನಂಬಿಕೆಯ ನೆಲೆ-ಬೆಲೆಯನ್ನು ತುಂಬುತ್ತಾ ಬಂದ - ಅನನ್ಯ 'ಪ್ರಚೋದನೆಯ' ಸಂದೇಶ-ಭಕ್ತಿಯೋಗ, ಭಕ್ತಿಮಾರ್ಗ, ಅದುವೆ ಜ್ಞಾನೇಶ್ವರರಿಂದ ಹಿಡಿದು ಅರ್ವಾಚೀನ ದಾಸರವರೆಗೂ ಸಾಧು-ಸಂತ - ಸಾಧಕ-ಸದ್ಗುರುಗಳೆಲ್ಲರೂ ಭಾರತದ ಒಳಗೂ ಹೊರಗೂ ಜೀವಂತ ಪ್ರಭಾವದ ಅಖಂಡ ಪ್ರವಾಹವಾಗಿ ಪ್ರಸಾರ ಮಾಡುತ್ತ ಬಂದ ಅನಿವಾರ್ಯ ದೀಪಿಕೆ.

ಗೀತೆಯಲ್ಲಿ ಪ್ರಣೀತವಾದ ವಿಭೂತಿವಾದ ಇದೇ ಭಕ್ತಿ ಯೋಗದ ಅಲಂಬನ. ಅಲ್ಲಿ ಪೋಷಿತವಾದ ಪ್ರಧಾನ ತಥ್ಯ ಕರ್ಮಯೋಗವೂ ಇದೇ ಭಕ್ತಿಯಲ್ಲಿ ಮುಗಿಯುತ್ತದೆ. ಫಲಾಶಾರಹಿತವಾಗಿ ಕರ್ಮವನ್ನು ಆಚರಿಸಲು ಒಂದು ಬಲವಾದ ಸುಲಭವಾದ ಸಾಧನವೆಂದರೆ ಆ ಕರ್ಮವನ್ನೆಲ್ಲ ಭಗವಂತನಿಗೆ ಅರ್ಪಿಸುವ ಭಾವನೆಯಿಂದ ಮಾಡುವುದು. ಈ 'ಶ್ರೀಕೃಷ್ಣಾರ್ಪಣ' ಭಾವನೆ, ಈ ಅನನ್ಯ ಶರಣಾಗತಿಯ 'ಪ್ರವೃತ್ತಿ'ಯ ಭಾವ - ಇದೇ ಭಗವದ್ಗೀತೆಯ ತಿರುಳು. ಅದೊಂದೇ ಸಂಸಾರದಲ್ಲಿ ತೊಳಲಿ - ಬಳಲಿ - ಅಳಲಿಗೆ ಬಲಿಯಾದ ಆರ್ತ ಜೀವಿಗಳಿಗೆಲ್ಲ ಮಹದಾಧಾರ. "ಎಲ್ಲ ಧರ್ಮಗಳನ್ನು ಬಿಟ್ಟು ನನಗೊಬ್ಬನಿಗೇ ಶರಣು ಬಾ. ನಾನು ನಿನ್ನನ್ನು ಎಲ್ಲ ಪಾಪಗಳಿಂದ ವಿಮೋಚನೆ ಮಾಡುತ್ತೇನೆ. ಆ ಬಗೆಗೆ ಶೋಕ ಮಾಡಬೇಡ. ನನ್ನ ಭಕ್ತನು ಎಂದೂ ನಾಶ ಹೊಂದುವುದಿಲ್ಲ!" ಎಂಬ ಈ ಆಶ್ವಾಸನೆಯೊಂದೇ ಸಾವಿರಾರು ವರ್ಷಗಳಿಂದಲೂ ಸಾವಿರದ ಭರವಸೆಯಾಗಿ ನೊಂದ ಹೃದಯಗಳಲ್ಲಿ ಅಶೋಕ ಶಿಲಾಶಾಸನದಂತೆ ಅಕ್ಷಯವಾಗಿ ಕೊರೆದುನಿಂತಿದೆ. ಮೃತ್ಯುಸಂಸಾರ ಬಂಧನದಿಂದ ತಾನೇ ಆ ಜೀವಿಗಳಿಗೆ 'ಸಮುದ್ಧರ್ತ' ಅವರ ಯೋಗಕ್ಷೇಮ ತಾನೇ ಹೊರುತ್ತೇನೆ. ಆದ್ದರಿಂದ ತನ್ನಲ್ಲಿಯೇ ಮನಸ್ಸಿಟ್ಟು ತನ್ನದೇ ಭಕ್ತನಾಗಿ ತನ್ನನ್ನೇ ಯಾಜಿಸಿ ತನ್ನನ್ನೇ ನಮಸ್ಕರಿಸು ಎಂದು ಆ ಭಗವಂತನ ವಾಣಿಯು ಅಂದು ಕುರುಕ್ಷೇತ್ರದಲ್ಲಿ

ಪಾಂಚಜನ್ಯದಂತೆ ಮೊಳಗಿದ್ದು ಇಂದಿಗೂ ಎಲ್ಲ ಧರ್ಮಕ್ಷೇತ್ರದಲ್ಲಿ ಅದು ಗುಡಿ ಗುಂಡಾರಗಳಲ್ಲಿ, ಉತ್ಸವ, ಆರಾಧನೆಗಳಲ್ಲಿ, ಹಬ್ಬ ಹರಿದಿನ ಹರಿಕಥೆಗಳಲ್ಲಿ, ಸಾಧು ಸತ್ಪುರುಷರ 'ಸತ್ಸಂಗ' ಭಜನೆಗಳಲ್ಲಿ ಪ್ರತಿಧ್ವನಿಗೊಳ್ಳುತ್ತಲೇ ಬಂದಿದೆ.

ಹೀಗೆ ಶ್ರೀಕೃಷ್ಣನು ಏನು ಹೇಳಿದನೋ-ಅದಕ್ಕಿಂತ ಅವನ ಮಾತಿನಿಂದ ಅದನ್ನು ಕೇಳಿದವರು ಏನು ಗ್ರಹಿಸಿದರು ಎಂಬುದೇ ಮುಖ್ಯ. ಕೊನೆಗೂ ಧರ್ಮ ಸಂಮೂಢಚೇತನಾದ ಅರ್ಜುನನು ಅವನನ್ನು ಶಿಷ್ಯನಾಗಿ ಮೊರೆಹೊಕ್ಕು ವಿರಾಟರೂಪ ದರ್ಶನದಿಂದ ಮೋಹ ದೂರನಾಗಿ 'ಕರಿಷ್ಯೇ ವಚನಂ ತವ' ಎಂದು ಹೊಸ ಸ್ಮೃತಿಲಬ್ಧಿಯೊಂದಿಗೆ ಎಚ್ಚೆತ್ತು ಯುದ್ಧಕ್ಕೆ ಸಿದ್ಧನಾದನು-ಅದೂ ಕೇವಲ ಭಕ್ತಿಯ ಪ್ರಭಾವ.

ನಮ್ಮ ಕುಮಾರವ್ಯಾಸನೂ ಭಗವದ್ಗೀತೆಯ ಮರ್ಮವಾಗಿ ಇದೇ ಭಕ್ತಿಯ ಸಂದೇಶವನ್ನು ಕಂಡುಕೊಂಡಿದ್ದಾನೆ. ಅವನ 'ಗದುಗಿನ ಭಾರತ'ದಲ್ಲಿ ಭೀಷ್ಮ ಪರ್ವದ ೩ನೆಯ ಅಧ್ಯಾಯದಲ್ಲಿ ಭಗವದ್ಗೀತೆಯು ಸಂಕ್ಷೇಪವಾಗಿ ಬಂದಿದೆ-'ನಿಜವನು ತೋರಿ ಪಾರ್ಥನ ಒಲಿದು ಬೋಧಿಸಿದೆ'-ಎಂದಿದೆ ಅಧ್ಯಾಯದ ಆರಂಭವಚನ ಈ 'ನಿಜದ ತೋರಿಕೆ' ಶ್ರೀಕೃಷ್ಣ ವಿರಾಡ್ರೂಪದರ್ಶನ.

ನಿಜವಾಗಿಯೂ, ಭಗವದ್ಗೀತೋಪದೇಶದ ಮರ್ಮವೇನು? ಕುಮಾರವ್ಯಾಸ ಅದನ್ನು ಅಡಕವಾಗಿ ಅರುಹುವದರ ರೀತಿಯಿಂದಲೇ ಅದು ಸ್ಫುಟವಾಗುತ್ತದೆ. ಆತ ಭಗವದ್ಗೀತೆಯ ಸಾಂಖ್ಯ-ಯೋಗ-ಜ್ಞಾನವೇ ಮುಂತಾದ ಯಾವುದೇ ದಾರ್ಶನಿಕ ವ್ಯಾಖ್ಯಾನದ ಗೊಡವೆಗೇ ಹೋಗಲಿಲ್ಲ. ಆತ ನೇರವಾಗಿ ವಿರಾಡ್ರೂಪದರ್ಶನಕ್ಕೇ ಬಂದನು. ಅಲ್ಲಿಯೂ ಅದನ್ನು ಭಗವದ್ಗೀತೆಯು ರೌದ್ರ ರಮ್ಯವಾಗಿರುವ ನೇರ ಭವ್ಯ ಗಂಭೀರ ರೀತಿಯಲ್ಲಿ ನಿರೂಪಿಸಲೇ ಇಲ್ಲ. ಆ ವಿಶ್ವರೂಪವನ್ನು ಕಂಡು - ಕಂಗೆಟ್ಟು ಅರ್ಜುನನ ಅವಸ್ಥೆ ಆರ್ತತೆ ಅನನ್ಯ ಶರಣಾಗತಿ ಇವನ್ನಷ್ಟೇ ಚಿತ್ತಾಪೇದಕವಾಗಿ ಚಿತ್ರಿಸಿದ್ದಾನೆ. ಇದು ನಿಜವಾಗಿಯೂ ಮಾರ್ಮಿಕವಾಗಿದೆ. ಏಕೆಂದರೆ ಗೀತೆಯ ರಹಸ್ಯವೂ ಸ್ವಾರಸ್ಯವೂ ಈ ವಿಶ್ವರೂಪ ದರ್ಶನದಲ್ಲಿಯೇ ಇದೆ ಹೊರತು ಅಲ್ಲಿ ಬಂದ ಸರ್ವದರ್ಶನ ಸಂಗ್ರಹದಲ್ಲಿ, ವ್ಯಾಮಿಶ್ರ ಮೋಹಕವಾದ ತಾಂತ್ರಿಕ ವಿವೇಚನೆಯಲ್ಲಿ ಇಲ್ಲ. ಇಂಥ ಸೈದ್ಧಾಂತಿಕ ವೇದಾಂತಿಕ ಸಮನ್ವಯ ವೈಖರಿ ಶ್ರೀಕೃಷ್ಣನಂತೆಯೇ ಬೇರೆ ಯಾವ ಗುರುವೂ ಮೆರೆಯಬಹುದು. ಉಪನಿಷತ್ಕಾರರೂ ಮತಸ್ಥಾಪನಾಚಾರ್ಯರೂ, ಇತರ ವೇದಾಂತ ದಿಗ್ಗಜರೂ, ರಾದ್ಧಾಂತ ಪಟುಗಳೂ, ಈಚೆಗೆ ಸ್ವಾಮೀ ವಿವೇಕಾನಂದರಿಂದ, ಸ್ವಾಮಿ ಚಿನ್ಮಯಾನಂದರವರೆಗೂ ಅರವಿಂದ ಅನಿಬೆಸೆಂಟರಿಂದ ಡಾ। ರಾಧಾಕೃಷ್ಣರವರೆಗೂ, ಯಾರೇ ಪ್ರತಿಭಾನ್ವಿತ ವಾಗ್ಮಿಗಳೂ ಪಂಡಿತರೂ ಈ ವೈಚಾರಿಕ ವೈಭವದ, ವಿಕ್ರಮವನ್ನು ಸಾಧಿಸಬಹುದು. ಸಾಧಿಸಿದ್ದುಂಟು.

ಆದರೆ ಅದೆಲ್ಲ ಬುದ್ಧಿಯ ತರ್ಕದ ಪಾತಳಿಯಲ್ಲಿ. "ಕೃಷ್ಣ ನಿಮ್ಮನ್ನು ತಿಳುಹಲಾಪ ಸಮರ್ಥನೆ?" ಎಂದು ಭಯ ಚಕಿತ ಸಂಶಯಾತ್ಮ ಅರ್ಜುನನಂತೆ ನಾವೂ ಈ ಕುರಿತು ಶಂಕಿಸಬಹುದು. ಆ ತಾತ್ತ್ವಿಕ ದರ್ಶನವನ್ನು ಒಂದು ಪ್ರತ್ಯಕ್ಷ ದರ್ಶನವಾಗಿ ಇದೇ ನೆಲೆಯಲ್ಲಿ ಒಂದೇ ನೋಟಕ್ಕೆ ಪ್ರಕಟಿಸಿ ಮನಗಾಣಿಸಿ ಕೊಡುವ ಪವಾಡ ನಡೆದದ್ದು ಭಗವದ್ಗೀತೆಯೊಂದರಲ್ಲಿಯೇ. ಆದ್ದರಿಂದ ಅದುವೇ ಭಗವದ್ಗೀತೆಯ ತಿರುಳು. ಅದಕ್ಕೆ ಭಕ್ತಿ-ಭಾವನೆಯೇ ಹುರುಳು. "ವಿಮಲ ವಿರಾಟ ರೂಪವನು" ಕೃಷ್ಣನು ಅವನಿಗೆ ತೋರಿಸಿಯೇ

ತನ್ನ ಆದೇಶವನ್ನು ಮನಂಬುಗುವಂತೆ ಮಾಡಿದನು. ಇದಕ್ಕೆ ಕಾರಣ ಅರ್ಜುನನೂ ನೇರವಾಗಿ ಇಲ್ಲಿ ಅದನ್ನು ಬಯಸುತ್ತಾನೆ.

"ಜಡನಲಾ ನರನು ಏಸತಿಳುಹಲು। ಬಿಡವಿಕಾರವನು ಎಂದು ಖಾತಿಯ। ಹಿಡಿಯಲಾರದು ಸಲುಗೆಗೆ ಅಂಜಿಕೆಯೇಕೆ? ಬಿನ್ನಹವು।... ತತ್ ಸ್ವರೂಪವ ತೋರಬೇಕೆಂದ।।" ಪರೆದು ಮೋಹಿಸುರ ಈ ಚರಾಚರ ನೆರೆದು ನಿಮ್ಮಯ ರೋಮಕೂಪದ ಹೊರೆಯೊಳಗೆ ಹೊಳೆದಾಡುತಿಹುದೆಂಬಗ್ಗಳಿಕೆಗೆ। ಹುರುಳೆನಿಪ ಹೇರಳಾಂಗದ ಸಿರಿಯ ತೋರೈ ಕೃಷ್ಣ" ಎಂದು ಅರ್ಜುನ ಬೆಸಗೊಳ್ಳುತ್ತಾನೆ. ಅದೇಕೆ? ಆತ ಖಡಾಖಂಡಿತವಾಗಿಯೇ ಒಪ್ಪಿಕೊಳ್ಳುತ್ತಾನೆ. "ನಿರ್ಮಲ ಪರಮತತ್ವನೊಲ್ಲೆ ನಿಮ್ಮಯ ಭಕ್ತಿ ಸಾಕೆಂದ."

ಮೂಲ ಗೀತೆಯಲ್ಲಿಯೂ ಅರ್ಜುನನ ಆತ್ಮಸಮರ್ಥನೆಗಳನ್ನೆಲ್ಲ 'ಪ್ರಜ್ಞಾವಾದ'ಗಳೆಂದು ಜರೆದ ಶ್ರೀಕೃಷ್ಣನ ವಿವಿಧ ವಿಷಯ ವಿನ್ಯಾಸದ ವೈಖರಿಗೆ ದಿಗ್ಭ್ರಾಂತನಾಗಿ ಅರ್ಜುನನು "ನಿನ್ನ ಈ ವಾಕ್ಯ ಶೈಲಿಯಿಂದ ನನ್ನನ್ನು ಮೋಹಿತನಾಗಿ ಮಾಡಿದ್ದೀಯೆ. ಆದ್ದರಿಂದ "ತತ್ ಏಕಂ ವದ ನಿಶ್ಚಿತ್ಯ". ಏನಾದರೊಂದು ಕಟ್ಟುನಿಟ್ಟಾಗಿ ಹೇಳು. ನನ್ನನ್ನು ಕಂಗೆಡಿಸಬೇಡ ಎಂದು ಬೇಡಿಕೊಂಡಿದ್ದುಂಟು. ಈ ಸೂಚನೆಯನ್ನು ಕುಮಾರ ವ್ಯಾಸ ಎತ್ತಿಕೊಂಡು ಅದೇ ರೀತಿ ಗೀತೆಯ ಸಾರವಾಗಿ ವಿಶ್ವರೂಪದರ್ಶನವನ್ನು ಅದಕ್ಕೆ ಆಧಾರವಾಗಿ ಭಕ್ತಿಯ ಆರ್ತ ಭೂಮಿಕೆಯನ್ನು ತನ್ನ ವರ್ಣ್ಯವಸ್ತುವಾಗಿ ಮಾಡಿಕೊಂಡರೆ ಆಶ್ಚರ್ಯವಿಲ್ಲ.

ಇಲ್ಲಿ ನಾವು ಕಾಣುವುದು ಕೇವಲ ಗೀತೆಯ ಸಂಗ್ರಹವಲ್ಲ. ಅದರ ಸರಣಿಯನ್ನು ತನ್ನದೇ ಆದ ತಂತ್ರದಲ್ಲಿ ಈ ಮಹಾಕವಿಯು ಅಳವಡಿಸಿಕೊಂಡ ಒಂದು ಹದವರಿತ ಹತೋಟಿ.

ಇದು ಮೂಲ ಗೀತಾಪಾಠದ ಸಂಕ್ಷಿಪ್ತ ಅನುವಾದವೇ ಅಲ್ಲ. ಇಲ್ಲಿ ಅರ್ಜುನನ ಹಾಗೂ ಕೃಷ್ಣನ ವಾಗ್ಧೋರಣೆಯಲ್ಲಿ ಮೂಲದ ಭಾವಾನುವಾದವಿದೆಯೇ ಹೊರತು ಇಲ್ಲಿಯ ಜಾಣ್ಮೆಯ ಜಾಡೇ ತುಸು ಬೇರೆ ಜಾತಿಯದು. ಅದು ಏನು, ಹೇಗೆಂಬುದನ್ನು ತುಸು ವಿವರವಾಗಿ ಪರಾಂಬರಿಸೋಣ.

ಆರಂಭದಲ್ಲಿಯೇ ಅರ್ಜುನನ ರಥವನ್ನು "ನೆರೆದಿರ್ದ ಅಹಿತಬಲದ" ಇದುರಿಗೆ ಉಳಿವಡೆದು ನಿಲ್ಲಿಸಿದಾಗ ಅರ್ಜುನನೇ ಕೇಳುತ್ತಾನೆ. "ಕೌರವರಾಯ ಥಟ್ಟಿನಲ್ಲಿ ಬಹಳಬಲರು ಇವರಾರು? ಸೇನಾನಿವಹದಲಿ ಬಲರು ಇವರಾರು? ವಿವರಿಸಬಹರೆ ಬೆಸಸು" ಆಗ ಕೃಷ್ಣ. "ನಗೆಯ ಮೊನೆ ಮಿನುಗೆ" ವಿವರವಾಗಿ ಕೌರವ ಬಲದ ಶ್ರೇಷ್ಠಿಗಳನ್ನೆಲ್ಲ ಹೆಸರೆತ್ತಿ ಒಂದೊಂದು ನುಡಿಯಲ್ಲಿ ವರ್ಣಿಸುತ್ತಾನೆ. ಈ ನುಡಿಗಳಲ್ಲಿ ಈ ವ್ಯಕ್ತಿಗಳ ರೇಖಾಚಿತ್ರಣ ಸ್ಫುಟವಾಗಿ ಬಂದಿದೆ. ಇದು ಮೂಲದಲ್ಲಿ ಭಗವಂತ ಅರ್ಜುನನಿಗೆ ಅರುಹಿದ್ದಲ್ಲ. ಕುಮಾರವ್ಯಾಸನದೇ ವೀರಕಾವ್ಯದ ಕೌಶಲವಿದು. ಕೊನೆಗೆ. ಕರ್ಣನನ್ನು ಕಾಣಿಸಿ ತನ್ನ ಈ ರಿಪುಬಲ ಪರಿಚಯವನ್ನು ಮುಗಿಸಿ ಕೃಷ್ಣ ತುಂಬ ಉತ್ತೇಜಕವಾಗಿ ಅರ್ಜುನನಿಗೆ ಹೇಳುತ್ತಾನೆ.

ಅಳಿಮಯವಖಿಳೋರ್ವಿ ಪದಹತ
ಧೂಳಿಮಯಕಾಶ ರಥತುರ
ಗಾಳಿಮಯ ದಿಗುಜಾಲವೇನೆಂಬೆನು
ಮಹಾದ್ಭುತವ

ಕಾಳೆಗಕೆ ನೀನಲ್ಲದವನಿಯೊ-
ಳಾಳ ಕಾಣೆನು ಪಾರ್ಥ ಸಾಕಿ
ನ್ನೇಳು ಬಾಣದ ತೂಗು ಮಾತಾಡಿಸು
ಮಹಾಧನುವ ॥

ಆದರೆ -

ಮೆಟ್ಟಿ ನೋಡಿದನಹಿತ ರಾಯರ
ಥಟ್ಟುಗಳ ತೆರಳಿಕೆಯನುತ್ಸಹ
ಗೆಟ್ಟು ಫಲಗುಣ ಸೆಡೆದು ಮನದಲಿ
ನೊಂದು ತಲೆವಾಗುವನು. ಇಲ್ಲಿ ವ್ಯಾಸರು ಆಡದ ಬಿರುನುಡಿಯನ್ನು
ಕುಮಾರವ್ಯಾಸ ಕೃಷ್ಣನ ಕುರಿತು ಅರ್ಜುನನಿಂದ ಆಡಿಸುತ್ತಾನೆ.
"ಇದಿರುಗಾಣದೆ ಕೊಲೆಗೆ ನಿರ್ಬಂ
ಧದಲ್ಲಿ ಬೆಸಸುವ ಕೃಷ್ಣನಕಟಾ
ಮದುಮುಖನೊ ದುರ್ಬೋಧಕನೊ
ವಂಚಕನೊ ಘಾತಕನೊ
ಯದುಗಳನ್ವಯದೊಳಗೆ ಕರುಣಾ
ಸ್ಪದರು ಜನಿಸರಲಾ ಮುರಾರಿಯ
ಹೃದಯ ಬೆಚ್ಚಿತೆನುತ್ತ ಫಲಗುಣ
ತೂಗಿದನು ಶಿರವ॥"

ಅವನಿಗೆ ಸ್ವಜನ ಮೋಹವು ಕವಿಯುತ್ತದೆ. ಒಂದು ಇಡಿಯ ನುಡಿಯೇ ಅದರ ಬಣ್ಣನೆಗಿದೆ. "ನರರ ಕರ್ಮದ ದುರಿತ ಭಾಜನವಾಗಿ ನಾನಾ ಯೋನಿಯೊಳು ಸುಳಿದು ಹೊರಳುವುದಕ್ಕೆ" ಆತ ಹೆದರುತ್ತಾನೆ. "ಕುಲ ಕೊಲೆಗೆ ಕೊಕ್ಕರಿಸಿದೆನು". "ನನೆದೆನು ಕರುಣವಾರಿಯಲಿ" ಕೃಷ್ಣನಿಗೆ ಮುನಿಯಬೇಡ ಕ್ಷಮಿಸು ಎಂದು ಬೇಡಿಕೊಳ್ಳುತ್ತಾನೆ.

ಅರ್ಜುನನ ಈ ವಿಷಾದಯೋಗವನ್ನು ಶ್ರೀಕೃಷ್ಣ 'ಅಂತಃಕರಣ ಕರಗಿ ಚಿಂತಾತುರನ ಸಂಗ್ರಾಮ ವಿರಕ್ತಿಯೆಂದು ನಿಧಾನಿಸುತ್ತಾನೆ. "ತರಳನಿವನು ಅದ್ವೈತ ಕಲೆಯಲಿ ಪರಿಣತನು ತಾನಲ್ಲ. ಈ ನರನನ್ನು ನೆವದಿಂದ ಬೋಧಿಸಬೇಕು" ಎಂದು ಅವನು ಎಣಿಸುತ್ತಾನೆ.

ಅದ್ಯಂತವಾಗಿ ಮೂಲದ ಭಗವದ್ಗೀತೆಗಿಂತ ಇಲ್ಲಿಯ ವಾದ ಸರಣಿಯೂ, ವಾಗ್ಧೋರಣೆಯೂ ಸರಳವಾಗಿದೆ, ಸುಗಮವಾಗಿದೆ. "ಕದನ ಮುಖದಲಿ ವೀರರೊಳು ಹೇವವಿಲ್ಲ"

ಎಂಬುದನ್ನು ಕುಮಾರವ್ಯಾಸನದೇ ವೀರಸ್ಪರ್ಶದಿಂದ ಕೃಷ್ಣ ಹೀಗೆ ಚಿತ್ರಿಸುತ್ತಾನೆ.

"ಅಲಗಿನೊರಸೊರಸಿಲ್ಲ ಕೈ ಮೈ
ಗಳಲ್ಲಿ ಮುಳುಗಿದ ಬಾಣವಿಲ್ಲ
ಗ್ಗಳಿಸಿ ನೊಸಲಲಿ ಮುರಿದ ಭಲ್ಲೆಯ
ವಿಲ್ಲ ನೋಡುವರೆ।
ಕಲಹದಲ್ಲಿ ಪಡಿಮುಖದ ಘಾಯದ
ಚಲರುಕತದೊರವಿಲ್ಲ ನೀ ಮು
ನ್ನುಳುಕಿ ಕೈದುವ ಹಾಯ್ಕಿದ್ದೈ ಸರಿ
ಯಲ್ಲ ನಿನಗೆಂದ"॥

ಅಲ್ಲದೆ, ಇಲ್ಲಿಯ ಕೃಷ್ಣ ಅರ್ಜುನನಿಗೆ ಅವರು ಸೋದರರೊಂದಿಗೆ ಪಟ್ಟ ವನವಾಸ - ಅಜ್ಞಾತವಾಸಗಳ ನೆನಪನ್ನು, ಕೌರವನು ಗೈದ ಅನ್ಯಾಯವನ್ನು, ಆತ ಹಿಂದೆ ತೊಟ್ಟ ಪಂಥವನ್ನು ಜ್ಞಾಪಿಸಿಕೊಡುತ್ತಾನೆ. ಅಲ್ಲದೆ ಉತ್ತರನ ಪೌರುಷವನ್ನು ನಾಚಿಸುವ ರೀತಿಯಲ್ಲಿ ಅರ್ಜುನನಿಗೆ ಹೀಗೆ ಛೇಡಿಸುತ್ತಾನೆ.

"ತರುಣಿಯರ ಮುಂದಸ್ತ್ರ ಶಸ್ತ್ರವ
ತಿರುಹಬಹುದುಬ್ಬೇಳಬಹುದು
ಬ್ಬರಿಸಿ ಬಹುದೆನಗಾರು ಸರಿ ನಾ ಧೀರ
ನೆನಬಹುದು"।

ಆದರೆ-

"ಕರಿ ತುರಂಗದ ಬಹಳ ಶಸ್ತ್ರೋ
ತ್ಕರ ಕೃಪಾಣದ ಹರಹಿನಲಿ ಮೊಗ
ದಿರುಹದಿಹ ಕಲಿ ಯಾರು?"...
ಎಂದು ಕೇಳುತ್ತಾನೆ. ಅದಕ್ಕೆ ಅರ್ಜುನನ
ಉತ್ತರ ಸಿದ್ಧ.

ಬಲುಹ ನೀ ನೋಡುವರೆ ಪರಮಂ
ಡಳಿಕರನು ತಂದೊಡ್ಡು ಬಳಿಕೆ
ನ್ನಳವನೀಕ್ಷಿಸು ಸೆಡೆದೆನಾದಡೆ ನಿಮ್ಮ
ಮೈದುನನೆ॥

ಆದರ ಈ ಬಂಧುಹನನ ಗುರು ಹಿರಿಯರ ಹತ್ಯೆಯ ಪರಮ ಪಾತಕ ಆ ಮೂಲಕ ಪಾವಟ ಸಿಂಧುವಿನೊಳ್ಳೋಲಾಟ - ಇದೇ ಅರ್ಜುನನನ್ನು ತ್ರಸ್ತಗೊಳಿಸಿದ ಚಿಂತೆ-ಜತೆಗೆ ಲೋಕಾಪವಾದದ ಭಯ. ಆ "ನೆತ್ತರಗೂಳನುಂಬುವ ರಾಜ್ಯದ ಮೇಲೆ ಸೊಗಸುವ ಸಿರಿಯನೊಲ್ಲೆನು ಕೊಲುವವನಲ್ಲ" ಎನ್ನುತ್ತಾರೆ ಅರ್ಜುನ. ಅವನ ಈ ಸಂಕ್ಷಿಪ್ತ ತಕರಾರಿಗೆ ಅಲ್ಲಿಯೇ ನಡುವೆ

ಬಾಯಿ ಹಾಕಿ ಕೃಷ್ಣ - "ಆರನೈ ನೀ ಕೊಲುವೆ? ನಿನ್ನಿಂದಾರು ಸಾವರು?" ಎಂದು ಇದೆಲ್ಲ ವಿಕಾರ ಶರೀರಕ್ಕಲ್ಲದೆ ಆತ್ಮಕ್ಕೆ ಅಲ್ಲವೆಂಬ ವಿಚಾರವನ್ನು ಆಗಲೇ ಸಾರುವನು.

ಇಲ್ಲಿಂದ ಮುಂದಿನ ಹೆಜ್ಜೆ. ನಿಷ್ಕಾಮ ಕರ್ಮಕ್ಕೆ ಕುಮಾರವ್ಯಾಸನ ಕೃಷ್ಣನು ಕೊಟ್ಟ ಹೊಸ ನೋಡಿ. ಅದೆಂದರೆ ಅಹಂಕೃತಿಯಿಂದಲೇ ಸತ್ಕೃತಿ - ದುಷ್ಕೃತಿಗಳ ಲೇಪ-ಪಾಪ, "ಗುಣ ಧರ್ಮಕರ್ಮದ ಹೊಸಲು ಹೋಗುವುದು ನಿತ್ಯ ನಿರ್ಮಲ ಚಿನುಮಯಾತ್ಮನನು" ಅಂದಾ

ಸುಕೃತ ದುಷ್ಕೃತವೆಂಬವೇ ಬಾ
ಧಕವು ಜೀವರಿಗೀಯಹಂಕೃತಿ
ವಿಕಳತೆಗೆ ತಾ ಬೀಜ ಜನ್ಮದ ಚುಟ್ಟು
ಮುರಿಗಳಿಗೆ".

ಸಕಲ ಕರ್ತೃತ್ವಾದಿ ಭೋಕ್ತ
ತ್ವಕವಿದಾತ್ಮರಿಗಿಲ್ಲ ಪಿತ್ತಾ
ಧಿಕನು ತಿರುಗುತ ಲೋಕ ತಿರುಗುವು
ದೆಂಬ ತೆರನಂತೆ."

ಇಲ್ಲಿ ಕೊನೆಗೆ ಬರುವ ಪಿತ್ತವೇರಿದವನು ಲೋಕವೇ ತಿರುಗುವುದೆಂದು ಭ್ರಮಿಸುವ ಉಪಮೆ ಈ ಮಹಾಕವಿಯದೇ ವೈಖರಿ. ಈ ಕನ್ನಡ ಗೀತೆಯಲ್ಲಿ ಉದ್ದಕ್ಕೂ ಇಂಥ ಲೋಕಾಭಿರಾಮವಾದ ಉಪಮೆ ದೃಷ್ಟಾಂತಗಳ ಮಾಲೆಯನ್ನೇ ಹೆಣೆದು ಈ ಕೃಷ್ಣಾರ್ಜುನ ಸಂವಾದ ಸರಣಿಯನ್ನು ಸುಗಮ-ಸುಲಭತೆಯ ಪಾತಳಿಯಲ್ಲಿಯೇ ಬೆಳೆಸಿದ್ದು ಕುಮಾರವ್ಯಾಸನ ಸ್ವಂತಿಕೆಯ ಸಿದ್ಧಿ. ಮೂಲ ಗೀತೆಯ ಉನ್ನತ - ತಾತ್ವಿಕ - ದಾರ್ಶನಿಕ ಪಾತಳಿಯಲ್ಲಿ ಈ ಗೀತೆಯು ಸಾಗುವುದಿಲ್ಲ. ಆದರೆ ಈ ಲೌಕಿಕ ಉಪಮೆ-ಪ್ರತಿಮೆಗಳನ್ನು ಉದಾಹರಿಸಲು ಲೇಖದಲ್ಲಿ ಅವಕಾಶವಿಲ್ಲ. ಆದರೆ ಅವೆಲ್ಲವೂ ಸಮರ್ಪಕವೂ ಸಮರ್ಥವೂ ಆಗಿದ್ದು Analogy is no argument (ಉಪಮೆ ಯುಕ್ತಿ ಅಲ್ಲ.) ಎಂಬ ಸೂತ್ರಕ್ಕೂ-ಅಪವಾದವೆನಿಸುವಂತಿದೆ. ಅಹಂಕಾರ ಕಳಚಿ ಕರ್ಮವನ್ನು ಭಗವಂತನಿಗೆ ಅರ್ಪಣ ಮಾಡಬೇಕು. ಇದರಿಂದ ಅನಾಸಕ್ತಿ ಫಲಾಶಾರಾಹಿತ್ಯ ಸುಲಭವಾಗುವುದು. ಎಲ್ಲಾ "ಸದಾಚಾರವೆನಿಸುವ ಜಾಗವು ಎನ್ನ ಲೀಲಾ । ಚರಿತದಲ್ಲಿ ತೋರುವದು. ಹರೆವದು ನನ್ನ ನೇಮದಲಿ" ಅನ್ನುತ್ತಾನೆ ಕೃಷ್ಣ. ಅದು ಹೇಗೆಂದು ಅರ್ಜುನ "ಹೇರಾಳಂದಗವ ತೋರೈ" ಎಂದು ಬಿನ್ನವಿಸಿಕೊಳ್ಳುತ್ತಾನೆ. ಅಲ್ಲಿಂದ ನೇರ ವಿರಾಡ್ರೂಪ ದರ್ಶನವೇ.

ನಡುವೆ ಕುಮಾರವ್ಯಾಸನು ಅರ್ಜುನನ ಬಾಯಿಯಲ್ಲಿ ಹಿಂಸೆ-ಅಹಿಂಸೆಯ ವಾದವನ್ನು ಆಡಿಸಿದ್ದಾನೆ.

ಪರಿಯ ಚಿತ್ತಯಿಸೈಯಹಿಂಸಾ
ಪರಮ ಧರ್ಮವು ಎಂಬ ವಾಕ್ಯದ ಸರಣಿಸಾರೋದ್ಧಾರವಲ್ಲಾ ಸಕಲ ದರುಶನಕ"
ಎನ್ನುತ್ತಾನೆ, ಅರ್ಜುನ.
ಅದಕ್ಕೆ ಕೃಷ್ಣನು ಕಟ್ಟುನಿಟ್ಟಾಗಿಯೇ ಉತ್ತರಿಸುತ್ತಾನೆ.

...ಅರ್ಜುನಕೇಳಹಿಂಸಾ-
ಪರಮಧರ್ಮದ ತತ್ತ್ವರೂಪವ
ನೊರೆವೆನಾಲಿಸು ಸಚ್ಚಿದಾನಂದೈಕ
ಘನವೆನಿಪ
ನಿರುಪಮಾತ್ಮನ ನಿಲವನರಿಯದೆ
ನರರೆ ಜಡವಾ ಜೀವವೆಂಬೀ
ತರಳತನವೇ ಹಿಂಸೆಯರಿವಡಹಿಂಸೆ
ಕೇಳು"-

ಈ ಇಡಿಯ ಪ್ರಶ್ನೋತ್ತರವು ಕುಮಾರ ವ್ಯಾಸನದೇ ಕೊಡುಗೆ. ಗೀತೆಯಲ್ಲಿ ಅಹಿಂಸೆಯನ್ನು ಕೃಷ್ಣನು ಹೇಳಿದ್ದು-ನಮ್ಮ ಗಾಂಧೀಜಿಯ ವಿಶಿಷ್ಟ ಪ್ರತಿಪಾದನೆ. ಅದನ್ನು ಕುಮಾರವ್ಯಾಸನು ಈ ನಿಲುಮೆಯಲ್ಲಿ ಈ ಹಿಂದೆಯೇ ಸೂಚಿಸಿದಂತಿದೆ.

ಹೀಗೆ, ಕುಮಾರವ್ಯಾಸನು ಅರ್ಜುನನ ಸಮರ ವೈರಾಗ್ಯಕ್ಕೆ ಮದ್ದಾಗಿ "ಕರ್ಮ ಕಾನೇನಾದಡಾಗಲಿ । ನಿರ್ಮಮತೆಯಲ್ಲಿ ಮಾಡಿ ಸಮ್ಮಲ್ಲಿ । ನಿರ್ಮಿಸಲು ಕಲಿಪಾರ್ಥ ನೀ ನಿರ್ಲೇಪನಹೆ"- ಎಂದು ಕೃಷ್ಣ ಬೋಧಿಸಿದಾಗ-ಅದುವೆ ಭಗವತ್ ಶರಣಾಗತಿಯ ಪ್ರವತ್ತಿ ಭಕ್ತಿಯ ಹಾದಿಯಾಗಿ ಭಗವಂತನ ವಿರಾಟರೂಪ ದರ್ಶನ ಅದರ ಗುರಿಯಾಯಿತು. ಇಲ್ಲಿಯೂ ಕುಮಾರ ವ್ಯಾಸನು ವಿಶ್ವರೂಪವನ್ನು ಮೂಲದಂತೆ ರುದ್ರರಮಣೀಯವಾಗಿ ವರ್ಣಿಸಲಿಲ್ಲ. ಅದರ ಪರಿಣಾಮವನಷ್ಟೇ ವರ್ಣಿಸಿದ್ದಾನೆ-ಅರ್ಜುನನ ಮನಃಸ್ಥಿತಿ ಹಾಗೂ ಅವನು ಈ ವಿರಾಟದರ್ಶನವ ಇದಿರು ತನ್ನ ಅಲ್ಪತೆ-ಕ್ಷುದ್ರತೆಯನ್ನು ತೋಡಿಕೊಳ್ಳುವ ಮುಕ್ತಕಂಠದ ಹರಿಸ್ತುತಿಯಲ್ಲಿ; ಇಂಥ ಸ್ತುತಿಯ ಯಾವ ಅವಕಾಶವೂ ಮಹಾ ವೈಷ್ಣವ ಕವಿಗೆ ಒಂದು ಸಮಾರಾಧನೆ.

"ಅಡಿಗಡಿಗೆ ಕಣ್ಣೆರೆದು ಮುಚ್ಚುವ
ಅಡಿಗಡಿಗೆ ಮೈಬೆದರಿ ಬೆರಗಹ
ಅಡಿಗಡಿಗೆ ಮೈಯ್ಯೊಲವನುಬ್ಬಿದ
ರೋಮ ಪುಳಕವಲಿ
ಅಡಿಗಡಿಗೆ ಮನನಲಿದು ತೂಂಗುವ
ಅಡಿಗಡಿಗೆ ಭಯಗೊಂಡು ಕರಗುವ
ಒಡಲಸವನಿಗೆ ಹರಹಿ ನಿಡುದೋಳು
ಗಳ ನೀಡಿದನು॥"

-ಎಂಥ ಚಿತ್ರಮಯ ಸ್ವಭಾವೋಕ್ತಿಯ ವರ್ಣನೆ ಇದು! ೧೬ ಪರ್ವಗಳಲ್ಲಿ ಈ ಮನವೊಲಿದು ಭಯುಗೊಂಡು ಕರಗಿದ ಅರ್ಜುನನ ಭಾವ ನಿರ್ಝರ ಪ್ರಾರ್ಥನೆಯು ಭಕ್ತಿಪರವಶವಾಗಿ ಉಕ್ಕಿ ಹರಿದಿದೆ.

ಹೀಗೆ ಪಾರ್ಥನಿಗೆ ಆತನ ಪ್ರಾಪ್ತಕರ್ತವ್ಯವನ್ನು ಬೋಧಿಸಿ ಉದ್ಬೋಧನೆ ನೀಡಲು ಕೇವಲ ಕೃಷ್ಣನೇ ಹೂಡಬಲ್ಲ ತಂತ್ರವೆಂದರೆ ಈ "ಮಾಯೆಯನು ಬೀಸಿ"ದ ವಿರಾಡ್ರೂಪ ದರ್ಶನ ಉಳಿದದಾರ್ಶನಿಕ, ವ್ಯಾಖ್ಯಾನ; ಧರ್ಮಸೂತ್ರದ ಕುರಿತ ಪ್ರವಚನ ಬೇರೆ ಯಾವ ವಾಗ್ಮಿ-ವಿದ್ವಾಂಸರೂ ಮಾಡಬಹುದು. ಮಾಡಿದ್ದೂ ಉಂಟು. ಆದರೆ ಈ ಭಗವನ್ಮಹಿಮೆಗೆ ಶಕ್ಯವಾದ, ದ್ಯೋತಕವಾದ ವಿಶ್ವರೂಪದರ್ಶನವನ್ನು ಕೃಷ್ಣನೊಬ್ಬನೇ ಮಾಡಬಲ್ಲ. ಅದನ್ನೇ ಎತ್ತಿ ಅಡಕವಾಗಿ ಆಡುಮಾತಿನ ಜತೆಯಲ್ಲಿ ಕುಮಾರವ್ಯಾಸನು ಓಜಸ್ವಿಯಾಗಿ 65 ಪದ್ಯಗಳ ಈ ಅಧ್ಯಾಯದಲ್ಲಿ ಮರ್ಮಸ್ಪರ್ಶಿಯಾಗಿ ನಿರೂಪಿಸಿದ್ದು ಭಗವದ್ಗೀತೆಯ ನಿಜವಾದ ಮರ್ಮವೇನೆಂಬುದಕ್ಕೆ ಹೇಗೋ ಹಾಗೆಯೇ ಕುಮಾರವ್ಯಾಸನ ವಿಶಿಷ್ಟ-ವಿಚಕ್ಷಣತೆಗೂ ಅನನ್ಯ ಸಾಕ್ಷಿಯಾಗಿದೆ.

ಈ ವಿಚಕ್ಷಣತೆ ಒಡೆದೆದ್ದು ಕಾಣುವುದು ಎರಡು ರೀತಿಯಲ್ಲಿ. ಒಂದು ವೇದವ್ಯಾಸರು ಬಿಟ್ಟ ಅಂಶವನ್ನು ಕುಮಾರವ್ಯಾಸನು ತುಂಬಿಕೊಂಡಿದ್ದು. "ಸೇನಯೋಃ ಉಭಯೋಃ ಮಧ್ಯೆ" ರಥವನ್ನು ಸ್ಥಾಪಿಸಿದ ಮೇಲೆ ಶ್ರೀಕೃಷ್ಣ ಅರ್ಜುನನಿಗೆ "ಈ ಭೀಷ್ಮದ್ರೋಣಾದಿಕುರುಗಳನ್ನು ಒಟ್ಟಿಗೆ ನೋಡು" ಎನ್ನುತ್ತಾನೆ. ಮುಂದೆ ಎರಡೇ ಶ್ಲೋಕಗಳಲ್ಲಿ ಅರ್ಜುನ ಯಾರಾರನ್ನು ಕಂಡನೆಂಬ ವಿವರ ಆದಿ ಗೀತಾಚಾರ್ಯರು ಅರುಹಿದ್ದಾರೆ. ಅಲ್ಲಿ ಒಮ್ಮೆಲೆ ಆ ಸ್ವಜನರನ್ನು ಒಟ್ಟಿಗೆ ಯುದ್ಧ ಕಾಮಿಗಳಾಗಿ ಬಂದು ನಿಂತದ್ದನ್ನು ಕಂಡು ಅರ್ಜುನ "ಕೃಪಯಾ ಪರಯಾವಿಷ್ಟ"ನಾಗುತ್ತಾನೆ. ಆದರೆ ಇಲ್ಲಿ ಕುಮಾರವ್ಯಾಸನು ಶ್ರೀಕೃಷ್ಣನ ಬಾಯಿಯಿಂದ ವಿವರವಾಗಿ ಈ ಕುರು ಬಲದ ವೀರಾಧಿವೀರರ ಪರಿಚಯ ಕೊಡಿಸಿದ್ದಾನೆ. ಭೀಷ್ಮನಿಂದ ಕರ್ಣನ ವರೆಗೆ ೯ ಪದ್ಯಗಳಲ್ಲಿ ಈ ವಿವರವಾದ ವರ್ಣನೆಯು ಅರ್ಜುನನ ಸ್ವಜನ ಮೋಹದ ಬಂಧು ಹತ್ಯಾ ವಿರಕ್ತಿಯ ಉದ್ವೇಗದ ವೇಗವನ್ನು ಉದ್ದಕ್ಕೂ ಹೆಚ್ಚಿಸಲು ತುಂಬ ಉದ್ದೀಪಕವಾಗುತ್ತದೆ.

ಇದೇ ವಿಚಕ್ಷಣತೆಯ ಮೂಲ ಗೀತೆಯ "ಸರ್ವ ದರ್ಶನ ಸಂಗ್ರಹ" ಸ್ವರೂಪವನ್ನು ಮರೆಯಿಸಿ ಅದನ್ನು ನೇರ ವಿಶ್ವರೂಪದರ್ಶನಕ್ಕೆ ಚೌಕಟ್ಟಾಗಿ ಮಾಡಿದ ಚಾತುರ್ಯದಲ್ಲಿಯೂ ತೋರುತ್ತದೆ. ಅಲ್ಲಿಯೂ ಆ ವಿಶ್ವರೂಪದ ರೋಮಾಂಚಕಾರಿಯಾದ ರುದ್ರ ರಮ್ಯ ವರ್ಣನೆಯನ್ನು ಬಿಟ್ಟುಕೊಡುವುದರಲ್ಲಿಯೂ ಇದೆ.

ಅಲ್ಲದೆ ಇಲ್ಲಿ ಕೃಷ್ಣಾರ್ಜುನರ ಸಂವಾದದಲ್ಲಿ ಗೆಳೆತನದ ಆತ್ಮೀಯತೆ ಸೂಸಾಡುತ್ತದೆ. ಅದು ಗಂಭೀರ-ನಿರ್ಲಿಪ್ತ-ಗುರು-ಶಿಷ್ಯರ ಉಪನಿಷತ್ತಾಗಿ ನಡೆಯುವುದಿಲ್ಲ. ಜತೆಗೆ ಮೂಲದಲ್ಲಿ ಕಾಣಸಿಗದ ಉಪಮಾ ವೈಖರಿ ಅಡಿಗಡಿಗೆ ವರ್ಣರಂಜಿತ ಕಾರಂಜಿಯಂತೆ ಚಿಮ್ಮಿ ಹರಿಯುತ್ತ ಈಚರ್ಚೆಗೆ ಚೆಂದದ ಹೊನಲಾಗಿ ತೇಲಿಸಿಕೊಂಡು ಹೋಗುತ್ತದೆ.

ಒಟ್ಟಾರೆ ಕುಮಾರವ್ಯಾಸ ಭಗವದ್ಗೀತೆಯ ಸಂಗ್ರಹವನ್ನು ಇಲ್ಲಿ ಕ್ರೋಢೀಕರಿಸಿದಂತೆ ಅದರ ಭಾವಾನುವಾದವನ್ನು ತನ್ನದೇ ಶೈಲಿಯಲ್ಲಿ ತನ್ನದೇ ಸತ್ವದಿಂದ ಆತ ಮತ್ತೆ ಎರಕ ಹೊಯ್ದಿದ್ದಾನೆ.

('ಉದಯವಾಣಿ' ೧೯೭

# ಸಂಸ್ಕೃತದ ಸಂಕಟ

ಈಚೆಗೆ ನಮ್ಮ ಮಾಜೀ ಪ್ರಧಾನಿ ಮಾನ್ಯ ಮುರಾರಜೀ ದೇಸಾಯರು ದ್ವಾರಕಾ ಪೀಠದ ಜಗದ್ಗುರು ಶ್ರೀ ಶಂಕರಾಚಾರ್ಯರನ್ನು ಭೆಟ್ಟಿಯಾದಾಗ ಜಗದ್ಗುರುಗಳು ಸಂಸ್ಕೃತವನ್ನೇ ರಾಷ್ಟ್ರಭಾಷೆಯಾಗಿ ಮಾಡಬೇಕೆಂದು ಒಂದು ಆದೇಶವನ್ನೋ ಉಪದೇಶವನ್ನೋ ಶ್ರೀ ದೇಸಾಯಿಯವರಿಗೆ ನೀಡಿದರೆಂದು ಸಮಾಚಾರ ಪ್ರಕಟವಾಗಿತ್ತು. ಭಾರತೀಯ ರಾಷ್ಟ್ರೀಯ ಆರ್ಯ ಸಂಸ್ಕೃತಿಯ ಕಟ್ಟಾ ಅಭಿಮಾನಿಗಳೇ ಕೂಡಿಕೊಂಡ ಸುಭದ್ರವಾದ ಕೇಂದ್ರ ಸರಕಾರದ ಸಚಿವ ಸಂಪುಟವು ಮನಸ್ಸು ಮಾಡಿದರೆ ಅಂಥ ಒಂದು ಗುರ್ವಾಜ್ಞೆಯ ಪಾಲನೆ ವಿಶೇಷ ಕಷ್ಟ ಕಾರ್ಯವಲ್ಲ. ಸಂಸತ್ತಿನಲ್ಲಿಯೂ ಸುಭದ್ರವಾದ ಬಹುಮತದ ಬಲಿಷ್ಠ ಬೆಂಬಲ ಮುರಾರ್ಜಿ ಸರಕಾರಕ್ಕೆ ನಿಸ್ಸಂದಿಗ್ಧವಾಗಿ ಇದೆ.

ಗೋ ಬ್ರಾಹ್ಮಣರ ಹಿತವೇ ಜಗದ್ಧಿತವೆಂದು ದೃಢವಾಗಿ ನಂಬಿದ ಜಗದ್ಗುರುಗಳಿಗೆ ಗೋವಧೆಯ ಪ್ರತಿಬಂಧ ನಿಷೇದದ ನಂತರ ಅಥವಾ ಅದಕ್ಕೂ ಆದ್ಯತೆಯಲ್ಲಿ ಸಂಸ್ಕೃತ ಭಾಷೆಯನ್ನು ಗೀರ್ವಾಣ ಭಾರತಿಯಾಗಿ ಭಾರತದ ರಾಷ್ಟ್ರ ಭಾಷೆಯೆಂದು ಸಾರಿ, ಜಾರಿಯಲ್ಲಿ ತರಬೇಕೆಂಬುವದು ಅತ್ಯಂತ ಅಪ್ಯಾಯಮಾನವಾದ ಆಕಾಂಕ್ಷೆ. ಅದರ ಈಡೇರಿಕೆಗೆ ಈಗ ಕಾಲವು ಪಕ್ವವಾಗಿ ಬಂದಿದೆ ಎಂದು ಶ್ರೀ ಶಂಕರಾಚಾರ್ಯರು ಭಾವಿಸಿದರೆ ಅದೇನೂ ಆಶ್ಚರ್ಯವಲ್ಲ.

ಆದರೆ ಇಲ್ಲಿ ಮುಖ್ಯ ಮಾರ್ಮಿಕ ಪ್ರಶ್ನೆ ಇಷ್ಟೇ-ಭಾರತದ ರಾಷ್ಟ್ರಭಾಷೆ ಎಂದರೇನು? ಅದರ ಪಟ್ಟವೇರಲು ಸಂಸ್ಕೃತವು ಅರ್ಹವಾದ ಭಾಷೆಯೇ? ರಾಷ್ಟ್ರಕ್ಕೆಲ್ಲ, ಭಾರತೀಯ ಜನಾಂಗಗಳಿಗೆಲ್ಲ ಒಂದೇ ಭಾಷೆ ರೂಢಿಗೆ ಬರುವದೆಂದರೆ ಅದು ರಾಷ್ಟ್ರ ಭಾಷೆಯೇ? ದೇಶದಲ್ಲಿ ಅನಾದಿಯಿಂದಲೂ ಪ್ರಚಲಿತವಿದ್ದ ಇಂದು ಉರ್ಜಿತವಿರುವ ಎಲ್ಲ ಪ್ರಾದೇಶಿಕ ಭಾಷೆಗಳೂ ರಾಷ್ಟ್ರ ಭಾಷೆಗಳೇ. ಅವುಗಳಲ್ಲಿ ಯಾವುದೇ ಒಂದು, ಉಳಿದವುಗಳನ್ನು ಮಿಕ್ಕಿಮೀರಿ "ಅತ್ಯಶಿಷ್ಟತ್ ದಶಾಂಗುಲಂ" ಎಂಬಂತೆ ಸಾರ್ವಭೌಮವಾಗಿ ಪ್ರತಿಷ್ಠಾಪನೆಗೊಳ್ಳುವದು ಅಥವಾ ಇವೆಲ್ಲವುಗಳಿಂದ ಬೇರೆಯಾದ ಆಧುನಿಕವಾದ ಪರಕೀಯ ಭಾಷೆ ಇಲ್ಲವೇ ಭಾರತೀಯವಾದ ಪ್ರಾಚೀನ ಭಾಷೆ ಅದೇ ಬಗೆಯ ಸರ್ವೋಚ್ಚ ಸ್ಥಾನಮಾನವನ್ನು ಪಡೆಯುವದು ಸಾಧ್ಯವೂ ಇಲ್ಲ, ಸಾಧುವೂ ಅಲ್ಲ. ಅದು ಭಾಷಾ-ಬಾಂಧವ್ಯದ ವ್ಯಾವಹಾರಿಕ ಯುಕ್ತಾ-ಯುಕ್ತತೆಯ ಇಲ್ಲವೆ ಶಕ್ಯಾಶಕ್ಯತೆಯ ಕೋಟೆಯ ಸಂಗತಿಯೇ ಅಲ್ಲ.

ರಾಷ್ಟ್ರಭಾಷೆಯ ಮಾತು ಹಾಗಿರಲಿ. ರಾಷ್ಟ್ರಕ್ಕೆ ಒಂದು ಸಾಮಾನ್ಯ ಲಿಪಿ ಇರಬೇಕು, ಬಳಕೆಯಲ್ಲಿ ತರಬೇಕು-ಎಂದು ಪೂಜ್ಯ ವಿನೋಬಾ, ಕಾಕಾ ಕಾಲೇಲಕರ ಪ್ರಭೃತಿಗಳು ತಮ್ಮ ಜೀವಮಾನದುದ್ದಕ್ಕೂ ಹೆಣಗಾಡುತ್ತ ಬಂದಿದ್ದಾರೆ. ಆದರೆ ಅದೂ ಸಾಧ್ಯವಾಗಲಿಲ್ಲ. ಹಿಂದೆ ಜವಾಹರಲಾಲ ನೆಹರೂ, ಸುಭಾಸಚಂದ್ರಬೋಸ ಮುಂತಾದವರೂ ಭಾರತಕ್ಕೆಲ್ಲ ಒಂದೇ ಲಿಪಿ-ಅದೂ ರೋಮನ್ ಲಿಪಿ ಆಗಬೇಕೆಂದು ಪ್ರಚಾರಮಾಡಿದ್ದುಂಟು. ಅದಲ್ಲ, ದೇವನಾಗರಿ ಲಿಪಿಯೇ ಆಗಲಿ ಎಂದು ವಿನೋಬಾ ಪ್ರಭೃತಿಗಳ ಪ್ರಚಾರ ನಡೆಯಿತು. ಆದಾಗ್ಯೂ, ಅದು

ಇನ್ನೂ ಒಂದು ಪ್ರಾಯೋಗಿಕ-ಹಂತದ ಯತ್ನವಾಗಿಯೇ ಉಳಿದಿದೆ.

ನಮ್ಮಲ್ಲಿಯ "ಛಪ್ಪನ್ನೈವತ್ತಾರು" ದೇಶಗಳಲ್ಲಿ ಪ್ರತಿಯೊಂದಕ್ಕೂ ಒಂದು ಭಾಷೆ, ಆ ಭಾಷೆಗೆ ಒಂದು ಲಿಪಿ. ಲಿಪಿಯಿಲ್ಲದಿದ್ದರೂ ಬುನಾದಿಯಿಂದ ಭದ್ರಮೂಲವಾಗಿ ರೂಢಿಯಲ್ಲಿರುವ ತುಳು ಕೊಂಕಣಿ ಅಂಥ ಭಾಷೆಗಳು ಬೇರೆ ಒಂದೊಂದು ಭಾಷೆಯ ಹಿಂದೆ ಅದನ್ನಾಡುವ ಜನದ ಸಾಂಸ್ಕೃತಿಕ ಭಾವಕೋಶ ಹೀಗೆ ವಸ್ತು ಸ್ಥಿತಿ. ಇದು ಭಾರತದಂಥ "ತ್ರಿಂಶತ್ ಕೋಟಿ ಕಂಠ ಕಲಕಲನಿನಾದ ಕರಾಲ"ವಾದ ಪ್ರಚಂಡ ಉಪಖಂಡದ ಜನ ಸಮುದಾಯಕ್ಕೆ ಅದರ ಇತಿಹಾಸದ ಕರ್ಮವಿಪಾಕದ ಫಲ.

ಇವೆಲ್ಲ ಭಾಷೆಗಳನ್ನು ಉಳಿಸಿಕೊಂಡು ಅವುಗಳ ಲಿಪಿಯ ಮಟ್ಟಿಗಷ್ಟೇ ಅಖಿಲ ಭಾರತೀಯ ಮನ್ನಣೆಯ ಒಂದು ಲಿಪಿಯನ್ನು ಭಾವೈಕ್ಯದ ಸಾಧನವೆಂದು ಪ್ರಚಾರದಲ್ಲಿ ತರುವದೇ, ಸುಲಭಸಾಧ್ಯವಾಗುವದಿಲ್ಲ. ಅಂದಾಗ ಅಂಥದಲ್ಲಿ ಭಾರತಕ್ಕೆ ಒಂದೇ ಭಾಷೆ ರಾಷ್ಟ್ರೀಯ ಮಟ್ಟದಲ್ಲಿ ಪಟ್ಟಗಟ್ಟುವ ಹವ್ಯಾಸ ಇಂದಿನ ಪ್ರಜಾಪ್ರಭುತ್ವದ ಯುಗದಲ್ಲಿ ಭಾರತದಂಥ ಬಹು ರಾಷ್ಟ್ರಿಕ ರಾಜ್ಯ (Multinational State) ದಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾದೀತು?

ರಾಷ್ಟ್ರಭಾಷೆ ಎಂದರೆ ರಾಜ್ಯಗಳ ನಡುವಿನ ಸಂಪರ್ಕ ಭಾಷೆಯೆಂದು ಭಾವಿಸಿದರೂ ಆ ಮಟ್ಟಕ್ಕೆ ಈ ದೇವಭಾಷೆ ಇಳಿಯಬಲ್ಲದೇ? ಹಿಂದೆ ಒಂದಾನೊಂದು ಕಾಲದಲ್ಲಿ ಆರ್ಯ ದ್ರಾವಿಡ ಜನಾಂಗಗಳ ಸಮ್ಮಿಶ್ರ ಸಂಸ್ಕೃತಿಯು ರೂಪಗೊಳ್ಳುವ ಸಂದರ್ಭದಲ್ಲಿ ಆರ್ಯರ ಈ "ಬ್ರಾಹ್ಮೀ ಇಲ್ಲವೇ ಗೀರ್ವಾಣ ಭಾಷೆಯೇ ಅದರ ಹೆಸರೇ ಸೂಚಿಸುವಂತೆ ಬ್ರಹ್ಮವರ್ಗದ ಹೆಚ್ಚು ಕಡಿಮೆ ತ್ರೈವರ್ಣಿಕರ ಸಂಪರ್ಕ ಭಾಷೆಯಾಗಿ ನಡವಳಿಕೆಗೆ ಬಂದಿದ್ದಿರಬಹುದು. ಅದರೆ ಅದು ಈ ಸ್ಥಾನದಲ್ಲಿ ಬಹುಕಾಲ ಉಳಿಯಲಿಲ್ಲ. ಆಗಲೂ ಅದು ಬಹುಜನ ಸಮುದಾಯದ ಭಾಷೆಯಾಗಿದ್ದೇ ಇಲ್ಲ.

ಅದು ಹಾಗೆ ಆಗಿದ್ದರೆ "ಬಹುಜನ ಹಿತಾಯ ಬಹುಜನ ಸುಖಾಯ" ತನ್ನ ಹೊಸ ಧರ್ಮವನ್ನು ಸಾರಲು ಗೌತಮಬುದ್ಧನು ಪಾಲಿ ಭಾಷೆಯನ್ನು ಬಳಸುತ್ತಿದ್ದಿಲ್ಲ. ಅದೇ ರೀತಿ ವರ್ಧಮಾನ ಮಹಾವೀರನು ಅರ್ಧಮಾಗಧಿಯಲ್ಲಿ ಧರ್ಮ ಪ್ರಸಾರಕ್ಕೆ ತೊಡಗುತ್ತಿದ್ದಿಲ್ಲ. ಭಾರತದಲ್ಲಿ ಸಂಸ್ಕೃತವೇ ಒಂದೊಮ್ಮೆ ರಾಷ್ಟ್ರ ಭಾಷೆ ಆಗಿತ್ತೆಂದು ವಾದಕ್ಕಾಗಿ ಒಪ್ಪಿಕೊಂಡಿದ್ದರೂ ಅದು ಬಹುಶಃ ಇತಿಹಾಸಪೂರ್ವ ಯುಗದಲ್ಲಿ. ಅದು ಆ ಪಟ್ಟದಿಂದ ಪದಚ್ಯುತವಾಗಿಯೇ ಶತಮಾನಗಳು ಉರುಳಿದವು. ಅಚ್ಚ ದ್ರಾವಿಡ ಕುಲದ ತೆಲಗು, ತಮಿಳು, ಕನ್ನಡ, ಮಲೆಯಾಳಿ ಮುಂತಾದ ಭಾಷೆಗಳೇ ಅಲ್ಲದೇ ಆರ್ಯ ಸಂಸ್ಕೃತಿ ಸಂಗಮದಿಂದ ಸಂಸ್ಕೃತ ಸಂಕರದಿಂದ ಹಿಂದಿ, ಮರಾಠಿ, ಗುಜರಾಥಿ, ಬಂಗಾಲಿ ಪ್ರಭೃತಿ ಭಾಷೆಗಳು ಬೇರೆ ಆಯಾ ಜನಪದಗಳ ಜೀವನ ಸಂಸ್ಕೃತಿಗೆ ಮಾಧ್ಯಮವಾಗಿ, ವಾಹನವಾಗಿ ಊರ್ಜಿತವಾಗಿ ಬಾಳಿ ಬದುಕಿ ಬಂದವು.

ಇವೆಲ್ಲ ಪ್ರಾದೇಶಿಕ ಭಾಷೆಗಳಿಗೆ ಸಂಸ್ಕೃತದ ಋಣ ತೀರಲಾರದಷ್ಟು ಭಾರವಿದೆ. ಆ ಋಣಾನುಬಂಧ ಈ ಭಾಷೆಗಳು ಅಲ್ಲಗಳೆಯುವಂತಿಲ್ಲ. ಧರ್ಮ, ನೀತಿ, ಕಾವ್ಯ, ಕಲೆ ಇತ್ಯಾದಿ ವಿಷಯಗಳಲ್ಲದೇ ವ್ಯಾಕರಣ, ಶಬ್ದ ಸಂಪತ್ತು, ಶೈಲಿ-ಶೋಭೆ ಇವೆಲ್ಲ ವಿನ್ಯಾಸಗಳೂ ಸಂಸ್ಕೃತದಿಂದಲೇ ಈ ದೇಶಿ ಭಾಷೆಗಳು ಪಡೆದು ಪರಿಪುಷ್ಟವಾದವು. ಸುಶ್ಲಿಷ್ಟವಾದವು. ಈ

ದೃಷ್ಟಿಯಿಂದ ಭಾರತದ ಭಾಷಾ ಸಂದರ್ಭದಲ್ಲಿ ಸಂಸ್ಕೃತದ ಪ್ರಯೋಜನ ಮತ್ತು ಪ್ರತಿಷ್ಠೆ ಅತ್ಯಂತ ನಿರ್ದಿಷ್ಟವಿದೆ, ಸುಸ್ಪಷ್ಟವಿದೆ. ಈ ಮಟ್ಟದಲ್ಲಿಯೇ ಆ ನಿಟ್ಟಿನಲ್ಲಿಯೇ ಅದು ಮುಂದುವರಿಯ ಬೇಕಾಗಿದೆ.

ಸಾಮಾನ್ಯವಾಗಿ ಒಂದು ಭಾಷೆ ಒಂದು ಜನಪದದ ನಾಲಿಗೆ ಒಪ್ಪಿದ ಬದುಕು. Lingu-Language-ಇದು ನಾಲಿಗೆ ಎಂಬ ಅರ್ಥ ನೀಡುತ್ತದೆ. ಹಿಂದೆ ಯುರೋಪದಲ್ಲಿ ಫ್ರಾನ್ಸ ದೇಶದ ಅಗಸ್ತೊತ್ತಿಗೆ ಹಾಗೂ ಅಸ್ಥಾನ ವಿದ್ವತ್ತೆ, ಸಂಸ್ಕೃತಿಯ ಪ್ರಭಾವ ಸಾರ್ವತ್ರಿಕವಿತ್ತು. ಆಗ ಫ್ರೆಂಚ ಭಾಷೆ ಯುರೋಪಕ್ಕೆ "Lingua France" ವಿಶ್ವಭಾಷೆ ಅನಿಸಿಕೊಂಡಿತು. ನಮ್ಮ ಅದೇ ಸ್ಥಾನ ಮುಸ್ಲಿಮರ ಆಳ್ವಿಕೆಯಲ್ಲಿ ಫಾರ್ಸಿ, ಉರ್ದು ಭಾಷೆಗಳಿಗೂ, ಬ್ರಿಟಿಷ ಅಳ್ವಿಕೆಯಲ್ಲಿ ಇಂಗ್ಲಿಷಿಗೂ, ಪೇಶವಾಯಿಯಲ್ಲಿ ನಮ್ಮ ಕರ್ನಾಟಕದಲ್ಲಿ ಮರಾಠಿಗೂ!-ಸಲ್ಲುತ್ತಿತ್ತು. ನಮ್ಮಲ್ಲಿ ರಾಷ್ಟ್ರೀಯ ಜಾಗೃತಿ ಹಾಗೂ ಸ್ವಾತಂತ್ರ್ಯ ಚಳವಳಿಯ ಯುಗದ ಆರಂಭದಿಂದ, ಉತ್ತರ ಭಾರತದ ರಾಜಕೀಯ ನಾಯಕತ್ವದಿಂದಾಗಿ-ಅದಕ್ಕೂ ಹಿಂದಿನಿಂದ ನಮ್ಮ ಸೈನ್ಯದಲ್ಲಿಯೂ, ಸಾಧೂ ಸಮಾಜದಲ್ಲಿಯೂ ಇದೇ ಉತ್ತರದವರ ಪ್ರಾಬಲ್ಯದಿಂದಾಗಿ,-ದೇಶದಾದ್ಯಂತ ಹಿಂದೀ ಹಿಂದುಸ್ತಾನಿಯ ಪ್ರಚಾರ ಹಾಗೂ ವರ್ಚಸ್ಸು ನೆಲೆಗೊಂಡಿತು.

ಆದರೆ ಅಂಥ ಒಂದು ಆಯಕಟ್ಟಿನ ಮಹತ್ವ ಸಂಸ್ಕೃತಕ್ಕೆ ಸಲ್ಲುವುದು ಸಾಧ್ಯವಿಲ್ಲ. ಯಾವ ಕಾಲದಲ್ಲಿಯೂ ಸಂಸ್ಕೃತವು ನಮ್ಮ ಜನತೆಯ ಭಾಷೆಯಾಗಿದ್ದಿಲ್ಲ. ಸಂಸ್ಕೃತವು ನಮ್ಮ ಸಂಸ್ಕೃತಿಯ ಮಾಧ್ಯಮವಾಗಿಯೇ ಮೆರೆಯಿತು. ಸಾಂಪ್ರದಾಯಿಕ ಸಂಸ್ಕಾರವಾಗಿ ಮುಂದುವರಿಯಿತು. ಆದರೆ ಅದು ಯಾವದೊಂದು ಹಿಂದೂ ಜನಾಂಗದ, ಪ್ರದೇಶದ ಭಾಷೆಯಾಗಿದ್ದಿಲ್ಲ.

ಪಾಲಿ, ಮಾಗಧಿ, ಮಹಾರಾಷ್ಟ್ರೀ, ಪಂಜಾಬಿ, ಬಂಗಾಲಿ, ತೆಲುಗು, ತಮಿಳು, ಕನ್ನಡ, ಮಲೆಯಾಳಿ, ಗುಜರಾಥಿಗಳು ಆಯಾ ಜನಾಂಗ-ಪ್ರದೇಶಗಳ ಭಾಷೆಗಳು. ಆಯಾ ಭಾಷೆ ಅದನ್ನು ಆಡುವ ಜನರಿಂದ ಜನಪದದಿಂದ ತನ್ನ ಹೆಸರು ಪಡೆಯುವದು ವಾಡಿಕೆ. ಅದರೆ ಸಂಸ್ಕೃತ? ಅದರ ಅನ್ವರ್ಥಕತೆಯೇ ಸೂಚಿಸುತ್ತದೆ,-ಅದು ಮೂಲದ ಒಂದು ಭಾಷೆಯ (ಪ್ರಾಕೃತ?) ಪರಿಷ್ಕೃತ ಸಂಸ್ಕಾರಗೊಂಡ ರೂಪವೆಂದು! ಅಂದಾಗ ಸಂಸ್ಕೃತವನ್ನೇ ಅಡುವ ಜನಾಂಗ ಯಾವದು? ಎಲ್ಲಿಯದು? “ಸಂಸ್ಕೃತ” ಶಬ್ದವೇ ಅದು ಮೂಲಭಾಷೆ ಅಲ್ಲವೆಂದು ಸೂಚಿಸುತ್ತದೆ. ಇಲ್ಲಿ ಇನ್ನೂ ಒಂದು ಸ್ವಾರಸ್ಯ. “ಸಂ” ಉಪಸರ್ಗದಿಂದ “ಸಂಕರಿ” “ಸಂಸಾರ” “ಸಂಭ್ರಮ” ಇತ್ಯಾದಿ ರೂಪಗಳಂತೆ ಸಂಸ+ಕೃತ ಸಿದ್ಧವಾಗಿಲ್ಲ. ಈ “ಸಂಸ್” ಉಪಸರ್ಗ ಯಾವುದು? ಈ ರೂಪದ ನಿಷ್ಪತ್ತಿ ನಿರ್ವಚನವೇನು? ಅದೊಂದು ಅಪವಾದವೆಂದಮಾತ್ರಕ್ಕೆ ಏನು ಅಂದಂತೆ? “ತಿರಿಸ” “ಪುರ”ಗಳಂತೆ “ಸಂಸ್(?)ಕೂಡ ಒಂದು ಉಪಸರ್ಗ ಹಿಂದೆ ರೂಢಿಯಲ್ಲಿದ್ದು ಆಮೇಲೆ ಖಿಲವಾಯಿತೆ? ಆದರೆ ಹೀಗೆ ಅನುಸ್ವಾದ + ವಿಸರ್ಗ ಕೂಡಿಯೇ ಜಂಟಿಯಾಗಿ “ಸ”ಕಾರಕ್ಕೆ ಅಂಟಿದ್ದು ಹೇಗೆ?

ಸಂಸ್ಕೃತದ ಸುವರ್ಣ ಯುಗದಲ್ಲಿಯೂ ಈ ಭಾಷೆ ವರಿಷ್ಠ ವಲಯಗಳ ಬ್ರಾಹ್ಮಣ ಕ್ಷತ್ರಿಯರ ಹಾಗೂ ವಿದ್ವಜ್ಜನರ ಭಾಷೆಯೇ ಆಗಿತ್ತು. ಸಂಸ್ಕೃತ ನಾಟಕಗಳಲ್ಲಿ ಸ್ತ್ರೀಯರೂ

ದಾಸ-ದಾಸಿಯರೂ ಸಾಮಾನ್ಯರೂ ಮಾತಾಡುವದು ಪ್ರಾಕೃತವನ್ನೇ. ಭಾಸನ ಒಂದು ನಾಟಕದಲ್ಲಿ ಮಂತ್ರಿ ಬ್ರಾಹ್ಮಣ ಸೇನಾಪತಿಗಳು ವೇಷ ಬದಲಿಸಿ ಸಾಮಾನ್ಯ ಪಾತ್ರಗಳಾದಾಗ ಪ್ರಾಕೃತದಲ್ಲಿ ಮಾತಾಡುತ್ತಾರೆ; ಅದೇ ಏಕಾಂತದಲ್ಲಿ ತಮ್ಮೊಳಗೆ ಸಂಸ್ಕೃತದಲ್ಲಿಯೇ ಮಾತಾಡುತ್ತಾರೆ! "ಮೃಚ್ಛಕಟಿಕ"ದಲ್ಲಿ ಮೈತ್ರೇಯ ಒಂದು ಮಾತಾಡುತ್ತಾನೆ. ಅವನಿಗೆ ಹಾಡುವ ಗಂಡು-ಸಂಸ್ಕೃತ ಕಲಿಯುವ ಹೆಣ್ಣು ಕಂಡರೆ ನಗುಬರುತ್ತದಂತೆ! ಅಂದರೆ ಹೆಂಗಸರು ಸಂಸ್ಕೃತ ಕಲಿಯುವದು ಅಷ್ಟು ಹಾಸ್ಯಾಸ್ಪದ! "ಸ್ತ್ರೀಯಃ ವೈಶ್ಯಾಃ ತಥಾ ಶೂದ್ರಾಃ" ಸಂಸ್ಕೃತಕ್ಕೆ ಹೊರತಾಗಿದ್ದಿರಬೇಕು.

ತಾತ್ಪರ್ಯವಿಷ್ಟೇ, ಭಾರತದಲ್ಲಿ ಸಂಸ್ಕೃತವು ಜನ ಸಾಮಾನ್ಯರ ಭಾಷೆ ಎಂದೂ ಇದ್ದಿಲ್ಲ. ಅದು ಸಂಸ್ಕೃತಿಯ ಪಾಂಡಿತ್ಯದ ಶಿಷ್ಟಾಚಾರದ ಭಾಷೆಯಾಗಿತ್ತು.

ಅದು ಇಂದು ಪ್ರತಿಯೊಂದು ರಾಜ್ಯ ಭಾಷೆಯೂ ಸ್ವಾಭಿಮಾನ ಸ್ವಯಂಪ್ರಜ್ಞೆಯಿಂದ ಭರದಿಂದ ಪ್ರಗತಿಹೊಂದುತ್ತಿರುವಾಗ ರಾಷ್ಟ್ರ ಭಾಷೆಯಾಗಿ ಪ್ರಚಾರ ಪಡೆಯಬಹುದೇ?

ಸಂಸ್ಕೃತದ ಮಹತ್ವ ಮಹಾತ್ಮ್ಯ ಅನನ್ಯ. ಈ ಭಾಷೆ ಈ ದೇಶದ ಇತರ ಭಾಷೆಗಳಿಗೆ ಪ್ರಾಣವಾಯುವಿನಂತೆ, ಜೀವಸತ್ವದಂತೆ. ರೇಡಿಯಂ ತತ್ವದಂತೆ ಜೀವಾಳದ ಆಗತ್ಯದ್ದು. ಈ ಕುರಿತು ಮತಭೇದವೇ ಇಲ್ಲ. ಇಂದು ನಮ್ಮ ಮುಂದಿನ ಪ್ರಶ್ನೆ, ಸಂಸ್ಕೃತವನ್ನು ರಾಷ್ಟ್ರ ಭಾಷೆಯೆಂದು ಕಡ್ಡಾಯವಾಗಿ ನಮ್ಮ ಮಕ್ಕಳ ಮೇಲೆ ಹೇರುವದಲ್ಲ. ಇಂಥ ಪ್ರಯೋಗದ ತಕ್ಕ ಪರಾಮರ್ಶೆ ಮುದ್ದಣನ ಮನೋರಮೆ ಹಿಂದೆಯೇ ಮಾಡಿದ್ದುಂಟು! ಸ್ಥಿತಪ್ರಜ್ಞನಿಗೆ ಯಾವ ಭಾಷೆ ಆದರೇನು? ಆದರೆ ನಮ್ಮ ಮಕ್ಕಳು ಸ್ಥಿತಪ್ರಜ್ಞರಲ್ಲ. ಅವರಿಗೆ ಮೂರು-ನಾಲ್ಕು ಭಾಷೆಗಳನ್ನು ಅರಗಿಸಿಕೊಳ್ಳುವದು ಯಮಯಾತನೆ. ಇಂದು ಹಿಂದಿ ರಾಷ್ಟ್ರ ಭಾಷೆಯೆಂದು ನಮ್ಮ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳಲ್ಲಿ ಕಡ್ಡಾಯವಾಗಿಸಿ ಯಾವ ಹೀನಾಯಕ್ಕೆ ಇಳಿದಿದೇ? ಸಂಸ್ಕೃತಕ್ಕೂ ಅದೇ "ಸ್ಥಾನ-ಮಾನ" ತಂದು ಕೊಡಬೇಕೇ?

ಮುಖ್ಯವಾಗಿ ಇಂದಿನ ಅಗತ್ಯದ ಪ್ರಶ್ನೆ ಸಂಸ್ಕೃತವನ್ನು ಜನಪ್ರಿಯಗೊಳಿಸುವದು. ಸಂಸ್ಕೃತ ಅದನ್ನು ಆಡುವ ಜನಾಂಗವಿಲ್ಲದ್ದರಿಂದ "ಮೃತ ಭಾಷೆ" ಎಂದೆನಿಸಿಕೊಂಡರೂ ಇಂದಿಗೂ ಎಂದಿಗೂ ನಮ್ಮ ದೇಶೀ ಭಾಷೆ ಸಂಸ್ಕೃತಿಗಳಿಗೆ ಅತಿ ಉಪಯುಕ್ತವಾದ ಉಪಕಾರಿಯಾದ ಭಾಷೆ-ಎಂಬುದರ ಮನವರಿಕೆ ನಮ್ಮ ಜನಕ್ಕೆ ಆಗಬೇಕು. ಇದಕ್ಕಾಗಿ ಸಂಸ್ಕೃತ ಆಧುನಿಕ ಜೀವನದ ಪ್ರಮೇಯಗಳ ವಿವೇಚನೆ ವಿಚಾರ-ವಿನಿಮಯಕ್ಕೆ ಸಲ್ಲಬಲ್ಲದೆಂದು ಸಾರ್ವತ್ರಿಕ ಭಾವನೆ ಬೇರೂರಬೇಕು. ಈ ಕುರಿತು ಆಕಾಶವಾಣಿಗೆ ನಾನು ಒಂದು ಸೂಚನೆ ಮಾಡಿದ್ದೆ. ಕೇವಲ ವಾರ್ತೆಗಳನ್ನು ಸಂಸ್ಕೃತದಲ್ಲಿ ಬಿತ್ತರಿಸಿದರೆ ಸಾಲದು. ಆಗಾಗ್ಗೆ ದೇಶದ ಪ್ರಚಲಿತ ಸಾರ್ವಜನಿಕ ಸಮಸ್ಯೆಗಳ ಬಗೆಗೆ ಚರ್ಚೆಗಳನ್ನು ಸುಗಮ ಸಂಸ್ಕೃತದಲ್ಲಿ ಏರ್ಪಡಿಸಿ ಪ್ರಸಾರಗೊಳಿಸಬೇಕು. ಸಂಸ್ಕೃತವು ನಮ್ಮ ವೈಜ್ಞಾನಿಕ, ವೈಧಾನಿಕ, ವೈಚಾರಿಕ ವಿಷಯ ವಿವೇಚನೆ? ವಾದ-ವಿವಾದಗಳಿಗೂ ತಕ್ಕದಾದ ಮಾಧ್ಯಮವಾಗಬಲ್ಲವೆಂಬ ಭರವಸೆ ಹುಟ್ಟಬೇಕು.

ಅನಂತರ ಸಂಸ್ಕೃತವನ್ನು ಬಹಳಷ್ಟು ಸುಗಮ ಸುಬೋಧಗೊಳಿಸಬೇಕು. ಉದಾಹರಣೆಗೆ ಅದರಲ್ಲಿಯ ಆತ್ಮನೆ, ಪರಸ್ಮೈಪದಗಳ ತಲೆಗೆಡಿಸುವ ತೊಡಕು ತೊಡೆದು ಹಾಕಬೇಕು. ಈ

ಭೇದದ ಮಮ್ಮೀ ಮೃತವಾಗಿ ಶತಮಾನಗಳೇ ಸಂದಿವೆ. ಅವುಗಳಿಗೆ ಯೋಗ್ಯ ಅಂತ್ಯೇಷ್ಟಿ ಆಗಬೇಕು. ಜತೆಗೆ ದ್ವಿವಚನವೂ ಹೋಗಬೇಕು. ಹಾಗೆಯೇ ಸಂಸ್ಕೃತ ಶಬ್ದಗಳ ಲಿಂಗ ಭೇದ, ವ್ಯಂಜನಾಂತಗಳ ಶಬ್ದಗಳ ವಿಭಕ್ತಿ ಕ್ರಮ ಇತ್ಯಾದಿ ಧೃತಿಗೆಡಿಸುವ ಕಸರತ್ತು. (ಅಶ್ವತ್ಥಾಮಾ ಬಲಿ-ವ್ಯಾಸ-"ಹನುಮಾನ್" ಇವರೆಲ್ಲ ಚಿರಜೀವಿಗಳಾಗಿ ಇಂದಿಗೂ ನಮ್ಮ ಸಂಸ್ಕೃತ ವಿದ್ಯಾರ್ಥಿಗಳ ಜೀವಹಿಂಡುತ್ತಿರುತ್ತಾರೆ!)

ಹೀಗೆ ಸಂಸ್ಕೃತ ವ್ಯಾಕರಣ ಬಹಳಷ್ಟು ಸರಳವಾಗಬೇಕು. ಮಾತ್ರವಲ್ಲ ನಮ್ಮ ಜನ ಈ ಭಾಷೆ ಕೆಲವೇ ವಾರಗಳಲ್ಲಿ ಕಂಠಗತ ಮಾಡಿಕೊಳ್ಳುವಂಥ ಒಂದು ಪಾಠ ತಂತ್ರ ಪಳಗಬೇಕು ಅದಕ್ಕಾಗಿ ಇಂಗ್ಲಿಷಿನಂತೆ ಬೇಸಿಕ ಸಂಸ್ಕೃತ ಪಠ್ಯಕ್ರಮ ಸಿದ್ಧವಾಗಬೇಕು.

ಇದಕ್ಕೆಲ್ಲ ಮೂಲವಾಗಿ ಸಂಸ್ಕೃತದ ಬಗೆಗೆ ಅದೊಂದು ಹಳೆಯ ಗೊಡ್ಡು ಎಂಬ ಅಧುನಿಕ ಭಾವನೆ ಹೋಗಬೇಕು. ಅದಕ್ಕಾಗಿ ಈ ಭಾಷೆಯನ್ನು ಸಂಸ್ಕೃತ ಪಂಡಿತರ "ಮಡಿವಂತಿಕೆ"ಯ ಅವಗುಂಠನದಿಂದ ಅದನ್ನು ಹೊರತಬೇಕು.

ನಮ್ಮ ಹಳೆಗನ್ನಡ ಪಂಡಿತ ಕವಿಗಳು ಕನ್ನಡದಲ್ಲಿ ಕಾವ್ಯ ರಚಿಸಿದರೂ, ಈ ಕನ್ನಡವನ್ನೇ ಸಂಸ್ಕೃತೀಕರಣ ಮಾಡಿ ಜನತೆಯಿಂದ ದೂರ ಒಯ್ದುಬಿಟ್ಟರು. ಆ ಮಡಿ ಬಟ್ಟೆ ಕಳಚಿ ಕನ್ನಡವನ್ನು ಜನತೆಯ ಹೃದಯದಲ್ಲಿ ಮತ್ತೆ ಸ್ಥಾಪಿಸಿ ಆದರೊಳಗಿಂದಲೇ ಹೊಸ ಕಲ್ಯಾಣ ಕಾಂತ್ರಿಯನ್ನು ಆರಂಭಿಸಲು ಹನ್ನೆರಡನೆಯ ಶತಮಾನದ ವರೆಗೆ ವಚನಕಾರರು ಬರುವನಕವೂ ಕಾಯಬೇಕಾಯಿತು.

ಅಂದಿನಿಂದ ಇಂದಿನವರೆಗೆ ಗಡಿಯಾರದ ಮುಳ್ಳು ಮತ್ತೆ ಹಿಂದಕ್ಕೆ ತಿರುಗಿಸುವದು ಶಕ್ಯವಿಲ್ಲ. ಆದರೆ ಪರಿಸ್ಥಿತಿಯಲ್ಲಿ ಪ್ರಾದೇಶಿಕ ಭಾಷೆಗಳ ಅಭಿವೃದ್ಧಿಗೆ ಆಧುನಿಕ ಶಾಸ್ತ್ರ ವ್ಯಾಸಂಗ ಸಾಹಿತ್ಯ ವಿಮರ್ಶೆ ಮುಂತಾದ ಭಾಷಿಕ ಸಂಸ್ಕೃತಿಯ ಶಬ್ದ ಸಮೃದ್ಧಿಗೆ ಸಂಸ್ಕೃತದ ಸರ್ವ ವಿಧವಾದ ಪ್ರಯೋಜನ ಪಡೆಯದೇ ಗತ್ಯಂತರವೇ ಇಲ್ಲ. ಜತೆಗೆ ಸಂಸ್ಕೃತ ಜೀವಂತವಾಗಿ ಊರ್ಜಿತವಾಗಿ ಇಡಲು ಜನತೆಗೆ-ಯುವಜನಕ್ಕೆ ಅದರ ಆಕರ್ಷಣೆ ಸ್ವಾರಸ್ಯ ಭರದಿಂದ ಹೆಚ್ಚಿಸಬೇಕು. ಈ ನಿಟ್ಟಿನಲ್ಲಿ ಹಾಯಬೇಕು ಸಂಸ್ಕೃತದ ಅಭ್ಯುದಯದ ಹಾದಿ.

●

('ಮುನ್ನಡೆ' ೧೯೭೮)

# ಜಾತೀಯ ಸತ್ಯ ಮತ್ತು ಮಾನವೀಯ ನ್ಯಾಯ

ದೇಶದಲ್ಲಿ-ಹಾಗೆಯೇ ರಾಜ್ಯದಲ್ಲಿ-ಮೇಲ್ವವರ್ಗದವರು ತಮ್ಮ ಜನಗಣತಿಯ ಸಂಖ್ಯಾಮಾನದಲ್ಲಿ ತೀರ ಹೆಚ್ಚು ಸಂಖ್ಯೆಯಲ್ಲಿ ಅಡಳಿತ, ಶಿಕ್ಷಣ ಇನ್ನಿತರ ಸಾರ್ವಜನಿಕ ಸೇವಾ ಸ್ಥಾನಗಳನ್ನು ಆಕ್ರಮಿಸಿ ಕೂತಿದ್ದು ಒಂದು ಕಟುವಾದರೂ ಒಪ್ಪಿಕೊಳ್ಳಬೇಕಾದ ಐತಿಹಾಸಿಕ ಸತ್ಯ. ಕಳೆದ ಒಂದೆರಡು ಶತಮಾನಗಳಿಂದಲೂ ನಾವು ಈ ಸತ್ಯವನ್ನು ಅಪ್ಪಿಗೊಂಡೆ ಬದುಕುತ್ತಾ ಬಂದಿರುತ್ತೇವೆ. ೨೦ರ ದಶಕದ ಸ್ವಾತಂತ್ರ್ಯ ಚಳವಳಿಯ ಕಾಲದಿಂದಲೂ ಇದೇ ನಡೆದು ಬಂದಿತು. ನಮ್ಮ ಜಿಲ್ಲೆಯ ಕರಾವಳಿಯ ತಾಲೂಕುಗಳಲ್ಲಿ ಆಗಲಿ ಘಟ್ಟದ ಮೇಲಿನ ತಾಲೂಕುಗಳಲ್ಲಿ ಆಗಲಿ ಕರನಿರಾಕರಣೆಯ ವೀರ ಕಥೆಯಲ್ಲಿ ಮುಂಚೂಣಿಯಲ್ಲಿ ನಿಂತು ಹೋರಾಡಿದ ಜನ ಅಲ್ಲಲ್ಲಿಯ ಮೇಲ್ವರ್ಗದವರು-ಅದೂ ಬ್ರಾಹ್ಮಣ ವರ್ಗದವರು.

ಅದಕ್ಕೂ ಹಿಂದಿನಿಂದ ಸರಕಾರಿ ಇಲಾಖೆಗಳಲ್ಲಿ, ಶಿಕ್ಷಣ, ನ್ಯಾಯ, ಕಸ್ಟಂ, ಜಂಗಲ್ ಇತ್ಯಾದಿ ಖಾತೆಗಳ ಸೇವಾಶ್ರೇಣಿಗಳಲ್ಲಿಯೂ ಮುಂದರಿದ ವರ್ಗ(ಜಾತಿ)ಗಳ ವಿದ್ಯಾವಂತರೇ ಮುಂದೆ ಬಿದ್ದರು. ಮುಂದೆ ಹೋದವರು ತಮ್ಮ ಬಂಧು-ಬಳಗದವರನ್ನು ಅವರ ಸೇವಾವಕಾಶಗಳಲ್ಲಿ ಸೇರಿಸಿಕೊಂಡರು. ಮೊದಲು ಸಾರಸ್ವತರು ವಕೀಲಿ ಡಾಕ್ಟರಿ ಹಾಗೂ ಕೋರ್ಟು ಕಚೇರಿಗಳಲ್ಲಿ, ಕಾರವಾರೀ ಕಾರಭಾರಿ ಜನ ಕಸ್ಟಂ ಇಲಾಖೆಯಲ್ಲಿ, ಹವೀಕರು ಶಿಕ್ಷಣ ಇಲಾಖೆಯಲ್ಲಿ ಸೇರಿದರು. ಇದೆಲ್ಲ ಒಂದು ಧೂರ್ತ ಒಳಸಂಚಾಗಿ ಕೂಡಿ ಬಂದದ್ದಲ್ಲ. ಅಂದು ಸಮಾಜದಲ್ಲಿ ಸುವಿದ್ಯಾ ಸುಸಂಸ್ಕೃತ ಮಂದಿ ಇದೇ ವರ್ಗಗಳಿಂದ ಒದಗುತ್ತಿದ್ದರು. ಸಾರ್ವಜನಿಕ ಪ್ರಜ್ಞೆ, ಸಾಮಾಜಿಕ ಚಾಕಚಕ್ಯತೆ, ಸರಕಾರೀ ಚಾಕರಿಗೆ ಅವಶ್ಯವಾದ ಒಂದು ಶಿಷ್ಟ ಸಂಭಾವಿತ ಚಾಣಾಕ್ಷತೆ ಹಾಗೂ ಸುಟಿಯಾದ ಬೌದ್ಧಿಕಪ್ರವೃತ್ತಿ ಈ ಮಂದಿಯಲ್ಲಿಯೇ ಕಂಡು ಬರುತ್ತಿತ್ತು.

ಮೂಲತ: ಬ್ರಿಟಿಶರು ಈ ದಕ್ಷಿಣ ಮಹಾರಾಷ್ಟ್ರದಲ್ಲಿ ರಾಜಸತ್ತೆಯನ್ನು ಕಸಿದುಕೊಂಡಿದ್ದೇ ಪೇಶ್ವೆಯವರ (ಬ್ರಾಹ್ಮಣ ಅಳರಸರ) ಕಡೆಯಿಂದ. ಆಗ ಅದಕ್ಕೆ ಪ್ರತಿಯಾಗಿ ಆ ವರ್ಗದ ವಿತುಷ್ಟಿ ಇಂಗಿಸಲು ಅವರನ್ನು ತಮ್ಮ ಆಡಳಿತದಲ್ಲಿ ಪಾಲ್ಗೊಳ್ಳಲು ಕೊಟ್ಟು ಸಂತೈಸಲು ಬ್ರಿಟಿಶರು ಈ ಹಲವಾರು ಬ್ರಾಹ್ಮಣ ಜಾತಿಗಳನ್ನು ಎತ್ತಿಹಿಡಿಯುವದು ಅವರ ರಾಜನೀತಿಗೆ ಅನುಕೂಲವೆನಿಸಿತು. ಹೀಗೆ ಆಡಳಿತಕ್ಕೆ ಬೇಕಾದ ಬುದ್ಧಿಜೀವಿವರ್ಗ ಸಮಾಜದಲ್ಲಿಯ ಮೇಲ್ವರ್ಗವಾಗಿ ಅಲ್ಲಿಯ ಜಮೀನ್‌ದಾರಿ ಕುಲಗಳ ಹೆಚ್ಚಿನ ಪ್ರವರಗಳ ಪ್ರತಿಷ್ಠಿತ ವರ್ಗವಾಗಿ ಈ ವಿವಿಧ ಸಾರ್ವಜನಿಕ ಸೇವಾಶ್ರೇಯಗಳನ್ನು ಈ ಜಾಣ ಜಾತಿಗಳು ಸತ್ತೆ, ಸಂಪತ್ತು ಮತ್ತು ಸಂಸ್ಕೃತಿಯ ಆಯಕಟ್ಟಿನ ಸ್ಥಾನಗಳನ್ನು ಗಿಟ್ಟಿಸಿಕೊಂಡು ಗಟ್ಟಿಯಾಗಿ ತಳವೂರುವಂತೆ ಆಯಿತು.

ಮುಂದೆ ಇದೇ ಜಾಡು ಹಿಡಿದು ವಿದ್ಯಾ ಇಲಾಖೆಯನ್ನು ನಾಡವರೂ ಸೇರಿದರು. ದೇಶದಲ್ಲಿ ಇಂಗ್ಲಿಷ ಶಿಕ್ಷಣ ಕ್ರಮೇಣ ಹಬ್ಬಿದಂತೆ ಈ ಸಾಂಸ್ಕೃತಿಕ ವಲಯ ವಿಸ್ತಾರ ಗೊಂಡಿತು. ಮೇಲೆಹೇಳಿದ ಮುಖ್ಯ ತ್ರಯಗಳ ಪ್ರಯೋಜನದ ಪೈಪೋಟಿಯೂ ಆ ಆತನಕ ಹಿಂದುಳಿದ ವರ್ಗಗಳಲ್ಲೂ ಮುಂದೆ ನುಗ್ಗಿ ಯಶಸ್ವಿಯಾಗ ಹತ್ತಿದವು. ಹೀಗೆ ನಾಡವರು. ನಾಮಧಾರಿಗಳು, ಹರಿಕಂತ್ರರು ಹಾಲಕ್ಕಿಗಳು ಇಂದು ಹರಿಜನ-ಗಿರಿಜನರೂ "ಗುಣೋತ್ಕರ್ಷ" ಒಂದು ಏರಿಕೆಯ ಕ್ರಮದಲ್ಲಿ ಸಾಮಾಜಿಕ ಉತ್ತಮತೆಯನ್ನು ಉತ್ತರೋತ್ತರ ಸಾಧಿಸುತ್ತಬರುವುದು ಎಷ್ಟು ಅನಿವಾರ್ಯವೋ ಅಷ್ಟೇ ಅಗತ್ಯವೂ ಸ್ವಾಗತಾರ್ಹವೂ ಆಗಿದೆ.

ಈ ಉತ್ತರೋತ್ತರ ಉತ್ಕರ್ಷದ ಕ್ರಮ ಅಷ್ಟೊಂದು ಸುಗಮವಾಗಿ, ನಿರಾತಂಕವಾಗಿ ಸಾಗುವುದಿಲ್ಲವೆಂಬುದೂ ನಿಜ. ಅದಕ್ಕೆ ಅಲ್ಲಲ್ಲಿ ಹುತ್ತಗಟ್ಟಿನಿಂದ ಪಟ್ಟಭದ್ರ ಸ್ವಾರ್ಥಿಗಳು ಕಾಲ್ತೊಡಕಾಗುತ್ತಾರೆ.

ಒಳ್ಳುಲದ ಪೊಳ್ಳು "ಬಿಂಕದ ಮೂಗು ಮೇಲೆ ಮಾಡಿ "ನೆತ್ತಿಗೇರಿದ ಕಣ್ಣ ಕುರುಡು ದಬ್ಬಾಳಿಕೆಯ" ಎಂದಿನಂತೆ ಸಾರೋ ಭಾರವಾಗಿ ಮುಂದರಿಸಬಹುದು.-ಬೇಕು ಎಂದು ಒಂದು "ಹಂದಿಹಾಯ್ಕೆಯ" ಹುಂಬತನದಿಂದಲೇ ನಡೆಯುವ ಹಟವಾದಿಗಳ ಯುಗಧರ್ಮವನ್ನು ಅರಿಯದೆ ಗುರುತಿಸಲೂ ಆರದೆ ಸಾಮಾಜಿಕ ನ್ಯಾಯಕ್ಕೆ ಐತಿಹಾಸಿಕ ಸತ್ಯಕ್ಕೆ ದ್ರೋಹಬಗೆಯುತ್ತಾ ಇಂದಿಗೂ ಗ್ರಾಮಾಂತರ ಪ್ರದೇಶದ ಸರ್ವತೋಮುಖ ಅಭಿವೃದ್ಧಿಗೆ ಅಡ್ಡನಿಲ್ಲುತ್ತಲೇ ಇರುವದು.

೨೫ ವರ್ಷಗಳ ಹಿಂದೆ ನಮ್ಮ ರಾಯರು ಮೆಟ್ರಿಕ್ ಮುಲ್ಕಿ ಯಾವ ಪರೀಕ್ಷೆಯನ್ನು ಕಟ್ಟುವ ಮಟ್ಟಕ್ಕೆ ನಿಲುಕದೆ "ನಾಕಕ್ಷರ" ಓದಿ ಬಿಳಿಯಂಗಿ ಧೋತರವುಟ್ಟು ಪೇಟೆ ಸುತ್ತಾಡಿ ಮೆರೆಯುವಾಗ ಅವರ ಆಕಾಲ ಕ್ರಮಾಗತ ಶ್ರೇಷ್ಠತೆಯನ್ನು ಒಪ್ಪಿಕೊಂಡ ಬೊಮ್ಮಯ್ಯನೋ ಕೆಂಚನಾಯ್ಕನೋ ಓಮುವ್ವೋ ಅವರಿಗೆ ಬಗ್ಗಿ ಸಲಾಂ ಹಾಕುತ್ತಿದ್ದರು. ಅವರು ಎಷ್ಟೋ ಹಳಬರಿರಲಿ, ಈ ಹರಯದ ರಾಯರೂ, ಹೆಗಡೆಯರೂ ಭಟ್ಟರೂ, ಶೆಟ್ಟರೂ ಅವರನ್ನು ಏಕವಚನದಿಂದಲೇ ಕರೆಯುವದಾಗಿತ್ತು. ಅವರು ಮಾತ್ರ ಈ ಕುಂತರಿಗೆ ಬಹುವಚನ ಪ್ರಯೋಗಿಸಬೇಕಿತ್ತು. ಅದರೆ ದುರ್ದೈವದ ವ್ಯಂಗ್ಯವೆಂದರೆ ಇಂದು ಆ ನಾಯ್ಕ, ಗೌಡರ ಮಕ್ಕಳು ರಾಯರ ಮಕ್ಕಳಿಗಿಂತ ಮುಂದೆ ಹೋಗಿ ಬಿ.ಎ; ಬಿಎಸ್ಸಿ, ಎಂ.ಎ, ಎಂ.ಎಸ್.ಸಿ. ಆಗಿ ಊರಿಗೆ ಬಂದಾಗಲೂ ಆ ಅಯ್ಯರು ಹಿಂದಿನ ತಲೆಮಾರಿನ ದಂಭಾಚಾರದ ಮನ್ನಣೆಯನ್ನೇ ಅಪೇಕ್ಷಿಸುತ್ತಿರುತ್ತಾರೆ. ವಿಶ್ವಾಮಿತ್ರ ಬ್ರಹ್ಮರ್ಷಿ ಆಗಿರುವನೆಂದು ವಸಿಷ್ಠ ಒಪ್ಪುವುದೇ ಇಲ್ಲ. ಶಂಭುಕನ ತಪಸ್ಸೂ ಶ್ರೀ ರಾಮನಿಗೆ ಅಪರಾಧವೆನಿಸುತ್ತದೆ. ಮತ್ತು ಈ ಒಂದು ಮನೋಗತದಲ್ಲಿ ಉಗ್ರ ಅಸಹನೆಯ ಪ್ರತೀಕಾರದ ಗಂಡಾಂತರದ ಸಿಡಿಗೊಂಡು ಸ್ಫೋಟಕ್ಕೆ ಕ್ಯೂಗೆ ಕಾಯುತ್ತಿರುತ್ತಾರೆ.

ಆದ್ದರಿಂದ ಇಂದು ಯಾವ ಪಕ್ಷವೇ ಅಧಿಕಾರಕ್ಕೆ ಬರಲಿ ಸಮಾಜದಲ್ಲಿಯ ನಿಮ್ನವರ್ಗಗಳಿಗೆ ವಿಶೇಷ ಸೌಕರ್ಯ, ಸಂಧಿ, ಸಮಾನತೆ ನೀಡಬೇಕೆಂಬ ಧೋರಣೆ ಚಾಚೂ ತಪ್ಪದೇ ಜಾರಿಯಲ್ಲಿ ತರಬೇಕಾದದ್ದು. ಸಕಲ ಸಾಮಾಜಿಕ ವೈಷಮ್ಯ, ವೈಫಲ್ಯ, ಅನ್ಯಾಯ, ಅಸಹ್ಯಗಳ ನಿವಾರಣೆಗೆ ಪ್ರತ್ಯಯ ಹೆಚ್ಚಿ ವೈಷಮ್ಯ ತಾರತಮ್ಯಗಳ ಮೇಲೆ ನಿಂತ ಶ್ರೇಯಬದ್ಧ ಸಮಾಜದಲ್ಲಿ ಸಾಮಾನ್ಯ ಕಾನೂನೀ ನ್ಯಾಯವೂ ಕೆಲವೊಂದು ವರ್ಗಗಳಿಗೆ ಅನ್ಯಾಯವೇ ಆಗುತ್ತದೆ. ಒಂದು ಉದಾಹರಣೆಯಿಂದ ಇದು ಸ್ಪಷ್ಟವಾಗಬಹುದು. ನಿಚ್ಚಣಿಕೆಯ ಮೇಲೆ ಅಲ್ಲಲ್ಲಿ ಪಾವಟಿಗೆಗಳನ್ನೇರಿ ಮಂದಿ ನಿಂತಿದ್ದಾರೆ. ಕೆಳಗಿನಿಂದ ನೀರು ತುಂಬಿ ಬಂದಿದೆ. ಕೆಳಗಿನ ಮೆಟ್ಟಲಿನ ಮೇಲೆ ನಿಂತವನ ಹೆಗಲಿಗೆ ಈಗಾಗಲೇ ನೀರು ಏರಿದೆ. ತಲೆ ಮಾತ್ರ ಮೇಲಿದೆ. ಆಗ ಸರ್ವರಿಗೂ ಸಮಾನ ನ್ಯಾಯವೆಂದು ಎಲ್ಲರೂ ಒಂದೊಂದು ಮೆಟ್ಟಲು ಕೆಳಗೆ ಬನ್ನಿ-ಅಂದರೆ? ಉಳಿದವರಿಗೆ ಹೇಗೂ ಸರಿ. ಆದರೆ ತೀರ ಕೆಳಗಿನವನಿಗೆ ಮಾತ್ರ ಪೂರ್ತಿ ಜಲ ಸಮಾಧಿ. ಅಂತೆಯೇ ಮಹಾತ್ಮಾಜೀ ರಸ್ಕಿನ್‌ನ ಮಾತೆತ್ತಿಕೊಂಡು "ಅಂತ್ಯೋದಯ"ವೆಂದರು. "Unto this Last" ಇದು ಮೇಲಿನ ಮೆಟ್ಟಲಿನವರಿಗೆ ಸಮಾನ ನ್ಯಾಯವೆನಿಸಲಿಕ್ಕಿಲ್ಲ. ಅದರೆ ಇದೇ ಮಾನವೀಯತೆಯ ನಿಜವಾದ ನಿಲುವೆ!

●

('ಸಹಚರ' ೧೯೭೮)

# ಆತ್ಮಹತ್ಯೆ-ಅಪರಾಧವೋ? ಅಪಸ್ಮಾರವೋ?

ಆತ್ಮಹತ್ಯೆ? ಅದು ಹೇಗೆ ಸಾಧ್ಯ? ಆತ್ಮ ಅಮರ-ಅವಿನಾಶಿ. 'ನ ಅಯಂ ಹಂತಿ ಸ ಹನ್ಯತೇ'-ಎಂದಿದೆ ಭಗವದ್ಗೀತೆ. ಅಂದಾಗ ಆತ್ಮವನ್ನು ಕೊಲ್ಲುವುದೆಂದರೇನು? ಆದರೆ ಇಲ್ಲಿ ಆತ್ಮವೆಂದರೆ ಬರೆ 'ತಾನು' ಎಂಬ ಅರ್ಥ. ತನ್ನನ್ನು ತಾನು ಕೊಂದುಕೊಳ್ಳುವುದು-ಆತ್ಮಹತ್ಯೆ.

ಕಾಲಮೃತ್ಯು, ಅಪಮೃತ್ಯು ನಮಗೆ ಅರ್ಥವಾಗುತ್ತದೆ. ಆದರೆ ತನ್ನನ್ನು ತಾನು ಕೊಂದು ಕೊಳ್ಳುವುದು? ಆತ್ಮಪ್ರೇಮ ಸ್ವಯಂಮೋಹ ಯಾರಿಗೆ ಬಿಟ್ಟಿದೆ? ನಾವು ಮೊದಲೂ ಕೊನೆಗೂ ಪ್ರೀತಿಸುವುದು ನಮ್ಮನ್ನೇ. ನಮ್ಮದು ಎಂಬುದರಿಂದಲೆ ಇತರರ ಕುರಿತು ನಮಗೆ ಮೋಹ-ಮಮತೆ. ಮಮ-ಎಂಬ ಭಾವನೆ-ಆತ್ಮೀಯತೆ. ಅಂದಾಗ ತನ್ನನ್ನು ತಾನು ನಾಶಗೊಳಿಸುವುದು ಹೇಗೆ? ತಾನೇ ತನಗೆ ಬೇಡವೆನಿಸಿದಾಗ. ಬದುಕುವ ಇಚ್ಛೆಗಿಂತ ಸಾಯುವ ಇಚ್ಛೆ ಪ್ರಬಲವಾದಾಗ.

ದಿನಾಲು ಪತ್ರಿಕೆಗಳಲ್ಲಿ ನಾವು ಓದುತ್ತೇವೆ-ಪ್ರಣಯಭಂಗ, ಮಾನಭಂಗ, ಘೋರ ಬಡತನ. ಅಸಾಧ್ಯ ರೋಗ-ಇತ್ಯಾದಿಗಳಿಂದ ಬದುಕು ಅಸಹ್ಯವಾಗಿ ಒಬ್ಬನಲ್ಲ ಒಬ್ಬ ದುರ್ದೈವಿ ವಿಷ ತಿಂದೋ, ನೇಣು ಹಾಕಿಕೊಂಡೋ, ಬಾವಿಗೆ ಹಾರಿಯೋ, ಉಟ್ಟಬಟ್ಟೆಗೆ ಬೆಂಕಿ ಹಚ್ಚಿಕೊಂಡೋ ಸಾವನ್ನು ಅಪ್ಪಿಕೊಳ್ಳುತ್ತಾರೆ. ನಮ್ಮ ದೇಶದಲ್ಲಿ ಈ ಆತ್ಮಹತ್ಯೆಯು ಲೆಕ್ಕ ೧೯೭೫ರ ಗಣತಿಯಂತೆ ದಿನಕ್ಕೆ ೧೧೭೮. ದುಃಖ ದೈನ್ಯ ದಾರಿದ್ರ್ಯ ಯಾರಿಗೆ ಇಲ್ಲ? ಕಷ್ಟ ಕಾಯಿಲೆ ಯಾರನ್ನು ಕಾಡಿಲ್ಲ? ಆದರೂ ಅಂಥವರೆಲ್ಲ ಆತ್ಮಹತ್ಯೆ ಮಾಡಿಕೊಳ್ಳುವುದಿಲ್ಲ.

ಒಂದಾನೊಂದು ಕಾಲದಲ್ಲಿ ಭಾರತದಲ್ಲಿ ವಿಶಿಷ್ಟ ಕಾರಣಗಳಿಗಾಗಿ, ವಿಶಿಷ್ಟ ಪ್ರಸಂಗಗಳಲ್ಲಿ ಆತ್ಮಹತ್ಯೆಗೆ ಸಮಾಜ ಸಮ್ಮತಿಪಿತ್ತು. 'ಯೋಗೇನ ಅಂತೇ ತನು ತ್ಯಜಾಂ' ಎಂದು ಕಾಲಿದಾಸ ರಘುವಂಶದ ಅರಸರ ಅಂತ್ಯ ಕಾಲವನ್ನು ಬಣ್ಣಿಸುತ್ತಾನೆ. ಸಂಸಾರ ಸಾಕು ಅನಿಸಿದಾಗ, ಬಾಳಿನಲ್ಲಿ ಇನ್ನು ಪ್ರಯೋಜನವಿಲ್ಲವೆಂದೆನಿಸಿದಾಗ ಅಥವಾ ತನ್ನ ಜೀವನದ ಉದ್ದೇಶ ಸಫಲವಾಯಿತೆಂದು ಅನಿಸಿದಾಗ ನಮ್ಮಲ್ಲಿ ಅನೇಕ ಮಹಾಪುರುಷರು ಆತ್ಮ ಹತ್ಯೆ ಮಾಡಿಕೊಂಡಿದ್ದುಂಟು 'ಸತಿ'-ಸಹ ಗಮನ ಬಿಟ್ಟರೂ ಕುಮಾರಿಲ ಭಟ್ಟರಂತೆ 'ಅಗ್ನಿಕಾಷ್ಠ ಭಕ್ಷಣ' ಮಾಡಿಯೋ, ಜಲ ಸಮಾಧಿ ಹೊಂದಿಯೋ ತನ್ನನ್ನು ಕೊನೆಗಾಣಿಸಿಕೊಂಡಿದ್ದುಂಟು.

ಆದರೆ ಆತ್ಮಹತ್ಯೆಗೆ ಇಂಥ ನಿರ್ದಿಷ್ಟ ಸುಸ್ಪಷ್ಟ ಕಾರಣಗಳು ಏನೇ ಇದ್ದರೂ, ಆಧುನಿಕ ಮನೋವಿಜ್ಞಾನ ಒಪ್ಪಿಕೊಳ್ಳುವಂತೆ Death Instinct ಮರಣ ಪ್ರವೃತ್ತಿ (Stanethos) ಮಾನವನಿಗೆ ಒಂದು ಅಂತಸ್ಥ ಪ್ರವೃತ್ತಿಯಾಗಿದ್ದರೂ-'ಮರಣಂ ಪ್ರಕೃತೀ ಶರೀರಿಣಾಂ'-ಅಂದಿಲ್ಲವೆ ಸಿಗ್ಮಂಡ್ ಫ್ರ್ಯಾಡ್‌ನಿಗಿಂತ ಸಾವಿರ ವರ್ಷಗಳ ಹಿಂದೆಯೇ ನಮ್ಮ ಕವಿಕುಲ ಗುರು?-ಮನುಷ್ಯ ಪ್ರಾಣಿ ತಿಳಿದೂ ತಿಳಿದೂ ಸುಖಾಸುಖಿಯಾಗಿ ತಾನಾಗಿ ಸಾಯಲು ಬಯಸುವುದು ಒಂದು ಸಹಜ ಸ್ವಸ್ಥ ಅವಸ್ಥೆ ಅಲ್ಲ. ಅದೊಂದು ವಿಚಿತ್ರ ವಿಕಾರ. ವಿಶಿಷ್ಟ ಮನೋದೌರ್ಬಲ್ಯದ ಅವಸ್ಥೆ (mood).

ಬೆಂಗಳೂರಿನಲ್ಲಿ ಆತ್ಮಹತ್ಯಾ ನಿವಾರಕ ಸ್ವಯಂಸೇವಕರು ಬೌರಿಂಗ್ ಮತ್ತು ವಿಕ್ಟೋರಿಯಾ ಆಸ್ಪತ್ರೆಗಳಲ್ಲಿ ೧೯೭೮ರಲ್ಲಿ ಆತ್ಮಹತ್ಯೆಗಾಗಿ ಯತ್ನಿಸಿದ ೮೯೦ ಯುವಕರನ್ನು ಸಂದರ್ಶಿಸಿದರು. ಈ ದುರ್ದೈವಿಗಳಲ್ಲಿ ನೂರಕ್ಕೆ ೮೦ ರಷ್ಟು ೧೪ರಿಂದ ೨೦ರ ವಯೋಮಾನದವರು. ಇವರಲ್ಲಿ ಬಹಳಷ್ಟು

ದುಸ್ಸಾಹಸಗಳಿಗೆ ವೈದ್ಯಕೀಯ, ಕೌಟುಂಬಿಕ ಹಾಗೂ ಮನೋದೈಹಿಕ (psychosomatic) ಕಾರಣಗಳೇ ಮೂಲ. ವೈವಾಹಿಕ ವಿರಸಗಳಿಗೆ ಮೂರನೆಯ ಸ್ಥಾನವಿತ್ತು. ಈ ೪೯೦ ಯತ್ನಗಳಲ್ಲಿ ೨೨ 'ಯಶಸ್ವಿ'ಯಾಗಿದ್ದವು. ಇಲ್ಲಿ ಒಂದು ಮೋಜಿನ ಮಾತೆಂದರೆ, ಅಯಶಸ್ವಿಯಾದ ಹಲವಾರು 'ಕೇಸು'ಗಳಲ್ಲಿ ಜೀವ ತೆಗೆದು ಕೊಳ್ಳಲಿಕ್ಕೆಂದು ನುಂಗಿದ ವಿಷದ ಪಾಲು ಕನಿಷ್ಠ ಪ್ರಮಾಣದ್ದಾಗಿತ್ತು! ಅಂದರೆ ಈ ದುಷ್ಟಯತ್ನ ನಿಜವಾದ ಸಾವಿಗಿಂತ ಸಾಯುವ ಬೆದರಿಕೆ-ಬಿಕ್ಕಟ್ಟು ಹುಟ್ಟಿಸಿ ಮಂದಿಯ ಸಹಾಯ-ಸಹಾನುಭೂತಿಗಳನ್ನು ಬಯಸುವ ಆಕ್ರೋಶವೇ ಆಗಿತ್ತು.

ಆತ್ಮಹತ್ಯೆಯ ನಿವಾರಣೆಗೆ ಅಥವಾ ನಿರೋಧಕ್ಕೆ ನಮ್ಮ ಕಾನೂನಿನ ನಿರ್ಬಂಧ ಅಷ್ಟು ಪರಿಣಾಮಕರವಿಲ್ಲ. ಆತ್ಮಹತ್ಯೆಯನ್ನು ನಿಷೇಧಿಸುವ ಇಂಡಿಯನ್ ಪಿನಲ್ ಕೋಡಿನ 309ನೇ ಕಾಲಮು ಹೀಗೆದೆ:

"Whover attempts to commit suicide or does any act towards the commission of such offence, shall be punished with simple imprisonment for a term which may extend to one year or with fine or both".

ಅಂದರೆ ಇಲ್ಲಿ ಆತ್ಮಹತ್ಯೆ ಮಾಡಿಕೊಳ್ಳಲು ತಪ್ಪಿದವನಿಗೆ ಆ ತಪ್ಪಿಗಾಗಿ ದಂಡನೆ! ದಂಡನೆ ತಪ್ಪಿಸಿಕೊಳ್ಳಲಿಕ್ಕೆ ಆತ ಆತ್ಮಹತ್ಯೆಯನ್ನು ಪೂರ್ತಿಮಾಡಿಕೊಳ್ಳಬೇಕು. ನಿಜವಾಗಿಯೂ ಆತ್ಮಹತ್ಯೆಗೆ ಉದ್ಯುಕ್ತನಾಗುವ ವ್ಯಕ್ತಿ ಮನಸ್ಸಿನ ಸ್ಥಿಮಿತ-ಸ್ವಾಸ್ಥ್ಯ ಕಳೆದುಕೊಂಡಿರುತ್ತಾನೆ. ಅಂಥವನನ್ನು ಅಪರಾಧಿಯಾಗಿ ಅಲ್ಲ ಮನೋರೋಗಿಯಾಗಿ ಪರಿಗಣಿಸಬೇಕು. ಆತ್ಮಹತ್ಯೆ ದಂಡನಾರ್ಹವಾದ ಅಪರಾಧವಲ್ಲ. ಅದು ಚಿಕಿತ್ಸೆ-ಶುಶ್ರೂಷೆಗಳಿಗೆ ಯೋಗ್ಯವಾದ ಒಂದು ಚಿತ್ತವಿಭ್ರಮ - ಮನೋವ್ಯಾಧಿ. ಸಾಯಬೇಕೆಂಬ ಸಾಹಸ ಅಂಥ ವ್ಯಗ್ರವ್ಯಥಿತನ ಕೊನೆಯ ಕೂಗು-ಪರಿಹಾರಕ್ಕಾಗಿ. ಆದರೇನು? ನಾವು ಲಂಚ ತಿನ್ನುವವನ್ನು ಜಾಮೀನಿನ ಮೇಲೆ ಬಿಡುತ್ತೇವೆ ಅಥವಾ ಮನೆಗೆ ಕಳುಹಿಸುತ್ತೇವೆ ಆದರೆ ವಿಷ ತಿನ್ನುವವನನ್ನು ಜೇಲಿಗೆ ಅಟ್ಟುತ್ತೇವೆ.

ಪೀನಲ್ ಕೋಡಿನ ಈ ೩೦೯ನೆ ಕಲಮನ್ನು ರದ್ದುಗೊಳಿಸಬೇಕೆಂದು ಬೆಂಗಳೂರಿನ ಮೆಡಿಕೊ ಪಾಸ್ಟೋರಲ್ ಅಸೋಸಿಯೇಶನ್ ಈಚೆಗೆ ಪ್ರಯತ್ನ ಮಾಡುತ್ತಿದೆ. ಇದಕ್ಕೆ ನಮ್ಮ ಕಾನೂನು ತಜ್ಞರೂ ನ್ಯಾಯವಾದಿಗಳೂ ನ್ಯಾಯಮೂರ್ತಿಗಳೂ ಶಾಸನಸಭೆಗಳೂ ಎಷ್ಟು ಮಟ್ಟಿಗೆ ನೆರವು ನೀಡುವರೋ ಗೊತ್ತಾಗಿಲ್ಲ. ಇಂಥ ಅನೇಕ ಸಂಘಟನೆಗಳು ದೇಶದಲ್ಲಿ ತಲೆ ಎತ್ತಿವೆ. ಚಟುವಟಿಕೆ ಕೈಗೊಂಡಿವೆ. ಸದೃಢ ಶರೀರ ಸ್ವಾಸ್ಥ್ಯವುಳ್ಳ ದುರ್ದೈವಿಗಳನ್ನು ಹೀಗೆ ಬಾಳನ್ನೆ ಕೊನೆಗಾಣಿಸುವ ದುರಂತ ಸಾಹಸದಿಂದ ಪರಾವೃತ್ತಗೊಳಿಸಿ ಅವರಲ್ಲಿ ಆಶೆಯ ಬೆಳಕನ್ನು ಮೂಡಿಸುವ ನಿಸ್ವಾರ್ಥ ಉದ್ದೇಶದಿಂದ ಅವು ದುಡಿಯುತ್ತಿವೆ.

ಇವೆಲ್ಲ ಸಂಘಟನೆಗಳಿಗೆ ಮೂಲ ಸ್ಫೂರ್ತಿ ಇಂಗ್ಲಂಡಿನ 'ಸಮಾರಿಟನ್ಸ್' ಸಂಸ್ಥೆ. ಇದು ೧೯೫೩ರಲ್ಲಿ ಸ್ಥಾಪನೆ ಆಯಿತು. ಅದರ ಸಂಸ್ಥಾಪಕನು ರೆವ. ಬಾಡ್‌ವೋರಾ ಎಂಬ ಪಾದ್ರಿ. ಇದರಿಂದಾಗಿ ಈ ಸಂಸ್ಥೆಯ ಶಾಖೆ-ಉಪಶಾಖೆಗಳೂ ಅವರ ಈ ಚಟುವಟಿಕೆಗಳೂ ಕ್ರೈಸ್ತ ಧರ್ಮ ಪ್ರಸಾರದ ಒಂದು ಮುಖವೆಂಬ ತಪ್ಪು ತಿಳುವಳಿಕೆಗೆ ಅನ್ಯಾಯವಾಗಿ ಆಸ್ಪದವಾದವು. ಈ ಶಾಖೆಗಳು ಮುಂಬಯಿಯಲ್ಲೂ ಕಲಕತ್ತೆಯಲ್ಲೂ ಕೆಲಸ ಮಾಡುತ್ತಿವೆ. ಹೊಸದಿಲ್ಲಿಯಲ್ಲಿಯ ಇಂಥ ಸಂಘಟನೆಗೆ 'ಸಂಜೀವಿನಿ' ಎಂಬ ಹೆಸರು. ಬೆಂಗಳೂರಿನ ಮೆಡಿಕೋ ಪಾಸ್ಟೋರಲ್ ಅಸೋಸಿಯೇಶನ್ ಈ

ಹಿಂದೆಯೇ ಉಲ್ಲೇಖಿಸಿದ್ದೇನೆ. ಈಚೆಗೆ ಮದುರಾಯಿಯಲ್ಲಿಯೂ 'ಸೌಖ್ಯ' ಎಂಬ ಸಂಸ್ಥೆ ಎದ್ದು ನಿಂತಿದೆ.

ಇವೆಲ್ಲ ಸಂಘಟನೆಗಳ ಕಾರ್ಯ ಒಂದೇ-ಆತ್ಮಹತ್ಯೆಯ ನಿವಾರಣೆ. ಈ ಉದ್ದೇಶ ಎಷ್ಟು ಮಟ್ಟಿಗೆ ಸಾಧ್ಯವಾಗಿದೆ?

ಭಾರತದಲ್ಲಿ ಮನೋವ್ಯಾಧಿ ವ್ಯಗ್ರರು (psychic patients) ೫೦ ಲಕ್ಷ ಮಂದಿ ಇರಬೇಕೆಂದು ಅಂದಾಜು. ಇವರಲ್ಲಿ ೫ ಲಕ್ಷ ರೋಗಿಗಳು ಉಲ್ಬಣ ಅವಸ್ಥೆಯಲ್ಲಿದ್ದು ಅವರಿಗೆ ಆಸ್ಪತ್ರೆಯಲ್ಲಿಯೇ ಉಪಚಾರ ಸಿಗಬೇಕು. ಆದರೆ ಈ ದೇಶದಲ್ಲಿ ಆದ್ಯಂತವಾಗಿ ಕೇವಲ ೩೮ ಮನೋರೋಗಿಗಳ ಆಸ್ಪತ್ರೆಗಳಿವೆ. ಅವುಗಳಲ್ಲಿಯೂ ಇಂಥ ಆತ್ಮಹತ್ಯಾ ಪ್ರವೃತ್ತಿಯವರ ಚಿಕಿತ್ಸೆಗೆ ನೂರಕ್ಕೆ ೧ ರಷ್ಟು ಮಾತ್ರ ಸೌಕರ್ಯ! ಅನೇಕ ಆಸ್ಪತ್ರೆಗಳಲ್ಲಿ ಇಂಥ ಸೊರರೋಗಿಗಳ ಚಿಕಿತ್ಸೆಯ ವ್ಯವಸ್ಥೆ ಏನೂ ಆಶಾದಾಯಕ ಅಥವಾ ತೃಪ್ತಿದಾಯಕವಿಲ್ಲ. ಇನ್ನು ಖಾಸಗೀ ಚಿಕಿತ್ಸಾಲಯಗಳಿದ್ದರೂ ಅವು ಭಾರಿ ವೆಚ್ಚಕ್ಕೆ ಕಾರಣ. ಬಡ ವ್ಯಾಧಿಗ್ರಸ್ತರಿಗೆ ಅವು ನಿಲುಕುವಂತಿಲ್ಲ.

ಇಂಥ ಪರಿಸ್ಥಿಯಲ್ಲಿ ಮೇಲೆ ಹೇಳಿದ ಸಂಸ್ಥಗಳ ಸ್ವಯಂಸೇವಾ ದಳದವರ ಹೊಣೆಗಾರಿಕೆ ಬಹಳೇ ಭಾರದ್ದು. ಈ ಸ್ವಯಂಸೇವಕರು ಅನೇಕ ಪ್ರತಿಕೂಲಗಳನ್ನು ಸಹಿಸಿ ತಾಳ್ಮೆಯಿಂದ, ತತ್ಪರತೆಯಿಂದ, ತಕ್ಕ ತಿಳುವಳಿಕೆಯಿಂದ ಅವರ ಆರೈಕೆ ಕೈಗೊಳ್ಳಬೇಕಾಗುತ್ತದೆ. ಇವರು ಮತ-ಧರ್ಮ ಪ್ರಚಾರಕರೋ ಎಂಬ ಸಂಶಯದಿಂದ ಮನೋರೋಗಿಗಳ ಕುಟುಂಬದವರೇ ಇವರನ್ನು ಕಾಣುತ್ತಾರೆ. ಕಣ್ಣುತಪ್ಪಿಸುತ್ತಾರೆ. ಮನೋರೋಗಗಳ ಬಗೆಗೆ ಸಲಹೆಗಾರಿಕೆ ನಮ್ಮ ದೇಶದಲ್ಲಿ ಇನ್ನೂ ಒಂದು ಹೆದರಿಕೆಯ ನಾಚಿಕೆಯ ಸಂಗತಿಯಾಗಿದೆ-ಗುಪ್ತರೋಗಗಳ ಚಿಕಿತ್ಸೆಯಂತೆ! ಅನೇಕ ಆತ್ಮಹತ್ಯಾ ಪ್ರಕರಣಗಳೂ ಪ್ರಸಂಗಗಳೂ ಈ ಸಂಸ್ಥೆಗಳ ಸ್ವಯಂಸೇವಕರ ಹಾಗೂ ಕಾರ್ಯಕರ್ತರ ಗಮನಕ್ಕೇ ಬರುವುದಿಲ್ಲ. ಫೋನಿನಿಂದಲೂ ಇವರ ಸಂಪರ್ಕ ಅಂಥ ಕುಟುಂಬಗಳು ಪಡೆಯವದಿಲ್ಲ. ಆತ್ಮಹತ್ಯೆಗೆ ತೊಡಗಿದ ಪ್ರಾಣಿಗೆ ಇವರನ್ನು ಸಂಪರ್ಕಿಸಬೇಕೆಂಬ ಪ್ರಜ್ಞೆ ಎಲ್ಲಿ? ಆತ್ಮಹತ್ಯೆ ಅಯಶಸ್ವಿಯಾದಾಗಲೂ ಆ ಪ್ರಕರಣವನ್ನು ಕಾನೂನಿನ ಭೀತಿಯಿಂದ ಗೋಪ್ಯವಾಗಿಯೇ ಮರೆಮಾಡಿಬಿಡುತ್ತಾರೆ-ರೋಗಿಯ ಆಪ್ತರು.

ಅದಾಗ್ಯೂ ಈ ಮಾನವೀಯ ಕಾರ್ಯಕರ್ತರು ತಾವೇ ಸಂಚರಿಸಿ ಶ್ರಮಪಟ್ಟು ಶೋಧ ಮಾಡಿ ಆತ್ಮಹತ್ಯಾ ಪ್ರವೃತ್ತಿಯ ಮನೋರೋಗಿಗಳನ್ನು ದೊಡ್ಡ ಆಸ್ಪತ್ರೆಗಳಲ್ಲಿ ಗುರುತಿಸಿಕೊಳ್ಳುತ್ತಾರೆ. ಅನೇಕ ಸಲ ಖಾಸಗೀ ಮನೋವೈದ್ಯರು ಇಂಥ 'ಕೇಸು'ಗಳನ್ನು ಇವರಿಗೆ ಒಪ್ಪಿಸುತ್ತಾರೆ. ಬಹಳವಾಗಿ ಅನೇಕ ಕುಟುಂಬಗಳು ತಮ್ಮಲ್ಲಿಯ 'ಸಮಸ್ಯಾತ್ಮಕ' ಹುಡುಗರನ್ನು ಚಿಕಿತ್ಸೆಗಾಗಿ ಈ ಸಂಸ್ಥೆಗಳಿಗೆ ತಾವೇ ಒಯ್ಯುತ್ತಾರೆ.

ಈ ಸ್ವಯಂಸೇವಕ ಸಂಸ್ಥೆಗಳು ಮಾಡುವ ಕಾರ್ಯ ಇಬ್ಬಗೆಯದು. ಒಂದು, ಶಕ್ಯವಿದ್ದಲ್ಲಿ ನೇರವಾಗಿ ಆತ್ಮಹತ್ಯೆಗೆ ದುಡುಕುವವರನ್ನು ಅದರಿಂದ ತಪ್ಪಿಸುವದು. ಅಂಥ ಪ್ರಸಂಗಗಳು ಒದಗದಂತೆ ಮಾಡುವದು. ಇನ್ನೊಂದು ಅಂಥ ಅಕೃತ್ಯದ ವಿಕೃತ ಮೋಹಕ್ಕೆ ವಿವಶಗೊಳಿಸುವ ಕಾರಣಗಳನ್ನು ಸಲಹೆ-ಸಹಾನುಭೂತಿಗಳಿಂದ ಹೋಗಲಾಡಿಸುವದು. ಆತ್ಮ ಹತ್ಯೆಗೆ ಮೂಲ ಅತ್ಯಂತ ಕುಗ್ಗಿದ ವಿಷಣ್ಣ ಮನಃಸ್ಥಿತಿ. ಆದಕ್ಕೆ ಕಾರಣ ಆಳವಾದ ಶೋಕ, ಚಿಂತೆ ಹತಾಶೆ, ಆತ್ಮಗ್ಲಾನಿ, ಕೌಟುಂಬಿಕ ತೊಡಕುಗಳು. ದಾಂಪತ್ಯದ ವಿರಸಗಳು, ಪೌಗಂಡಾವಸ್ಥೆಯ ಲೈಂಗಿಕ ಪ್ರಕ್ಷೋಭೆಗಳು, ಅಲ್ಲದೆ

ದೀರ್ಘಕಾಲಿಕ ದುಶ್ಚಟಗಳು-ಸೆರೆಗುಡುಕುತನ, ಅಫೀಮು ಚರಸ್ ಇತ್ಯಾದಿಗಳ ಸೇವನೆ, ಬಾಲ್ಯದಿಂದಲೂ ಅಪರಾಧ ಪ್ರವೃತ್ತಿ, ಅಸಹಾಯ ಒಂಟಿತನದ ಅನಾಥ ಪ್ರಜ್ಞೆ-ಇವು ಒಂದೊಂದೂ ಅತಿರೇಕವಾಗಿ ಆತ್ಮಹತ್ಯೆಗೆ ಒಯ್ಯಬಹುದು. ಇವುಗಳನ್ನು ಸಲಹೆ ಸೂಚನೆ ಸಾಂತ್ವನ ಮಾರ್ಗದರ್ಶನಗಳಿಂದ ನೀಗಿಸಬಹುದು.

ಆದರೆ ಇಲ್ಲಿಯೇ ಕಾಲ್ತೊಡಕು ಹೆಚ್ಚು. ಸಲಹೆ ಹುಡುಕಿಕೊಳ್ಳುವವರೇ ವಿರಳ. ಸ್ವಯಂ ಸೇವಕರೇ ಅಂಥವರನ್ನು ಹುಡುಕಿಕೊಂಡು ಹೊರಟರೆ ಅವರಿಗೆ ರೋಗಿಗಳಿಂದಲೇ ಪ್ರತಿರೋಧ ಅಥವಾ ಮನೆಯವರ ನಿರುತ್ತೇಜನ. ಮನೆಯವರಿಗೆ ನೆರೆಮನೆಯವರ ಹೆದರಿಕೆ-ಮುಜುಗರ. ಅನೇಕ ಸಲ ಸಲಹೆಗಾಗಿ ಬರುವವರೂ ನೇರವಾಗಿ ಸಿಗುವದಿಲ್ಲ. ಸ್ವಯಂ ಸೇವಕರನ್ನು ಸಹಾಯಕ ತಜ್ಞರನ್ನು ಕದ್ದು ಮುಚ್ಚಿ, ಸುತ್ತುಬಳಸಿ ಹಾಟೆಲಿನಲ್ಲಿಯೋ ಹಾದಿಯಲ್ಲಿಯೋ ಪಾರ್ಕಿನಲ್ಲಿಯೋ ಭೆಟ್ಟಿಯಾಗಲು ಬಯಸುವರು!

ಇದೂ ಅಲ್ಲದೆ ಈ ಬಗೆಯ ಮಾನಸೋಪಚಾರಕ್ಕೆ ತಜ್ಞ ಜನಬಲದಷ್ಟೇ ಸಾಕಷ್ಟು ಧನಬಲವೂ ಒದಗುತ್ತಿರಬೇಕು. ಈ ಕಾರ್ಯಕ್ಕೆ ರಾಜ್ಯ-ಕೇಂದ್ರ ಸರಕಾರಗಳಿಂದ ಸಹಾಯಧನ ಸರಾಗವಾಗಿ ಸಿಗುವದಿಲ್ಲ. ಬೆಂಗಳೂರಿನ ಅಸೋಸಿಯೇಶನ್ನಿಗೆ ಇಂಗ್ಲಂಡಿನ ಅಕ್ಸ್ ಫ್ಯಾಮದಿಂದ ಹಾಗೂ ಡಚ್ ಮತ್ತು ಜರ್ಮನ್ ಮೂಲಗಳಿಂದ ಹೆಚ್ಚಾಗಿ ಹಣ ಶೇಖರಣೆ ಆಗುತ್ತದೆ. ಆರಂಭದಲ್ಲಿ ಒಂದು ಟೆಲಿಫೋನು ಸಂಪಾದಿಸಲೂ ಧರ್ಮಾರ್ಥ ಕಾರ್ಯಕ್ರಮಗಳ ನೆರವು ಪಡೆಯಬೇಕಾಯಿತು. ಈಗ ರಾಜ್ಯದ ಸಮಾಜ ಕಲ್ಯಾಣ ಇಲಾಖೆಯಿಂದ ಮನೋ ಧನಸಹಾಯ ಪಡೆದು ಒಂದು ಭದ್ರತೆಯನ್ನು ಈ ಸಂಘವು ಕಂಡುಕೊಂಡಿದೆ. ಬೆಂಗಳೂರಿನಲ್ಲಿ ಹಾಪ್-ವೇ-ಹೋಂ ಎಂಬ ಸಂಸ್ಥೆಯೂ ಇದೆ. ಇದಕ್ಕೆ ಒಂದು ವಸತಿ ಗೃಹವೂ ದೊರಕಿದೆ. ಇದರಲ್ಲಿ ಬರೆ ೧೮ ರೋಗಿಗಳಿಗೆ ಆಶ್ರಯ. ಆದರೆ ಅವರಲ್ಲಿ ಅರ್ಧದಷ್ಟು ಮಂದಿಗೆ ಮಾತ್ರ ಪುಕ್ಕಟೆ ಸೇವೆ! ಮುಂಬಯಿ ಕಲಕತ್ತೆಗಳಲ್ಲಿ ಈ ಸೌಕರ್ಯವೂ ಇಲ್ಲ. ಮನೋರೋಗಿಗಳು ಹೊರಗಿನಿಂದಲೇ ಬಂದು ಹೋಗಿ ಸಲಹೆ ಉಪಚಾರ ಪಡೆಯಬೇಕು.

ನಿಜವಾಗಿಯೂ ಇಂಥ ರೋಗಿಯನ್ನು ಅವನ ಪರಿಸರದಲ್ಲಿ ಪರಿವಾರದ ನಡುವೆ ಋಣಾನುಬಂಧಗಳ ಭಾವಕೋಶದಲ್ಲಿಯೇ ಉಪಚರಿಸಬೇಕು. ಮರದಿಂದ ಟೊಂಗೆಯನ್ನು ಬೇರೆ ಮಾಡಿ ಅದನ್ನು ಉಪಚರಿಸುವದಲ್ಲ. ಆದರೆ ಇದು ಇನ್ನೂ ತೊಡಕಿನದು. ಹೊಣೆಗಾರಿಕೆಯದು. ಹೊರಭಾರದ ಕಾರ್ಯ. ಇದಕ್ಕೆ ಈ ಪರಿವಾರದವರ ಅಪ್ತೇಷ್ಟರ ವಿರೋಧ ಮಾತ್ರವಲ್ಲ ಆ ಮನೋರೋಗಿಯ ಅಸಹನೆ ಅಸಹಕಾರವೂ ದೊಡ್ಡ ತೊಡಕಾಗಿ ಸಮಾಜ ಕಾರ್ಯಕರ್ತರನ್ನು ಕಾಡುತ್ತದೆ.

ಆದಾಗ್ಯೂ ನಿಧಾನವಾಗಿಯಾದರೂ ಆತ್ಮಹತ್ಯೆ ಆಕಸ್ಮಿಕ ಆಪತ್ತು ಅಲ್ಲ. ದೈವೀ ಪ್ರಕೋಪವಲ್ಲ. ಅದೊಂದು ವಿಶಿಷ್ಟ ರುಗ್ಣ ಮನಃಸ್ಥಿತಿಯ ಉಲ್ಬಣದ ಫಲ. ಅದರ ನಿವಾರಣೆ ಸಾಧ್ಯ ಮತ್ತು ಸುಸಂಸ್ಕೃತ ಜಾಗೃತ ಸಮಾಜದ ಒಂದು ಅತ್ಯಗತ್ಯದ ಕರ್ತವ್ಯ-ಎಂಬ ಪ್ರಜ್ಞೆ ನಮ್ಮಲ್ಲಿ ಮೂಡುತ್ತಿದೆ. ಇದೇ ಒಂದು ಆಶಾಕಿರಣ.

●

(ಉದಯವಾಣಿ ೧೯೭೭)

# ಮರಾಠಿಗೆ ಸೇರಿದ ಕೆಲವು ಕನ್ನಡ ಶಬ್ದಗಳು

ಜೀವಂತ ಭಾಷೆಯೊಂದರ ಲಕ್ಷಣ, - ಅದು ತನ್ನ ಹತ್ತಿರದ, ಸಂಪರ್ಕದಲ್ಲಿ ಬಂದ ಇತರ ಭಾಷೆಗಳ ಶಬ್ದಗಳನ್ನು ತನ್ನಲ್ಲಿ ಅರಗಿಸಿಕೊಂಡು ಪುಷ್ಟವಾಗಿ ಬೆಳೆಯುತ್ತ ಹೋಗುತ್ತದೆ. ಎರಡು ಜನಾಂಗಗಳು ಇಲ್ಲವೇ ಜನಪದಗಳು ಕೂಡಿ ಒಡನಾಡಿ ಬದುಕ ಬಂದಾಗ, ಅಥವಾ ಇಂದಿಗಿಂತ ಹೆಚ್ಚಾಗಿ ಹಿಂದೊಂದು ಕಾಲದಲ್ಲಿ ಈ ಎರಡೆಂಬ ಜನ ಒಂದೇ ಜನಾಂಗದ ಕವಲುಗಳೋ ಎಂಬಂತೆ ಬಾಳುತ್ತಿದ್ದಾಗ ಅವರ ಭಾಷೆಗಳ ನಡುವಿನ ಈ ಕೊಡಕೊಳು ಇನ್ನೂ ಹೆಚ್ಚಾಗಿ ಸಂಘಟಿಸುತ್ತದೆ.

ಇದಕ್ಕೆ ಕನ್ನಡ - ಮರಾಠಿಗಳ ಸಂಸರ್ಗದ ಪರಿಪಾಕವೇ ಒಂದು ಉತ್ತಮ ನಿದರ್ಶನ. ಜ್ಞಾನೇಶ್ವರನ 'ಜ್ಞಾನೇಶ್ವರಿ' ಎಂಬ ಭಗವದ್ಗೀತಾ ಭಾಷ್ಯದ 'ಓವಿ' ಬದ್ಧ ಪ್ರಸಿದ್ಧ ಪ್ರಾಚೀನ ಮರಾಠಿ ಕಾವ್ಯ ಗ್ರಂಥದಲ್ಲಿ ಅನೇಕ ಕನ್ನಡವೆನಿಪ್ಪ ಪದಗಳು ಕಂಡುಬರುತ್ತವೆ. ಈ 'ಜ್ಞಾನೇಶ್ವರಿ' 'ಏಕನಾಥೀ ಭಾಗವತ'ದಂಥ ಹಳೆಯ ಮರಾಠೀಸಂತ ವಾಙ್ಮಯದ 'ಓವಿ' ಶಬ್ದವೇ 'ಓವನಕೆ'ಯಿಂದ ನಮ್ಮಲ್ಲಿಯ ಒನಕೆಯ ಹಾಡಿನಿಂದ ಬಂದದ್ದು! ಇರಲಿ ಅದೇ ರೀತಿ ನಮ್ಮ ಕುಮಾರವ್ಯಾಸನ 'ಗದುಗಿನ ಭಾರತ' ದಲ್ಲಿಯೂ ಇಂದು ಮರಾಠಿಯೆಂದು ಪರಿಗಣಿಸಿದ ಹಲವಾರು ಶಬ್ದಗಳ ಧಾರಾಳವಾದ ಬಳಕೆಯನ್ನು ನಾವು ಕಾಣುತ್ತೇವೆ.

ಮೇಲೆ ಹೇಳಿದ ಸಂತ ಏಕನಾಥರ ಭಾಗವತದಲ್ಲಿ ಗೋಪಿಕಾಸ್ತ್ರೀಯರ ವಸ್ತ್ರಾಪಹರಣ ಪ್ರಸಂಗ ಬಂದಿದೆ. ಅದರಲ್ಲಿ ಸೀರೆ ಕದ್ದೊಯ್ದು ಮರವೇರಿ ಕುಳಿತ ಶ್ರೀಕೃಷ್ಣನನ್ನು ಪ್ರತಿಯೊಬ್ಬ ಗೋಪಿಯು ತನ್ನ ಸೀರೆಗೋಸ್ಕರ ಅಂಗಲಾಚಿ ಬೇಡಿಕೊಳ್ಳುತ್ತಾಳೆ. ಇಲ್ಲಿ ಈ ಸಂತ ಕವಿಯು ತನ್ನದೇ ಆದ ಕಲ್ಪಕತೆಯನ್ನು ಸ್ವಾರಸ್ಯವಾಗಿ ಸಾಧಿಸಿದ್ದಾನೆ. ಅದೇನೆಂದರೆ, ಆ ಗೋಪಿಯರೆಲ್ಲ ಬೇರೆ ಬೇರೆ ಪ್ರದೇಶದವರೆಂದು ಕಲ್ಪಿಸಿ ಅವರು ತಮ್ಮ ತಮ್ಮ ಭಾಷೆಯಲ್ಲಿಯೇ ಕೃಷ್ಣನನ್ನು ಸ್ತುತಿಸುತ್ತಾರೆ. ಆ ಕ್ರಮದಲ್ಲಿ ಒಬ್ಬ ಗೋಪಿ ಕನ್ನಡಗಿತ್ತಿ -ಕನ್ನಡ ತ್ರಿಪದಿಯಲ್ಲಿಯೇ ಕೃಷ್ಣನ ಸ್ತೋತ್ರವನ್ನು ಮಾಡುತ್ತಾಳೆ.

ಹಾಗೆಯೇ ಮರಾಠಿಯ ಮುಕ್ತೇಶ್ವರನೆಂಬ ಕವಿಯೂ ನಮ್ಮ ಕುಮಾರವ್ಯಾಸನನ್ನೇ ಮೊದಲು ನಮಿಸಿ ಅವನ ಭಾರತದಿಂದ ಸ್ಫೂರ್ತಿ ಪಡೆದು ತನ್ನ ಮರಾಠೀ ಭಾರತವನ್ನು ರಚಿಸಿದ್ದಾನೆ. ಅದಕ್ಕೂ ಮುಂದೆ ಕರ್ನಾಟಕ ಮಹಾರಾಷ್ಟ್ರಗಳಲ್ಲಿ ಕೂಡಿಯೇ ದತ್ತ ಭಕ್ತರಿಗೆಲ್ಲ ಪೂಜ್ಯವಾದ ನಿತ್ಯ ಪಾರಾಯಣದ "ಗುರುಚರಿತ್ರ" ಗ್ರಂಥದಲ್ಲಿ ಒಂದು ಇಡಿಯ ಆರತಿ ಪದ್ಯವೇ ಕೊನೆಯಲ್ಲಿ-ಕನ್ನಡದಲ್ಲಿಯೇ ಇದೆ.

ಆದರೆ ನಾನು ಈಗ ಇಲ್ಲಿ ಹೇಳ ಹೊರಟಿದ್ದು ಈ ಕನ್ಮರಾಠಿಗಳ ಭಾಷಾ ಸಮನ್ವಯದ ಇತಿಹಾಸವನ್ನಲ್ಲ. ಈ ಇತಿಹಾಸದ ಹಿನ್ನೆಲೆಯಲ್ಲಿ ನಮ್ಮ ಹಲವಾರು ಕನ್ನಡ ಶಬ್ದಗಳು-ಆಖ್ಯಾತ, ವಿಶೇಷಣ, ಧಾತು ರೂಪಗಳು ಮರಾಠಿಯಲ್ಲಿ ಇಂದಿಗೂ ಬಳಕೆಯಲ್ಲಿ ಉರ್ಜಿತವಾಗಿದ್ದು ಅವುಗಳ ಅರ್ಥವ್ಯಾಪ್ತಿ ಹಾಗೂ ಛಾಯೆಗಳು ಮಾತ್ರವಲ್ಲ, ಆ ಶಬ್ದಗಳು ನಮ್ಮಲ್ಲಿ ಪೂರ್ತಿ ಲೋಪವಾಗಿ ಬಿಟ್ಟಿವೆ! ಇದರದೇ ಕೆಲವು ಉದಾಹರಣೆಗಳನ್ನು ಓದುಗರ ಗಮನಕ್ಕೆ ತರಲು ನಾನು ಇಲ್ಲಿ

ಯತ್ನಿಸುತ್ತಿದ್ದೇನೆ.

'ಅಡ್ಡ'-ಅಡೆ-ಆಡ ಈ ಶಬ್ದ ಮರಾಠಿಯಲ್ಲಿ ತುಂಬ ಬಳಕೆಯಲ್ಲಿದೆ, ಅದೂ ವಿವಿಧಾರ್ಥಗಳಲ್ಲಿ: ಅಡಣೆ, ಅಡಸರ, ಆಡೋಸಾ-ಇತ್ಯಾದಿ. ಇಲ್ಲಿ ಅಡಕಾ ನಮ್ಮದೇ ಅಡಕೆ. ಹಿಂದೊಂದು ಕಾಲದಲ್ಲಿ 'ಅಡಕೆ' ತೀರ ಕನಿಷ್ಠ ನಾಣ್ಯದಂತೆ ಬಳಕೆಯಲ್ಲಿ ಇತ್ತು. ಅದಕ್ಕೆ 'ಪೈಸಾ ಅಡಕಾ' ಎಂಬ ಪದ ಪ್ರಯೋಗವೇ ಸಾಕ್ಷಿ. ಕೌಡಿಯಂತೆ ಅಡಕೆಯೂ ಅಲ್ಪತಮ ನಾಣ್ಯವಾಗಿತ್ತು. ಅದನ್ನು ಬಿಟ್ಟರೆ ಅಡ್ಡ-ಅಡ್ಡಿ ಎಂಬ ಅರ್ಥ ಬರುವಂತೆ ಈ ಶಬ್ದ ಮರಾಠಿಯಲ್ಲಿ ಮೇಲೆ ಕಾಣಿಸಿದಂತೆ ಕೆಲವೊಂದು ವಿಶಿಷ್ಟಾರ್ಥದ ಹೊಸ ರೂಪಗಳನ್ನು ಒದಗಿಸಿದ್ದು ಅಂಥವು ಕನ್ನಡದಲ್ಲಿ ಬಂದಿಲ್ಲವೋ ಅಥವಾ ಉಳಿದಿಲ್ಲವೋ!

'ಅಡಸರ್' ಎಳಗಾಯಿ (ಸೀಯಾಳ) ಅಡೋಸಾ-ಅಡ್ಡ-ಮರೆಯ ಸ್ಥಳ. ಅಡಕಣೆ-ಸಿಲುಕಿ ಬೀಳು. ಇಷ್ಟೇ ಅಲ್ಲ ಮರಾಠಿಯಲ್ಲಿ ಅಡ್ ಇದು ಧಾತುವೂ ಆಗಿದೆ. ಅಡಣೇ ಅಂದರೆ ತೊಡಕು ಬೀಳು. ಇಲ್ಲವೇ ಅಡ್ಡಗಟ್ಟು. (ಮರಾಠಿಯಲ್ಲಿ ಈ ಕನ್ನಡ 'ಅಡ' ಶಬ್ದವನ್ನು ಇದ್ದಕ್ಕಿದ್ದಂತೆಯೇ ಧಾತುವಾಗಿ ಉಪಯೋಗಿಸುತ್ತಾರೆ. ಆದರೆ ನಾವು ಅದರ ಅವ್ಯಯ ರೂಪಕ್ಕೆ 'ಕಟ್ಟು' ಎಂಬ ಕ್ರಿಯೆ ಕೂಡಿಸುತ್ತೇವೆ! ಆ ಮಟ್ಟಿಗೆ ಆ ಶಬ್ದದ ನೈಜ ಶಕ್ತಿಯನ್ನು ಕಳೆದು ಕೊಂಡಿದ್ದೇವೆ.

**ಆಡಳಿತ**-ಇದೊಂದೇ ರೂಪ ಕನ್ನಡದಲ್ಲಿದೆ. ಆದರೆ ಮರಾಠಿಯಲ್ಲಿ ಆಢಳಿಸು, find ಸಿಗು ಎಂಬ ಅರ್ಥದಲ್ಲಿ ಊರ್ಜಿತವಿದೆ. ನಮ್ಮಲ್ಲಿ 'ಆಡಳಿತ'ವೂ ಒಂದು ವಿಶಿಷ್ಟಾರ್ಥದಲ್ಲಿಯೇ ಬಳಸಲಾಗುತ್ತದೆ.-ಕಾರಭಾರ ನಡೆಯಿಸು ಎಂಬರ್ಥದಲ್ಲಿ.

**ಹಿಂಡು**-ಇದು ಕನ್ನಡದಲ್ಲಿ ಹಾಲು ಹಿಂಡು, ಕಿವಿ ಹಿಂಡು ಎಂಬುದಲ್ಲದೇ ದನಕುರಿಗಳ ಹಿಂಡು (ಮಂದೆ, ಗೋಲೆ) ಎಂಬ ಅರ್ಥದಲ್ಲಿಯೂ ರೂಢವಿದೆ. ಆದರೆ ಮರಾಠಿಯಲ್ಲಿ 'ಹಿಂಡಣೆ' ಒಂದು ಕ್ರಿಯೆ-ಧಾತು. ಅದರ ಅರ್ಥ ಅಲೆದಾಡು-'ಅಂಡಲೆ' ಬಹುಶಃ ಹೀಗೆ ಅಲೆದಾಡುವಾಗ ಆಗುವ ಗುಂಪನ್ನು ನಾವು ಕನ್ನಡದಲ್ಲಿ 'ಹಿಂಡು' ಎಂದು ಕರೆದಿರಬೇಕು. 'ಮಂದೆ' ಒಂದೆಡೆಗೆ ತಳವೂರಿದ ಗುಂಪು, 'ಹಿಂಡು'-ಅಲೆಮಾರಿ ಗುಂಪು-ಹೀಗೆಯೇ ಮೂಲದಲ್ಲಿ ಆಗಿರಬಹುದೇ? ಏನೇ ಆದರೂ, ನಾವು 'ಹಿಂಡಿ'ನ ಕ್ರಿಯಾರೂಪವನ್ನು ಕಳೆದು ಕೊಂಡಿದ್ದೇವೆ.

'**ಹುಡುಕು**' ಮರಾಠಿಯಲ್ಲಿಯೂ ಕನ್ನಡ ಅರ್ಥದಲ್ಲಿಯೇ ರೂಢವಾಗಿದೆ,-ಹುಡುಕಣೇ, ಶೋಧಮಾಡು.

'ಕೈವಾರ' ಕನ್ನಡದಲ್ಲಿ ಪಕ್ಷಪಾತ. "ಕರ್ಣನಿಗೆ ದುರ್ಯೋಧನನ ಕೈವಾರ". ಕುಮಾರವ್ಯಾಸ ಈ ಶಬ್ದವನ್ನು ಬಳಸುತ್ತಾನೆ. ಮರಾಠಿಯಲ್ಲಿ 'ಕೈವಾರಿ' ಸಹಾಯಕ, ಬೆಂಬಲಿಗ ಎಂಬ ಅರ್ಥದಲ್ಲಿ ಹಿಂದಿನಿಂದಲೂ ಬಳಕೆಯಲ್ಲಿದೆ. "ದೇವರು ಭಕ್ತರ ಕೈವಾರಿ". ನಮ್ಮ 'ಕೈವಾರ' ಭಾವನಾಮವಿದೆಯೇ ಹೊರತು 'ಕೈವಾರಿ' ವಿಶೇಷಣ ರೂಪವಿಲ್ಲ. ಕೊನೆಗೂ ಅದೊಂದು ಅಂಕಿತನಾಮವಾಗಿ ಬೆಂಗಳೂರಿನ ಹತ್ತಿರದ ಒಂದು ಕ್ಷೇತ್ರದ ಹೆಸರಾಗಿ ಉಳಿದು ಬಿಟ್ಟಿದೆ. ಭಾವನಾಮಕ್ಕೆ ಅಭಾವ!

'**ತಗು**' ಈ ಕನ್ನಡ ಧಾತು ಇಂದಿಗೂ ಮರಾಠಿಯಲ್ಲಿ ಧಾತುವಾಗಿಯೇ ಕ್ರಿಯಾರೂಪದಲ್ಲಿದೆ. ಅಲ್ಲಿ 'ತಗ್' ಅಂದರೆ 'ತಾಳಿ ಬದುಕಿ ಉಳಿ' 'ಜಗ' ಬದುಕು, 'ತಗ್' ತಾಳಿಕೊಂಡಿರು. ಆದರೆ ಕನ್ನಡದಲ್ಲಿ ಈ ಧಾತುವಿನ 'ತಕ್ಕ' ಎಂಬ ರೂಪವೊಂದೇ ವ್ಯವಹೃತವಾಗಿದೆ. 'ತಕ್ಕ' ಅಂದರೆ

ಮೂಲತ: ತಾಳಿ ಉಳಿಯಬಲ್ಲ. ಅರ್ಥಾತ್ ಯೋಗ್ಯ ಅರ್ಹ' ಎಂಬುದರ ಛಾಯಾ ಭಾವ. ಆದರೆ ಈ ಮಹತ್ವದ ಧಾತುವನ್ನೇ ನಾವು ಕಳೆದುಕೊಂಡಿಬಿಟ್ಟಿದ್ದೇವೆ!

**ತೂಕ**-ಇದೊಂದೇ ನಮ್ಮಲ್ಲಿಯ ವ್ಯವಹೃತ ರೂಪ. ಆದರೆ ಮರಾಠಿಯಲ್ಲಿ 'ತೂಗು' ಅಲ್ಲಾಡಿಸು ಧಾತುರೂಪವೂ ಬಳಕೆಯಲ್ಲಿದೆ. ತುಕಾರಾಮ, ತುಳಜಾಪುರದ ತುಕಾಯಿ-ಈ ಶಬ್ದಗಳಲ್ಲಿಯ 'ತುಕ' ತೂಕದ್ದೇ ಪರ್ಯಾಯ. ಉತ್ತರ ಭಾರತದಲ್ಲಿ ತುಲಾರಾಮ, ಮಹಾರಾಷ್ಟ್ರದಲ್ಲಿ ತುಕಾರಾಮ!

ತುಲಜಾಪುರದ ಭವಾನಿಯ ಹೆಸರು "ತುಕಾಯಿ" ಏಕೆ? ಆ ದೇವಿಯ ಹೆಸರಿನ ಕನ್ನಡ ಮೂಲವನ್ನು ಅರಿಯದೇ ಅಥವಾ ಅಲ್ಲಗಳೆದು ಮರಾಠಿಗರು ಒಂದು ಕತೆಯನ್ನೇ ಕಟ್ಟಿದ್ದಾರೆ. (ಡಾ. ಆವಳಿಕರರು ಈ ಕತೆಯನ್ನು ನನಗೆ ಹೇಳಿದರು.) ಛತ್ರಪತಿ ಶಿವಾಜಿ ಮಹಾರಾಜರು ತುಳಜಾಪುರದ ಭವಾನಿಯ ದರ್ಶನ ಪಡೆದಾಗ ಆ ದೇವಿಯನ್ನು ಕೇಳಿದರಂತೆ: "ತೂ ಕಾ, ಆಯಿ?"-'ನೀನೇಯೇ ಅಮ್ಮಾ?') ಅಂದಿನಿಂದ ಈ ಅಮ್ಮನವರ ಹೆಸರು 'ತುಕಾಯೀ ಎಂದು ರೂಢವಾಯಿತಂತೆ! ಅಂದರೆ ಎಂಥ ಅಬದ್ಧ ನೋಡಿ! ಅಂಬಾ ಭವಾನಿಯನ್ನು ನೋಡಲು ಹೋದ ಶಿವಾಜೀ ಆ ಬಿಂಬ ಕಂಡೊಡನೆಯೇ 'ನೀನೇಯೇ ತಾಯಿ?' ಎಂದು ಕೇಳಿದನೆಂದರೆ, ಆಕ ಬೇರೆ ಯಾರೋ ಆಗಿರಬೇಕೆಂಬ ಭಾವನೆಯಿಂದಲೇ ಆತ ಅಲ್ಲಿಗೆ ಹೋಗಿದ್ದನೆಂದಾಯಿತು!

'ತೂಗು-ತಲೆದೂಗು ಎಂಬಲ್ಲಿಗಿಂತ ತುಕವಿಣೇ ಎಂಬಲ್ಲಿಯ 'ತುಕ್' ಧಾತುವಿನ ಅರ್ಥ ಹೆಚ್ಚು ವಿಶಿಷ್ಟ ತಲೆದೂಗು ಎಂಬಲ್ಲಿ ಪ್ರಶಂಸೆ ವ್ಯಕ್ತ ಪಡಿಸುವದಿಷ್ಟೇ ಸೂಚನೆ ಇದೆ. ಆದರೆ 'ಮಾನ ತುಕವಿಣೇ' ಎಂಬಲ್ಲಿ 'ಸುಮ್ಮನೆ ಒಪ್ಪಿಗೆ ಕೊಡು' ಎಂಬ ಅರ್ಥ ಹೊರಡುತ್ತದೆ. ಹೇಳಿದಕ್ಕೆಲ್ಲ ಹೌದೆನ್ನು-ಎಂಬ ಭಾವ ಇಲ್ಲಿ ಮರಾಠಿಯಲ್ಲಿಯಂತೆ ವ್ಯಕ್ತವಾಗುವದಿಲ್ಲ.

**'ಪತಿಕರಿಸು'** - ಕುಮಾರವ್ಯಾಸರೇ ಮುಂತಾದ ಕವಿಗಳು ಇದನ್ನು 'ಸ್ವೀಕರಿಸು' ಎಂಬ ಅರ್ಥದಲ್ಲಿ ಧಾರಾಳವಾಗಿ ಪ್ರಯೋಗಿಸಿದ್ದುಂಟು. ಈ ಧಾತು ಇಂದಿಗೂ ಮರಾಠಿಯ ದಿನಬಳಕೆಯ ಮಾತಿನಲ್ಲಿ ಇದೆ. 'ಪತಕರಣೆ' ಇದು ಇಂಗ್ಲೀಷ Prefer ಎಂಬ ವಿಶಿಷ್ಟಾರ್ಥ ವಾಹಕವಾಗಿ ಬಳಕೆಯಲ್ಲಿದೆ. ಬರೆ ಬಂದದ್ದು ಸ್ವೀಕರಿಸುವದಲ್ಲ. ಸ್ವೇಚ್ಛೆಯಿಂದ ಅಂಗೀಕರಿಸು, ಆಯ್ಕೆ ಮಾಡಿಕೊಳ್ಳು ಎಂಬ ಅರ್ಥ ಧಾತುವಿಗೆ ಮರಾಠಿಯಲ್ಲಿ ಇದೆ. ಆದರೆ ಇಂದಿನ ಕನ್ನಡ ನಾಲಿಗೆಗೆ ಈ ಸೊಗಸಾದ ಶಬ್ದ ಹೊರತಾಗಿ ಹೋಗಿದೆ!

**'ಗಂಟು'–'ಗಾಂಠ'** ಎಂಬ ರೂಪದಲ್ಲಿ ಮರಾಠಿಗೆ ಸೇರಿದೆ. ಆದರೆ ಅಲ್ಲಿ ಅದು ನೇರ ಧಾತುವೂ ಆಗಿದೆ. 'ಗಾಂಟಣೇ' ಅಂದರೆ ಸಿಗೂ, ಸಂಧಿಸು ಎಂಬ ಅರ್ಥ ನಮ್ಮಲ್ಲಿ 'ಗಂಟುಬೀಳು' ಎಂದು ಮಾಡಿಕೊಳ್ಳಬೇಕಾಗುತ್ತದೆ. 'ಅಂಟು'ದಂತೆ 'ಗಂಟು' ನೇರವಾಗಿ ಧಾತುವಾಗಿ ಉಳಿದಿಲ್ಲ. ಇದೂ ಒಂದು ಹಾನಿಯೇ ಅರ್ಥ ವ್ಯಂಜನೆಗೆ.

ನಮ್ಮ **'ಸಂಗಡ'** ಮರಾಠಿಯಲ್ಲಿ 'ಸಾಂಗಡ' ಎಂಬ ನಾಮರೂಪ ಹೊಂದಿದೆ. ಅದಕ್ಕೆ ಅಲ್ಲಿ 'ತೆಪ್ಪ'ವೆಂಬ ವಿಶಿಷ್ಟ ಅರ್ಥ ಕನ್ನಡದಲ್ಲಿಯ 'ಜತೆಗೆ' ಎಂಬುದಲ್ಲ. ಕೊಂಡು ಒಟ್ಟು ಜೋತೆಗೂಡಿಸಿಯೇ ತೆಪ್ಪ ಕಟ್ಟುವದು.

**'ಸಂತೆ'** ಮರಾಠಿಯಲ್ಲಿ 'ಸಾಂಥ'ವೆಂದಾಗಿದೆ. ಆದರೆ ಅಲ್ಲಿ ಅದಕ್ಕೆ ಒಂದು ಭಯಂಕರ

ಅರ್ಥ ತುಂಬಿದೆ. 'ಸಾಂಥ' ಅಂದರೆ ಪಿಡುಗು, ಸಾಂಕ್ರಾಮಿಕ ಬೇನೆ. ಸಂತೆಯಿಂದ ಈ ಅರ್ಥ ಎಷ್ಟು ದೂರ ? ಆದರೆ ಅಷ್ಟೇನೂ ದೂರವಿಲ್ಲ. ಸಂತೆಯಲ್ಲಿ ಜನರ ಸಂದಣಿ ಸಂಸರ್ಗ ಹೆಚ್ಚು. ಇದರಿಂದ ಅಲ್ಲಿಯೇ ಪಿಡುಗಿನ ಪ್ರಸಾರ ಹೆಚ್ಚು-ಪ್ಲೇಗು, ಮೈಲಿ, ಅತಿಸಾರ ಇತ್ಯಾದಿ ಹಬ್ಬಲು ಸಂತೆಯ ಸಂಪರ್ಕವೇ ಕಾರಣ. ಸಂತೆಯಲ್ಲಿ ಅಂಟಿಕೊಂಡಿದ್ದೇ 'ಸಾಂಥ'! ನಮ್ಮ ಜನಕ್ಕೆ ಈ ಪಿಡುಗು ತಮಗೆ ಎಲ್ಲಿಂದ ಅಂಟಿಕೊಂಡಿತೆಂಬ ತಿಳುವಳಿಕೆ ಆಗಿರಲಿಕ್ಕಿಲ್ಲ, ಮರಾಠಿಗರಿಗೆ ಅದು ಆಗಿತ್ತು.

ಕನ್ನಡ '**ಬೆಟ್ಟ**' ಮರಾಠಿಯಲ್ಲಿ 'ಬೇಟ' ಆಗಿದೆ. ಆದರೆ ಅಲ್ಲಿ ಅದು ದ್ವೀಪ. ನಮ್ಮಲ್ಲಿ ಬರೆ ದಟ್ಟಡವಿ-ಗುಡ್ಡಗಾಡಿನದು. ಈ ಅರ್ಥ ಭೇದ ಹೇಗೆ ಉಂಟಾಯಿತೋ? ತುಂಬ ಸೋಜಿಗದ ಸಂಗತಿ.

ಕನ್ನಡ '**ಕೊಳಂಬ**' ಎಲ್ಲರೂ ಬಲ್ಲರು. ಅದೊಂದು ರುಚಿಕಟ್ಟಾದ ವಿಶಿಷ್ಟ ಮಸಾಲೆ ಹಾಕಿದ 'ಹುಳಿ'. ಆದರೆ ಮರಾಠಿಯಲ್ಲಿ 'ಖೊಳಂಬಣೇ'-ಒಂದು ಧಾತು. ಅದರ ಅರ್ಥ ವ್ಯರ್ಥ ಹೊತ್ತುಗಳೆ-ಯಾವದಾರೊಂದು ಕೆಲಸದಲ್ಲಿ ಅನವಶ್ಯಕ ಕಾಲಹರಣಮಾಡು! ಅರ್ಥದ ಧಾತು ಎಲ್ಲಿಂದೆಲ್ಲಿಗೆ ಬಂತು? ಕೊಳಂಬು ಕುದಿಯಲು ತುಂಬ ವೇಳೆ ಹಿಡಿಯವದೆಂದು ಈ ಅರ್ಥ ಹೊರಟಿರಬಹುದೇ? ನಮ್ಮಲ್ಲಿ ಇದರ ಅರ್ಥ ಛಾಯೆ ನಾವು ಕೊಳಂಬಿನೊಂದಿಗೆ ಕಲಸಿ ನುಂಗಿ ಬಿಟ್ಟಿದ್ದೇವೆ.

'**ಕೋಡಬಳೆ**' ಖಾದ್ಯ ಮರಾಠಿಗೂ ಗೊತ್ತು. ಆದರೆ ಅಲ್ಲಿ 'ಅಠರಾ ಪಿಠಾಚೇ ಕೊಡಬೊಳೆ' ಎಂಬ ಒಂದು ಪದಪ್ರಯೋಗವೇ ಇದೆ. ಹಲವು ವಿಸಂಗತ ಘಟಕಗಳ ಕಲಬೆರಿಕೆಯ ವಸ್ತುವೆಂದು ಇದರ ಅರ್ಥ. ಆದರೆ ಈ 'ಹದಿನೆಂಟು ಹಿಟ್ಟಿ'ನ ಗುಟ್ಟು ಏನು? ಕೋಡಬಳೆಗೆ ಬೇರೆ ಬೇರೆ ಹದಿನೆಂಟು ಹಿಟ್ಟು ಒಟ್ಟಿಗೆ ಬೆರಸುವರೀತಿ ಎಲ್ಲಿಯದೋ!

ಕನ್ನಡದಲ್ಲಿ '**ಮಣಿಕಟ್ಟು**' ಎಂಬ ಶಬ್ದ ಮುಂಗೈಗೆ ಇನ್ನೊಂದು ಹೆಸರು. ಆದರೆ ಅದು ಬಳಕೆಯಲ್ಲಿ ಇಲ್ಲ. ಮರಾಠಿಯಲ್ಲಿ 'ಮಣಗಟ' ನಿತ್ಯ ಬಳಕೆಯ ಮಾತು. 'ಮಣಗಟ'ದ ಜೋರಿನಿಂದಲೇ ಅವರ ಎಲ್ಲ ಕೆಲಸ.

ನಮ್ಮ '**ಸೇರು**' ಹೊಕ್ಕು ಎಂಬ ಅರ್ಥದಲ್ಲಿ ಮರಾಠಿಯಲ್ಲಿ 'ಶಿರಣೆ' ಎಂಬ ದಿನಬಳಕೆಯ ಧಾತುವಾಗಿದೆ.

'**ಸೋಗು**' ನಮ್ಮಲ್ಲಿ ಒಂದು ಮೋಸದ ರೂಪ, ಮರಾಠಿಯಲ್ಲಿ ಅದು 'ಸೋಂಗ' ಆಗಿದ್ದು ಸ್ವಚ್ಛವಾಗಿ 'ವೇಷ' ವೆಂಬ ಅರ್ಥವನ್ನೇ ಕೊಡುತ್ತದೆ. ಅದಕ್ಕೆ ಮೋಸದ ಸೊಂಕು ಉಳಿದಿಲ್ಲ.

ಕನ್ನಡ '**ಮೆರವಣಿಗೆ**' ಎಂಬ ಶಬ್ದ ಮರಾಠಿಯಲ್ಲಿ 'ಮಿರವಣಾಕ' ಆಗಿದೆ. ಅಷ್ಟೇ ಅಲ್ಲ, 'ಮಿರವಿಣೇ' ಕ್ರಿಯಾಪದವೂ ಆಗಿ ಬಳಕೆಯಲ್ಲಿದೆ. 'ಮಿರವಿಣೆ' ಇದು 'ಮರೆ' ಎಂಬುದಕ್ಕಿಂತ ವಿಶಿಷ್ಟ ಅರ್ಥ ಕೊಡುತ್ತದೆ. ಸಾರ್ವಜನಿಕವಾಗಿ ಪ್ರದರ್ಶಿಸುವ ಡಂಭಾಚಾರದ ಛಾಯೆ 'ಮಿರವಿಣೆ' ದಲ್ಲಿ ಅಕಡವಾಗಿದೆ.

ಕನ್ನಡ '**ಕೋಲಾಟ**'ವೇ ಮರಾಠಿಯ 'ಕೊಲ್ಹಟ' ಆಗಿರಬೇಕು. ಮರಾಠಿಯಲ್ಲಿ 'ಕೊಲ್ಹಟಿಣ' ಅಂದರೆ ಡೊಂಬರ ಹುಡುಗಿ, ಇದೇ 'ಕೋಲ್ಹಟ' ಮರಾಠಿಯಿಂದ ಮರಳಿ ಕನ್ನಡಕ್ಕೆ 'ಕೊಲ್ಲಣ'.

ಡೊಂಬರ ಆಟವೆಂಬ ಅರ್ಥದಲ್ಲಿ ಬಂದು ಪ್ರಚಾರ ಪಡೆದಿದೆ. (ಸಂಸ್ಕೃತದ 'ಮಿತ್ರ ಪರ್ಶಿಯನ್ 'ಮಿಹಿರ' ಆಗಿ ಮತ್ತೆ ಸಂಸ್ಕೃತ ಕೋಶಕ್ಕೆ ಅದೇ 'ಮಿಹಿರ' ಸೂರ್ಯನಿಗೆ ಪರ್ಯಾಯ ನಾಮವಾಗಿ ಬಂದಿದೆ.)

(ನಮ್ಮ '**ಡೊಂಬ**' ಮರಾಠಿಯಲ್ಲಿ ಬರೆ ಒಬ್ಬ ಅಲೆಮಾರಿ ಲಂಬಾಣಿಯಂತೆ. ಆತ ಕಸರತ್ತಿನ ಆಟ ಮಾಡುವನೆಂಬ ಅರ್ಥಕೊಡುವದಿಲ್ಲ. ಆತ ಕತ್ತೆಗಳೊಂದಿಗೆ ಅಲೆದಾಡುವ ಶ್ರಮ ಜೀವಿ!)

'**ಮಿಟಣೇ**' ಇದು 'ಮುಗಿ' 'ಮುಚ್ಚು' ಎಂಬ ಅರ್ಥದಲ್ಲಿ ಮರಾಠಿಯಲ್ಲಿ ಇದ್ದರೆ ಕನ್ನಡದಲ್ಲಿ ಕಣ್ಣು 'ಮಿಟುಕಿಸು'ವ ಮಟ್ಟಿಗೇ ಇದರ ಅರ್ಥವ್ಯಾಪ್ತಿ.

ಕನ್ನಡದಲ್ಲಿ '**ಓಸರಿ**' ಅಂದರೆ ವಾಲಿಸು, ಬದಿಗೆ ಸರಿಸು, ಮರಾಠಿಯಲ್ಲಿ ಅದು ನಾಮಪದ. ಅದರ ಅರ್ಥ 'ಜಗುಲ್' ಮನೆಯ ಬದಿಯ ಭಾಗ. "ಭಟಾಲಾದಿಲೀ ಓಸರಿ, ಭಟ ಹಾಥ ಪಾಯ ಪಸರಿ!"

ಕನ್ನಡದಿಂದ ಮರಾಠಿಗೆ ಹೋಗಿ ಹೆಚ್ಚಿನ ಅರ್ಥ ಪುಷ್ಟಿಯನ್ನು ಬೇರೆ ವ್ಯಾಕೃತ ರೂಪಗಳನ್ನು ಪಡೆದ ಇಂಥ ಶಬ್ದಗಳು ನೂರಾರು. ಇಲ್ಲಿ ಕೇವಲ ಮಾದರಿಗಾಗಿ ಕೆಲವನ್ನೇ ನೆನಪಾದಂತೆ ಎತ್ತಿಕೊಂಡು ಚರ್ಚಿಸಲಾಗಿದೆ.

ಇಂದಿಗೂ ಮರಾಠಿಯಲ್ಲಿ ಧಾತು ರೂಪದಲ್ಲಿ ಪ್ರಯೋಗದಲ್ಲಿರುವ ಕನ್ನಡ ಶಬ್ದಗಳನ್ನು ನಾವು ತಿರುವಿ ಕನ್ನಡದಲ್ಲಿ ಅದೇ ರೀತಿ ಪ್ರಯೋಗಿಸಲು ಯತ್ನಿಸಬಾರದೇಕೆ? (ಉದಾ: ಅಡ್, ಗಾಂಠ, ತಗ್ ಇತ್ಯಾದಿ) ಇದರಿಂದ ನಮ್ಮ ಧಾತು-ದಾರಿದ್ರ್ಯ ಬಹುಮಟ್ಟಿಗೆ ನೀಗಬಹುದು. ಇಂದು ನಾವು ಇಂಥ ಸಂದರ್ಭಗಳಲ್ಲಿ ಕೊಡು, ಬಿಡು ಇತ್ಯಾದಿ ಸಹಾಯಕ ಕ್ರಿಯೆಗಳನ್ನು ನಾಮಪದಗಳಿಗೋ ಕೃದಂತಗಳಿಗೋ ಜೋಡಿಸಿ ಕೆಲಸ ಸಾಗಿಸಿಕೊಳ್ಳುತ್ತಿದ್ದೇವೆ. ಇದಕ್ಕೆ ಕಾರಣ ನೂರಾರು. ನೇರ ಧಾತುಗಳು ನಮ್ಮಲ್ಲಿ ನಷ್ಟಪ್ರಾಯವಾಗಿವೆ. ಆ ಕೊರತೆ ಕೆಲಮಟ್ಟಿಗೆ ಹೀಗೆ ತುಂಬಿಕೊಳ್ಳಲು ಬಂದಿತು. ಇನ್ನು ಈ ಅತಂತ್ರ ಅವ್ಯವಸ್ಥೆಯನ್ನು ಸೂಚಿಸುವ ಮರಾಠೀ ಶಬ್ದ ಒಂದಿದೆ. ಅದಕ್ಕೆ ಕನ್ನಡದ್ದೇ ಐತಿಹಾಸಿಕ ಮೂಲ. ಅದರ ನಿರ್ದೇಶದಿಂದ ಈ ಲೇಖವನ್ನು ಮುಗಿಸುತ್ತೇನೆ.

'ಅನಾಗೊಂದಿ' (ಕಾರಭಾರ) ಇದು ನೇರ ನಮ್ಮ ವಿಜಯನಗರದ ಅಳಿಗಾಲಕ್ಕೆ ಸಂಬಂಧಿಸಿದ್ದು. 'ಆನೆಗುಂದಿ'ಯ ಹದಗೆಟ್ಟ ಆಳಿಕೆಯಿಂದ ರೂಢವಾದ ಅವ್ಯವಸ್ಥೆಗೇ ಬಂದ ಹೊಸ ಹೆಸರು. ಮರಾಠಿಯಲ್ಲಿ "ಈ ಸಂಸ್ಥೆಯಲ್ಲಿ ಇಲಾಖೆಯಲ್ಲಿ ಅನೆಗುಂದಿ (ಅನಾಗೊಂದಿ) ನಡೆದಿದೆ", ಅಂದರೆ ಅಲ್ಲಿ ಎಲ್ಲವೂ ಅತಂತ್ರ ಅನವಸ್ಥೆ ಎಂಬ ಅರ್ಥ. ಮರಾಠಿ ಭಾಷೆಯ ಶಬ್ದ ಸಂಪತ್ತಿಗೆ ಕನ್ನಡವು ಒದಗಿಸಿದ ಇದೊಂದು ಕಾಣಿಕೆ, ನಮ್ಮ ಇತಿಹಾಸದ ಒಂದು ಅಂದಗೆಟ್ಟ ಅಂಕದ ಅಂಕಿತವಾಗಿದ್ದು ಸೋಜಿಗದಷ್ಟೇ ನಾಚಿಕೆಯ ಮಾತೂ ಆಗಿದೆ.

●

('ಹಸಿರು' ವಿಶೇಷಾಂಕ, ೧೯೭೭)

# ಮತಾಂತರ ಮತ್ತು ಹಿಂದುತ್ವ

"ಮತಂ ತು ದುರ್ಬಲಂ ಮನ್ಯೇ ಮತಿರೇವ ಗರೀಯಸೀ"-ಶ್ರೀಕೃಷ್ಣ ಭಕ್ತ ಉದ್ಧವನಿಗೆ ಹೇಳಿದ್ದಾನೆ-ಭಾಗವತ ಪುರಾಣದಲ್ಲಿ. ಇದೀಗ ನಾನು ಆರಂಭಿಸಿದ್ದು ಪುರಾಣ ಪ್ರವಚನವಲ್ಲ. ಮತವೆಂಬುದು ದುರ್ಬಲ, ಮತಿಯೇ ಮುಖ್ಯ-ಎಂಬ ಮಾತು ಒಂದು ಸನಾತನ ಅಥವಾ ಸಾರ್ವಕಾಲಿಕ ಸತ್ಯ. ಈ ದೃಷ್ಟಿಯಿಂದ ನಾವು ಸದ್ಯದ ಸಾಮುದಾಯಿಕ ಮತಾಂತರಗಳ ಪ್ರಶ್ನೆಯನ್ನು ಗಮನಿಸಬೇಕು.

ಒಬ್ಬ ಚೋಟಿ ಮಗ ಅಪ್ಪನಿಗೆ ಕೇಳಿದನಂತೆ: "ಅಪ್ಪಾ, ಒಬ್ಬ ನಮ್ಮ ಧರ್ಮ ಬಿಟ್ಟು ಬೇರೆ ಧರ್ಮ ಸೇರಿದರೆ ಅವನಿಗೆ ಏನೆನ್ನಬೇಕು?" ಅಪ್ಪ ಕೂಡಲೇ ಗರ್ಜಿಸಿದ: "ಥೂ, ಆತ ಪಾಪಿ, ಆತ ಧರ್ಮದ್ರೋಹಿ! ಅವನಿಗೆ ಸ್ಪೆಶಲ್ ನರಕ!" ಮಗನ ಕುತೂಹಲ ಅಲ್ಲಿಗೇ ಮುಗಿಯಲಿಲ್ಲ. "ಆದರೆ ಅಪ್ಪಾ, ಒಬ್ಬ ಇನ್ನೊಂದು ಧರ್ಮ ಬಿಟ್ಟು ನಮ್ಮ ಧರ್ಮಕ್ಕೆ ಬಂದರೆ?" ಆತ ಕೇಳಿದ. "ಮಗೂ, ಅದು ಧರ್ಮಾಂತರ. ಅದನ್ನು ನಾವು ಪ್ರೋತ್ಸಾಹಿಸಬೇಕು."

ಹೀಗಿದೆ ಮತಾಂತರ (ಧರ್ಮಾಂತರ)ಗಳ ಬಗೆಗೆ ನಮ್ಮ ಸರ್ವಸಾಧಾರಣ ನಿಲುಮೆ. ಈ ಪಾತಳಿಯಲ್ಲಿಯೂ ಮತವೇ ದುರ್ಬಲ; ಮತಿಯೇ ಮಿಗಿಲು. (ನಮ್ಮಲ್ಲಿಯ ದಿನನಿತ್ಯದ ಸಾಮೂಹಿಕ ಪಕ್ಷಾಂತರಕ್ಕೂ ಇದೇ ಸೂತ್ರ ಅನ್ವಯಿಸುತ್ತದೆ. ಅದು ರಾಜಕೀಯ ಮತಾಂತರ).

ಮೀನಾಕ್ಷಿಪುರಂ ಮುಂತಾದ ಎಡೆಗಳಲ್ಲಿ ಸದ್ಯ ಟೈಂ ಬಾಂಬಿನಂತೆ ಸ್ಫೋಟವಾದ ಸಾವಿರಾರು ದಲಿತರ ಸಾಮೂಹಿಕ ಮತಾಂತರದ ಸಂದರ್ಭದಲ್ಲಿ ಈ ಮತ-ಮತಿಗಳ ಸಮಸ್ಯೆಗೆ ಎಂದಿಲ್ಲದ ಮಹತ್ವ ಬಂದಿದೆ. ಇಲ್ಲಿಯೂ ಮತಕ್ಕಿಂತ ಮತಿಗೇ ಪ್ರಾಧ್ಯಾನ್ಯ. ಬಂಧಕ್ಕೂ ಮೋಕ್ಷಕ್ಕೂ ಮನಸ್ಸೇ ಪ್ರಧಾನ. ಈ ಮತಾಂತರಗಳ ಹಿಂದೆ ಕೆಲಸ ಮಾಡಿದ, ಮಾಡುವ ಮನೋಧರ್ಮ, ಮತಿವಿಕಾರ ಯಾವುದು?

ನಮ್ಮ ಹರಿಜನರು, ದೀನ ದಲಿತರು ಅರಬ ರಾಷ್ಟ್ರಗಳಿಂದ ಹೇರಳವಾಗಿ ಹರಿದು ಬಂದ ಹಣಕ್ಕೆ, ಬಟ್ಟೆ ಬರೆಗಳಿಗೆ, ಅನ್ಯ ಆಮಿಷಗಳಿಗೆ ಮನಸೋತು ಹೀಗೆ ಮುಸ್ಲಿಂ ಧರ್ಮವನ್ನು ಆಲಿಂಗಿಸದರೆಂಬ ಒಂದು ವಾದವಿದೆ. ಆದರೆ ಇದರ ಹುರುಳೇನು? ತಗ್ಗಿದ್ದಲ್ಲಿ ಹಳ್ಳ ಹರಿಯುತ್ತದೆ. ಈ ದುರ್ದೈವಿ ಜನಗಳಿಗೆ ತಲೆಮಾರುಗಳಿಂದಲೂ ಬದುಕು ತಲೆಭಾರ, ತಲೇಬೇನೆ. ದಾರಿದ್ರ್ಯ ಹೀನಾಯ. ಮೇಲ್ವರ್ಗ ("ಪುಣ್ಯವಂತ"ರ)ದವರ ದಬ್ಬಾಳಿಕೆ ಶೋಷಣೆಗಳ ತೊತ್ತು ಬಾಳಿಗೆ ಪಳಗಿ ಬಂದವರಿಗೆ, ಮನ್ನಣೆಯ ತುತ್ತು ಕೂಳಿಗೂ ಗತಿ ಇಲ್ಲದವರಿಗೆ ಹಣದ 'ಆಮಿಷ'ವೆಂದು ಹೇಳುವದೇ ಒಂದು ಪಾಪ-ಗಾಯಕ್ಕೆ ಬರೆ ಕೊಟ್ಟಂತೆ. (Adding insult to injury). ಹಣದ ಮೋಹ ಯಾರಿಗೆ ತಪ್ಪಿದೆ? ನಮ್ಮ ಧರ್ಮ ಮಾರ್ತಾಂಡರಿಗೆ, ಮಠಾಧಿಪತಿಗಳಿಗೆ, ದೇವಸ್ಥಾನಗಳಿಗೆ, ಧರ್ಮದರ್ಶಿಗಳಿಗೆ ಅದು ಬಿಟ್ಟಿದೆಯೆ? (ಇಲ್ಲಿ ಲಂಚಬಡಕ ಲಾಭಬಡಕ ಕಳ್ಳಪೇಟೆ ರಾಜಕೀಯಗಳ ಶ್ರೇಷ್ಠಗಳ "ಮಹಾಜನ" ಸಮೂಹವನ್ನು ಬಿಟ್ಟಿದ್ದೇನೆ.)

"Give a dog a bad name and hang it" ಎಂಬಂತೆ ಈ ಪತಿತ ದಲಿತರನ್ನು ಧರ್ಮಾಂತರಕ್ಕಾಗಿ ಹಳಿಯುವದು ನಮ್ಮ ಹಿಂದುಗಳೆಂಬ ಸವರ್ಣಕರಿಗೆ ಶೋಭಿಸುವದಿಲ್ಲ. ಕ್ರೈಸ್ತ,

ಇಸ್ಲಾಂ, ಬೌದ್ಧ ಇಂಥವು ಪ್ರಸರಣಶೀಲ ಧರ್ಮಗಳು. ಆದರೆ ಈ ದೃಷ್ಟಿಯಲ್ಲಿ ಹಿಂದೂ ಒಂದು
ಧರ್ಮವಲ್ಲ. ಅದೊಂದು ಸಂಸ್ಕೃತಿಯ ಮಾದರಿ. ಇದು ಸನಾತನ. ಹಿಂದುವಾಗಲು ದೀಕ್ಷೆ
ಧರ್ಮಾಂತರಗಳಿಲ್ಲ. ಹಿಂದು ಹುಟ್ಟಿಯೇ ಬರಬೇಕು-ಅದೂ ಯಾವದೊಂದು ಜಾತಿಯಲ್ಲಿ-
ಸ್ವರಾಜ್ಯದ ಹಕ್ಕಿನಂತೆಯೇ ಹಿಂದುತ್ವ ಜನ್ಮಸಿದ್ಧ.

ಅಂದರೇನು? ಹಿಂದುತ್ವ ಬಿಡುವದು ಅದನ್ನು ಪಡೆಯುವದಕ್ಕಿಂತ ಬಲು ಸುಲಭ-
ಇದೊಂದು ಹಿಂದೂ ಧರ್ಮವೆಂಬ ಬದುಕಿನ ಮಾದರಿಯ ಒಂದು ಲಕ್ಷಣ. ಇದನ್ನು ದೋಷವೆಂದು
ಹೇಳುತ್ತಿಲ್ಲ. ನಮ್ಮ ವಿಶಿಷ್ಟ ಐತಿಹಾಸಿಕ ಪರಂಪರೆಯ ಪರಿಪಾಕವಿದು. ಪ್ರಾಚೀನ ಕಾಲದಲ್ಲಿ ಕ್ರೈಸ್ತ
ಇಸ್ಲಾಂ ಧರ್ಮಗಳು ದೇಶಕ್ಕೆ ಆಮದು ಆಗದಿದ್ದಾಗ ಈ ಧರ್ಮ ಪ್ರಾಚೀನ ಮಿಸ್ರ (ಇಜಿಪ್ತ),
ಗ್ರೀಕ ಹಾಗೂ ರೋಮನ್ ಧರ್ಮಗಳಂತೆಯೇ ಜನ್ಮಸಿದ್ಧ, ರೂಢಿಬದ್ಧವಾಗಿ ಊರ್ಜಿತವಾಗಿ
ಉಳಿಯಿತು. ಆದರೆ ಮುಂದೆ ಕ್ರೈಸ್ತ ಇಸ್ಲಾಂ (ಈ ಮುಂಚೆ ಜೈನ, ಬೌದ್ಧ) ಧರ್ಮಗಳ ಉದಯವಾಗಿ
ಅವುಗಳ ಪ್ರಸರಣಶೀಲ ಆಕ್ರಮಣ ಆಕರ್ಷಣೆಯ ಇದಿರು ಈ ಧರ್ಮಗಳು ತಾಳಲಿಲ್ಲ. ಬರೆ
ಸಾಂಸ್ಕೃತಿಕವಾಗಿ (ಕಲೆ ಕಾವ್ಯ ಶಿಲ್ಪಗಳ ಅಂಶವಾಗಿ ಭಾಷಾ ರೂಪವಾಗಿ) ಬಾಳಿ ಉಳಿದವು.

ಆದರೆ ಭಾರತದಲ್ಲಿ ಹಿಂದೂ ಧರ್ಮ ಬಹುಸಂಖ್ಯ ಸ್ವರೂಪದಲ್ಲಿ ಇಂದಿಗೂ ತಾಳಿ
ಬಾಳಿ ಉಳಿಯಿತು. ಸರ್ ಮಹಮ್ಮದ ಇಕಬಾಲ್ ಹೆಮ್ಮೆಯಿಂದ ಹಾಡಿದಂತೆ.

"ಯೂನಾನೊ ಮಿಸ್ರ ರೂಮಾ
ಸಬ ಮಿಟಗಯೇ ಜಹಾಂಸೆ
ಅಬತಕ್ ಮಗರ ಹೈ ಬಾಕಿ
ನಾಮೋ ನಿಶಾಂ ಹಮಾರಾ
ಸಾರೇ ಜಹಾಂಸೆ ಅಚ್ಛಾ
ಹಿಂದೂಸ್ತಾನ್ ಹಮಾರಾ!"

ಆದರೂ ಐತಿಹಾಸಿಕ ಕಾರಣಗಳ ಪ್ರಬಲ ಪ್ರಭಾವದಿಂದ ನಮ್ಮಲ್ಲಿ ಇಸ್ಲಾಂ ತಳವೂರಿ
ಭರದಿಂದ ಬೆಳೆದು ಹಬ್ಬಿತು-ವಿಶೇಷತಃ ಉತ್ತರ ಭಾರದಲ್ಲಿ ಹಿಂದೂ ಸಂಸ್ಕೃತಿ ದಕ್ಷಿಣದಲ್ಲಿ
ಭದ್ರವಾಗಿ ಉಳಿಯಿತು. (ಉತ್ತರದಲ್ಲಿ ಹಿಂದೂಗಳೂ ಮುಸ್ಲಿಮರಂತೆ ಕಂಡರೆ, ದಕ್ಷಿಣದಲ್ಲಿ
ಮುಸ್ಲಿಮರೂ ಹಿಂದುಗಳಂತೆ ಕಾಣುತ್ತಾರೆ!) ಕೊನೆಗೂ ದೇಶದ ವಿಭಜನೆ ಆಗುವಂತೆ ಪ್ರಾದೇಶಿಕ
ಬಹುಸಂಖ್ಯೆಯಲ್ಲಿ ಮುಸ್ಲಿಂ ಜನಾಂಗ ಉತ್ತರದಲ್ಲಿ ಬೆಳೆಯಿತು. ಅವರಲ್ಲಿ ಬಹುಸಂಖ್ಯೆ ಎಂದೋ
ಹೇಗೋ ಮತಾಂತರ ಹೊಂದಿದ ಹಿಂದುಗಳೇ. ಈ ರೀತಿ ದೊಡ್ಡ ಮೊತ್ತದಲ್ಲಿ ಮತಾಂತರ
ಹೊಂದಿದವರು ಯಾರು? ಸವರ್ಣ ಉಚ್ಚವರ್ಣ ಹಿಂದುಗಳು ಶತಮಾನಗಳಿಂದ ದೂರವಿಟ್ಟ
ಕೀಳಾಗಿ ಕಂಡ ತಥಾಕಥಿತ ಕೆಳಜಾತಿಯವರು-ಶೂದ್ರರೂ ಅತಿಶೂದ್ರರೂ ಆದಿವಾಸಿಗಳೂ
ಅಂತ್ಯಜರೂ ಈ ಪತಿತ ದಲಿತ ಕೋಟಿಯವರು. ಇಂದಿಗೂ ಹಿಂದುಗಳಲ್ಲಿ ಇವರು ಹೆಚ್ಚು
ಕಡಿಮೆ 10 ಕೋಟಿ ಇದ್ದಾರೆ!

ನಿಜವಾಗಿಯೂ ಚಾತುರ್ವರ್ಣ್ಯ, ವೈದಿಕ ಸಂಸ್ಕಾರ, ಗೋತ್ರ - ಪ್ರವರ - ಮಂತ್ರ ತಂತ್ರಗಳೇ
ಹಿಂದೂಧರ್ಮವಾಗಿದ್ದರೆ ಈ ಜನರು ಹಿಂದುಗಳೇ ಅಲ್ಲ! ಮನು ಸ್ಮೃತಿಯೂ ಇವರನ್ನು ಊರ

ಹೊರಗೆ ಇಟ್ಟಿತು. ಕ್ರೈಸ್ತ ಇಸ್ಲಾಂ ಧರ್ಮಗಳು ಇಲ್ಲದಿರುವಾಗಲೂ ಈ ದುರ್ದಶೆಗೊಳಗಾಗಿ ಹೊಳಲಾಡುತ್ತಿದ್ದ ಅತಿ ಶೂದ್ರರಿಗೂ ಅಂತ್ಯಜರಿಗೂ ಅಸ್ಪೃಶ್ಯರಿಗೂ ಇದೇ ನಾಯಿಬಾಳು. ("ಶುನಿ ಶೈವ ಶ್ವಪಾಕೇ ಚ"!)

ಇಂಥ ಬಹುಜನ ಸಮುದಾಯ ಪರಧರ್ಮ ಸೇರುವದು ಪುಣ್ಯ ಲಾಭಕ್ಕಲ್ಲ. ಮೋಕ್ಷ ಪ್ರಾಪ್ತಿಗಲ್ಲ. ದೇವರಿಗಾಗಿಯೂ ಅಲ್ಲ. ಧರ್ಮದಲ್ಲಿ ಮೊದಲು ಅಭ್ಯುದಯ ಆಮೇಲೆ ನಿಃಶ್ರೇಯಸ. ಅವರಿಗೆ ತಾವು ಇದ್ದ ಧರ್ಮದಲ್ಲಿ ಭದ್ರತೆ, ಸುಖಸೌಕರ್ಯ ತಲೆತಲಾಂತರಗಳಿಂದಲೂ ಸಿಗಲಿಲ್ಲ. ಅವರನ್ನು ತಿರುಗಿ ಹಿಂದೂ ಧರ್ಮಕ್ಕೆ ತರುವದೂ ಒಂದು ಅಭಾಸ. ಹಾಗೆ ಬಂದರೆ ಅವರು ತತೋ ಭ್ರಷ್ಟ, ತತೋಭ್ರಷ್ಟ! ಅವರದೇ ಒಂದು ಹೊಸ ಜಾತಿ ಆದೀತು. ಹೀಗೆ ಶುದ್ಧೀಕರಣ ಗೊಂಡವರು ತಮ್ಮ ಮೂಲ ಜಾತಿಗೆ ಸೇರಬೇಕು-ಅಂದರು ಪೂಜ್ಯ ಪೇಜಾವರ ಶ್ರೀಗಳು. ಆದರೆ ಬ್ರಾಹ್ಮಣ ಜಾತಿಗೆಟ್ಟು ಶುದ್ಧೀಕರಣಗೊಂಡರೂ ಪುನಃ ಬ್ರಾಹ್ಮಣನಾಗಲಾರ-ಅಂದರು ಶ್ರೀ ಕಾಂಚೀ ಸ್ವಾಮಿಗಳು, ನಾವು ಕೇಳಿದಾಗ!

ಅಂದಾಗ ಮುಂದೇನು? ಹಿಂದುಗಳೆಲ್ಲ ಬಂಧುಗಳು ಅಂದಮಾತ್ರಕ್ಕೆ ಏನೂ ಪ್ರಯೋಜನವಿಲ್ಲ. ನಾವು ಬಂಧು ಬಳಗದಲ್ಲಿ ಆದರೂ ಎಲ್ಲಿ ಎಷ್ಟು ಆತ್ಮೀಯ ಐಕ್ಯದಲ್ಲಿ ಬಲಿಯುತ್ತಿದ್ದೇವೆ? ದಾಯಾದಿ ಕಲಹ ಹುಟ್ಟುವದೇ ಬಂಧುಗಳಲ್ಲಿ!

ಮುಖ್ಯ ಇಂದಿನ ಪರಿಸ್ಥಿತಿಯಲ್ಲಿ ನಮ್ಮ ಹಿಂದುತ್ವದ ಕಲ್ಪನೆಯೇ, ವ್ಯಾಖ್ಯೆಯೇ ಬದಲಾಗಬೇಕು. ಸ್ವಾತಂತ್ರ್ಯವೀರ ಸಾವರಕರರು ಅದನ್ನೆ ಸಾರಿ ಸಾರಿ ಸಾಧಿಸುತ್ತಾ ದೇಹವಿಟ್ಟರು. "ಹಿಂದೂ ಕಬೀಂ ಹಿ ಬಾಟತ ನಾಹಿ. ಮುಸಲ್ಮಾನಾಚಂ ಅನ್ನ ನವ್ಹೆ, ಸಬಂದ ಮುಸಲ್ಮಾನಾಲಾ ಖಾತ್ಲಾತರೀ ಹಿಂದೂ ಬಾಟತ ನಾಹೀಂ" (ಹಿಂದುವು ಎಂದೂ ಜಾತಿಗೆಡುವದಿಲ್ಲ. ಮುಸಲ್ಮಾನರ ಅನ್ನವಲ್ಲ ಇಡಿಯ ಮುಸಲ್ಮಾನನನ್ನೆ ತಿಂದರೂ ಹಿಂದುವು ಜಾತಿ ಗೆಡುವದಿಲ್ಲ!)

ಅಂದರೆ ಹಿಂದುತ್ವ ನಮ್ಮ ರಾಷ್ಟ್ರೀಯತ್ವ. ಕ್ರೈಸ್ತರೂ, ಮುಸ್ಲಿಮರೂ, ಶೈವರಂತೆ, ವೈಷ್ಣವರಂತೆ, ಸಿಖ್ಖರಂತೆ, ಬೌದ್ಧರಂತೆ ಒಂದು ಮತಪಂಥಕ್ಕೆ ಒಪ್ಪಿದ ಹಿಂದುಗಳೇ. ನಮ್ಮ ಮುಸ್ಲಿಮರು ಹಿಂದೂ ಮುಸ್ಲಿಮರು. ಕ್ರೈಸ್ತರು ಹಿಂದೂ ಕ್ರೈಸ್ತರು. ಅಂದಾಗ ಇಲ್ಲಿ 'ಹಿಂದು ಪದವು Indian. ಭಾರತೀಯ ಎಂಬ ಅರ್ಥದಲ್ಲಿಯೇ ಗ್ರಹಿಸಬೇಕು. ಈ ದೃಷ್ಟಿಯಿಂದಲೇ ಮೊದಲು ಪಾಕಿಸ್ತಾನ ಉಂಟಾದಾಗ ವಿಶ್ವ ಸಂಸ್ಥೆಯಲ್ಲಿ ಅದಕ್ಕೆ ಮನ್ನಣೆ ಕೊಡಲು ಅಫಘಾನಿಸ್ತಾನ ವಿರೋಧಿಸಿತು-ವಿರುದ್ಧ ಮತ ನೀಡಿತು!

ಅರಬ ಅಫಘಾನ ಇರಾಕ್ ಇರಾಣ ಆದಿ ರಾಷ್ಟ್ರಗಳಲ್ಲಿ ಅಲ್ಲಿಯ ಜನತೆಯ ಇಸ್ಲಾಂ ಧರ್ಮ ಅವರ ರಾಷ್ಟ್ರೀಯತೆಯೊಂದಿಗೆ ಸಮವ್ಯಾಪ್ತ (ಪಾಕಿಸ್ತಾನದ ಮುಸ್ಲಿಮರೂ ಹಾಗೆಯೇ ಮಾಡಿಕೊಂಡರು). ಆದರೆ ಭಾರತ ಯಾನೇ ಹಿಂದುಸ್ಥಾನದಲ್ಲಿ ನಾವೆಲ್ಲ ಹಿಂದುಗಳೇ. ಇಲ್ಲಿಯ ಕ್ರಿಸ್ತರೇನು, ಮುಸ್ಲಿಮರೇನು, ಶಿಖ್ಖರೇನು, ಬೌದ್ಧರೇನು-ಎಲ್ಲರೂ ಹಿಂದುತ್ವಕ್ಕೆ ಒಳಪಟ್ಟವರೇ. ಅವರವರ ಮತೀಯ ಪಂಥಗಳು ಅವರವರಿಗೇ ಖಾಸಗಿ ಶ್ರದ್ಧೆ. ಆದರೆ ಅದೆಲ್ಲಾ ಹಿಂದುತ್ವದಲ್ಲಿಯೇ ಸಮಾವೇಶಗೊಳ್ಳಬೇಕು. ಸನಾತನ ಧರ್ಮದ ಸ್ವರೂಪವೇ ಹಾಗಿದೆ. ನಾವು ಬುದ್ಧನನ್ನು ದಶಾವತಾರಗಳಲ್ಲಿ ಸೇರಿಸಿಕೊಂಡಿದ್ದೇವೆ. ಹಿಂದೂ ಧರ್ಮದ ದೃಷ್ಟಿಯಲ್ಲಿ ಯೇಸು ಕ್ರಿಸ್ತ, ಮಹಮ್ಮದ ಪೈಗಂಬರರೂ ಅವತಾರಿಗಳು ಆಗಬಲ್ಲರು.

ಭಾರತದ ಮುಸ್ಲಿಂ ಅರಬ ಇಲ್ಲವೆ ಇರಾಣಿ ಮುಸ್ಲಿಮರೊಂದಿಗೆ ಸಮರಸನಾಗಲಾ ಅವರಿಗೆ ಆತ ಕೊನೆಗೂ ಹಿಂದು ಮುಸ್ಲಿಂ!

ಧರ್ಮಾಂತರವೆಂದೊಡನೆ ರಾಷ್ಟ್ರಾಂತರವಾಗುವದೆಂದು ಭಾವಿಸಲೇಬೇಕಾಗಿ ಧರ್ಮಾಂತರ ಹೊಂದಿದ ಮಾತ್ರಕ್ಕೆ ನಮ್ಮ ದಲಿತರ ಶೋಷಣೆಯೂ ನಿಲ್ಲುವದೆಂದಲ್ಲ. ಇದರಿಂ ಒಂದು ಭದ್ರತೆ ಸಂಘಶಕ್ತಿಯ ಭರವಸೆ ಅವರಿಗೆ ಬರುತ್ತದೆ. ಅವರ ಅನಾಥ ಪ್ರಜ್ಞೆ ನೀಗಿದಂ ಅನಿಸುತ್ತದೆ. ಆ ಭದ್ರತೆ, ಆ ಕ್ಷೇಮಭಾವನೆ ಹಿಂದೂ ಧರ್ಮದಲ್ಲಿ ಅವರಿಗೆ ಎಂದು ಅನುಭವ ಬಂದಿರಲಿಲ್ಲ. ಕನಕದಾಸನ ಕಥೆಯೊಂದು ಬಿಟ್ಟರೆ ಯಾವ ಮಠಾಧಿಪತಿಗಳು ಯಾವ ಸನಾತ ಸವರ್ಣ ಸಮಾಜದವರು ಹರಿಜನರನ್ನು ಹೊಲೆಮಾದಿಗರನ್ನು ತಮ್ಮವರಾಗಿ ತಿಳಿದು ಹತ್ತಿ ಕರೆದದ್ದುಂಟು? ಈಚೆಗೆ ಮೀಸಲಾತಿಯ ವಿರುದ್ಧ ಗುಜರಾತದಲ್ಲಿ ಹುಚ್ಚೆದ್ದ ಸವರ್ಣ ಯುವಜನ ಪುಂಡಾಟದ ಗಲಭೆಗಳು ಏನನ್ನು ತೋರ್ಪಡಿಸಿವೆ?

ಹಿಂದೊಮ್ಮೆ ದ್ವಾರಕಾ ಪೀಠದ ಶಂಕರಾಚಾರ್ಯರು ಪುಣೆಯಲ್ಲಿ ಭಾಷ ಮಾಡುತ್ತಿದ್ದರು-ಅಸ್ಪೃಶ್ಯತೆಯನ್ನು ಸಮರ್ಥಿಸಿ. ದೂರವಿಟ್ಟ ಮಾತ್ರಕ್ಕೆ ಅವರು ಕೀಳೆಂದು ಅರ್ಥವ ಬ್ರಾಹ್ಮಣರ ಮನೆಯಲ್ಲಿಯೂ ಮುಟ್ಟಾದ ಹೆಂಗಸಿಗೆ ಮುಟ್ಟದೆ 4 ದಿನ ದೂರವಿಡುವದಿಲ್ಲವೇ ಅಂದರು. ಆಗ ಆ ಸಭೆಯಲ್ಲಿ ಅಂದು ತರುಣರಾದ ಎಸ್.ಎಂ. ಜೋಶಿ ಕೂತಿದ್ದರು. ಅವ ಎದ್ದುನಿಂತು ಕೂಗಿದರು-"ಆದರೆ ಸ್ವಾಮೀಜೀ, ಆ ಹೆಂಗಸಿನ ಪಾಲಿಗೆ 5ನೆಯ ಓಸ ಒಂದ ಬರುತ್ತದೆ! ಈ ಅಂತ್ಯಜರ ಭಾಗ್ಯದಲ್ಲಿ ಆ ದಿನ ಬರುವದು ಎಂದು?" ಶಂಕರಾಚಾರ್ಯ ಮಂಕಾದರು. ಆ ದಿನ ಇಂದಿಗೂ ದೂರವೇ ಇದೆ.

(ಉದಯವಾಣಿ ೧೯ಆಂ

# ನಮ್ಮ ಸಿವ್ಹಿಲ್ ಸರ್ವಿಸ್ ಮತ್ತು ರಾಜಕೀಯ ರಾಹುಸ್ಪರ್ಶ

ಕಳೆದ ಎಪ್ರಿಲ್ ತಿಂಗಳಲ್ಲಿ ನಮ್ಮ ಕೇಂದ್ರ ಸರಕಾರಕ್ಕೆ ಮೂರು ದಿನಗಳವರೆಗೆ ಕೆಬಿನೆಟ್ ಸೆಕ್ರೆಟರಿಯೇ ಇದ್ದಿಲ್ಲ. ಇಂದಿನ ಹೊಸ ಸರಕಾರ ಜನವರಿ 14 ರಂದು ಅಧಿಕಾರ ವಹಿಸಿಕೊಂಡಿತು. ಆಗಲೇ ಅದಕ್ಕೆ ಗೊತ್ತು-ಮಾರ್ಚ್ 31ಕ್ಕೆ ಅಂದಿನ ಕೆಬಿನೆಟ್ ಸೆಕ್ರೆಟರಿ ಸೇವೆಯಿಂದ ನಿವೃತ್ತನಾಗಲಿದ್ದಾನೆಂದು. ಆ ತನಕ ತನ್ನದೇ ಆಯ್ಕೆಯ ಹೊಸ ಸೆಕ್ರೆಟರಿಯನ್ನು ನೇಮಿಸಿಕೊಳ್ಳಲಿಕ್ಕೆ ಸರಕಾರಕ್ಕೆ ಬಹಳಷ್ಟು ಕಾಲಾವಕಾಶವಿತ್ತು. ಆದಾಗ್ಯೂ ಅದೇಕೋ ಸರಕಾರ ಕಾಲಹರಣ ಮಾಡಿತು.

ಇದೊಂದು ಸಣ್ಣ ಉದಾಹರಣೆಯೆನಿಸಬಹುದು. ಆದರೆ ಕೆಬಿನೆಟ್ ಸೆಕ್ರೆಟರಿ ಅಂದರೆ ಒಂದು ಶಾಲೆಗೆ ಮುಖ್ಯಾಧ್ಯಾಪಕನಿದ್ದಂತೆ. ದೇಶದ ಕೇಂದ್ರೀಯ ಆಡಳಿತದ ಪ್ರಚಂಡ ವಿಶಾಲ ಹಾಗೂ ಸಂಕೀರ್ಣ ಸೇವಾ ಶ್ರೇಣಿಗಳಿಗೆ ಕೇಂದ್ರೀಯ ಕೆಬಿನೆಟ್ ಸೆಕ್ರೆಟರಿ ಮೇರುಮಣಿ. ಅವನ ನೇಮಕದ ಬಗೆಗೆ ಇಂಥ ಅಸಡ್ಡೆ ಅನಾಸಕ್ತಿ ಅಥವಾ ಇತರೇತರ ವಿಚಾರಾಂತರಗಳು ನಮ್ಮ ದೇಶದಲ್ಲಿ ಸಿವಿಲ್ ಸರ್ವಿಸಿನ ಸಮಗ್ರ ವ್ಯವಸ್ಥೆ-ಸಮಸ್ಯೆಗಳ ಕುರಿತೇ ಕಂಡುಬರುವ ಕಂಗೆಟ್ಟ ಗೊಂದಲದ ಪರಿಸ್ಥಿತಿಯ ಮೇಲೆ ಒಂದು ಸ್ಪಾಟ್ ಲೈಟ್ ಚೆಲ್ಲಿದಂತೆ!

ಯಾವುದೇ ಸರಕಾರ ಬರಲಿ ಹೋಗಲಿ, ಯಾವುದೇ ರಾಜಕೀಯ ಪಕ್ಷ ಅಧಿಕಾರಕ್ಕೆ ಏರಲಿ, ಇಳಿಯಲಿ ದೇಶದ ಆಡಳಿತ ಸುಸೂತ್ರವಾಗಿ ಅವ್ಯಾಹತವಾಗಿ ನಡೆಯುವುದು ಈ ಸರಕಾರಿ ಸೇವಾ ಶ್ರೇಣಿ (ಸಿವ್ಹಿಲ್ ಸರ್ವಿಸ್) ಸಂಘಟನೆಯಿಂದ. ಅಂಥ ಸಂಘಟನೆಯ ಶಿಖರ ಸ್ಥಾನ ಕೆಬಿನೆಟ್ ಸೆಕ್ರೆಟರಿಯದು. ಯಾವುದೇ ಕಾರಣದಿಂದಾಗಲಿ, ಅರಿವಿದ್ದೋ ಇಲ್ಲದೆಯೋ ಏನೇ ಇರಲಿ, ಈ ಕೇಂದ್ರಾಧಿಕಾರದ ಪ್ರತಿಷ್ಠೆ ಗೌರವ ಗಾಂಭೀರ್ಯಗಳ ಮಟ್ಟ ಕೆಳಗಿಳಿಸುವುದಾಗಲಿ ಕಡೆಗಣಿಸುವುದಾಗಲಿ ಸಮಗ್ರ ಆಡಳಿತ ಯಂತ್ರದ ಸ್ಥಿತಿ-ಗತಿಗೇ ಅಪಾಯಕಾರಿ. ಮತ್ತು ಈ ಬಗೆಯ ಪ್ರಮಾದ ಇದೊಂದೇ ಒಂಟಿ ಸೀನು ಅಲ್ಲ. ಇದರ ಬೆನ್ನಿಗೆ ನಮ್ಮ ಸೇವಾಶ್ರೇಣಿಗಳ ನೈತಿಕ ನೆಮ್ಮದಿಯನ್ನು ಕೆಡಿಸುವ, ನೌಕರಶಾಹಿಯ ಕಾರ್ಯಕ್ಷಮತೆಯನ್ನು ಕುಗ್ಗಿಸುವ ಅನೇಕ ಹಿರಿ ಕಿರಿ ಅವ್ಯಾಪಾರ ದುರ್ವ್ಯವಹಾರಗಳು ನಡೆಯುತ್ತಲೇ ಬಂದಿವೆ-ದೇಶಕ್ಕೆ ಸ್ವಾತಂತ್ರ್ಯ ಬಂದಂದಿನಿಂದ.

ಇದಕ್ಕೆ ಒಂದೇ ಮೂಲ ಕಾರಣ: ಒಂದೆಡೆಗೆ ರಾಜಕಾರಣಿಗಳು ಈ ಆಡಳಿತಗಾರಿಕೆಯನ್ನು ತಮ್ಮ ಇಚ್ಛೆಗೆ ಮಣಿಸಿ ದುಡಿಸಿಕೊಳ್ಳಲು ಸದಾ ವ್ಯಗ್ರರಿರುತ್ತಾರೆ; ಇನ್ನೊಂದೆಡೆಗೆ. ಈ ಉಕ್ಕಿನ ಚೌಕಟ್ಟೆ'ನಂತೆ ದೃಢವಾಗಿ ನಿಲ್ಲಬೇಕಾದ ಆಡಳಿತಗಾರರ ವರ್ಗದವರು ಆ ರಾಜಕಾರಣಿಗಳ ಲಹರಿ ಲಾಲಸೆಗಳನ್ನು ತೃಪ್ತಿ ಪಡಿಸಲಿಕ್ಕೆ ಮುಂದೆ ಮಾತ್ರವಲ್ಲ ಹಿಂಬದಿಗೂ ಬಗ್ಗಿ ಮೂಳೆ ಮುರಿದುಕೊಳ್ಳಲೂ ಸಿದ್ಧರಾಗಿರುತ್ತಾರೆ.

ಉದಾಹರಣೆಗೆ ಕೇಂದ್ರ ಕೆಬಿನೆಟ್ ಸೆಕ್ರೆಟರಿಯ ಸ್ಥಾನ ತುಂಬಲು ಸಚಿವಾಲಯದ ಇತರ ಮಂತ್ರಿವಾಟಗಳಲ್ಲಿ ದೊಡ್ಡ ಪ್ರಮಾಣದಲ್ಲಿ ದೊಡ್ಡ ಹರಹಿನಲ್ಲಿ ಬದಲಾವಣೆಗಳನ್ನು ಮಾಡಲು ಸರಕಾರ ವಿಪರೀತ ತ್ವರೆ ತೋರಿಸಿದೆ. ಹಾಗೆಯೇ ಸಾರ್ವಜನಿಕ ರಂಗದ ಸೇವಾಧಿಕಾರಿಗಳಲ್ಲಿ,

ದಿಲ್ಲಿಯ ಆಡಳಿತದಲ್ಲಿ ಮಾತ್ರವಲ್ಲ ಸಿಬಿಐ, ಇಂಟೆಲಿಜೆನ್ಸ್ ಬ್ಯೂರೋ, ಕೇಂದ್ರ ಕಾದಿಟ್ಟ ಪೊಲೀಸ್ ಪಡೆ, ಮುಂತಾದ ನಾಜೂಕಿನ ಕ್ರಿಯಾ ಪ್ರಜ್ಞೆಯ ಸೇವಾ ಶ್ರೇಣಿಗಳಲ್ಲಿಯೂ ಶೀಘ್ರ ಬದಲಾವಣೆ ವರ್ಗಾವರ್ಗಿಗಳು ಆಗಿವೆ. ಆಯಾ ಸ್ಥಾನಗಳಲ್ಲಿ ಇದ್ದ ಅನೇಕರು ನಿವೃತ್ತಿಗೂ ಬಂದಿರಲಿಲ್ಲ. ವರ್ಗಾಂತರಕ್ಕೂ ಅರ್ಹರಾಗಿರಲಿಲ್ಲ. ಆದರೂ ಕೂಡಲೆ ಸ್ಥಾನ ಬಿಟ್ಟುಕೊಡಲು ಅವರಿಗೆ ಅಪ್ಪಣೆ ವಿಧಿಸಲಾಯಿತು. ಅವರ ಸ್ಥಾನದಲ್ಲಿ ನೇಮಕವಾಗುವ ಮಂದಿಯನ್ನು ಹೆಕ್ಕಿ ಹೆಕ್ಕಿ ಆಯಲಾಗಿತ್ತು. ತುರ್ತು ಪರಿಸ್ಥಿತಿಯೊಂದಿಗೆ ಹೊಂದಿಕೊಂಡಿದ್ದವರನ್ನೂ, ಆ ಮೇಲೆ ಜನತಾ ಸರಕಾರವು ಬಲಿತೆಗೆದುಕೊಂಡವರನ್ನೂ ವಿಶೇಷವಾಗಿ ಪರಿಗಣಿಸಲಾಯಿತು. ಇಂದಿರಾಜೀ ಸಂಜಯಾದಿಗಳ ಛಲನೆಯಲ್ಲಿ ಜನತಾ ಸರಕಾರದ ಸಾಧನರಾದವರನ್ನು ವಿಶೇಷವಾಗಿ ಕಡೆಗಣಿಸಲಾಯಿತು. ಆಳುವ ಪಕ್ಷ ಹಾಗೂ ಅದರ ಆಳರಸರಿಗೆ ನಿಷ್ಠೆಯೊಂದೇ ಮುಖ್ಯ ನಿರ್ಣಾಯಕ ಘಟಕವಾಯಿತು.

ಅನೇಕ ಸಲ ಈ ಅಪ್ಪಣೆಗಳು ಬಾಯಿ ಮಾತಿನವೇ ಆಗಿ ಆಮೇಲೆ ಲೇಖಿಯಾಗಿ ಜಾರಿಗೆ ಬಂದವು. ಒಮ್ಮೆ ಕೇಂದ್ರ ಸಚಿವಾಲಯದ ಉತ್ತರ ಬ್ಲಾಕಿನಲ್ಲಿ ಒಬ್ಬ ಜ್ಯೇಷ್ಠ ಅಧಿಕಾರಿಯ ಹಳೆಯ ಗೆಳೆಯ ಸಹಕಾರಿಯೊಬ್ಬ ಅವನ ಕಚೇರಿಗೆ ಬಂದನು. ಹಳೆಯ ಗೆಳೆಯ ಬಂದನೆಂದು ಹಿಗ್ಗಿ ಅಧಿಕಾರಿ ಸ್ವಾಗತಿಸಿ ತಿಂಡಿ ತೀರ್ಥ ತರಿಸಿದನು. ಆದರೆ ಬಂದಾತ ಮಿತ್ರ ಸಮಾಗಮಕ್ಕಾಗಿ ಬಂದಿರಲಿಲ್ಲ. ಅವನಿಗೆ ಮುಜುಗರವಾಯಿತು. ಕೆಮ್ಮುತ್ತ ಅಂದನು: “ನಿಮ್ಮ ಅಧಿಕಾರ ವಹಿಸಿಕೊಳ್ಳಲು ಬಂದಿದ್ದೇನೆ!” ಮತ್ತು ಇದೆಲ್ಲ ನಡೆದಾಗ ಆ ಇಲಾಖೆಯ ಸೆಕ್ರೆಟರಿಗೆ ಇದೇನೂ ಗೊತ್ತೇ ಇರಲಿಲ್ಲ!

ಇಲ್ಲಿ ಮೋಜಿನ ಮಾತೆಂದರೆ ಈ ರೀತಿ ಅಧಿಕಾರ ಬಿಟ್ಟುಕೊಡಲು ಅಪ್ಪಣೆ ಬಂದವರಲ್ಲಿ ಕೆಲವೇ ಮಂದಿಗೆ ಬೇರೆಸ್ಥಾನ ಕೊಡಲಾಗಿದೆ. ಇದರಿಂದ 70 ರಿಂದ 80ರಷ್ಟು ಅಧಿಕಾರಿಗಳು-ಐ.ಎ.ಎಸ್., ಐ.ಪಿ.ಎಸ್. ಹಾಗೂ ಇತರ ಶ್ರೇಣಿಯವರು-ಇಂದು ದಿಲ್ಲಿಯಲ್ಲಿ ಹೊಸ ಕೆಲಸವಿಲ್ಲದೆ ತ್ರಿಶಂಕು ಸ್ವರ್ಗದ ‘ನೇತಾಜಿ’ ಆಗಿರುವರು! ಹಲವರು ಕಡ್ಡಾಯದ ರಜೆಯ ಮೇಲೆ ಇದ್ದಾರೆ. ಹಲವರು ಹಾಗೆ ರಜೆ ಪಡೆಯಲು ಒಪ್ಪದ ಹಟದಿಂದ ಕಚೇರಿಗೆ ಹೋಗುತ್ತಿದ್ದಾರೆ. ಅವರೆಲ್ಲ ಹುದ್ದೆಗಾಗಿ ಕಾಯುತ್ತಿರುವ ಹುದ್ದರಿಗಳು.

ಇದೇ ಜಾಯಮಾನ ಲೋಕಸಭಾ ಚುನಾವಣೆಗಳ ಹಿಂದಿನ ಲೋಕದಳದ ಹಾಗೂ ಅದಕ್ಕೂ ಪೂರ್ವದ ಜನತಾ ಪಕ್ಷದ ಸರಕಾರದಲ್ಲಿಯೂ ಇತ್ತು. ಈ ಬಗೆಯ ರಾಜಕೀಯ ಸೇಡಿನ ಸಂಚಿನ ಅಧಿಕಾರದ ಅದಲ ಬದಲಿಯಿಂದ ಆಡಳಿತಗಾರಿಕೆಯ ವ್ಯವಸ್ಥೆ-ವಾತಾವರಣಗಳಿಗೆ ಎಂಥ ಘಾತಕ ಪೆಟ್ಟು ಬೀಳುವುದೆಂಬುದನ್ನು ಅಂದಿನ ಸರಕಾರಗಳೂ ಲೆಕ್ಕಿಸಿದ್ದಿಲ್ಲ.

ಉದಾಹರಣೆಗೆ, ಒಬ್ಬ ದುರ್ದೈವಿ ಪೊಲೀಸ್ ಅಧಿಕಾರಿ ಕಳೆದ ೮ ತಿಂಗಳಿಂದ ಮೂಲೆಗೆ ಕುಳಿತಿದ್ದಾನೆ. ದಿಲ್ಲಿ ಡೆವ್ಹಲಪಿಂಗ್ ಅಥಾರಿಟಿಯ ಉಪಾಧ್ಯಕ್ಷ ಶ್ರೀ ಎಂ.ಎನ್. ಬಚ್‌ರನ್ನು ಚರಣಸಿಂಗರ ಚೋಪಾಸನಾ ಸರಕಾರವು ಹೊರತಳ್ಳಿತು. ೬ ತಿಂಗಳು ಕಾಲ ಬೇರೊಂದು ಹುದ್ದೆಗಾಗಿ ಕಾದು ಬೇಸತ್ತು ಶ್ರೀ ಬಚ್ ತನ್ನ ಐಎಎಸ್ ಶ್ರೇಣಿಗೆ ರಾಜಿನಾಮೆ ಕೊಟ್ಟರು. ಆದರೆ ಅದನ್ನು ಈ ತನಕ ಸರಕಾರ ಸ್ವೀಕರಿಸಿಲ್ಲ!

ಈ ಅವಸ್ಥೆಯ ವ್ಯಂಗ್ಯವೆಂದರೆ ಹೀಗೆ ಹಲವಾರು ಜ್ಯೇಷ್ಠ ಗರಿಷ್ಠ ಅಧಿಕಾರಿಗಳು ಹಲವಾರು ಶ್ರೇಷ್ಠ ಶ್ರೇಣಿಗಳಲ್ಲಿ ಕೆಲಸ ಕಳೆದುಕೊಂಡವರು ಒಂದೆಡೆಗೆ ಬಿದ್ದಿರುವಾಗ, ಇನ್ನೊಂದೆಡೆಗೆ ಹಲವಾರು

ಮಹತ್ವದ ಅಧಿಕಾರ ಸ್ಥಾನಗಳು ಖಾಲಿಯಾಗಿಯೇ ಉಳಿದಿವೆ. ಇವುಗಳಲ್ಲಿ ಕೇಂದ್ರ ಸರಕಾರದ ಏಳು ಸೆಕ್ರೆಟರಿಗಳ ಸ್ಥಾನಗಳೂ ಬಂದವು. ಜಂಟಿ ಇಂಟೆಲಿಜೆನ್ಸ್ (ಗುಪ್ತ ಬೇಹುಗಾರಿಕೆ)ಯ ಸಮಿತಿಗೆ ಅಧ್ಯಕ್ಷನಿಲ್ಲದೆ ಈಗ ಏಳು ತಿಂಗಳು ಕಳೆದಿವೆ!

ಇಂಥ ಹಂಗಾಮಿನಲ್ಲಿ ನಮ್ಮ ಸಾರ್ವಜನಿಕ ಸೇವಾಧಿಕಾರಿಗಳ ಹಾಗೂ ಆಡಳಿತಗಾರರ ಪ್ರಪಂಚದ ನೈತಿಕ ಮಟ್ಟ ಮತ್ತು ಸತ್ವ ತೀರ ಇಳಿದು ಹೋಗಿದ್ದರೆ ಯಾರೂ ಸೋಜಿಗಪಡಬೇಕಾಗಿಲ್ಲ. ಹೊಸ ದಿಲ್ಲಿಯ ಅಧಿಕಾರ ಸ್ಥಾನಗಳ ಹಜಾರದಲ್ಲಿ ಪಡಶಾಲೆಗಳಲ್ಲಿ ಮುಂದೆ ಇದ್ದವರು ಹಿಂದಿರುಗಿ ನೋಡುತ್ತಲೇ ನಡೆಯುತ್ತಾರೆ. ಹಿಂದಿನಿಂದ ಯಾರು ಹೇಗೆ ತಮ್ಮ ಹೆಗಲೇರಿ ಕೂಡ ಬಹುದೋ ಎಂಬ ನಿತ್ಯ ಚಿಂತೆ ಅವರಿಗೆ! ಸದ್ಯ ಉನ್ನತವಾಗಿ ಸ್ವಸ್ಥಾನಗಳಲ್ಲಿ ಕ್ಷೇಮದಿಂದ ಇರುವವರಿಗೂ ಒಂದು ಬಗೆಯ ಗಾಬರಿ. ಅವರಿಗೂ ತಮ್ಮ ಭವಿಷ್ಯದ ಬಗೆಗೆ ಭದ್ರತೆಯ ಭಾವನೆ ಬಲವಾಗಿಲ್ಲ.

ಇದಕ್ಕೆ ಒಂದು ಬಲವಾದ ಕಾರಣ-ಈ ಸಾರ್ವಜನಿಕ ಹಾಗೂ ನಾಗರಿಕ ಸೇವಾ (ಸಿವ್ಹಿಲ್ ಸರ್ವಿಸ್) ಸ್ಥಾನಗಳ ನೇಮಕಕ್ಕೆ ಬಂದ ರಾಜಕೀಯೀಕರಣದ ರಾಹುಗ್ರಹಣ. ಅಲ್ಲಿಯೂ ಅಂಥ ನೇಮಕದ ಹಿಂದೆ ಆಯಾ ಅಭ್ಯರ್ಥಿಯ ಅರ್ಹತೆಯನ್ನು ಅವರವರ ರಾಜಕೀಯ ಸ್ವಾಮಿ ನಿಷ್ಠೆಯಿಂದ ಅಳೆದು ಆಡುಗಳಿಂದ ಕುರಿಗಳನ್ನು ವಿಂಗಡಿಸುವ ಹೊಸ ಪ್ರವೃತ್ತಿ!

ಆದರೆ ಈ ಕತೆ ಇಂದು ನಿನ್ನೆಯದಲ್ಲ. ಆಡಳಿತಗಾರಿಕೆಯ ಶ್ರೇಣಿಗಳು ನಿಷ್ಪಕ್ಷವೂ ಸ್ವತಂತ್ರವೂ ಸ್ಥಿರಭದ್ರವೂ ಆಗಿರಬೇಕೆಂಬ ತತ್ವವೇ ನಮ್ಮ ದೇಶದ ರಾಜ್ಯ ಕಾರಭಾರದ ಜಾಯಮಾನಕ್ಕೆ ಎಂದಿನಿಂದಲೂ ಹೊರತಾದದ್ದೇ; ಹೊರಗಿನದೇ. ರಾಜವಲ್ಲಭರಾಗಿ 'ರಾಜಾ ಕಾಲಸ್ಯ ಕಾರಣಂ' ಎಂದು ನಿಶ್ಶಂಸಯವಾಗಿ ನಂಬಿ 'ದಿಲ್ಲೀಶ್ವರೋವಾ ಜಗದೀಶ್ವರೋವಾ' ಎಂದು ಹಾಡುತ್ತ ಬಂದ ನಮ್ಮ ರಾಜಕೀಯ ಪ್ರಜ್ಞೆ ಪರಂಪರಾಗತವಾಗಿಯೂ ಆಳರಸರ ಆಳಾಗಿಯೇ ಆಡಳಿತಗಾರರು ಬಗ್ಗಿ ನಡೆಯುವುದನ್ನೆ ಪಳಗಿಸಿಕೊಂಡು ಬಂದಿದೆ.

ಸಾರ್ವಜನಿಕ ಸೇವಾಶ್ರೇಣಿಗಳ ಸ್ವಾತಂತ್ರ್ಯದ ಕಲ್ಪನೆ ನಮ್ಮಲ್ಲಿಗೆ ಬಂದದ್ದು ಬ್ರಿಟಿಶ್ ಆಡಳಿತದಿಂದ-ಸಂಸದೀಯ ಪ್ರಜಾಪ್ರಭುತ್ವದ ಪದ್ಧತಿಯೊಂದಿಗೇ. ಇಂದಲ್ಲ ಪ್ರಾಂತಿಕ ಸ್ವಾಯತ್ತತೆ ತಳವೂರಿದ ೧೯೩೭ರಿಂದಲೇ ಬ್ರಿಟಿಶ್ ಲಿಬರಲ್ ರಾಜಕೀಯ ತತ್ವಸಂಸ್ಕಾರಗಳನ್ನು ಅರಗಿಸಿಕೊಂಡ ಪಂಡಿತ ನೆಹರೂ ಪ್ರಭೃತಿಗಳ ಪ್ರಭುತ್ವದ ಯುಗದಿಂದಲೇ ನಮ್ಮಲ್ಲಿ ಆಡಳಿತಗಾರಿಕೆ ಆಳರಸರ, ಸರಕಾರದ ನೊಗ ಹೊತ್ತ ಮಂತ್ರಿ ಮಹಾಶಯರ ಹಂಗನ್ನು ಕಳಚಿಕೊಂಡಿದ್ದೇ ಇಲ್ಲ. ಅಂದು ಸ್ವಾತಂತ್ರ್ಯ ಚಳವಳಿಯಲ್ಲಿ ತಮ್ಮನ್ನು ಜೇಲಿಗೆ ಅಟ್ಟಿ ಜೇಲಿನಲ್ಲಿ ಇಟ್ಟು ದರ್ಪ ತೋರಿಸಿದರೆಂಬ ದಕ್ಷ ಅಧಿಕಾರಿಗಳನ್ನು ಮುನ್ಶೀ ಮುರಾರ್ಜೀ ಪ್ರಭೃತಿ 'ಸಮರ್ಥ' ಪ್ರಭುಗಳು ತಮ್ಮ ಸೇಡಿನ ಬಲಿಯಾಗಿ ಬೇಟೆ ಆಡಿದ್ದೇ.

ಶ್ರೀ ಎಸ್. ಬ್ಯಾನರ್ಜಿ ಎಂಬ ಐ.ಸಿ.ಎಸ್. ಅಧಿಕಾರಿ ಬರೆದಿಟ್ಟಿದ್ದಾರೆ. ಬಿಹಾರದ ಸರಕಾರ ಕೆಲವೊಂದು ಅಯೋಗ್ಯ ನಿರ್ಣಯಗಳನ್ನು ಜಾರಿಗೆ ತರಲಿಕ್ಕೆ ತೊಡಕಾದಂಥ ತನ್ನನ್ನು ಹೇಗೆ ಪೀಡಿಸಿ ಕೊನೆಗೂ ಓಡಿಸಿತೆಂದು ವಿವರಿಸಿದ್ದಾರೆ. ಹಾಗೆಯೇ ೫೦ರ ದಶಕದಲ್ಲಿ ಪ.ಬಂಗಾಲದ ಮುಖ್ಯಮಂತ್ರಿ ಡಾ। ಬಿ.ಸಿ. ರಾಯ್ ಅವರ ಒತ್ತಡಕ್ಕೆ ಬೇಸತ್ತು ಡಾ। ನಬಗೋಪಾಲ ದಾಸ್ ಎಂಬ ಅಧಿಕಾರಿ ಕೊನೆಗೂ ರಾಜಿನಾಮೆಯಿತ್ತು ತಮ್ಮ ಆತ್ಮಸ್ವಾತಂತ್ರ್ಯವನ್ನು ಉಳಿಸಿಕೊಂಡರು!

ಆದರೂ ಅಂದು ಇಂಥ ಘಟನೆಗಳು ಇಂದಿನಷ್ಟು ಧಾರಾಳವಾಗಿದ್ದಿಲ್ಲ. ಅವು ಅಪವಾದಾತ್ಮಕವೇ ಆಗಿದ್ದವು. ಆದರೆ ನೆಹರೂತ್ತರ ಕಾಲದಲ್ಲಿ ಇದು ಹೆಚ್ಚು ಕಡಿಮೆ ನಮ್ಮ ಸರಕಾರೀ ಕಾರ್ಯ ನಿರ್ವಹಣೆಯ ಶೈಲಿಯಾಗಿ  ಬಿಟ್ಟಿದೆ. ನೆಹರೂ ಯುಗದಲ್ಲಿ ರಾಜ್ಯಗಳಿಗೆ ಹೇಗೂ ನಡೆಯಲಿ, ಕೇಂದ್ರದಲ್ಲಿ ಆಡಳಿತಗಾರಿಕೆಯ ಸ್ವಾತಂತ್ರ್ಯ ಪಾವಿತ್ರ್ಯಗಳ ಬಗೆಗೆ ಸಾಕಷ್ಟು ಪಥ್ಯವನ್ನು ಪಾಲಿಸಲಾಗುತ್ತಿತ್ತು. ಅಂದು ರಾಜ್ಯಗಳಲ್ಲಿ ಈ ಬಗೆಯ ಹಸ್ತಕ್ಷೇಪದ ಹಂಗಿನ ನೀತಿ ಬಲವಾಗಿ ಬಹಿರಂಗವಾಗಿ ಪುರಸ್ಕಾರ ಪಡೆದದ್ದು ಶ್ರೀ ಪ್ರತಾಪಸಿಂಗ್ ಕೈರಾನ್ (ಪಂಜಾಬ) ಹಾಗೂ ಬಕ್ಷಿ ಗುಲಾಮ ಮೊಹಮ್ಮದ (ಕಾಶ್ಮೀರ) ಇವರ ಕಾರಭಾರದಲ್ಲಿ. ಇವರ ಪ್ರಶಸ್ತ ಮಾದರಿಯನ್ನು ಇತರ ರಾಜ್ಯಗಳ ಮುಖ್ಯಮಂತ್ರಿಗಳೂ ಧೈರ್ಯದಿಂದ ಗೀರಹತ್ತಿದರು. ಈ ಸ್ವದೇಶೀ ಮುತ್ಸದ್ದಿಗಳಿಗೆ ಸಾರ್ವಜನಿಕ ಸೇವಾ ಶ್ರೇಣಿಗಳ ನಿಸ್ಪೃಹ ನಿರ್ಲಿಪ್ತತೆಯ ವಿದೇಶೀ ತತ್ವದಲ್ಲಿ ನಂಬಿಕೆ ಇದ್ದಿಲ್ಲ. ಮುಂದೆ ೧೯೬೭ರ ಚುನಾವಣೆಗಳ ನಂತರ ಹಬ್ಬಹತ್ತಿದ ರಾಜಕೀಯ ಅಸ್ಥಿರತೆಯ ವಾತಾವರಣದಲ್ಲಿ ಈ ಸರಕಾರಿ ದರ್ಪಕ್ಕೆ ಆಡಳಿತಗಾರಿಕೆಯನ್ನು ಮಣಿಸಿ ದುಡಿಸಿಕೊಳ್ಳುವ ಚಾಳಿ ಸಾರ್ವತ್ರಿಕವಾಯಿತು.

೧೯೬೯ರ ಕಾಂಗ್ರೆಸ್ ವಿಭಜನೆಯ ನಂತರ ದಿಲ್ಲಿಯ ಸರಕಾರೀ ಧೋರಣೆ ಹೊಸ ತತ್ವವನ್ನು  ಪುರಸ್ಕರಿಸಿತು.- ಅದು ಬದ್ಧ ಸೇವಾ ಶ್ರೇಣಿ (Committed Bureaucracy) ಯ ತತ್ವ. ನೌಕರಶಾಹಿ ಬದ್ಧವಾಗಿರಬೇಕು. ಯಾವುದಕ್ಕೆ? ಕರ್ತವ್ಯಕ್ಕೋ, ಸರಕಾರದ ನೀತಿಯ ಹಿಂದಿನ ತಾತ್ವಿಕ ನಿಲುಮೆಗೋ, ಅದರ ಆಚೆಗೆ ನಿಂತು ನೆರಳು ಚಾಚುವ ಪ್ರಜಾಪ್ರಭುತ್ವಗಳಿಗೋ? ಮುಂದೆ ೧೯೭೧ರ ಚುನಾವಣೆ ಬಂದವು. ಆ ಮೇಲೆ ಬಾಂಗ್ಲಾ ಯುದ್ಧ, ಅದರ ಬೆನ್ನಿಗೆ ಜೇಪಿ ನವ ನಿರ್ಮಾಣ, ಸಮಗ್ರ ಕ್ರಾಂತಿ-ಚಳವಳಿ, ಅದಕ್ಕೂ ಹಿಂದೆ ಬ್ಯಾಂಕುಗಳ ರಾಷ್ಟ್ರೀಕರಣ. ೨೦ ಅಂಶಗಳ ಕಾರ್ಯಕ್ರಮ, ಅಲಹಾಬಾದ್ ಕೋರ್ಟ್ ತೀರ್ಪು, ತುರ್ತು ಪರಿಸ್ಥಿತಿ-ಇದೆಲ್ಲ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಸರಕಾರ ಮತ್ತು ಅದನ್ನು ಪ್ರಸನ್ನವಾಗಿ ಇಡಲು ಪೇಚಾಡುವ ಆಡಳಿತಗಾರಿಕೆ ಉಭಯರೂ ಚಿತ್ತ ಸ್ವಾಸ್ಥ್ಯವನ್ನು ಕಳೆದುಕೊಂಡಿದ್ದರೆ ಆಶ್ಚರ್ಯಪಡಬೇಕಾಗಿಲ್ಲ.

೧೯೭೭ರ ಮಹಾ ಚುನಾವಣೆಗಳ ನಂತರ ಜನತಾ ಪಕ್ಷ ಕೇಂದ್ರಾಧಿಪತ್ಯ ವಹಿಸಿತು. ಆದರೆ ಅದೂ ತನ್ನದೇ ರೀತಿಯಲ್ಲಿ ಇಂದಿರಾ ಯುಗದ ಅತಿರೇಕಗಳ ಪಾರುಪತ್ಯಕ್ಕೆ ತೊಡಗಿ ಅದರ ನೆಪದಿಂದ ಆಡಳಿತದ ಮೇಲೆ ಮಂತ್ರಿಗಳ ಒತ್ತಾಯ ಒತ್ತಡ ಬೀರಹತ್ತಿತು. ಶ್ರೀ ಬಿ.ಬಿ. ವ್ಹೋರಾರಂಥ ಪ್ರಾಮಾಣಿಕ ಹಾಗೂ ಪ್ರಮುಖ ಸಿವ್ಹಿಲ್ ಸರ್ವೆಂಟರನ್ನು ನಡೆಯಿಸಿಕೊಂಡ ಅಸಹ್ಯವಾದ ರೀತಿಯ ಜನತಾ ಹಾಗೂ ಲೋಕದಳ ಪಕ್ಷಗಳ ರಾಜಕೀಯ ಭ್ರಷ್ಟಾಚಾರಕ್ಕೆ ಒಂದು ದುಷ್ಟ ಉದಾಹರಣೆ. ಇಂದು ಮತ್ತೆ ಇತಿಹಾಸ ಹೊಸ ತಿರುವು ಪಡೆದಿದೆ. ಆದರೆ ಇಂದಿಗೂ ಕೇಂದ್ರ ಸತ್ತೆಯಲ್ಲಿ ಔದಾರ್ಯಕ್ಕಿಂತ ಸಂಶಯವೇ ಮೇಲುಗೈ ಆಗುತ್ತಿದೆ. ಈ ಚಟ ಒಂದು ಆಳವಾದ ಚಾಳಿ ಆಗಿಬಿಟ್ಟಿದೆ. ತಮ್ಮ ಚರ್ಮದಿಂದ ಹೊರಗೆ ಹಾರುವದು ಯಾರಿಗೂ ಯಾವಾಗಲೂ ಕಷ್ಟವೇ!

ಇವಕ್ಕೆ ಪ್ರತಿಯಾಗಿ ಆಡಳಿತಗಾರರೂ ಹಲವು ಪ್ರಲೋಭನೆಗಳಿಗಾಗಿ ಆಳರಸರ, ತಮ್ಮ ವಿಭಾಗಗಳ ಮಂತ್ರಿಗಳ ಮರ್ಜಿ-ಮುತುವರ್ಜಿ ಕಾಪಾಡಿಕೊಳ್ಳಲು ಬಾಲ ಗುಂಡಾಡಿಸುತ್ತಲೇ ಇರುತ್ತಾರೆ. ಈ ಪ್ರಲೋಭನೆಗಳಲ್ಲಿ ಅತಿ ದೊಡ್ಡದು ತಮ್ಮ ಸೇವಾವಧಿಯನ್ನು ನಿವೃತ್ತಿ ವಯಸ್ಸನ್ನೂ

ೇರಿ ಮುಂದುವರಿಸಿಕೊಳ್ಳುವುದು. ಈ ಕುರಿತು ಸರ್ ಗಿರಿಜಾಶಂಕರ ಬಾಜಪಾಯಿ ತುಂಬ ಳವಳಪಟ್ಟುಕೊಳ್ಳುತ್ತಿದ್ದರು. ಸರ್ ಗಿರಿಜಾಶಂಕರ ಹಳೆಯ ಸಂಪ್ರದಾಯದ ಸಿವ್ಹಿಲ್ ಸರ್ವೆಂಟರ ಂದು ಹಿರಿಯ ಮಾದರಿ. ಅವರ ಸಹೋದ್ಯೋಗಿಗಳು ಅವಧಿ ಮುಗಿದ ಮೇಲೆ ತಿರುಗಿ ತಮ್ಮ ಜ್ಯಗಳಿಗೆ ಹೋಗದೆ ದಿಲ್ಲಿಯಲ್ಲಿಯೇ ಸೇವೆ ಮುಂದುವರಿಸಿಕೊಳ್ಳಲಿಕ್ಕೆ ಏನು ಬೇಕೋ (ಬೇಡವೋ) ದನ್ನೆಲ್ಲ ಮಾಡಲು ಸಿದ್ಧರಿದ್ದರಂತೆ! ಸರ್ ಬಾಜಪಾಯಿ ಸೇವಾವಧಿಯ ನಂತರ ಮುಂಬಯಿ ಜ್ಯಕ್ಕೆ ರಾಜ್ಯಪಾಲರಾದರು. ಆದರೆ ಅವರಂಥ ಇತರ ಹಿರಿಯ ಅಧಿಕಾರಿಗಳು ತಮ್ಮ ೇವಾವಧಿಯನ್ನು ನಿವೃತ್ತಿ ವಯೋಮಿತಿಯನ್ನೂ ಮುಂದುವರಿಸಿಕೊಳ್ಳಲಿಕ್ಕೆ ಶಕ್ಯವಿಲ್ಲದಿದ್ದಾಗ, ಿಷ್ಟ ಬೇರೆ ಯಾವುದೇ ರಾಯಭಾರಿ ಇಲ್ಲವೆ ರಾಜ್ಯಪಾಲಿಕೆಯ ಸ್ಥಾನ ಗಿಟ್ಟಿಸಿಕೊಳ್ಳಲಿಕ್ಕೆ ಮಂತ್ರಿ ಹೋದಯರ ಮೋರೆ ನೋಡುತ್ತಿದ್ದರು.

ಇಂದು ಸ್ವಾರ್ಥ ಲೋಭ ಅಧಿಕಾರ ದಾಹಗಳಿಗೆ ಈ ಶ್ರೇಷ್ಠ ಶ್ರೇಣಿಗಳೂ ಬಲಿಯಾಗಿವೆ. ಗಿನ ಅಧಿಕಾರಿಗಳಿಗೆ ಈ ಐಎಎಸ್ ಐಪಿಎಸ್ ಶ್ರೇಷ್ಠಿಗಳ ಶೀಲ ಪ್ರಾಮಾಣಿಕತೆಗಳಲ್ಲಿ ನಂಬಿಕೆ ಸಿದಿದೆ. ಇಷ್ಟೇ ಅಲ್ಲ ಐ.ಎ.ಎಸ್. ಶ್ರೇಣಿಯವರನ್ನು ಐಪಿಎಸ್ ಹಾಗೂ ಇನ್ನಿತರ ಅಖಿಲ ಾರತೀಯ ಸೇವಾ ಶ್ರೇಣಿಯವರು ಟೀಕಿಸಲು ನಿಂದಿಸಲು ತೊಡಗಿದ್ದಾರೆ. ಐಪಿಎಸ್ ೇಣಿಯಲ್ಲಿಯೂ ಹಿಂದಿನ ಒಂದು ಒಕ್ಕಟ್ಟು ನಿಷ್ಠಾಬಲ ಉಳಿದಿಲ್ಲ. ಇವರೊಳಗಿನ ದೊಡ್ಡ ಂಬಳದ ಅಧಿಕಾರದಾಹವನ್ನು ಹೇಗೂ ಬಗೆಹರಿಸಬಹುದು. ಆದರೆ ಅವರ ನಡುವೆ ಹುತ್ತದಲ್ಲಿ ತ್ತವಾಗಿ ಬೆಳೆದ ಜಾತೀಯತೆಯ ಹಾಗೂ ವರ್ಗೀಯ ವರಿಷ್ಠತೆಯ ಒಳತೋಟಿಯನ್ನು ಗೆಹರಿಸುವುದು ಕಠಿಣ.

ಈಚೆಗೆ ಶ್ರೀ ಬಿ.ಕೆ. ನೆಹರೂ ಒಂದು ಮಹತ್ವದ ಭಾಷಣದಲ್ಲಿ ಈ ಕುರಿತು ತಮ್ಮ ನುಭವಪೂರ್ಣ ವಿಚಾರಗಳನ್ನು ಆಡಿ ತೋರಿಸಿದರು. ಅವರು ಸ್ಪಷ್ಟವಾಗಿಯೇ ಅಂದದ್ದೇನೆಂದರೆ ಈ ನಿಷ್ಠಾವಂತ ಬುದ್ಧಿವಂತ ಸಿವ್ಹಿಲ್ ಸರ್ವಿಸ್ ಸಿಬ್ಬಂದಿಯ ವರ್ಗಾವರ್ಗಿ ವೇತನ ವೃದ್ಧಿ, ಧಿಕಾರ ನಿರ್ವಹಣೆ ಇವುಗಳ ಮೇಲಿನ ರಾಜಕಾರಣಿಗಳ (ಮಂತ್ರಿ ಮಹಾಶಯರ) ಸತ್ತೆಯನ್ನೂ ಭಾವವನ್ನೂ ಪರಿಮಿತಗೊಳಿಸಬೇಕು. ಇಲ್ಲವಾದರೆ ನೌಕರಶಾಹಿಯಲ್ಲಿ ಇಂದು ಕಂಡುಬರುವ ಗೊಂದಲ-ಗತಿಗೇಡು ಹೋಗಲಾಡಿಸುವುದೇ ಶಕ್ಯವಿಲ್ಲ."

ಬ್ರಿಟಿಶ್ ಲೇಬರ್ ಪಕ್ಷದ ಹಿರಿಯ ಮಂತ್ರಿ ಶ್ರೀ ಆರ್.ಎಚ್.ಎಸ್. ಕ್ರಾಸ್ಮನ್ ತನ್ನ ನಚರಿಯಲ್ಲಿ ಬರೆದಿದ್ದಾರೆ. ಅವರ ಅಂಡರ್ ಸೆಕ್ರೆಟರಿ (ಉಪ ಸಚಿವೆ) ಒಬ್ಬ ಮಹಿಳೆ. ನೈಟ್ ೇಣಿಗೆ ಸಮಾನ ಬಿರುದಿನವಳು. ಯಾವಾಗಲೂ ಅವರ ತಿರಸ್ಕಾರಕ್ಕೆ ಪಾತ್ರಳು. "ಎ ಡ್ಯಾಮ್ಡ್ ೇಮ್"ಎಂದೇ ಕ್ರಾಸ್ಮನ್ ಅವಳನ್ನು ಕರೆಯುತ್ತಿದ್ದರು. ಆದರೂ ಅವರು ಅವಳನ್ನು ಕೆಲಸದಿಂದ ಳುವ ಮಾತಿರಲಿ, ಬೇರೆ ವಿಭಾಗಕ್ಕೆ ವರ್ಗ ಮಾಡಲೂ ಸಾಧ್ಯವಾಗದೇ ಹೋಯಿತು. ಅವಳನ್ನು ್ಯಾಂ' ಮಾಡುವದೊಂದೇ ಅವರ ಯಥೇಷ್ಟ ಕೆಲಸವಾಯಿತು.

ಇಂಗ್ಲೆಂಡಿನಲ್ಲಿ ಅಂಡರ್ ಸೆಕ್ರೆಟರಿಗಳಿಗೂ ಇಷ್ಟೊಂದು ಭದ್ರತೆ ಸಂರಕ್ಷಣೆ, - ನಮ್ಮಲ್ಲಿ? ದು ಗಾಂಧೀ ಟೊಪ್ಪಿಗೆ ಕಳಚಿ ಬಿದ್ದರೂ ಅದಕ್ಕಾಗಿ ಯಾವುದೇ ಸೆಕ್ರೆಟರಿಯನ್ನು ಆ ವಿಭಾಗದ ಂತ್ರಿ ವರ್ಗಾಯಿಸಬಲ್ಲ! ಇದಕ್ಕೂ ಅಸಹ್ಯವೆಂದರೆ ನಮ್ಮಲ್ಲಿ ಇಂಥ ಅಧಿಕಾರಿಯ 'ಅನಾಮತ್ತು'

(Suspension) ಒಂದು ಶಿಕ್ಷೆಯೇ ಅಲ್ಲ. ವರ್ಷಗಟ್ಟಲೆ ಆತ ಅನಾಮತ್ ಆಗಿ ಉಳಿದು ಪುನ ಅದೇ ಅಧಿಕಾರಕ್ಕೆ ಬರಬಲ್ಲ. ಮತ್ತು ಯಾವುದೇ ವಿಶಿಷ್ಟ ಆರೋಪ ಹೊರದೆ ವರ್ಷಗಟ್ಟ ಅನಾಮತ್ತಾಗಿ ಉಳಿಯಬಲ್ಲ. ಅವನ ಸೇವಾಚಾರಿತ್ರ್ಯಕ್ಕೆ ಅದರಿಂದ ಯಾವ ಕಳಂಕವೂ ತಟ್ಟುವುದಿಲ್ ಇದಕ್ಕೆ ಏನನ್ನುವಿರಿ?

ಶ್ರೀ ಬಿ.ಕೆ. ನೆಹರೂ ಹೇಳುವಂತೆ ಬ್ರಿಟನ್ನಿನ ಈ ಸಿವಿಲ್ ಸರ್ವಿಸಿನ ಎಲ್ಲಾ ನೇಮಕಗಳನ ಹಿರಿಯ ಸೇವಾಧಿಕಾರಿಗಳ ಒಂದು ಸಮಿತಿಯೇ ಮಾಡುವುದು. ಅದಕ್ಕೆ ಆಯಾ ವಿಭಾಗ ಸಿವ್ಹಿಲ್ ಸರ್ವಿಸ್ ಮುಖ್ಯಸ್ಥನಿರುವನು. ಅಲ್ಲಿ ಮಂತ್ರಿಗಳ, ರಾಜಕಾರಣಿಗಳ ಕೈವಾಡ ಕೈಚಳಕಗಳಿಲ್ ಸೇವಾಶ್ರೇಣಿಯ ಅತ್ಯುಚ್ಚ ನೇಮಕಗಳಿಗೆ ಪ್ರಧಾನ ಮಂತ್ರಿಯ ಸಲಹೆಯನ್ನು ಪಡೆಯಲಾಗುವುದ ಹೊರತು ಬೇರೆ ಯಾವ ಮಂತ್ರಿಗಳದೂ ಅಲ್ಲ.

ಆದರೆ ನಮ್ಮ ನೆಲಗುಣಕ್ಕೆ ಈ ಪದ್ಧತಿ ಹೇಗೆ, ಎಂದು ಒಗ್ಗಬೇಕು? ನಮ್ಮಲ್ಲಿಯ ಸಾರ್ವಜನಿ ಸೇವಾಧಿಕಾರಿಗೆ ಮಂತ್ರಿಗಳಿಗಿಂತ ತಮ್ಮ ಶ್ರೇಷ್ಠಿಗಳ ಮಂಡಳದ ನಿರ್ಣಯ ಹೆಚ್ಚು ಹಿತಕರವ ಇಷ್ಟವೂ ಅನಿಸಬಹುದು. ಆದರೂ ಹಿಂದೆ ಇಂಥ ನೌಕರಶಾಹಿ ಶ್ರೇಷ್ಠಿಗಳ ಸಲಹೆ ಪಡೆದ ನಡೆದ ನೇಮಕಗಳಲ್ಲಿಯೂ ಸಂಬಂಧಪಟ್ಟ ಸೇವಾಧಿಕಾರಿಗಳು ಅಸಂತೋಷಪಟ್ಟದ್ದುಂಟು. ನಮ್ಮ ಈ ನೌಕರಶಾಹಿಯ ಯಾವ ಹಂತವೂ ಯಾವ ಹಿರಿಯ ಮಟ್ಟವೂ ಅದಕ್ಕೆ ಅನುಗುಣವಾ ಭ್ರಷ್ಟಾಚಾರ ಆಮಿಷ ಮೋಹದಿಂದ ಮುಕ್ತವಾಗಿಲ್ಲ! ಇದಕ್ಕೇನು ಮಾಡಬೇಕು? ನಮ್ಮ ರಾಜಕೀಯ ಭಸ್ಮಾಸುರನ ಕರಾಳಹಸ್ತ ಅಲ್ಲಿಯೂ ಚಾಚಿದೆ!

(ಉದಯವಾಣಿ ೧೯೮೦

# ಮೆಕ್‌ಮಹೋನ್ ರೇಖೆಯ ಹಿಂದೆ.....

೧೯೬೨ರಲ್ಲಿ ಚೀನೀಯರ ದಾಳಿಯಾದಾಗ ನಮ್ಮ ಆತ್ಮೀಯತೆಗೆ ಮತ್ತು ಚೌ ಎನ್ ಲಾಯಿಯನ್ನು ದೃಢವಾಗಿ ನಂಬಿದ ನಮ್ಮ ನೆಹರೂಜಿಯವರ ಸದ್ಭಾವನೆಗೆ ಒಮ್ಮೆಲೇ ಬಲವಾದ ಪೆಟ್ಟು ಬಿತ್ತು. ಕಿಸಕಾಪಿನ ಕೈಚೀಲದೊಳಗಿನ ಚೀನೀ ಕೈಯ ಉಕ್ಕಿನ ಮುಷ್ಟಿಯು ಕಾಣಿಸಿಕೊಂಡಿತು. ಆಗ ಪ್ರತಿಭಟನೆಯ ಕರ್ಕಶ ಧ್ವನಿಯಲ್ಲಿ ನಮ್ಮ ಸಂಸತ್ ಸದಸ್ಯರೆಂಬ ರಾಜಕೀಯ 'ಪುಡಾರಿ'ಗಳು ಹುಚ್ಚಾಪಟ್ಟೆ ಸೂಚನೆಗಳನ್ನು ಮುಂದಿಟ್ಟರು. ಮುಗ್ಧವೋ, ಮೂಢವೋ, ಅಮಾಯಕವೋ, ವಾಗಾಡಂಬರದ ವಲ್ಗನೆಯೋ-ಹಲವಾರು 'ಸಹಿ ರಾವಣನಿಗೆ ನೋಟೀಸು' ಜಾರಿ ಮಾಡಿದರು. ಅವೆಲ್ಲ ಚೀನೀ ಆಕ್ರಮಣದ ಕಟು ಸತ್ಯಕ್ಕೆ ನಮ್ಮ ಪ್ರತಿಕ್ರಿಯೆಗಳು-ಅತಿರೇಕದ, ಅವಿವೇಕದ, ಅದೂರದರ್ಶಿಯಾದ, ಅವಾಸ್ತವ ಅವ್ಯವಹಾರ್ಯವಾದ ಪ್ರತಿಕ್ರಿಯೆಗಳನ್ನು ಪ್ರಸ್ತಾಪಿಸಿದರು. ಅವುಗಳ ಕೆಲವು 'ಸ್ಯಾಂಪಲ್ಲು'ಗಳನ್ನು ನೋಡಿರಿ.

"ಚೀನಿ ದಂಡುಗಳಿಗೆ ಹಿಂದಿರುಗಿ ಹೋಗಲಿಕ್ಕೆ ಒಂದು ನಿಶ್ಚಿತ ದಿನಾಂಕವನ್ನು ಕೊಡಬೇಕು." "ನೇತಾಜೀ ಸುಭಾಸಚಂದ್ರರ ಮುಖಮುದ್ರೆಯ ಸ್ಟಾಂಪುಗಳನ್ನು ಜಾರಿಯಲ್ಲಿ ತರಬೇಕು-ಜನತೆಯ, ಜವಾನರ ಮನೋಬಲವನ್ನು ಕುದುರಿಸಲಿಕ್ಕೆ" "ಪ್ರಪಂಚದ ಒಂದೊಂದು ಪ್ರಜಾಸತ್ತಾತ್ಮಕ ರಾಷ್ಟ್ರದಿಂದ ಒಂದೊಂದು ಸೈನ್ಯ ಪಡೆಯನ್ನು ನೇರ ಹಿಮಾಲಯದಲ್ಲಿ ಚೀನೀಯರನ್ನು ಎದುರಿಸಲು ರವಾನಿಸಬೇಕು." "ನಮ್ಮ 'ಎಂಪಿ' ಗಳನ್ನು ಯುದ್ಧರಂಗಕ್ಕೆ ಅಟ್ಟಬಾರದೇಕೆ?" "ಅವರಿಗೆ ದಂಡಿನಲ್ಲಿ 'ಮೇಜರ್' ಶ್ರೇಣಿ ನೀಡಿ, ಅವರನ್ನು ರಿಕ್ರೂಟಿಂಗ್ ಅಧಿಕಾರಿಗಳನ್ನಾಗಿ ನೇಮಿಸಬೇಕು"-ಇತ್ಯಾದಿ, ಇತ್ಯಾದಿ. ಅಂದು ನಾವು ಆಕ್ರಮಣದ ಆಘಾತದಿಂದ ಎಷ್ಟು ಧೃತಿಗೆಟ್ಟಿದ್ದೆವೆಂಬುದಕ್ಕೆ ಈ ಅಮೂಲ್ಯ ಸಲಹೆಗಳೇ ಸಾಕ್ಷಿ!

ಇವೆಲ್ಲ 'ನ್ಯಾಸ'ಗಳ ಅರ್ಥವೇನು? ನೆಹರೂಜೀ ಉದ್ವಿಗ್ನರಾಗಿ ಉದ್ಗರಿಸಿದರು. "ಒಂದಂಗುಲ ನೆಲ ಬಿಡಬಾರದೆಂಬ ಈ ಮಾತಿನ ಸುಡುಮದ್ದಿನ ಭಾಷೆ ನನಗೆ ಸೇರುವುದಿಲ್ಲ. ಇಲ್ಲಿ ಸಂಸತ್ತನ್ನು ಕುರಿತು ಇದೆಲ್ಲದರ ಅರ್ಥವೇನೆಂಬುದನ್ನು ಅರಿಯದ ಭಾಷೆಯಿದು!" ಇದೇ ಚೀನೀ ಆಕ್ರಮಣದ ಸಮಸ್ಯೆಯನ್ನು ಇಸ್ಸೂ ಆಳದ ಸೆಳವಿಗೆ ಬಳಸಿಕೊಳ್ಳುವ ಹೊಂಚೂ ನಡೆದಿತ್ತು-ಈ ಸಂಧಿಯನ್ನು ಸಾಧಿಸಿ ನಮ್ಮ ದೇಶವನ್ನು ತಟಸ್ಥ ನಿಲುಮೆಯಿಂದ ಬೇರ್ಪಡಿಸಿ ಅಮೆರಿಕೆಯ ವಲಯಕ್ಕೆ ಸೆಳೆಯುವ ಹೊಂಚದು. ಅಂದು ನೆಹರೂಜೀ ಅಧ್ಯಕ್ಷ ಕೆನಡಿಯವರಿಂದಲೆ ಅತ್ಯಗತ್ಯವಿದ್ದರೆ ನೆರವು ಕೋರಿದ್ದರು. ಅಮೆರಿಕೆಯ ೭ನೇ ನೌಕಾದಳ ಬಂಗಾಲ ಉಪಸಾಗರದಲ್ಲಿ ಕಾಯುತ್ತಿತ್ತು. ಹೊಂಚುಗಾರರ ಹಂಚಿಕೆಗೆ ಇದೊಂದು ಸರ್ವಣಿಯಾಗಿತ್ತು.

ಅಂದು ಅಮೆರಿಕೆ ಚೀನವನ್ನು ತೀವ್ರವಾಗಿ ವಿರೋಧಿಸುತ್ತಿತ್ತು. ಭಾರತ-ಚೀನಗಳ ನಡುವೆ ವ್ಯಾಜ್ಯವಿತುಷ್ಟವೆದ್ದರೆ ಅದು ಅಮೆರಿಕೆಗೆ ಇಷ್ಟವೇ ಆಗಿತ್ತು. ಇಷ್ಟೇ ಅಲ್ಲ, ಈ ನಿಮಿತ್ತವಾಗಿ ನೆಹರೂಜೀ ಪ್ರಧಾನಿ ಪದಾಧಿಕಾರದಿಂದ ಪದಚ್ಯುತರಾದರೆ ಅದು ಅಮೆರಿಕೆಗೆ ಅಪ್ಯಾಯಮಾನವೇ ಇತ್ತು. (ಅಮೆರಿಕೆ ತನ್ನ ಸರಹದ್ದನ್ನು ಏಶಿಯಾದಲ್ಲಿ ಕಾಣುತ್ತಿತ್ತು-ಕಮ್ಯುನಿಸಂ ವಿರೋಧದ ಅದರ

ಕುರುಡು ಕರ್ಮದ ಧೋರಣೆಯಲ್ಲಿ!)

ಆದರೆ ನೆಹರೂಜೀಗೆ ಇದರ ಇಂಗಿತದ ಅರಿವಿತ್ತು. ಅವರು ತಾಳ್ಮೆಯಿಂದ ಕಾಯ್ದರು. ಚೀನೀ ದಂಡು ಹಿಮಾಲಯದಿಂದ ತಾನಾಗಿಯೇ ಹಿಂದೆ ಸರಿಯಿತು. ಅವರಿಗೆ ತಮ್ಮ ಗಡಿರೇಖೆಯ ಬಗೆಗೆ ತಮ್ಮ ಪ್ರಚಂಡ ಬಲ ಪ್ರದರ್ಶನವನ್ನು ಭಾರತಕ್ಕೆ ಕಾಣಿಸುವುದಿತ್ತು. ಭಾರತ-ಚೀನ ಗಡಿ ಸಮಸ್ಯೆಯನ್ನು ಬೆಳಕಿಗೆ ಎತ್ತಿಹಿಡಿಯುವುದು ಬೇಕಾಗಿತ್ತು.

ಈ ಸಮಸ್ಯೆಯ ಇತ್ಯರ್ಥ ಸೈನ್ಯ ಶಕ್ತಿಯ ಮುಖಾಮುಖಿಯಿಂದಲ್ಲ. ಮುತ್ಸದ್ದಿಗಳ ಬುದ್ಧಿಶಕ್ತಿಯಿಂದ ರಾಜಕೀಯ ನಿರ್ಣಯವಾಗಿಯೇ ಬಗೆಹರಿಸಬೇಕು- ಎಂದು ಅಂದು ನಮ್ಮ ದಿ। ಜನರಲ್ ತಿಮ್ಮಯ್ಯ ಅಭಿಪ್ರಾಯಪಟ್ಟಿದ್ದರು.

ಮೊನ್ನೆ ತಾನೇ ನಮ್ಮ ಪ್ರಧಾನಿ ಚೀನಕ್ಕೆ ಹೊರಡುವ ಒಂದು ವಾರ ಪೂರ್ವದಲ್ಲಿ 'ಬೀಜಿಂಗರಿವ್ಯೂ' ಎಂಬ ಚೀನೀ ಸರಕಾರದ ಅಧಿಕೃತ ಪ್ರಕಟಣೆಯ ಸಾಪ್ತಾಹಿಕವು ಒಂದು ವಿಶೇಷ ಲೇಖನದಲ್ಲಿ ತಿಳಿಯಪಡಿಸಿದಂತೆ ಈ ಸರಹದ್ದಿನ ಮೆಕ್‌ಮೆಹೋನ್ ರೇಖೆಯು ನಮ್ಮ ಉಭಯ ರಾಷ್ಟ್ರಗಳ ನಡುವೆ ನಿಂತ ಹಿರಿಯ ಸಮಸ್ಯೆ. ಅದು ನಮ್ಮ ಇತಿಹಾಸದ್ದೇ ಬಳುವಳಿ. ೧೯೧೪ರಲ್ಲಿಯೇ ಬ್ರಿಟನ್, ಭಾರತ, ಚೀನ, ನೇಪಾಲ (?) ಎಲ್ಲರೂ ಕೂಡಿ ಈ ಮೆಕ್‌ಮೆಹೋನ್ ಗಡಿ ರೇಖೆ (೧೭೦೦ ಕಿ.ಮೀ.) ಯನ್ನು ಒಪ್ಪಿ ಕೊಂಡಿದ್ದಾಗಿತ್ತು. ಆದರೆ ಇದು ಒಟ್ಟಿನಲ್ಲಿ ಬ್ರಿಟಿಷ್ ಆಳರಸರು ಹೇರಿದ್ದು. ಚೀನದ ಸರಕಾರ ಈ ಗಡಿಗೆರೆಯನ್ನು ಎಂದೂ ಒಪ್ಪಿದ್ದಿಲ್ಲವಂತೆ. ಈ ರೇಖೆ ಕಾನೂನಿಗೆ ಬಾಹಿರ ಮತ್ತು 'ಅಸಿಂಧು' (invalid) ಎಂದೇ ಚೀನೀ ಸರಕಾರವು ಪ್ರತಿಪಾದಿಸುತ್ತ ಬಂದಿದೆ.

ಆದರೆ ಚೀನವು ಇದೊಂದು ಸಮಸ್ಯೆಯನ್ನು ಬದಿಗೆ ಇರಿಸಿ ಇತರ ಕ್ಷೇತ್ರಗಳಲ್ಲಿ ಉಭಯ ರಾಷ್ಟ್ರಗಳು ಸಂಬಂಧಗಳನ್ನು ಬೆಳೆಸಬಹುದೆಂದು ಆಗಾಗ್ಗೆ ಸೂಚಿಸಿದ್ದುಂಟು. ಆದರೆ ಭಾರತದ ನಿಲುಮೆ ತದ್ವಿರುದ್ಧವಾಗಿತ್ತು. ಆ ಗಡಿ ಸಮಸ್ಯೆಯ ಇತ್ಯರ್ಥವಾಗದಿದ್ದರೆ ಇತರ ಸಂಬಂಧಗಳು ಬೆಳೆಯುವುದು ಶಕ್ಯವಿಲ್ಲ. ಆದರೆ ೧೯೮೧ರಲ್ಲಿ ಗಾಳಿಯ ದಿಕ್ಕು ತುಸು ಬದಲಾಯಿತು. ಅದರ ಉಪಕ್ರಮ ಭಾರತದಿಂದಲೇ ಬಂತು - ಚೀನದೊಂದಿಗೆ ಭಾರತದ ಸಂಬಂಧಗಳನ್ನು ವಿಶಾಲಗೊಳಿಸುವ ಕುರಿತು. ಗಡಿ ಮಾತುಕತೆಗಳನ್ನು ಚೀನವು ಎತ್ತಿಕೊಳ್ಳುವುದರ ಬದಲಾಗಿ ಕಳೆದ ೭ ವರ್ಷ ಉಭಯ ರಾಷ್ಟ್ರಗಳ ಸಂಬಂಧಪಟ್ಟ ಅಧಿಕಾರಿಗಳು ಈ ಗಡಿ ಸಮಸ್ಯೆಯ ಕುರಿತಾಗಿ ಕುಶಲ ಮಾತುಕತೆ ನಡೆಸಿದ್ದಾರೆ. ಆದರೆ ಇದರಿಂದ ಹೆಚ್ಚಿನದೇನೂ ಪ್ರಗತಿ ಸಾಧ್ಯವಾಗದು. ಆದಾಗ್ಯೂ ಒಬ್ಬರನ್ನೊಬ್ಬರು ಅರಿತುಕೊಳ್ಳಲು ಇದರಿಂದ ಸಾಧ್ಯವಾಗಿದೆ. (ಎಷ್ಟು ಏನಂತೆ? ಅಮೆರಿಕ ಮತ್ತು ಚೀನಗಳ ನಡುವಿನ ಜಿಡುಕುಗಳನ್ನು ಹಿಂಜಿಕೊಳ್ಳಲು ವಾರ್ಸಾದಲ್ಲಿ ೧,೦೦೦ ಸುತ್ತು ಮಾತುಕತೆಗಳು ನಡೆದದ್ದುಂಟು!)

ಇಲ್ಲಿ ಒಂದು ಸಂಗತಿಯನ್ನು ಮರೆಯುವಂತಿಲ್ಲ. ಮೂಲತಃ ನಮ್ಮಿಂದ ಒಂದು ತಪ್ಪಾಗಿದೆ. ಮೆಕ್‌ಮೆಹೋನ್ ಗಡಿರೇಖೆ ಬ್ರಿಟಿಶರ ಕಾಣಿಕೆ. ಅವರ ಅಧಿಸತ್ತದ ಜರಬಿಗೆ ಚೀನವು ಅವರ ಆಜ್ಞೆಯಲ್ಲಿ ಸುಮ್ಮನೆ ಉಳಿಯಿತು. ಆದರೆ ಸ್ವಾತಂತ್ರ್ಯ ಬಂದ ಮೇಲೆಯೂ ಆ ಯಥಾಸ್ಥಿತಿಯನ್ನು

ನಾವು ಒಪ್ಪಿಕೊಂಡು ನಡೆದೆವು. ಚೀನಕ್ಕೆ ಎಂದೂ ಮಾನ್ಯವಾಗದಿದ್ದ ಈ ಗಡಿಗೆರೆಯನ್ನು ಬ್ರಿಟಿಷರ ಸತ್ತೆ ಮುಗಿದ ಮೇಲೆ ನಾವು ಅವರೊಡನೆ ಪುನ ವಿಮರ್ಶಿಸಿ ತಿದ್ದಿಕೊಳ್ಳಬೇಕಿತ್ತು. ಅದು ಊರ್ಜಿತವಾಗಿಯೇ ಉಳಿದಿದೆ. ಉಳಿಯಬೇಕೆಂದು ಭಾವಿಸುವ ಭಾವಿಕತನ ತೋರಿಸಬಾರದಿತ್ತು. ಚೀನದ ಕುರಿತು ನಮ್ಮ ಗುರಿಗಳನ್ನು ಸ್ಪಷ್ಟಗೊಳಿಸಬೇಕಿತ್ತು.

ಬ್ರಿಟಿಷ್ ಆಧಿಪತ್ಯ ಹೋದ ನಂತರ ಚೀನದಲ್ಲಿಯೂ ಕಮ್ಯುನಿಸ್ಟ್ ಕ್ರಾಂತಿ ಆದ ನಂತರ ಚೀನವು ಟಿಬೆಟನ್ನು ಆಕ್ರಮಿಸಿ ವ್ಯಾಪಿಸಿತು. ಟಿಬೆಟ್ ಚೀನದ ಚಕ್ರಾಧಿಪತ್ಯಕ್ಕೆ ನಾಮ ಮಾತ್ರವಾಗಿ ಸೇರಿದ್ದು ವ್ಯವಹಾರತಃ ದಲಾಯಿಲಾಮಾರ ಆಳ್ವಿಕೆಗೆ ಒಳಪಟ್ಟ ಸ್ವಾಯತ್ತ ದೇಶವಾಗಿತ್ತು. ಆದರೆ ಕಂಪು ಚೀನ ತನ್ನ ಆಧಿರಾಜ್ಯವನ್ನು ಅಲ್ಲಿ ಸ್ಥಾಪಿಸಿತು. ಇದರಿಂದ ಚೀನದ ಗಡಿ ಆ ಭಾಗದಲ್ಲಿ ಭಾರತದ ಗಡಿಯೊಂದಿಗೆ ನೇರ ಸಂಧಿಸಿತು. ಎರಡು ಮಹಾ ರಾಷ್ಟ್ರಗಳ ಗಡಿ ಹೀಗೆ ಒಂದೇ ಆಗಿರುವುದು ಗಂಡಾಂತರದ್ದೇ. ಈ ಗಂಡಾಂತರ ಇನ್ನೂ ಉಲ್ಬಣಿಸಲು ಕಾರಣ ಭಾರತವು ತನ್ನ ಹಿಂದೆಂದಿನ ಔದಾರ್ಯದ ಸಂಪ್ರದಾಯದಂತೆ ಟಿಬೆಟಿನ ಪದಚ್ಯುತ, ಪಲಾಯನ ಮಾಡಿ ಬಂದ ದಲಾಯಿಲಾಮಾನಿಗೆ ಆಶ್ರಯ ನೀಡಿತು. ಇದರಿಂದ ಚೀನದ ದ್ವೇಷವನ್ನು ತನ್ನ ಮೇಲೆ ಎಳೆದುಕೊಂಡಿತು. ಉದ್ದಕ್ಕೂ ನಮ್ಮ ನಿಲುಮೆ ಆತ್ಮಸಂಭಾವಿತತನದ್ದಾಯಿತು. ನಮ್ಮ ಧೋರಣೆಯು ಸ್ಪಷ್ಟ ಹಾಗೂ ನ್ಯಾಯಸಮ್ಮತವಿದ್ದು ಅದನ್ನು ಚೀನವು ಉಭಯ ರಾಷ್ಟ್ರಗಳ ಸರ್ವೋಪರಿ ಹಿತಕ್ಕಾಗಿ ಒಪ್ಪಿಕೊಂಡೇ ಬಿಡುವುದೆಂಬ ಸುಖಸ್ವಪ್ನದಲ್ಲಿಯೇ ನಾವು ಉಳಿದೆವು. ನಮ್ಮ ಧೋರಣೆ ನಿಲುಮೆಗಳನ್ನು ನಾವು ಸಲೀಸಾಗಿ ಸಮಂಜಸವೆಂದು ಸಾಧಿಸಬಲ್ಲೆವೆಂದೇ ನಂಬಿ ಕೆಟ್ಟೆವು. ಕ್ರಾಂತಿಗೊಂಡ ಹೊಸ ಚೀನದೊಂದಿಗೆ ಸ್ವತಂತ್ರ ಭಾರತವು ಹೊಸ ಸಂದರ್ಭವನ್ನು ಅನುಲಕ್ಷಿಸಿ ಹೊಸ ತಿಳುವಳಿಕೆ, ಹೊಸ ಒಡಂಬಡಿಕೆಯನ್ನು ಮಾಡಿಕೊಳ್ಳುವ ಗೋಜಿಗೇ ಹೋಗಲಿಲ್ಲ. "ಭಾಯಿ-ಭಾಯಿ" ಎಂದುಕೊಂಡು ಸಂತೋಷಪಟ್ಟೆವು. ಆದರೆ ಸೋದರರೇ ದಾಯಾದಿ ಗಳಾಗುವಾಗ ನಮ್ಮ ಈ ಭಾವ ಬಾಂಧವ್ಯದ ಕನಸು ಕರಗಲಿಕ್ಕೆ ತಡವಾಗಲಿಲ್ಲ.

●

(ಉದಯವಾಣಿ ೧೯೮೦)

# ಪರಿಶಿಷ್ಟ ವರ್ಗಗಳು ಮತ್ತು ಗ್ರಾಮೀಣ ಔದ್ಯೋಗೀಕರಣ

ಗ್ರಾಮಾಂತರ ಪ್ರದೇಶದ ಔದ್ಯೋಗಿಕರಣವು ಅನೇಕ ಆರ್ಥಿಕ ಕೋಟಲೆಗಳಿಗೆ 'ಹೇಮಗರ್ಭ' ಮಾತ್ರೆಯಂತೆ ಗುಣಕಾರಿಯಾಗಬಹುದು. ಆದರೆ ನಮ್ಮಲ್ಲಿ ಅನಾದಿ ಕಾಲದಿಂದ ಬೇರುಬಿಟ್ಟು ಸಮಾಜ ಪುರುಷನ ನರನಾಡಿಗಳಲ್ಲಿ ಹಬ್ಬಿ ರಕ್ತಗತವಾದ ಕಾಯಿಲೆಗೆ - ಅಸ್ಪೃಶ್ಯತೆ ದಲಿತರ ತೊತ್ತುಳಿಗೊಂಡ ತೊತ್ತಿನ ಬದುಕಿನ ದಳ್ಳುರಿಯಂಥ ಸಮಸ್ಯೆಗೆ - ಈ ಮಾತ್ರೆ ಯಾವ ರಸದೊಂದಿಗೆ ಎಷ್ಟು ಸುತ್ತು ತೇದು ತಿನ್ನಿಸಿದರೂ ನಾಟುವಂತಿಲ್ಲ.

ಇದು ನನ್ನ ತಲೆಬುರುಡೆಯಿಂದ ಹೊರಟ ಊಹೆ ಅಲ್ಲ. ಕೆಲವು ಹೇಳ ಹೆಸರಿನ (So Called) ತಜ್ಞರುಗಳ, ಮೇಲ್ವರ್ಗದ ಪ್ರತಿಷ್ಠಿತರ ಅಥವಾ ವ್ಯವಸ್ಥೆಗೆ ಬದ್ಧರಾದವರ ಅಭಿಪ್ರಾಯವು ಅಲ್ಲ.

ಕೆಲ ಕಾಲ ಹಿಂದೆ ಪುಣೆಯ ತಿಲಕ ವಿದ್ಯಾಪೀಠದ ಸಾಮಾಜಿಕ ಅಧ್ಯಯನಗಳಿಗೆ ಮೀಸಲಾದ ನೆಹರೂ ಸಂಸ್ಥೆಯು ಕೈಗೊಂಡ ಒಂದು ವಿಶೇಷ ಗ್ರಾಮೀಣ ಪರಿಸರದ ಅಧ್ಯಯನ-ಪರಿಶೀಲನೆಯಿಂದ ಹೊರಟ ಫಲಶ್ರುತಿ ಇದು. - ಈ ಸಂಸ್ಥೆಯ ನಿರ್ದೇಶಕ ಡಾ. ವಸಂತರಾವ್ ದೇಶಮುಖರು ಯು.ಎನ್.ಐ ಸುದ್ದಿ ಸಂಸ್ಥೆಗೆ ವರದಿ ಮಾಡಿದ್ದು.

ಈ 'ಮಾದರಿಯ ವೀಕ್ಷಣೆ' (ಸ್ಯಾಂಪಲ್ ಸರ್ವೇ) ಪುಣೆಯ ಸುತ್ತಲಿನ ಹಳ್ಳಿಗಳಲ್ಲಿ ಪರಿಶಿಷ್ಟ ವರ್ಗಗಳ ಹಲವಾರು ಗಣ್ಯ ವ್ಯಕ್ತಿಗಳನ್ನು ಭೆಟ್ಟಿಯಾಗಿ ಕೇಳಿ ತಿಳಿದ ವಿವರಗಳ ಅಧ್ಯಯನದ ಫಲ. ಈ ಗಣ್ಯರು ತಮ್ಮ ತಮ್ಮ ಸಮಾಜಗಳಲ್ಲಿ ತೀರ ಬಡತನದಿಂದ, ಆರಂಭದಲ್ಲಿ ವಿಪರೀತ ಕಷ್ಟ ಕಾರ್ಪಣ್ಯಗಳನ್ನು ಕಂಡುಂಡು, ತುಂಬ ಪ್ರಯತ್ನದಿಂದ ಮೇಲೆದ್ದು ಬಂದವರು. ಸಮಾಜದಲ್ಲಿ ಮಹತ್ವದ ಸ್ಥಾನಗಳನ್ನು ಪಡೆದವರು, ತಿಲಕ ವಿದ್ಯಾಪೀಠದ ನೆಹರೂ ಸಂಸ್ಥೆಯು ಈ ವಿವರ ವಿದ್ಯಮಾನಗಳ ವ್ಯಾಸಂಗದ ಫಲಿತಾಂಶಗಳನ್ನು 'ಟೋವರ್ಡ್ಸ್ ಇಂಟಿಗ್ರೇಶನ್' ಎಂಬ ಶೀರ್ಷಿಕೆಯಡಿಗೆ ಪುಸ್ತಕರೂಪದಲ್ಲಿ ಈಚೆಗೆ ಪ್ರಕಟಿಸಿದೆ. ಈ ಪುಸ್ತಕದ ಸಾರಾಂಶವಿಷ್ಟೇ-

ಪರಿಶಿಷ್ಟ ವರ್ಗದವರೂ ಹಳ್ಳಿಗಾಡಿನಲ್ಲಿ ನೆಲಸಿದವರೂ ಆದಿವಾಸಿಗಳೂ ಆದ ಹರಿಜನ ಗಿರಿಜನ - 'ಗರೀಬ' ಜನರು ಒಟ್ಟಿನಲ್ಲಿ ನಮ್ಮ ರಾಷ್ಟ್ರೀಯ ಆಯೋಜನಾಕಾರರು ಪ್ರೋತ್ಸಾಹಿಸುವ ಔದ್ಯೋಗಿಕ ವಿಕೇಂದ್ರೀಕರಣವನ್ನು ವಿರೋಧಿಸುತ್ತಾರೆ! ಹಿರಿ ಉದ್ದಿಮೆಗಳನ್ನೂ ಕಿರಿ ಉದ್ದಿಮೆಗಳನ್ನೂ ಗ್ರಾಮಾಂತರ ಪರಿಸರದಲ್ಲಿ ಹರಡಿ ಹಂಚಿ ಸ್ಥಾಪಿಸುವದಕ್ಕೆ ಅವರ ಒಪ್ಪಿಗೆ ಇಲ್ಲ!

ಈ ದೊಡ್ಡ ಮೊತ್ತದ ಉದ್ದಿಮೆಗಳು ಸರಕಾರಿ ರಂಗದಲ್ಲಿರಲಿ, ಸಾವಕಾರಿ ರಂಗದಲ್ಲಿರಲಿ ದೊಡ್ಡ ಪಟ್ಟಣಗಳಲ್ಲಿಯೇ, ನಗರಗಳಲ್ಲಿಯೇ ನೆಲಸಿರಬೇಕು. ಹೊರತು ಹಳ್ಳಿಗಳ ನಡುವೆ ಅಲ್ಲ-ಬೇಡ. ಇದು ಈ ಹಿಂದುಳಿದ ನಿಮ್ನ ಶ್ರೇಣಿಯ ಜನರ ಮುಖಂಡರ ಅಂಬೋಣ. ಅವರು ವ್ಯಕ್ತ ಮಾಡುವ ಈ ಪ್ರಾಶಸ್ತ್ಯವು ನಮ್ಮ ಗ್ರಾಮೀಣ ಔದ್ಯಮಿಕ ವಿಕಾಸದ, ಇಲ್ಲೂ ಸರ್ವೋದಯ ಅಭಿವೃದ್ಧಿ ಕ್ರಮಿಕ ಪಾಠಕ್ಕೆ ತೀರ ವಿರುದ್ಧ!

ಈ ಗ್ರಾಮೀಣ ಧುರೀಣರ ನಂಬಿಗೆ ಮತ್ತು ಹೇಳಿಕೆಯೇನೆಂದರೆ, ಔದ್ಯೋಗಿಕರಣವು ್ರಮಾಂತರ ಪ್ರದೇಶಕ್ಕೆ ಬಂದರೂ, ಹಬ್ಬಿದರೂ, ಉಚ್ಚ-ನೀಚ ಜಾತಿಗಳ ತಾರತಮ್ಯ-ವೈಷಮ್ಯಗಳೂ ೊಸ ಉದ್ಯೋಗಾವಕಾಶ ವೃತ್ತಿಗಳೂ ಹಿಂದಿನಂತೆಯೇ ಎಂದಿನಂತೆಯೇ ಒಂದನ್ನೊಂದು ೊಂದಿಕೊಂಡೇ ಉಳಿಯುವವು, ನಿಲ್ಲುವವು. ಹಾಗೆಯೇ ಮುಂದುವರಿಯುವವು. ಏಕೆಂದರೆ ಈ ಹೊಸ ಔದ್ಯೋಗಿಕ ಶ್ರೇಣಿ ವ್ಯವಸ್ಥೆಯು ಹಳೆಯ ಜಾತಿ ವ್ಯವಸ್ಥೆಯ ವೈಷಮ್ಯವನ್ನು ಾಪಾಡಿಕೊಳ್ಳುವ ಸಾಧ್ಯತೆಯೇ ಬಲವಾಗಿದೆ - ಹೊಸ ಕಟ್ಟಡವನ್ನು ನೆಲದ ತಗ್ಗು ದಿನ್ನೆಯ ವಸ್ಥೆಯನ್ನು ಅಳವಡಿಸಿಕೊಂಡೇ ಕಟ್ಟಿ ನಿಲ್ಲಿಸುವಂತೆ. ಈ ಸಾಮಾಜಿಕ ತಾರತಮ್ಯವು ಹಳೆಯ ಳ್ಳಿಯ ಕಸುಬು-ಕೈಗಾರಿಕೆಗಳ ಬದಲು ಹೊಸ ರೂಪಗಳನ್ನು ತಾಳಬಹುದು. ಆದರೂ ಹಳೆಯ ್ಯವಸ್ಥೆಯ ದೋಷಗಳನ್ನೂ ಅನಿಷ್ಟಗಳನ್ನೂ ಕಳೆದುಕೊಳ್ಳದೆ ಅವನ್ನು ಇನ್ನಷ್ಟು ಬಲಿಷ್ಠ ುಳಿಸಬಹುದು.

ಇದಕ್ಕೆ ಒಂದು ನಿದರ್ಶನವೆಂದರೆ, ಸವರ್ಣ (ಉಚ್ಚ) ಹಿಂದುಗಳು ಇಂದಿಗೂ ಸರಕಾರದಲ್ಲಿ ಾಗೂ ಸಾರ್ವಜನಿಕ ಕ್ಷೇತ್ರಗಳಲ್ಲಿ ಮೇಲಧಿಕಾರದ ಸ್ಥಾನಗಳಿಗೆ ಅಸ್ಪೃಶ್ಯರನ್ನು ನೇಮಿಸುವುದನ್ನು ನೇನೂ ಮೆಚ್ಚುವುದಿಲ್ಲ. ಅಂಥ ಹುದ್ದೆಗಳೆಲ್ಲ ಆದಷ್ಟೂ ತಮಗೆ ತಮ್ಮವರಿಗೆ ನಿಗದಿಯಾಗಿರುವಂತೆ, ಮ್ಮ ವರ್ಗದ ಮಂಗಮುಷ್ಟಿಯಲ್ಲಿಯೇ ಭದ್ರವಾಗಿರುವಂತೆಯೇ ಮಹಾಜನರು ಇಷ್ಟಪಡುತ್ತಾರೆ; ುತ್ನ ಪಡುತ್ತಾರೆ.

ಈ ಗ್ರಾಮೀಣ ಮುಖಂಡರ ಈ ಮನವರಿಕೆಯನ್ನು ಸಮರ್ಥಿಸಲು ಅವರು ಕೊಡುವ ನ್ನೊಂದು ದಾಖಲೆ: ಅವರು ಈ ಮೇಲ್ಜಾತಿಯ ಸರಕಾರಿ ಅಧಿಕಾರಿಗಳನ್ನು 'ಸರಕ್ಕಾರದ ಳಿಯಂದಿರು' - ಎಂದು ಜರೆಯುವುದು!

ಇಂದಿಗೂ ಖಾಸಗಿ ಉದ್ದಿಮೆಯ ರಂಗದಲ್ಲಿ ಅಸ್ಪೃಶ್ಯನೊಬ್ಬನು, ಪರಿಶಿಷ್ಟ ಜನಾಂಗದವ ೊಬ್ಬನು ಮ್ಯಾನೇಜರನ ಇಲ್ಲವೆ ಕಂಪನಿ ಕಾರಖಾನೆಯ ಉನ್ನತ ಆಡಳಿತಗಾರನ ಸ್ಥಾನದಲ್ಲಿ ಂಡುಬಂದರೆ ಅದೊಂದು ಅಪರೂಪದ ಹಾಗೂ ಅಪವಾದದ ಘಟನೆ. ಇಂಥ ಒಬ್ಬರನ್ನು ಾಗೆ ಮೇಲ್ಮಟ್ಟಕ್ಕೆ ಸೇರಿಸಿಕೊಂಡಲ್ಲಿ ಆತ ಅಟ್ಟಕ್ಕೇರಿ ಅಟ್ಟಹಾಸದಿಂದ ಕುಲಕ್ಕೆ ಕೇಡು ತರುವಂತೆ ೋಷಕರ ಕೊಡಲಿಗೆ ಕಾವಾಗಿ ಬಿಡುತ್ತಾನೆ. ಸ್ವಜನದ್ವೇಷ ಸ್ವಜನ ದ್ರೋಹ ಅವನ ಪ್ರತಿಷ್ಠೆಯ ಕ್ಷಣವಾಗಿ ಬಿಡುತ್ತದೆ.

ಆದರೆ ಇನ್ನೊಂದು ದೃಷ್ಟಿಯಿಂದ, ಈ ಔದ್ಯೋಗೀಕರಣವು ಒಳ್ಳೆಯ ಪರಿಪಾಠಗಳನ್ನೂ ಷ್ಟಾಚಾರದ ನಡಾವಳಿಗಳನ್ನೂ ವೃದ್ಧಿಗೊಳಿಸಲು ಅನುವು ಮಾಡಿಕೊಡುತ್ತದೆ. ಕೆಲಸಗಾರನ ಲಸಕ್ಕೆ ಸಂಬಳಕ್ಕೆ ಒಂದು ಭದ್ರತೆ, ಸಂರಕ್ಷಣೆಯನ್ನು ಒದಗಿಸುತ್ತದೆ. ಪರಿಶಿಷ್ಟ ವರ್ಗದವರಿಗೂ ೊಸ ಹಕ್ಕುಗಳನ್ನು ಕೊಡುತ್ತದೆ. ಆದರೆ ಹಕ್ಕು ಇರುವುದು, ಊರ್ಜಿತವಾಗುವುದು ಅದನ್ನು ಾರಿಗೊಳಿಸುವುದರಿಂದ. Rights are to be asserted. ಆದರೆ ಶ್ರೇಣಿಬದ್ಧ ಹಾಗೂ ಶ್ರೇಷ್ಠ ಷ್ಠವಾದ ಸಮಾಜದಲ್ಲಿ ಹೀಗೆ Assert ಮಾಡಲಿಕ್ಕೆ ಜಾರಿಗೊಳಿಸಲಿಕ್ಕೆ ಸ್ವಾಭಾವಿಕ ಮತ್ತು ್ಷಯುತ್ತವಾದ ಅವಕಾಶವೆಲ್ಲಿ? ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸರಿಸಮಾನರು, ಸರಿ. ಆದರೆ ್ಯಾಯವಾದಿಗಳ, ನ್ಯಾಯಾಧೀಶರ ಕಣ್ಣಿನಲ್ಲಿ? ಸಾಮಾಜಿಕ ನ್ಯಾಯಕ್ಕೆ ಮಾನವೀಯ ಹಕ್ಕು

ಬಾಧ್ಯಸ್ತಿಕೆಗಳಿಗೆ ಬರುವ ಕುತ್ತೇ ಈ ಕೂಡಲಾರದ ಕಣ್ಣುಗಳ ಕಾಟ-ಕೋನಗಳ ಇಕ್ಕಳದಲ್ಲಿದೆ
ಇರಲಿ.

ಔದ್ಯೋಗಿಕ ಅಭಿವೃದ್ಧಿಯ ವಿಕಾಸ ವಿಕೇಂದ್ರಿಕರಣ ಒಟ್ಟಾರೆ ಆರ್ಥಿಕ ಕಲ್ಯಾಣವನ್ನು
ತರುತ್ತದೆ- ಎಂಬ ಮಾತನ್ನು ಈ ಹಿಂದುಳಿದ ಜನರ ಮುಖಂಡರೂ ಒಪ್ಪಿಕೊಳ್ಳುತ್ತಾರೆ.

ಈ ಸುಪರಿಣಾಮದಿಂದಾಗಿ ಆ ವರ್ಗಗಳಲ್ಲಿ ಆತ್ಮವಿಶ್ವಾಸ ಮೊಳೆಯುತ್ತದೆ. ಅದರೊಂದಿಗೆ
ತಮ್ಮ ಹಾಗೂ ಸವರ್ಣ ಹಿಂದುಗಳ ನಡುವಿನ ಕಂದಕವನ್ನು ದಾಟಲು ಸಂಕ ಕಟ್ಟಬಹುದೆಂಬ
ಭರವಸೆಯೂ ಬೆಳೆಯುತ್ತದೆ. ಆದಾಗ್ಯೂ ಉಚ್ಚ ನೀಚತೆಗಳ ಪಿರಾಮಿಡ್ಡಿನಂತಹ ಸೋಪಾನವೇರಿ
ಮತ್ತು ಜಾತಿ-ಜಾತಿಗಳ ನಡುವೆ ನಿಂತ ಚಿಕ್ಕ ದೊಡ್ಡ ಗೋಡೆಗಳು- ರವೀಂದ್ರನಾಥರು ಕಳವಳದಿಂದ
ಬಣ್ಣಿಸಿದ "narrow domestic walls"- ಉಳಿದೇ ಬಿಡುತ್ತವೆ. ಅಲ್ಲದೆ ಅವುಗಳಿಗೇ ಹೊಸ
ಸುಣ್ಣ ಬಣ್ಣ ಬಳಿಯಲಾಗುತ್ತದೆ. ಆಯಾ ಜಾತಿಯ ಹೊಸ ಸಂಸ್ಕಾರದ ಮುಂದಾಳುಗಳು ಪ್ರತ್ಯೇಕತೆ
ಪ್ರತಿಷ್ಠೆಯ ಮುಖಮಂಟಪ ಜೋಡಿಸಿ ತಮ್ಮ ಜನರ ಜಾಗೃತಿಯ ಹೆಸರಿನಲ್ಲಿ ಬೇರೆ ಬೇರೆ
ಸಾಮಾಜಿಕ ಸಂಘಗಳನ್ನು ಸಂಘಟಿಸುತ್ತಾರೆ.

ಒಂದು ಕಾರಖಾನೆಯಲ್ಲಿ ಬೇರೆ ಬೇರೆ ಜಾತಿಯ ಮಂದಿ ಒಂದೆಡೆಗೆ ಕೆಲಸ ಮಾಡಲು
ಬಹುಕಾಲ ಬಹು ವಿಧವಾಗಿ ಕೂಡುತ್ತಾರೆ. ಒಡನಾಡುತ್ತಾರೆ. ಆದರೆ ಹಾಗೆಂದ ಮಾತ್ರಕ್ಕೆ ಇಂದಿಗೂ
ಅವರ ನಡುವಿನ ಜಾತಿ ವೈಷಮ್ಯದ ಅಡೆತಡೆ ಕಟ್ಟುಪಾಡುಗಳು ಅನಿವಾರ್ಯವಾಗಿ ಸಡಿಲಾಗುವು
ದಾಗಲಿ, ದೂರವಾಗುವುದಾಗಲಿ ಅಷ್ಟೊಂದು ಪ್ರಮಾಣದಲ್ಲಿ ಕಂಡು ಬರುವುದಿಲ್ಲ.

ಇಂದಿಗೂ ಅಸ್ಪೃಶ್ಯ ವರ್ಗದ ಜನರನ್ನು ಬಟ್ಟೆ ಗಿರಣಿಗಳಲ್ಲಿ ಕೆಲವೊಂದು ವಿಭಾಗಗಳಲ್ಲಿ
ನೇಮಿಸಿಕೊಳ್ಳುವುದಿಲ್ಲ. ಏಕೆಂದರೆ, ಇತರ ಸವರ್ಣ ಹಿಂದೂ ಕೆಲಸಗಾರರು ಈ ಬಡಪಾಯಿಗಳಿಂದ
'ಮೈಲಿಗೆ' ಆಗುವುದೆಂದು ದೂರಿಕೊಳ್ಳುತ್ತಾರೆ!

ಅಂದಾಗ ಗ್ರಾಮಾಂತರ ಪ್ರದೇಶದಲ್ಲಿ ಔದ್ಯೋಗಿಕರಣದ ಪ್ರಸಾರವಾದರೂ ಮೇಲ್ಜಾತಿಯ
ಯಜಮಾನಗಾರಿಕೆಯ ಅತ್ತೇತನ ಮತ್ತು ಅನೇಕ ಕಡೆಗೆ ಅನೇಕ ಬಗೆಯ ದಬ್ಬಾಳಿಕೆ ಪರಿಶಿಷ್ಟ
ಹಾಗೂ ನಿಕೃಷ್ಟ ಜನರ ಮೇಲೆ ಎಂದಿನಂತೆಯೇ ಮುಂದರಿಯುವ ಭಯ ಇಂದಿಗೂ ಭದ್ರವಾಗಿವೆ.
ನಗರಗಳಲ್ಲಿ ಕೂಡ ಖಾಸಗೀರಂಗದ ಉದ್ದಿಮೆಗಳು ಈವರೆಗೆ ಸಾಮಾಜಿಕ ಬದಲಾವಣೆ ಹಾಗೂ
ಸಮನ್ವಯ (ಭಾವೈಕ್ಯ)ಗಳ ಕುರಿತು ವಿಶೇಷ ಒಲವು ತೋರಿಸಿದ್ದು ಕಡಿಮೆಯೇ. ಅಂದಾಗ ಈ
ಉದ್ದಿಮೆಗಳ ಪ್ರಸ್ಥ ಹಳ್ಳಿಗಳಿಗೆ ಬಂದಾಕ್ಷಣಕ್ಕೆ ಅವರ ಈ ಚಾಳಿ ಹೇಗೆ ಬಿಟ್ಟುಹೋಗಬಲ್ಲುದು
ಹೆಚ್ಚೆಂದರೆ ಈ ಒತ್ತಡಗಳ ರೂಪ-ರೀತಿಗಳು ಬದಲಾಗಬಹುದು. ಆದರೆ ಅಂಥ ಬದಲಾವಣೆ
ದಲಿತರಿಗೆ ಉಪಕಾರಿಯಾಗಬಹುದೆಂಬ ನೇಮವಿಲ್ಲ.

ಇನ್ನು ಗಾಂಧೀಜಿಯವರ ಅಚ್ಚುಮೆಚ್ಚಿನ ಗ್ರಾಮೋದ್ಯೋಗ ಗೃಹೋದ್ಯೋಗಗಳಂಥ ಸಣ್ಣ
ಪ್ರಮಾಣದ ಉದ್ದಿಮೆಗಳ ಪ್ರಸಾರದಿಂದ ಅಸ್ಪೃಶ್ಯತೆ ಹಾಗೂ ಅಸ್ಪೃಶ್ಯರ ಹಿಂದುಳಿವು ತೊಲ
ಬಹುದು- ಎಂಬ ಅಭಿಪ್ರಾಯವನ್ನು ಈ ಪರಿಶಿಷ್ಟ ವರ್ಗದ ಶಿಷ್ಯರು ಒಪ್ಪುವುದಿಲ್ಲ. ಈ ಕುರಿತು
ಅವರು ಶಾಶಂಕರಾಗಿಯೇ ನೋಡುತ್ತಾರೆ. ಆದಗ್ಯೂ ಗ್ರಾಮಾಂತರಗಳಲ್ಲಿ ದೊಡ್ಡ ಉದ್ದಿಮೆಗಳಿಗಿಂ
ಈ ಚಿಕ್ಕ ಉದ್ದಿಮೆಗಳ ಸ್ಥಾಪನೆ-ಯೋಜನೆಗಳಿಗೆ ಅವರ ವಿರೋಧ ಕಡಿಮೆ.

ಈ ಉದ್ದಿಮೆಗಳ ಯಂತ್ರ ಪ್ರಸ್ಥ-ವ್ಯವಸ್ಥಾಪನೆಗಳಿಗೂ ಜಾತಿವೈಷಮ್ಯಕ್ಕೂ ನಿಜವಾಗಿ ಯಾವ ಸಂಬಂಧವೂ ಇಲ್ಲ. ಆದರೆ ಇಂಥ ಉದ್ದಿಮೆ ಸಂಸ್ಥೆಗಳೇ ಸಣ್ಣವು. ಅಂದಾಗ ಅವುಗಳಲ್ಲಿ ಕೆಲಸಕ್ಕೆ ಹಚ್ಚುವ ಮಂದಿಯ ಸಂಖ್ಯೆಯೂ ಸಣ್ಣದು. ಆಗ ಸಂಸ್ಥೆಯ ಒಡೆಯರು ತಮ್ಮ ಬಂಧು ಬಳಗ ಅಥವಾ ಜಾತಿಯ ಜನವನ್ನೇ - ತಮ್ಮ ವಿಶೇಷ ವಿಶ್ವಾಸದ ಜನವೆಂದು - ಅಲ್ಲಿ ಕೆಲಸಕ್ಕೆ ಸೇರಿಸಿಕೊಳ್ಳುತ್ತಾರೆ. ಕೆಲಸಲ ತಮ್ಮ ಈ ಆಪ್ತೇಷ್ಟರ ಅನುಕೂಲಕ್ಕಾಗಿಯೇ ಅವರು ತಮ್ಮ ಉದ್ದಿಮೆಯ ವಿಸ್ತರಣೆ ವಿಕೇಂದ್ರಿಕರಣ ಮಾಡುವುದೂ ಉಂಟು. ಇಂಥ ಏರ್ಪಾಟುಗಳಲ್ಲಿ ಅವರಿಗೆ ಸಾಮಾಜಿಕ ನ್ಯಾಯದ ವಿಚಾರಗಳು ಕಾಡುವುದಿಲ್ಲ. ಉಳ್ಳವರು ಇಲ್ಲದವರ ಹಿತೈಷಿಗಳಾದ ವಿಶ್ವಸ್ಥರು- ಎಂಬ ಗಾಂಧೀವಾದಿ 'ಟ್ರಸ್ಟಿಶಿಪ್' ತತ್ವವನ್ನೂ ಅವರು ಅರಿಯರು! ಆದ್ದರಿಂದ ಇಂಥ ಔದ್ಯಮಿಕ ವಿಕೇಂದ್ರೀಕರಣ ಇಲ್ಲವೆ ಗ್ರಾಮಾಂತರಗಳಲ್ಲಿ ಸಣ್ಣ ಉದ್ದಿಮೆಗಳ ವಿಸ್ತರಣೆ ಸಾಮಾಜಿಕ ವೈಷಮ್ಯದ ಹಾಗೂ ತಾರತಮ್ಯದ ಉಚ್ಚಾಟನೆಗೆ ವಿಶೇಷ ಸಹಾಯಕವಾಗುವುದಿಲ್ಲ.

ಆದ್ದರಿಂದಲೋ ಏನೋ ನಗರಗಳಲ್ಲಿಯ ಸಾರ್ವಜನಿಕ ರಂಗದ ಉದ್ದಿಮೆ ಸಂಸ್ಥೆಗಳಲ್ಲಿ ಕೆಲಸಕ್ಕೆ ಸೇರಿಕೊಳ್ಳುವುದರ ಕಡೆಗೇ ಈ ಪರಿಶಿಷ್ಟ ವರ್ಗದವರ ಒಲವು ಹೆಚ್ಚು. ಏಕೆಂದರೆ, ಅಂಥ ಸಂಸ್ಥೆಗಳಲ್ಲಿ ಕೆಲಸದ ವಾತಾವರಣ ವೈಯಕ್ತಿಕತೆಯನ್ನು ಮೀರಿ ಸರ್ವಸಾಧಾರಣವಾಗಿ ಸಾರ್ವಜನಿಕವಾಗಿರುತ್ತದೆ. ಅಲ್ಲಿ ಅವರ ತಕರಾರುಗಳಿಗೆ, ಒಟ್ಟಾಗಿ ಹೋರಾಡಿದರೆ ಕರಾರುಗಳಿಗೂ - ಪರಿಹಾರ ಸಿಗುವ ಶಕ್ಯತೆ ಹೆಚ್ಚು. ಕೆಲಸದ ನೇಮಕ, ಅದರ ಕಾಯಂ ಆಗುವಿಕೆ, ಅದರಲ್ಲಿ ಸಂಬಳದ ಹೆಚ್ಚಳ- ಇತ್ಯಾದಿಗಳ ಸ್ಥಿತಿಗತಿಗಳು ಅಲ್ಲಿ ಹೆಚ್ಚು ಅನುಕೂಲ, ಸುಸೂತ್ರ. ಒಡೆಯರ ಸಾಹುಕಾರರ ಮರ್ಜಿ ಮುತುವರ್ಜಿಗಾಗಿ ಬಾಯಿ ಕಳೆದು ಬಾಲ ಬಡಿಯಬೇಕಾಗಿ ಇಲ್ಲ.

ಒಟ್ಟಾರೆ ಇಂಥ ಸಾರ್ವಜನಿಕ ರಂಗದ ಉದ್ದಿಮೆಗಳ ಪರಿಸರದಲ್ಲಿ ಅಸ್ಪೃಶ್ಯ ಕೆಲಸಗಾರನು ಒಂದು ಜಾತೀಯ ಕಟ್ಟುಬಸ್ತನ್ನು ಮೀರಿದ ಬಿಡುಗಡೆಯ ಭಾವನೆಯಲ್ಲಿ ಉಸಿರಾಡುತ್ತಾನೆ. ಅಲ್ಲದೆ ಅಂಥ ವಿಶಾಲವಾದ ಜನನಿಬಿಡವಾದ ಸಂಭ್ರಮದ ನಗರ ಜೀವನದಲ್ಲಿ ಆತ ತನ್ನ ಜಾತಿಯ ಇತಿಮಿತಿಗಳನ್ನು ಮರೆಯುವುದೂ ಇತರರೊಂದಿಗೆ ಒಂದು ಮಾನವ್ಯದ ಮನ್ನಣೆಯಲ್ಲಿ ಬೆರೆಯುವುದೂ ಸುಲಭ. ಇದು ಗ್ರಾಮೀಣ ಪರಿಸರದಲ್ಲಿ - ಎಷ್ಟೋ ಔದ್ಯೋಗಿಕ ವಾತಾವರಣ ಬಂದರೂ ಸಹಸಾ ಶಕ್ಯವಿಲ್ಲ.

ಈ ಬಿಡುಗಡೆಯ ಭಾವನೆ, ಆತ್ಮವಿಶ್ವಾಸ ಆತ್ಮಗೌರವದಿಂದ ಎದೆಸೆಟೆದು ಸರ್ವರೊಡನೆ ಸರಿಕನಾಗಿ ನಿಲ್ಲಬಹುದೆಂಬ ಭರವಸೆ, ಶ್ರೇಣಿಬದ್ಧ ಸಮಾಜದ ಜಾತೀಯ ಜಾಲದ ಉಸಿರುಗಟ್ಟುವ ಹಾಗೂ ಹಲವು ಹಂತಗಳಲ್ಲಿ ಪತ್ತುಗೆಡಿಸುವ ಕಟ್ಟುಗಳನ್ನು ಮರೆಯಿಸುವ ನಾಗರಿಕತೆಯ ಆಧುನಿಕತೆಯ ಒಂದು ಲೌಕಿಕ ಸ್ವಾಸ್ಥ್ಯದ ಅಲೌಕಿಕ ಪ್ರಜ್ಞೆ ನಮ್ಮ ಹರಿಜನ-ಗಿರಿಜನ - 'ಗರೀಬ' ಜನರಿಗೆ ಗ್ರಾಮೀಣ ಔದ್ಯೋಗಿಕರಣ, ವಿಕೇಂದ್ರಿಕರಣದಿಂದ ಸಾಧ್ಯವಿಲ್ಲವೆಂಬುದೇ ಈ ವರ್ಗಗಳ ವಿಚಾರವಂತರ ಒಟ್ಟಾಭಿಪ್ರಾಯ.

●

(ಉದಯವಾಣಿ ೧೯೮೨)

# ಕೊಂಕಣಿಯ ಮೇಲೆ ಕನ್ನಡದ ಪ್ರಭಾವ

೧೯೬೧ರ ದೀಪಾವಳಿ ರಜೆಯಲ್ಲಿ ನಾನು ಮುಂಬಯಿಗೆ ಹೋಗಿದ್ದೆ. ಅದೇ ಈ ಬೋರೇಗೌಡನ ಪ್ರಪ್ರಥಮ ಭೆಟ್ಟಿ- ಆ ಮಹಾ ನಗರಕ್ಕೆ (ಎರಡನೆಯ ಭೆಟ್ಟಿ ಈ ವರೆಗೂ ಕೂಡಿ ಬಂದಿಲ್ಲ ಆ ಮಾತು ಬೇರೆ!) ಅಂದು ನಾನು ಮುಂಬಯಿಯ ಆಕಾಶವಾಣಿಗೆ ಹೋಗಿದ್ದೆ. ನನ್ನ ಹಳೆಯ ಮಿತ್ರ ಧಾರವಾಡ ಆಕಾಶವಾಣಿಯಲ್ಲಿ ಸುಪರಿಚಿತರಾಗಿದ್ದ ಪ್ರಿಯ ಶ್ರೀ ಯಂ. ಶಂಕರರನ್ನು ಕಾಣಲು. ಆಗ ಅವರು ನನಗೆ ಒಂದು ಭಾಷಣ ತಯಾರಿಸಿ ಕೊಂಡು ಬರಲು ಕೇಳಿ ಕೊಂಡರು -"ಕೊಂಕಣಿಯ ಮೇಲೆ ಕನ್ನಡದ ಪ್ರಭಾವ" ನಾನು ಒಪ್ಪಿಕೊಂಡೆ. ಆದರೆ ಆಮೇಲೆ ಕೆಲವು ದಿನಗಳಲ್ಲಿ ಊರಿಗೆ ಹಿಂದಿರುಗಿದೆ. ನಡುವೆ ರಿಕಾರ್ಡಿಂಗಿಗೆ ಮತ್ತೆ ಬಾನುಲಿ ಕೇಂದ್ರಕ್ಕೆ ಹೋಗಲು ಆಗಲೇ ಇಲ್ಲ.

ಅಂದು ಮುಂಬಯಿ ಕನ್ನಡಿಗರಿಗೂ, ಆಕಾಶವಾಣಿಯ ಮೂಲಕ ಹೊರಗಿನ ಕರ್ನಾಟಕಸ್ಥರಿಗೂ ಕೇಳಿಸಲು ತಪ್ಪಿದ ಆ ಉಪನ್ಯಾಸವನ್ನು, ಸಲ್ಲಿಸಬೇಕಿದ್ದ ಆ ಋಣವನ್ನು ಈಗ ಹೀಗೆ ಬರೆದು ಪೂರೈಸುತ್ತಿದ್ದೇನೆ.

ಕೊಂಕಣಿಯ ಮೇಲೆ ಕನ್ನಡದ ಪ್ರಭಾವವನ್ನು ವರ್ಣಿಸುವಾಗ ನಾವು ಒಪ್ಪಿಕೊಳ್ಳಬೇಕಾದ ಒಂದೆರಡು ಅಂಶಗಳಿವೆ. ಒಂದೆಂದರೆ, ಹಿಂದೊಂದು ಕಾಲದಲ್ಲಿ ಕೊಂಕಣಿ ಆಡುವ ಜನ ಕನ್ನಡ ಸೀಮೆಯಲ್ಲಿ, ಕನ್ನಡದ ವಾತಾವರಣದಲ್ಲಿ ಸಾಕಷ್ಟು ಕಾಲ ಇದ್ದರು. ಇನ್ನೊಂದೆಂದರೆ ಅಲ್ಲಿಂದ ಈ ಜನ ಪಶ್ಚಿಮ ಕರಾವಳಿಗುಂಟ ಕೇರಳ ಕೊಚ್ಚಿಯವರೆಗೆ ಹೋಗಿ ನೆಲಸಿದರೂ ಅವರಲ್ಲಿಯ ಒಂದು ಗಣ್ಯವಾದ ಗುಂಪು ಕನ್ನಡ ಪರಿಸರದಲ್ಲಿಯೇ ತಳವೂರಿತು. ಅಂದರೆ ಗೋವೆಯಲ್ಲಿ ಕನ್ನಡ ರಾಜ್ಯವಿತ್ತು. ಆ ಮೇಲೆ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ಆ ಹೆಸರಿಗೆ ತಕ್ಕಂತೆ ಕನ್ನಡದ ಹವೆಯಲ್ಲಿಯೆ ನಾವು ಕೊಂಕಣಿಗರು ಉಸಿರಾಡಿಸಿದೆವು-ಆಡಿಸುತ್ತ ಬಂದಿದ್ದೇವೆ.

ನನಗೆ ತಿಳಿದಂತೆ ಮೊತ್ತ ಮೊದಲಿನ ಕೊಂಕಣಿ ಭಾಷೆಯ ವ್ಯಾಕರಣವನ್ನು ಗೋವೆಯಲ್ಲಿ ಪೋರ್ತುಗೀಸರ ಆಳಿಕೆಯ ಆರಂಭ ಕಾಲದಲ್ಲಿ ಫಾದರ್ ಸ್ಟೀಫನ್ಸ್ ಬರೆದರು. ಆ ವ್ಯಾಕರಣದಲ್ಲಿ ಅವರು ಕೊಂಕಣಿಯನ್ನು ಕರೆದದ್ದೇ "Lingua Kanarese" (ಕ್ಯಾನರಾದ ಭಾಷೆ) ಎಂದು! ಎಂದರೆ ಆ ಪರಕೀಯನ ಫರಂಗೀ ಕಣ್ಣಿಗೂ ಅಂದಿನ ಕೊಂಕಣಿಗರು ಅಂದಿನ ಅವರ ಪ್ರದೇಶದ ಜನರೊಂದಿಗೆ, ಆ ಜನಪದದ ಬದುಕಿನೊಂದಿಗೆ ಅಷ್ಟೊಂದು ಹೊಂದಿಕೊಂಡು ಎರಕವಾಗಿರುವುದು ಕಂಡು ಬಂದಿರಬೇಕು. ಆತ ಈ ಕೊಂಕಣಿ ಜನರನ್ನು ಸುತ್ತಲಿನ ಕನ್ನಡ ಜನರಿಂದ ಬೇರೆಯಾಗಿ ಕಾಣಲಾರದೇ ಹೋದ. ಸ್ಟೀಫನ್ಸ್‌ನ ಈ ಸೋಲು ಅಂದಿನ ಕೊಂಕಣಿಗರ ಗೆಲುವು. ಕೊಂಕಣಿ ಭಾಷೆ ಕನ್ನಡಿಗರ ಭಾಷೆ, ಅಥವಾ ಕನ್ನಡ ಸೀಮೆಯ ಭಾಷೆ ಅನಿಸುವ ಮಟ್ಟಿಗೆ ತದ್ದೇಶೀಯತೆಯೊಂದಿಗೆ ತಾದಾತ್ಮ್ಯಗೊಂಡಿತ್ತು.

ಮುಂದೆ ಕೊಂಕಣಿಯು ತನ್ನ ಮೂಲದ ಶುದ್ಧತೆಯಲ್ಲಿ ಬಾಯ್ನುಡಿಯಾದರೂ ಅಚ್ಚಳಿಯದ

ಜೊಕ್ಕ ನಾಮರೂಪ ಕ್ರಿಯಾಪದ ಪ್ರಯೋಗ ವ್ಯಾಕೃತಿಗಳ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಸಾರೋದ್ಧಾರವಾಗಿ ಬದುಕಿ ಬಾಳಿ ಬಂದದ್ದು ಕನ್ನಡ ಕರಾವಳಿಯಲ್ಲಿಯೆ. ಕೊಂಕಣಿಗೆ ಸಾಮಿಪ್ಯವಿದ್ದ ಮೂಲದ ಮರಾಠಿಯ ಸೀಮೆಯಲ್ಲಿ ಅದರ ಸಂಸರ್ಗದಿಂದ ಅಲ್ಲಿಗೆ ಹೋಗಿ ನೆಲಸಿದ್ದ ಕೊಂಕಣಿಗರು ತಮ್ಮ ಭಾಷಿಕ ಸ್ವತ್ವವನ್ನೂ ಸತ್ವವನ್ನೂ ಕ್ರಮೇಣ ಕಳೆದು ಕೊಂಡರು. ಕೊಂಕಣಸ್ಥರೂ, ದೇಶಸ್ಥರೂ ಸಮರಸರಾದರು. "ಮರಾಠಿ ಅಸೇ ಆಮುಚೀ ಮಾಯ್ ಬೋಲೀ, ತೀಚ್ಯಾ ಏಕ್ ತಾಜಾತ್ ಅಮೀ ಬಸೂ"- ಎಂದು ಕವಿ ಮಾಧವ ಜ್ಯೂಲಿಯನ್ ಹಾಡುವ ಒಂದೇ ಪೈತೃಕ ಋಣದಲ್ಲಿ ಸಹ ಭಾಗಿಗಳಾದರು.

ಆದರೆ ಕೊಂಕಣಿ ಕೊಂಕಣಿಯಾಗಿ ಉಳಿದದ್ದೂ ಬದುಕಿದ್ದೂ ಕನ್ನಡ ಪ್ರದೇಶದಲ್ಲಿಯೇ, ಕನ್ನಡಿಗರ ನಡುವೆಯೇ. ಸಾಕಷ್ಟು ಸಂಖ್ಯೆಯಲ್ಲಿ ಈ ಜನಪದದಲ್ಲಿ ಸುದೀರ್ಘ ಕಾಲ ನೆಲಸಿದರೂ ಈ ಲಿಪಿಯಿಲ್ಲದ ಭಾಷೆ ಕೇವಲ ನಾಲ್ ನುಡಿಯಾಗಿ, ಬಾಯ್ ಬಳಕೆಯಲ್ಲಿಯೇ ಉಳಿದರೂ ಒಂದು ರೀತಿ insulate ಆದಂತೆ ಹೆಚ್ಚು ಕಡಿಮೆ ತನ್ನ ಮೂಲಸ್ವರೂಪದಲ್ಲಿಯೇ ಜೀವಂತ ಉಳಿಯಿತು. ಇನ್ನೂ ಕೊಂಕಣಿಗರಲ್ಲಿ ಕೆಲವು ಕುಟುಂಬಗಳು, ಮೈಸೂರು ಸಂಸ್ಥಾನದಲ್ಲಿ ತೀರ ಒಳ ನಾಡಿನಲ್ಲಿ ಹೋಗಿ ತಳವೂರಿದವು. ಶತಮಾನದೊಳಗೇ ತಮ್ಮ ಬಾಯ್ನುಡಿಯನ್ನು ಕಳೆದುಕೊಂಡು ಕನ್ನಡವನ್ನು ಮನೆಮಾತಾಗಿ ಸ್ವೀಕರಿಸಿ ತಲೆಮಾರುಗಳನ್ನು ಕಳೆದವು. ಇಂದಿಗೂ ಅಂಥ ಮನೆತನಗಳು ಕನ್ನಡವನ್ನು ಕೌಟುಂಬಿಕವಾಗಿಯೂ ಬಳಸುತ್ತಾವೆ.

ಇದಕ್ಕೆ ಪ್ರತಿಯಾಗಿ ಅನೇಕ ಕಸಬು-ಕೈಗಾರಿಕೆ, ವ್ಯಾಪಾರ ವ್ಯವಹಾರಕ್ಕೆ ಸಂಬಂಧಿಸಿದ ಸಮಾಜಗಳು ಕೊಂಕಣಿಯನ್ನು ತಮ್ಮ ಭಾಷೆಯಾಗಿ ಅನೇಕ ತಲೆಮಾರುಗಳಿಂದ ಬಳಸುತ್ತ ಬಂದಿದ್ದರೂ ಅವರ ಕೊಂಕಣಿಯ ಉಚ್ಚಾರ ಸ್ವರಾಘಾತ (accent) ಪರೀಕ್ಷಿಸಿದರೆ ಅವೆಲ್ಲ, ಕನ್ನಡ ಮೂಲದವೆಂದು ತೋರಿಬರುತ್ತದೆ. ಶಾಸ್ತ್ರೀಯವಾಗಿ, ದ್ರಾವಿಡ ಮೂಲವೆನ್ನಬೇಕು. ಆದರೆ ಈ ಕರಾವಳಿಯಲ್ಲಿ ಕನ್ನಡವೇ ದ್ರಾವಿಡ ಭಾಷಾರೂಪ. ಕೊಂಕಣಿ. ವಾಣಿಯರೂ, ಸೊನಗಾರರೂ, ಆಚಾರಿಗಳೂ ಖಾರ್ವಿಗಳೂ ಇನ್ನು 'ನಿಮ್ನ' ಜಾತಿಯವರೂ ಮಾತಾಡುವ ಕೊಂಕಣಿಯ ಧ್ವನಿಪ್ರಸ್ತಾರ, ವಾಗ್ಧೋರಣೆ ಕೆಲವೊಂದು ವ್ಯಂಜನಗಳ ಉಚ್ಚಾರ ಕನ್ನಡ ಬುಡಕಟ್ಟಿನವೆಂದೇ ತಿಳಿಯ ಬೇಕಾಗುತ್ತದೆ. ಇವರಿಗೆ ಚ, ಛ, ಜ, ಝ, ಪ, ಫ ಗಳ ಉಚ್ಚಾರ ಭೇದ ನಾಲಿಗೆಗೆ ನಿಲಕುವುದೇ ಇಲ್ಲ. ನಿಲುಕಿದರೂ ನಿಲ್ಲುವುದಿಲ್ಲ. ಇದಕ್ಕ ಕಾರಣ ಮೂಲತಃ ಅವರ ಅನುವಂಶಿಕ ಬುನಾದಿಯ ಭಾಷೆಯಲ್ಲಿ ಛ, ಝ, ಫ ಈ ಎರಡನೆಯ ಮೃದು ಆಘಾತದ ಉಚ್ಚಾರವೇ ಆಯಾ ವ್ಯಂಜನಕ್ಕೆ ಇದ್ದಿಲ್ಲ. ಕನ್ನಡದಲ್ಲಿ ಇಲ್ಲ.

ಹೀಗೆ ಇಂದಿನ ಕೊಂಕಣಿ ಭಾಷಿಕರಲ್ಲಿ ಕೆಲವು ಸಮಾಜಗಳು ಹಿಂದೆ ಎಂದೋ ತಮ್ಮ ತಾಯ್ನುಡಿಯಾದ ಕನ್ನಡವನ್ನು ಬಿಟ್ಟು ಕೊಂಕಣಿಯನ್ನು ಅಂಗೀ(ಅಂಗ್ರಿ?) ಕರಿಸಿದುವು. ಆ ಮೂಲಕ ಅವರ ಕೊಂಕಣಿಯ ರೂಪದಲ್ಲಿ ಕನ್ನಡದ ಕೆಲವೊಂದು ಚರ್ಯೆ, ಮುದ್ರೆ ಇನ್ನೂ ಉಳಿದದ್ದು ಕಂಡು ಬರುತ್ತದೆ. ನಮ್ಮಲ್ಲಿ ಎಷ್ಟೋ ಕೊಂಕಣಿ 'ರಾಯರು' ಹಳ್ಳಿಗಳಲ್ಲಿ ಕನ್ನಡ ರೈತರೊಂದಿಗೆ ಕನ್ನಡ ಮಾತಾಡುತ್ತಾರೆ. ಅವರ ನುಡಿಗಟ್ಟು ಶುದ್ಧ ಕನ್ನಡವೇ ಇದ್ದಾಗಲೂ ಅವರ ಉಚ್ಚಾರಣೆ

ಧ್ವನಿಪ್ರಸ್ತಾರ ಕೊಂಕಣಿಯೇ ಆಗಿರುತ್ತದೆ!

ಕೊಂಕಣಿ ಕೈಬಿಟ್ಟು ಕನ್ನಡವನ್ನು ಸ್ವೀಕರಿಸಿದ ಹಾಗೂ ಕನ್ನಡ ಬಿಟ್ಟು ಕೊಟ್ಟು ಕೊಂಕಣಿಯನ್ನು ಅಂಗೀಕರಿಸಿದ ಗುಂಪುಗಳ ಇವೆರಡರ ಅತ್ಯಂತಿಕ ಉದಾಹರಣೆಗಳನ್ನು ಬದಿಗಿರಿಸಿ, ಸ್ಥೂಲವಾಗಿ ನಮ್ಮ ಕರಾವಳಿಯ ಕೊಂಕಣಿಗರು ಆಡುವ ಕೊಂಕಣಿಯ ಮೇಲಿನ ಕೆಲವೊಂದು ಕನ್ನಡ ಪ್ರಭಾವಗಳನ್ನು ಗುರುತಿಸೋಣ.

ಸಾಮಾನ್ಯವಾಗಿ ಕೊಂಕಣಿಯಲ್ಲಿ ನಾಮಪದಗಳ ಮತ್ತು ಅವನ್ನು ಹೊಂದಿಕೊಂಡ ವಿಶೇಷಣಗಳ ಪ್ರಥಮಾ ವಿಭಕ್ತಿಯ ರೂಪಗಳು ಕನ್ನಡದ+ಉಕಾರಾಂತವಾಗಿರುತ್ತವೆ. 'ರಾಮು', 'ಹಾಂವು', 'ನಾನು', 'ಹೋಡು', 'ದೇವು', ಇತ್ಯಾದಿ ಇತ್ಯಾದಿ. ಆದರೆ ಈ+ಉಪ್ರತ್ಯಯಗಳು ಕೊಂಕಣಿಯಲ್ಲಿ ಅಕಾರಾಂತ ಶಬ್ದಗಳಿಗೆ ಅದೂ ಏಕವಚನದಲ್ಲಿಯೇ ಬರುತ್ತದೆ. ಕನ್ನಡದಲ್ಲಿ 'ದೇವ+ನ' / 'ದೇವನು+ರು' ದೇವನ್+ಉ(ದೇವರ್+ಉ) ತಾಯಿ+ಯು, 'ತಂಗಿಯ+ರು' ಹೀಗೆ ಕೊನೆಯ ಉ, 'ಮಣ್ಣು 'ಕಲ್ಲುಗಳು'-ಹೀಗೆ ಎಲ್ಲ ಲಿಂಗಗಳಲ್ಲಿಯೂ, ಉಭಯ ವಚನಗಳಲ್ಲಿಯೂ ನಾಮರೂಪಗಳಿಗೆ ಅಂಟಿಕೊಳ್ಳುತ್ತದೆ. ಕೊಂಕಣಿಯಲ್ಲಿ ಮಾತ್ರ ಹಾಗಿಲ್ಲ. ಹಳೆಯ ಮರಾಠಿಯಲ್ಲೂ ಈ ಉಚ್ಚಾರದ ಉಧಾಹರಣೆಗಳು ತುಂಬ ಸಿಗುತ್ತವೆ. ಜ್ಞಾನೇಶ್ವರಿ, ಏಕನಾಥೀ ಭಾಗವತ ಓದಿದರೆ ಗೊತ್ತಾಗುತ್ತದೆ (ಅವರ ಮರಾಠಿ ಕೊಂಕಣಿಗೆ ಹೆಚ್ಚು ಹತ್ತಿರವಿತ್ತು. ಏಕನಾಥರು ಕನ್ನಡದಲ್ಲಿಯೂ ಕೃತಿ ರಚನೆ ಮಾಡಿದ್ದರು.)

ಇನ್ನು ಕೆಲವೊಂದು ಬೆಳವಲದ ಕೌಟುಂಬಿಕ ಹಾಗೂ ಇತರ ಕನ್ನಡ ಶಬ್ದಗಳು ತುಸು ವಿಕಾರಗೊಂಡು ಕೊಂಕಣಿಯಾಗಿ ಬಿಟ್ಟಿವೆ. 'ನಾನು' (ನಣ್ಣ) 'ಆನು' (ಅಣ್ಣ) 'ಆಕ್ಕು' (ಅಕ್ಕ) 'ಅಮ್ಮ (ಆಮ) ಅಕ್ಕೈ ಆಕ್ರ. ಸೋಜಿಗವೆಂದರೆ ಅಣ್ಣ ಅಕ್ಕ ಕೊಂಕಣಿಗೆ ಸೇರಿದರೂ ತಮ್ಮ ತಂಗಿ ಸೇರಲಿಲ್ಲ. ಅಲ್ಲದೆ 'ಅಣ್ಣ' ಆನು ಎಂದು ವಿಕಾರಗೊಂಡು, ತಂದೆಯಾಗಿ ಬಿಟ್ಟಿವಾನೆ! ಆದರೂ 'ತಮ್ಮಣ್ಣ' ಒಂದು ಹೆಸರಾಗಿ ಕೊಂಕಣಿಯಲ್ಲಿ ರೂಢವಾಗಿದೆ. ತಾಯಿ ಮರಾಠಿಯಂತೆ ಕೊಂಕಣಿಯಲ್ಲಿ ಅಕ್ಕನೆಂಬ ಅರ್ಥದಲ್ಲಿ ಬಂದು ಬಿಟ್ಟಿದ್ದಾಳೆ.

ಪ್ರತ್ಯಯಗಳಲ್ಲಿ+ಕಡೆ(ಗೆ) ಕೊಂಕಣಿಯಲ್ಲಿರುವ ಪ್ರಯುಕ್ತ ಮರಾಠಿಯಲ್ಲಿಯೂ ಇದೆ. ಇದು at, towards ಎಂಬ ಅರ್ಥ ಕೊಡುತ್ತದೆ. ಅರ್ಥಾತ್ ಕನ್ನಡ ಸೀಮೆಗೆ ಬರುವ ಪೂರ್ವದಲ್ಲಿಯೇ ಮರಾಠಿಯೊಂದಿಗೆ ಇರುವಾಗಲೇ ಮೂಲತಃ ಈ ಪ್ರತ್ಯಯ ಸೇರಿರಬೇಕು. ಆದರೆ ಕಡೆಗೆ (ಕೊನೆಗೆ; ನಂತರ) ಎಂಬ ಅರ್ಥದಲ್ಲಿ ಕೊಂಕಣಿಯಲ್ಲಿ ಕಡೇರ್ ಬಂದದ್ದೂ ನಂತರವೇ ಆಗಿರಬೇಕು. ಕೆಳಗೆ ಎಂಬ ಅರ್ಥದಲ್ಲಿ 'ತಗ್ಗೂ' ಹೇಗೋ ಬಳಕೆಯಲ್ಲಿದೆ. ಇದು ಕನ್ನಡದ 'ತಗ್ಗು' (ಹೊಂಡ) ಎಂಬ ಅರ್ಥ ಕೊಡುವುದಿಲ್ಲ. ಅದಕ್ಕೆ ಪೋಂಡು ಶಬ್ದವಿದ್ದು ಅದು ಹೊಂಡದಿಂದ ಬಂದಿರ ಬೇಕು. ಇಲ್ಲವೆ ದೂರಾನ್ವಯವಾಗಿ ತೋರಿದರೂ ಲ್ಯಾಟಿನ್ fundus (bottom)ಪೋರ್ತುಗೀಸ್ (ಲ್ಯಾಟಿನೋತ್ಪನ್ನ) ಭಾಷೆಯಿಂದ ಕೊಂಡದ್ದಿರಬೇಕು. ನಮ್ಮ 'ಬೆಗ್ಗಿ'ಯೂ ಕನ್ನಡ 'ಬೇಗದ ರೂಪ (ಇವೆರಡಕ್ಕೂ ಸಂಸ್ಕೃತ ತತ್ಸಮ 'ವೇಗ' ಮೂಲವಿರಬಹುದು) 'ಹಗೂರ'ವೂ 'ಹಗುರ'ದಿಂದ ಬಂದದ್ದು ತುಸು ಅರ್ಥ ಛಾಯೆ ಬೇರೆಯಾಗಿ.

ಇನ್ನು ಕನ್ನಡದ ಮುಖ್ಯ ಸಹಾಯ ಕ್ರಿಯಾ ಪದಗಳು ಮರಾಠಿಗೂ ಕೊಂಕಣಿಗೂ ಸರಿಯಾಗಿ ಹೊಂದುತ್ತವೆ. ಹೋಗು, ಬಿಡು, ಕೊಡು (ಮಾಡಿಹೋಗು, ಮಾಡಿಕೊಡು, ಮಾಡಿಬಿಡು.) ಕೊಂಕಣಿಯಲ್ಲಿ ಸಮಾನಾರ್ಥಕ ಧಾತುಗಳಿಂದ ಪರ್ಯಾಯ ಗೊಂಡಿವೆ. (ಮೋರ್ನುಗೆಲ್ಲೊ ತೋರ್ಮು ಸೋಡಿ, ಖಾವ್ನು ಘೇ) ಇಂಥ ಸಂದರ್ಭದಲ್ಲಿ ಕೊಂಕಣಿಯ ವಾಗ್ಧೋರಣೆ (ಮರಾಠಿಯದೂ ಅಹುದು) ಕನ್ನಡವನ್ನು ಹೋಲುತ್ತದೆ.

ಕೊಂಕಣಿಯಲ್ಲಿ ಕೆಲವು ಊನಾಂಗರಿಗೆ ಕನ್ನಡ ಶಬ್ದಗಳೇ ಬಳಕೆಯಲ್ಲಿವೆ: ಕುರುಡೊ ಕುಂಟೊ, ಕೆಪ್ಪೊ. ಮರಾಠಿಯಲ್ಲಿ ಇವು ಬೇರೆ. ಇದೇಕೆ ಹೀಗೆ? ಕನ್ನಡ ಪರಿಸರದಲ್ಲಿಯೇ ಕೊಂಕಣಿಗರು ಇಂಥವರನ್ನು ಮೊದಲು ಕಂಡಿದ್ದರೆ? ಹಾಗೆಯೆ ವಳಕಿ (ಉಳುಕು) ಮುಂಡಿ (ಮುರುಡು) ಕೂಡ! ಹಾಗೆಯೆ 'ಬಗ್ಗು' ಕನ್ನಡ.

ಕೊಂಕಣಿಯಲ್ಲಿ ಕನ್ನಡದ ಎ ಒ ಉಚ್ಚಾರಗಳು ತುಸು flat ಆಗಿ ರೂಢವಾಗಿವೆ. ಭೇಟಿ ಇದು ಭ್ಯಾಟ (ಉಚ್ಚಾರbat ದಲ್ಲಿಯ a ದಂತೆ) ನೋಟ ನಾಟ ಆಗುತ್ತದೆ ಇಲ್ಲಿ. (ಈ ನೋಟ ಶಬ್ದವು ವಿರೋಧ ಅರ್ಥದಿಂದ ಕೊಂಕಣಿಗೆ ಬಂದಿದೆ, ಮಂತ್ರವಾದಿಯ ಭವಿಷ್ಯ ಕಥನವೆಂದು)

ಅದೇ ರೀತಿ ಮದುವೆ, ಧಾರ್ಮಿಕ ವಿಧಿಗಳಲ್ಲಿಯೂ ಕನ್ನಡ ರೂಪಗಳು ಕೊಂಕಣಿಗೆ, ಸೇರಿವೆ. ಸೀಮಂತ ಪೂಜನವನ್ನು 'ಇದಿರುಗಳ' ವಣಿ' ಅನ್ನುತ್ತೇವೆ. ಇದು 'ಇದಿರು ಗೊಳಿಸೋಣ. ಮೆರವಣಿಗೆ ಮೆರವಣಿಕೆಯಿಂದ ಬಂದಿದೆ (ಇದು ಮರಾಠಿಯಲ್ಲಿಯೂ 'ಮಿರವಣೂಕ' ಆಗಿದೆ). ಇದೂ ಅಲ್ಲದೆ 'ಮೆರ್ವ' ಎಂಬ ಧಾತು 'ನಿರುದ್ಯೋಗ ಅಲೇದಾಡು' ಎಂಬ ಅರ್ಥದಲ್ಲಿ ಕೊಂಕಣಿಯಲ್ಲಿ ರೂಢವಾಗಿದೆ. ಕೊಂಕಣಿಯಲ್ಲಿ ಅದೂ ನಮ್ಮ ಚಿತ್ರಾಪೂರ ಸಾರಸ್ವತರಲ್ಲಿ ಮದುವೆಗೆ ಸಂಬಂಧಪಟ್ಟ ಐದು ಮಹತ್ವದ ಶಬ್ದಗಳ ವ್ಯತ್ಪತ್ತಿ ಸಿಗುವುದೇ ಇಲ್ಲ. ಅವು ಹೊರೇತು (ಮದುಮಗ) ಹೊಕ್ಕಲ (ಮದುಮಗಳು) ಹ್ವೋರ (ದಂಪತಿ) ಹೊರಡೀಕ (ಮದುವೆ) ಮತ್ತು ಹೋರಾಣ (ದಿಬ್ಬಣ) ಇವು ನಿಸ್ಸಂಶಯವಾಗಿ ದ್ರಾವಿಡ ಮೂಲದವು. ಹೇಗೆ ಜಗ್ಗಿದರೂ ಸಂಸ್ಕೃತದಿಂದ ತದ್ಭವಿಸುವಂತಿಲ್ಲ. ಆದರೆ ಇವುಗಳ ಕುರಿತು ನಮ್ಮ ಡಾ. ಕತ್ರೆ ಇನ್ನೂ ಬೆಳಕು ಚೆಲ್ಲಿದಂತಿಲ್ಲ. ದಿ. ಡಾ. ಸಾಲೆತೊರೆಯವರನ್ನು ನಾನು ವಿಚಾರಿಸಿದ್ದೆ. ಆದರೆ ಅವರಿಗೂ ಇದು ಒಗ್ಗಲಿಲ್ಲ.

ಕೊಂಕಣಿಯಲ್ಲಿ ಅಸಂತಸ ವ್ರತ ವೆಂಬ ಅರ್ಥದಲ್ಲಿಯೇ 'ಸೋಂಪಿ' ಬಳಕೆಯಲ್ಲಿದೆ. ಕಾಣೇಕ(ಕಾಣಿಕೆ) ಬಿನ್ನಪ, ಹರಕೆ. ಆದರೋದಿಗೆ ತೀರ್ಸೂಂಚೆ (ತೀರಿಸು) ಕೊಂಕಣಿಯಲ್ಲಿ ಬಳಸುತ್ತೇವೆ. ನಮ್ಮಲ್ಲಿ ಒಡ್ಡಿಯೇ ಬಾಡಿ ಆಗಿದೆ.

ಹಾಗೆಯೇ ತಿಂಡಿ ತಿನಿಸು ಮೇಲೋಗರಗಳಲ್ಲಿ ಚಾಕ್ಲಿ, ಕೋಡಬಳೇಂ, ಉಂಡೆ, ಪಾಪ್ಪಡ (ಹಪ್ಪಳ) ಶೆಂವಯ್ಯೊ (ಶ್ಯಾವಿಗೆ) ಚಟ್ನಿ, ಗೊಜ್ಜು ತಾಂಬೊಳಿ (ತಂಬಳಿ=ತಂಪು: + ಹುಳಿ) ಅಂಬಾಟ (ಹುಳಿಯ ಅನುವಾದ) ಸಾಸಮ ಕೋಸಂಬರಿ, ಕಾಯರಸ, ಕೊದೆಲ (ಕುದಿಲು) ಇತ್ಯಾದಿ ಕನ್ನಡ ನಾಲಿಗೆ ಕಲಿಸಿದ ತಿನಿಸು. ತೆಂಗಿನ ಕಾಯಿಗೆ 'ನಾರ್ಲ' ಕೊಂಕಣಿ ಆದರೆ ಸೀಯಾಳೆಂ, (ಸೀಯಾಳ)ಬೊಂಡೊ, ಕನ್ನಡ ಹಾಗೇ ಮಡ್ಡಾಲ ಹ್ಯಾಡಲಾ.

ಜೊಗುರು, ಸವಳು, ಕನ್ನಡ ರುಚಿ. ಕಾಲವೊ, ಕಟ್ಟಿಂ ಬೊಟ್ಟೊ ಕನ್ನಡ, ಗಾದ್ದೆಂ (ಗದ್ದೆ) ತೋಟ, ಹಿತ್ತಲ, ನ್ಯಾಲ (ನೆಲ) ತೆಣ (ತೆಣೆ) ಜಗಲಿ, ಬಾಗಿಲ ವೀರಿ(ಒ)ಮಟ್ಟು, ಅಂಗಣ (ಅಂಗಳ) ಮೇರ (ಮೇರೆ) ಎಲ್ಲ ಕನ್ನಡ (ಮನೆಯ ಒಳಗಿನ ಸಂಬಂಧದ ಶಬ್ದಗಳೆಲ್ಲ ಕೊಂಕಣಿ ಪ್ರಾಕೃತ. ಆದರೆ ಹೊರಗಿನ ಜನ ಸಂಪರ್ಕದ ಶಬ್ದಗಳು ಹೆಚ್ಚಾಗಿ ಕನ್ನಡ) ಕಾಡ್ಡಿ ಬಡ್ಡಿ, ಬ್ಯಾತ, ದೊಣ್ಣೊ, ಮಡ್ಕೆ (ಮಡಕೆ) ನೇಗಿಲು, ಹಾಂಡೊ (ಹಂಡೆ) ನೆಲಗಟ್ಟು, ಮಾಡು ಜಂತಿ-ಇತ್ಯಾದಿ ನೂರು ಗಟ್ಟಲೆ ಶಬ್ದಗಳು ಆಯಾ ಜೀವನ ಕ್ರಮಕ್ಕೆ, ಉದ್ಯೋಗ ವ್ಯವಸಾಯಕ್ಕೆ ಸಂಬಂಧ ಪಟ್ಟವು ಕೊಂಕಣಿಯಲ್ಲಿ ಧಾರಾಳವಾಗಿ ಬಳಕೆಯಲ್ಲಿವೆ.

ಮೇಲೆ ಕೊಟ್ಟ ಉದಾಹರಣೆಗಳು ಕೇವಲ ಮಾದರಿಗಾಗಿ. ಕೂಲಂಕಷ ವಿವೇಚನೆ ಈ ಬರಹದ ಉದ್ದೇಶವಲ್ಲ. ಒಂದು ಭಾಷೆಯ ಪ್ರಭಾವ ಇನ್ನೊಂದು ಭಾಷೆಯ ಮೇಲೆ ಆಗುವದೇನೂ ವಿಶೇಷವಲ್ಲ. ಅದು ಆಯಾ ಭಾಷೆಗಳ ಜೀವಂತಿಕೆಯ ಊರ್ಜಿತ ಲಕ್ಷಣ. ಆದರೆ ಈ ಭಾಷಿಕ ಆದಾನ-ಪ್ರದಾನದ ಹಿಂದೆ ಆ ಮೂಲಕ ವ್ಯಕ್ತವಾಗುವ ಆಯಾ ಭಾಷಿಕರ ಸಂಸ್ಕೃತಿಕ ವೈಶಿಷ್ಟ್ಯಗಳು ಮಾತ್ರವಲ್ಲ ಐತಿಹಾಸಿಕ ಅಂಶಗಳ ಕುರುಹುಗಳೂ ಪಳೆಯುಳಿಕೆ (fossils)ಗಳಂತೆ ಹುದುಗಿರುತ್ತವೆ. ಅವುಗಳ ಪರಿಶೋಧನೆ, ವಿಶ್ಲೇಷಣೆ ಹಾಗೂ ವಿವರಣೆಯಿಂದ ಆಯಾ ಸಮಾಜದ ಜೀವನ ಸನ್ನಿವೇಶವನ್ನು ಅರ್ಥೈಸಿ ಕೊಳ್ಳುವುದರಿಂದಲೇ ಈ ಬಗೆಯ ಪರಿಶೀಲನೆ ಸಾರ್ಥಕವಾಗುವುದು.

●

(ತಾಯಿನುಡಿ ೧೯೮೨)

# ರಬ್ಬರ್ ಸ್ಟಾಂಪೋ? ರಾಷ್ಟ್ರದ ಸೀಲೋ?

ನಮ್ಮ ದೇಶದ ಆಡಳಿತದಲ್ಲಿ ರಾಷ್ಟ್ರಾಧ್ಯಕ್ಷರದು ಸರ್ವೋಚ್ಚ ಸ್ಥಾನ. ಆದರೂ ಅವರ ಅಧಿಕಾರದ ಪ್ರಭಾವದ ವ್ಯಾಪ್ತಿ ಎಷ್ಟು, ರಾಷ್ಟ್ರದ ಶಾಸನ ಶಕಟದ ನಿರ್ವಹಣೆಯಲ್ಲಿ ಅವರ ಪಾತ್ರವೇನು- ಎಂಬುದರ ಬಗೆಗೆ ಈ ತನಕ ಸಾಕಷ್ಟು ಸಾಕಾಗುವಷ್ಟು ಚರ್ಚೆ ವಿಚರ್ಚೆಗಳ ಚರ್ವಿತ ಚರ್ವಣಗಳನ್ನು ನಮ್ಮ ಕಾನೂನು ಪಂಡಿತರೂ, ಸಂವಿಧಾನ ತಜ್ಞರೂ, ವ್ಯಾವಸಾಯಿಕ ರಾಜಕಾರಣಿಗಳೂ, ರಾಜ್ಯಶಾಸ್ತ್ರದ ಪ್ರಾಧ್ಯಾಪಕರುಗಳೂ ಹಲವು ಸಲ ಹಲವು ಹಂತಗಳಲ್ಲಿ ಮಾಡಿ ಮುಗಿಸಿದ್ದಾಗಿದೆ. ಆದಾಗ್ಯೂ ಅದು ಇನ್ನೂ ಅಷ್ಟೇ ಸಂದಿಗ್ಧವಾಗಿ ಹತ್ತು ಅಂಗುಲ ಮೇಲೆಯೇ ಉಳಿದುಬಿಟ್ಟಿದೆ!

ನಮ್ಮ ಪ್ರಪ್ರಥಮ ರಾಷ್ಟ್ರಪತಿ ಡಾ। ರಾಜೇಂದ್ರ ಪ್ರಸಾದರಿಂದ ತೀರ ಈಚೆಯ ಮಾನ್ಯ ಸಂಜೀವ ರೆಡ್ಡಿಯವರ ತನಕವೂ ಆ ಗದ್ದುಗೆ ಏರಿದ ಪ್ರತಿಯೊಬ್ಬ ಶ್ರೇಷ್ಠ ರಾಷ್ಟ್ರ ನಾಯಕರೂ ತಮ್ಮ ಅಧಿಕಾರದ ಕಕ್ಷೆಯಲ್ಲಿ ತಮ್ಮ ಸರಕಾರಗಳು ಹಾಕಿಕೊಟ್ಟ ಚೌಕಟ್ಟಿನೊಳಗೆ ಸ್ವಾಯತ್ತ ಸತ್ತೆಯಿಂದಲೋ, ವೈಯಕ್ತಿಕ ವರ್ಚಸ್ಸಿನಿಂದಲೋ ದೇಶದ ಆಗುಹೋಗುಗಳ ಮೇಲೆ ತಮ್ಮ ಪ್ರಭಾವಮುದ್ರೆಯನ್ನು ಒತ್ತುವುದರಲ್ಲಿ ಎಷ್ಟು ಮಟ್ಟಿಗೆ ಯಶಸ್ವಿಯಾದರು- ಎಂಬುದೊಂದು ಬಲು ಉದ್ಬೋಧಕ ಪರಿಶೀಲನೆಯೇ.

ಆದರೆ ಅದಕ್ಕೂ ಮುಂಚೆ ಈ ಅತ್ಯುನ್ನತ ಪೀಠದ ಸ್ವಾಯತ್ತತೆ ಎಷ್ಟು? ಇದರ ಅಧಿಕಾರ ಕಕ್ಷೆಯ ಇತಿಮಿತಿಗಳೇನು? ಆ ಗದ್ದುಗೆಯನ್ನೇರಿದವರು ತಾನೇ ತಾನಾಗಿ ಏನು ಮಾಡಬಲ್ಲರು? ಎಂಬುದನ್ನು ಮನವರಿಕೆ ಮಾಡಿಕೊಳ್ಳಬೇಕು. ಏಕೆಂದರೆ ಈ ಕುರಿತು ಡಾ। ರಾಜೇಂದ್ರ ಪ್ರಸಾದರಿಗೇ ಕೆಲವೊಂದು ಗಾಢವಾದ ಅನುಮಾನ ಕೊನೆಯ ತನಕವೂ ಉಳಿದೇ ಬಿಟ್ಟಿತ್ತು. ಅದರ ಇತ್ಯರ್ಥವಾಗಿ ಅವರು ಒಂದು ಚರ್ಚೆ ಆಗಲೆಂದು ಘಟನಾತಜ್ಞರಲ್ಲಿ ಅರಿಕೆಯನ್ನೂ ಮಾಡಿಕೊಂಡಿದ್ದರು. ಮತ್ತೆ ರಾಜೇಂದ್ರ ಪ್ರಸಾದರು ಒಬ್ಬ ಹಿರಿಯ ರಾಷ್ಟ್ರೀಯ ನಾಯಕರು ಮಾತ್ರವಲ್ಲ, ನಮ್ಮ ಸಂವಿಧಾನ ರೂಪಿಸಿದ ಮಹಾ ಪರಿಷತ್ತಿಗೆ ಅಧ್ಯಕ್ಷರೂ ಆಗಿದ್ದರು. ಅವರ ಇದುರಿಗೇ ಮೇಲ್ವಿಚಾರಣೆಯಲ್ಲಿಯೇ ಈ ಸಂವಿಧಾನ ರಚನೆಯಾಗಿತ್ತು. ಆದಾಗ್ಯೂ ಅವರಿಗೇ ತಮ್ಮ ಪದಾಧಿಕಾರದ ಇತಿಮಿತಿಯ ಬಗೆಗೆ ಸಂದಿಗ್ಧ ಉಳಿದುಹೋಯಿತು! ಅಂದಾಗ ಈ ಕುರಿತು ನಮ್ಮ ನಿಮ್ಮಂಥ ಅರೆಬರೆ ರಾಜಕೀಯ ತಜ್ಞರ ಹಾಗೂ ಸಂವಿಧಾನಾತ್ಮಕ ವಿಷಯಗಳ ಆಧಿ ವ್ಯಾಧಿಗಳ ಬಗೆಗೆ ಅಳಲೆಕಾಯಿ ಪಾಂಡಿತ್ಯ ಪ್ರದರ್ಶಿಸುವವರ ಪಾಡೇನು?

ಒಂದು ದೃಷ್ಟಿಯಿಂದ 'ರಾಷ್ಟ್ರಾಧ್ಯಕ್ಷ' ನೆಂಬ ಈ ಪರಿಕಲ್ಪನೆಯೇ ನಮ್ಮ ಭಾರತೀಯ ರಾಜಕೀಯ ಪ್ರಜ್ಞೆ-ಪರಂಪರೆಗಳ ಜಾಯಮಾನಕ್ಕೆ ಹಾಗೆಯೇ ಸಾಂಸ್ಕೃತಿಕ ಹವಾಮಾನಕ್ಕೆ ಹೊಸತು, ಹೊರತಾದ್ದು. ಬ್ರಿಟಿಷರು ತಂದು ತಳವೂರಿಸಿದ ಪ್ರಜಾಪ್ರಭುತ್ವದ ಹಲ ಕೆಲವು ಸಂಸ್ಥೆ-ಸಂಪ್ರದಾಯಗಳಂತೆ ಇದೂ ಕೂಡ ನಮಗೆ ರಕ್ತಗತವಲ್ಲ. "ದಿಲ್ಲೀಶ್ವರೋ ವಾ ಜಗದೀಶ್ವರೋ ವಾ" ಎಂಬ ಒಂದಲ್ಲ ಒಂದು ನಿರಂಕುಶ ಪ್ರಭುತ್ವದ ಮಾದರಿ ನಮಗೆ ಅರ್ಥವಾಗುತ್ತ ಬಂದ ಪರಿಕಲ್ಪನೆ, ಮೊಗಲ, ಬ್ರಿಟಿಷ್ ಸಾಮ್ರಾಜ್ಯಗಳಲ್ಲಿ ಈ ಬಗೆಯ ಪ್ರಭುತ್ವವನ್ನು ನಾವು ಕಂಡುಂಡು

ಬಂದದ್ದು, ಇಂಗ್ಲಂಡದಲ್ಲಿ ರಾಜಸತ್ತೆಗೇ ಪರಿಮಿತಿ ಹಾಕುವಷ್ಟು ನಿರಂಕುಶ ಪ್ರಜಾಪ್ರಭುತ್ವವಿದ್ದರೂ ಅವರ ಇಲ್ಲಿಯ ಸಾಮ್ರಾಜ್ಯದಲ್ಲಿ ವೈಸರಾಯನ ಅಥವ ಗವ್ವರ್ನರನ ಸತ್ತೆಯೇ ಅವರು ಅನುಗ್ರಹಿಸಿದ ನಮ್ಮ ಪ್ರಜಾಪ್ರಭುತ್ವದ ಶಾಸನಸಭೆಗಳ ಅಧಿಕಾರವನ್ನು ಸೀಮಿತಗೊಳಿಸಿತ್ತು.

ಆಳುವ ಮಹಾ ಪ್ರಭುಗಳು ಯಾರೇ ಇರಲಿ, ಹೇಗೆ ಇರಲಿ ಅವರಿಗೆ ನಿಷ್ಠರಾಗಿರುವುದನ್ನು ನಮ್ಮ ಪ್ರಜೆ ಕಲಿತದ್ದು. ಕೆಟ್ಟ ಆಳ್ವಿಕೆಯನ್ನು ಎಷ್ಟೇ ದೂಷಿಸಲಿ, ದ್ವೇಷಿಸಲಿ ನಾವು ಬಲಿಷ್ಠ ಆಳ್ವಿಕೆಯನ್ನೆ ಯಾವಾಗಲೂ ಅಪೇಕ್ಷಿಸುತ್ತ ಬಂದವರು. ಬಡ ವಿರಾಟನಂತೆ ಕೇವಲ ಅಲಂಕಾರಕ್ಕೆ ಹಿರಿತನದ ಯಾಜಮಾನ್ಯಕ್ಕೆ ನಾಮಮಾತ್ರ ದೊರೆಯಾಗಿ ಆಳುವ ಅರಸರ ಬಗೆಗೆ ನಮಗೆ ಎಂದೂ ಆದರವಿದ್ದಿಲ್ಲ. ನಮಗೆ ಆಳರಸನೆಂಬವನು ನಿಜವಾಗಿಯೂ ಆಳಬೇಕು. ಅವನಿಗೆ ಅಮಾತ್ಯರೂ ಸಚಿವ ಸಂಪುಟವೂ ('ಅಷ್ಟ ಪ್ರಧಾನ'ರೂ) ಹಾಗೆ ಆಳಲಿಕ್ಕೆ ಸೂಕ್ತ ಸಲಹೆ ಕೊಡುತ್ತಿರಬೇಕು.

ಆದರೆ ಸ್ವಾತಂತ್ರ್ಯ ಪ್ರಾಪ್ತಿಯ ನಂತರ ನಮ್ಮ ಈ ರಾಜಕೀಯ ಧೋರಣೆಯೇ ಬದಲಾಯಿತು. ನಮ್ಮ ರಾಷ್ಟ್ರವನ್ನು ಆಳುವುದು ಪ್ರಜಾ ಪ್ರತಿನಿಧಿಗಳ ಸಂಸತ್ತು, ಅದರಲ್ಲಿಯ ಬಹುಮತದ ಪಕ್ಷ ಅದರ ಪ್ರಮುಖ. ಹೀಗೆ ಅಧಿಕಾರದ ಸೆಲೆ ಕೆಳಗಿನಿಂದ ಪ್ರಜೆಗಳಿಂದ ಮೇಲ್ಮುಖವಾಗಿ ಬರಬೇಕಾಯಿತು. ಆಗ ಅಧ್ಯಕ್ಷನೆಂಬ ವ್ಯಕ್ತಿ ಈ ರಾಜಕೀಯ ಪಿರಾಮಿಡ್ಡಿನ ತುದಿಯ ಮೇಲೆ ಸ್ಥಾಪಿಸಿದ ಒಂದು ಉತ್ಸವಮೂರ್ತಿ. ಅವರ ಸ್ಥಾನಮಾನ ಕೇವಲ ಔಪಚಾರಿಕ ಅಲಂಕಾರಿಕ, ಸಮಗ್ರ ರಾಷ್ಟ್ರದ ಐಕ್ಯಕ್ಕೆ ಐಶ್ವರ್ಯಕ್ಕೆ ಆತ ಪ್ರತೀಕ. ಆದ್ದರಿಂದ ಆ ಅಧ್ಯಕ್ಷ ಪೀಠಕ್ಕೆ ಸಾರ್ವಭೌಮ ಪ್ರತಿಷ್ಠೆ ಗೌರವ. ಆದರೆ ಪ್ರತ್ಯಕ್ಷವಾಗಿ ಅಧ್ಯಕ್ಷನಿಗೆ ಅಧಿಕಾರ ಇಲ್ಲ.

ಇಂಥ ಒಂದು ಸ್ಥಾನಮಾನದ ಸಾರ್ವಭೌಮ ಅಧಿಕಾರವನ್ನು ಒಮ್ಮೆಲೇ ಭಾರತೀಯ ಜನತೆ ಅರ್ಥಮಾಡಿಕೊಳ್ಳಬಹುದೇ? ಈ ಸಂಶಯ ನಮ್ಮ ಗಣರಾಜ್ಯದ ಆರಂಭದಲ್ಲಿ ಪಂಡಿತ ನೆಹರೂ ಅವರಿಗೂ ಬಂದಿರಬೇಕು. ಆದ್ದರಿಂದ ಅವರು ಸ್ವರಾಜ್ಯದ ಸಂವಿಧಾನಾತ್ಮಕ ಅಧಿಪತಿಯಾಗಿ ಅಂದಿನ ಕೊನೆಯ ಬ್ರಿಟಿಶ್ ಗವ್ವರ್ನರ್ ಜನರಲ್ ಲಾರ್ಡ್ ಮೌಂಟ್ ಬ್ಯಾಟನ್‌ರನ್ನು ಅಧಿಕಾರದಲ್ಲಿ ಮುಂದುವರಿಯಲು ಕೇಳಿಕೊಂಡರು. ಆದರೆ ಸ್ವತಃ ಬ್ರಿಟಿಶ್ ರಾಜಕುಲದವರಾದರೂ ಪ್ರಜಾಪ್ರಭುತ್ವದ ಪರಿಪಾಟಿಯಲ್ಲಿ ಪಳಗಿದ ಲಾರ್ಡ್ ಸಾಹೇಬರು ಅದಕ್ಕೆ ಒಪ್ಪಲಿಲ್ಲ. ಭಾರತದ ಪ್ರಥಮ ರಾಷ್ಟ್ರಪತಿ ಆಗುವುದಕ್ಕಿಂತ ಅವರಿಗೆ ಮರಳಿ ಇಂಗ್ಲಂಡಿಗೆ ಹೋಗಿ ತನ್ನ ನೌಕಾಪಡೆಯ ಹಿಂದಿನ ಅಡ್ಮಿರಲ್ ಪದವನ್ನು ತಿರುಗಿ ವಹಿಸಿಕೊಳ್ಳುವುದೇ ಇಷ್ಟವೆನಿಸಿತು. ಪಾಕಿಸ್ತಾನಕ್ಕೂ ಭಾರತವೆಂಬ ಈ ಪಾಕಿಸ್ತಾನಕ್ಕೂ ಮೌಂಟ್ ಬ್ಯಾಟನ್ನರೇ ಸಂಯುಕ್ತ ಅಧ್ಯಕ್ಷರಾಗಬೇಕೆಂಬ ಒಂದು ಸೂಚನೆಯೂ ಆಗ ಉಭಯ ರಾಷ್ಟ್ರಗಳ ಶ್ರೇಷ್ಠಿಗಳ ಮುಂದೆ ಇತ್ತು. ಆದರೆ ಅತ್ತ ಬ್ಯಾ. ಜಿನ್ನಾ ಸಾಹೇಬರು ತಾವೇ ಆ ರಾಷ್ಟ್ರದ ಗವ್ವರ್ನರ್ ಜನರಲ್ ಆದರು ಮತ್ತು ತಮಗೆ ನಿಷ್ಠರಾದ ಶ್ರೀ ಲಿಯಾಕತ್ ಆಲಿಖಾನರನ್ನು ಪ್ರಧಾನಿಯನ್ನಾಗಿ ಮಾಡಿಕೊಂಡರು. ಆದರೆ ನಮ್ಮಲ್ಲಿ ಅದೇ ಮಾದರಿಯಲ್ಲಿ ನೆಹರೂಜೀ ಹೊಸ ರಾಷ್ಟ್ರದ ಮಹಾ ನಾಯಕರೆಂದು ತಾವೇ ರಾಷ್ಟ್ರಾಧ್ಯಕ್ಷರಾಗಲಿಲ್ಲ. ನಿಜವಾದ ಸತ್ತೆಗಳಿವೆಯೆಂಬುದನ್ನು ಅರಿತ ಅವರು ಪ್ರಧಾನಿಯಾಗಿಯೇ ಉಳಿದರು.

ಅಂದಿನಿಂದ ಈ ನಿಜವಾದ ಅಧಿಕಾರ ಹಾಗೂ ಅಲಂಕಾರಿಕ ಸತ್ತಾಸ್ಥಾನ ಇವೆರಡರಲ್ಲಿ ಒಂದು ಗುಪ್ತವೋ ಪ್ರಕಟವೋ ಆದ ಘರ್ಷಣೆ ನಡೆದುಬಂದಿದೆ. ಆರಂಭದಿಂದಲೂ ನಮ್ಮ

ಪ್ರಧಾನಿಗಳು ಒಂದು ವಿಷಯದಲ್ಲಿ ಅದಷ್ಟು ಜಾಗ್ರತೆ ವಹಿಸುತ್ತ ಬಂದಿದ್ದಾರೆ. ಅದೆಂದರೆ, ಅಧ್ಯಕ್ಷರಾಗುವವರು ತಮ್ಮ ಆಯ್ಕೆಯ ಅಂದರೆ ತಮಗೆ ಅವಿರೋಧವಾದ ವ್ಯಕ್ತಿಯಾಗಿರಬೇಕು. ತಮ್ಮ ರಾಜಕೀಯ ಧೋರಣೆಯಲ್ಲಿ ಪಾಲುಗೊಳ್ಳುವಂತಿರಬೇಕು. ಈ ದೃಷ್ಟಿಯಿಂದ ಆರಂಭದಿಂದಲೂ ನೆಹರೂಜೀ ಡಾ। ರಾಜೇಂದ್ರ ಪ್ರಸಾದರ ಬದಲು ಶ್ರೀ ರಾಜಗೋಪಾಲಾ ಚಾರ್ಯರು ರಾಷ್ಟ್ರಪತಿಗಳಾಗಿ ಮುಂದುವರಿಯಲಿ ಎಂದೇ ಹಟ ಹಿಡಿದಿದ್ದರು. ಇದೇನು ವೈಯಕ್ತಿಕ ರಾಗದ್ವೇಷಗಳ ಪ್ರಶ್ನೆಯಿದ್ದಿಲ್ಲ. ದೃಷ್ಟಿ-ಧೋರಣೆಗಳ ಭೇದದ ಪ್ರಶ್ನೆಯಾಗಿತ್ತು. ಅಂದಿನಿಂದ ನಮಗೆ ಆರು ರಾಷ್ಟ್ರಪತಿಗಳೂ ನಾಲ್ಕು ಪ್ರಧಾನಿಗಳೂ ಆಗಿದ್ದಾರೆ. ಆದರೆ ಈ ಸೂಕ್ಷ್ಮ ಘರ್ಷಣೆಯಲ್ಲಿ ಈ ತನಕವೂ ಪ್ರಧಾನಿ ಅಂದರೆ ಬಹುಮತ ಪಕ್ಷ ಕಟ್ಟಿದ ಸರಕಾರ ಯಶಸ್ವಿಯಾಗುತ್ತಲೇ ಬಂದದ್ದಾಗಿದೆ. ಅಂದರೆ ರಾಷ್ಟ್ರಪತಿಯಾದ ವ್ಯಕ್ತಿ ಪ್ರಕಟವಾಗಿ ಪ್ರತಿಭಟಿಸಿ ರಾಜಕೀಯ ಬಿಕ್ಕಟ್ಟು ಉಂಟು ಮಾಡಿದ್ದು ಕಡಿಮೆ. ಆದಾಗ್ಯೂ ಕೆಲವು ರಾಷ್ಟ್ರಪತಿಗಳು ಪ್ರಧಾನಿಯ-ಸರಕಾರದ-ನಿರ್ದೇಶವನ್ನು ಮೀರಿ ಇಲ್ಲವೆ ಅಲಕ್ಷಿಸಿ ಸ್ವೇಚ್ಛೆಯಿಂದ ವರ್ತಿಸಿದ್ದೂ ಬಹಿರಂಗವಾಗಿ ತಮ್ಮದೇ ಆದ ಅಭಿಪ್ರಾಯ ಪ್ರಕಟಿಸಿದ್ದೂ ಆ ಮೂಲಕ ಪ್ರಧಾನಿಗಳಿಗೆ ಹೆಚ್ಚು ಕಡಿಮೆ ಉಪದ್ರವಕ್ಕೆ ಕಾರಣವಾದದ್ದೂ ಉಂಟು. ಆದರೆ ಇದೆಲ್ಲ ಮುಖ್ಯ ಹಾಗೂ ದೊಡ್ಡ ಮೊತ್ತದ ರಾಷ್ಟ್ರೀಯ ಧೋರಣೆಗಳ ಕುರಿತು ಅಲ್ಲ.

ಹಾಗಾದರೆ ರಾಷ್ಟ್ರಾಧ್ಯಕ್ಷರು ಸರಕಾರದ-ಮಂತ್ರಿಮಂಡಳವನ್ನು ಪ್ರತಿನಿಧಿಸುವ ಪ್ರಧಾನಿಯ-ಕೈಗೊಂಬೆಯಾಗಿರಬೇಕೆ? ಈ ಕುರಿತು ನಮ್ಮಲ್ಲಿ ಅನೇಕ ಭ್ರಾಮಕ ಹಾಗೂ ಅವಾಸ್ತವ ತಿಳುವಳಿಕೆಗಳು ಹಬ್ಬಿವೆ. ಈಗಂತೂ ಏಳನೆಯ ರಾಷ್ಟ್ರಾಧ್ಯಕ್ಷರ ಆಯ್ಕೆ ಆದಂದಿನಿಂದ ಇದು ಪ್ರಧಾನಿಯ ಕೈಯ 'ರಬ್ಬರ್ ಸ್ಟಾಂಪು' ಎಂಬ ನಿಂದಾ ವ್ಯಂಜಕ ಟೀಕೆ ಕೇಳಿ ಬರುತ್ತಿದೆ. ಆದರೆ ಇದೆಲ್ಲ ಒಂದು ರಾಜಕೀಯ ಪ್ರಚಾರದ ಗತ್ತುಗಾರಿಕೆ. ಏಕೆಂದರೆ ಹೀಗೆ ಪ್ರಚಾರ ಕೈಗೊಂಡ ಪ್ರತಿಪಕ್ಷದ ಧುರೀಣರಿಗೂ ಮನದಾಳ ಗೊತ್ತಿದ್ದೇ ಇದೆ. ರಾಷ್ಟ್ರಾಧ್ಯಕ್ಷ ಪೀಠದ ಇತಿಮಿತಿ ಹಾಗೂ ಅಧ್ಯಕ್ಷನೆಂಬ ಸರ್ವಶ್ರೇಷ್ಠ ಅಧಿಕಾರಿಯ ಇಚ್ಛಾ ಸ್ವಾತಂತ್ರ್ಯದ ಪರಿಮಿತಿ.

ರಾಷ್ಟ್ರಾಧ್ಯಕ್ಷನ ಅಧಿಕಾರದ ವ್ಯಾಖ್ಯೆ ವ್ಯಾಪ್ತಿಗಳ ಬಗೆಗೆ ಸಂವಿಧಾನವು ಸುಸ್ಪಷ್ಟವಾಗಿದೆ.

ನಮ್ಮ ರಾಷ್ಟ್ರಾಧ್ಯಕ್ಷರದು ಬ್ರಿಟಿಶ್ ರಾಜನ ಮಾದರಿ. ಆತ ಯಜಮಾನ ಹೊರತು ಅಧ್ವರ್ಯುವಲ್ಲ. ಇಲ್ಲಿ ಯಜ್ಞ ನಡೆಸುವ ಅಂದರೆ ಆಡಳಿತದ ಸಕಲ ಕಾರ್ಯಾಂಗ ಚಟುವಟಿಕೆಯ ಅಧಿಕಾರ ಅವನದೆಂದು ಮಂತ್ರಿಮಂಡಳದಲ್ಲಿ ನಿವಿಷ್ಟವಾಗಿರುತ್ತದೆ. ಈ ಕುರಿತು ಘಟನಾ ಪರಿಷತ್ತಿನಲ್ಲಿ- ಡಾ। ರಾಜೇಂದ್ರ ಪ್ರಸಾದರೇ ಅದಕ್ಕೆ ಅಧ್ಯಕ್ಷರಾಗಿದ್ದರು- ಸಂವಿಧಾನದ ರಚನೆಯ ಸಮಯ ಅದರ ಮಹಾ ಶಿಲ್ಪಿ ಡಾ। ಬಿ.ಆರ್. ಅಂಬೇಡಕರರು ಈ ಅಭಿಪ್ರಾಯವನ್ನು ಸ್ಫಟಿಕ ಸ್ಪಷ್ಟಗೊಳಿಸಿದ್ದರು.

"The President could do nothing contrary to the advice of the Cabinet nor could he do anything without its advice"

ಅಂದರೆ "ರಾಷ್ಟ್ರಾಧ್ಯಕ್ಷನು ಮಂತ್ರಿಮಂಡಲದ ಸಲಹೆಯ ವಿರುದ್ಧ ಏನೇನೂ ಮಾಡಲಾರ. ಹಾಗೆಯೇ ಅವರ ಸಲಹೆ ಪಡೆಯದೇ ಏನನ್ನೂ ಮಾಡಲಾರ"! ಅವನ ಇಚ್ಛಾ ಸ್ವಾತಂತ್ರ್ಯ ಅಥವಾ 'ವಿವೇಕ' ವೆಂಬುದು ಖಾಸಗಿ ಅಭಿಪ್ರಾಯವೆಂದಲ್ಲ, ಅದೂ ಅವನು ಮಂತ್ರಿಮಂಡಲದ

- ಅಂದರೆ ಪ್ರಧಾನಿಯ-ಸಲಹೆ ಸೂಚನೆಗಳನ್ನು ಪಡೆದು ಅರಿತು ಅದಕ್ಕೆ ಅವಿರೋಧವಾಗಿ ರೂಪಿಸಿಕೊಂಡ ಅಭಿಪ್ರಾಯ.

ಡಾ। ಅಂಬೇಡಕರರು ಇನ್ನೂ ಮುಂದುವರಿದು ಅಂದಿದ್ದರು:

"The President represents the nation, but does not rule the nation. His place in this administration is that of the ceremonial device, of a season by which the nation's decisions are made known"

"ಅಧ್ಯಕ್ಷನು ರಾಷ್ಟ್ರವನ್ನು ಪ್ರತಿನಿಧಿಸುತ್ತಾರೆ. ಆದರೆ ರಾಷ್ಟ್ರವನ್ನು ಆಳುವುದಿಲ್ಲ, ಆಡಳಿತದಲ್ಲಿ ಅವನ ಸ್ಥಾನ ಒಂದು ಔಪಚಾರಿಕ ವಿಧಿಯ ಸಾಧನದ್ದು. ರಾಷ್ಟ್ರದ ನಿರ್ಣಯಗಳನ್ನು ಪ್ರಕಟಗೊಳಿಸುವ ಒಂದು ಮುದ್ರೆಯದು."

ಅಂದರೇನು? ರಾಷ್ಟ್ರಪತಿಯು ರಾಷ್ಟ್ರ ನಿಯುಕ್ತ ಸರಕಾರದ ಕೈಗೆ ಆ ರಾಷ್ಟ್ರದ ಪ್ರತಿನಿಧಿಗಳೇ ಆರಿಸಿ ಕೊಟ್ಟ ಒಂದು ರಾಜಮುದ್ರೆ-ಒಂದು ಸೀಲು. ರಾಷ್ಟ್ರದ ನಿರ್ಣಯಗಳನ್ನು ಧೋರಣೆಗಳನ್ನು ಅಧಿಕೃತಗೊಳಿಸಿ ಜಾಹೀರು ಮಾಡಲಿಕ್ಕೆ. ಅಂದಾಗ ರಾಷ್ಟ್ರಪತಿ ಬರ 'ರಬ್ಬರ್ ಸ್ಟಾಂಪ್' ಆಗಿ ಬಿಡುತ್ತಾರೆ-ಎಂದು ಹುಯಿಲೆಬ್ಬಿಸುವವರ ರಾಜಕೀಯ ಪ್ರಜ್ಞೆ-ಸಂವಿಧಾನ ತಜ್ಞತೆಗೆ ಏನೆನ್ನಬೇಕು? 'ಸ್ಟಾಂಪು' ಅನ್ನಿ 'ಸೀಲು' ಅನ್ನಿ ಹೆಸರು ಬೇರೆ ಆದರೆ ಹುರುಳು ಒಂದೇ.

ಹಿಂದೊಮ್ಮೆ ಡಾ। ರಾಜೇಂದ್ರ ಪ್ರಸಾದರು 'ಹಿಂದೂ ಕೋಡ್ ಬಿಲ್ಲ್' ಗೆ ತನ್ನ ಸಹಿ ಹಾಕುವುದಿಲ್ಲವೆಂದು ಅಂದುಕೊಂಡಿದ್ದರು. ಆದರೆ ಕೊನೆಗೂ ಹಾಕಲೇಬೇಕಾಯಿತು- ಸಂವಿಧಾನಕ್ಕೆ ಕಟ್ಟುಬಿದ್ದು! ಆದ್ದರಿಂದ ರಾಷ್ಟ್ರಾಧ್ಯಕ್ಷರನ್ನು ಏನೆನ್ನೋಣ- ರಬ್ಬರ್ ಸ್ಟಾಂಪೋ ರಾಷ್ಟ್ರದ ಸೀಲೋ?

●

(ಉದಯವಾಣಿ ೧೯೮೭)

# ಮ್ಯಾಗಝಿನ್ ಕತೆಗಳ ಕೈಫಿಯತ್ತು

ಈಚೆಗೆ ಹೊಸತೊಂದು ಸಾಹಿತ್ಯಿಕ ಫ್ಯಾಶನ್ ರೂಢವಾಗಿದೆ. ಅದು ಎಷ್ಟೇ ರೂಢವಾಗಿದ್ದರೂ ಅದು ಮೂಲತಃ ಮೂಢವೆಂದೇ ನನ್ನ ಭಾವನೆ. ನಮ್ಮ ಹೇಳ ಹೆಸರಿನ (so called) ಅಥವಾ ಹೇಳಿ ಮಾಡಿಸಲ್ಪಟ್ಟ (made to order) "ಉಚ್‌ಭ್ರೂ" (high brow) ಅಂದರೆ ಹುಬ್ಬುಗಂಟಿನ ಅನೇಕ ವಿಮರ್ಶಕರು-ಅವರಲ್ಲಿ ಹಲವರು ಸ್ವಯಂ ಕತೆ-ಕಾದಂಬರಿಕಾರರೇ! - ಈ ಬಡಪಾಯಿ ಮ್ಯಾಗಝೀನ್ ಕತೆಯನ್ನು ಹೀನಾಯವಾಗಿ ಕಾಣುತ್ತಾರೆ. ಮ್ಯಾಗಝೀನ್ ಕತೆಯೆಂದರೆ ಅದರಲ್ಲಿ ಧಾರಾವಾಹಿ ಕಾದಂಬರಿಗಳೂ ಬಂದವು.

ಹೀಯಾಳಿಸುವುದಾದರೂ ಯಾಕೆ? ಈ ಕತೆ-ಕಾದಂಬರಿಗಳು ತುಂಬ "ಜನಪ್ರಿಯ" ವಾಗಿರುತ್ತವೆಂದು! ಅಂದರೆ ಅವು ಹಾಗೆ ಜನಪ್ರಿಯವಾಗಿರುವುದೂ ಒಂದು ದೋಷವೋ ಶಾಪವೋ ಎಂಬಂತೆ! ಇನ್ನು ಯಾವುದೇ ಗುಣದ ಅತಿರೇಕವೂ ಒಂದು ದೋಷವೆನಿಸಬಹುದು. (ಚಹಾಕ್ಕೆ ಸಕ್ಕರೆಯೇ ಹೆಚ್ಚಾದಂತೆ). ಆದರೆ ಸಕ್ಕರೆ ಬೆರೆಸುವುದೇ ಒಂದು ಪಾಪವೆಂದು ಶುದ್ಧ ಮಧುಮೇಹ ರೋಗಿಯೂ ಹೇಳಲಾರ! ಈ ಜನಪ್ರಿಯತೆ ಶಾಪವೂ ಆಗಬಹುದು. ಯಾರಿಗೆ? ಅಂಥ ಮನೋರಂಜನೆಯ ಜನಪ್ರಿಯತೆಯ ಅಂಶವೇ ಇಲ್ಲದ ಗಂಭೀರ ಸ್ವರೂಪದ ಕತೆ-ಕಾದಂಬರಿಗಳಿಗೆ. ಆದರೆ ಇಂಥ ರಂಜಕ ಹಾಗೂ ಜನಪ್ರಿಯ ಕತೆ-ಕಾದಂಬರಿಗಳು ಅವುಗಳ ವಾಚಕರಿಗಾಗಲೀ ಲೇಖಕರಿಗಾಗಲೀ ಎಂದೆಂದಿಗೂ ಶಾಪವಾಗಲಾರವು, ಆಗಿಲ್ಲ.

ಈ ಮ್ಯಾಗಝಿನ್ ಕಥಾ ವಾಙ್ಮಯವನ್ನು ನಿಂದಿಸುವವರನ್ನು ಕಂಡಾಗಲೆಲ್ಲ ನನಗೆ ಕೆಲವು ಹಳೆಯ 'ಘರಾಣಿ' ಸಂಗೀತ ವಿದ್ವಾನ್ ಕುಳಗಳ ನೆನಪಾಗುತ್ತದೆ. ಯಾರಾದರೂ ಇಂಪಾಗಿ ಸೊಗಸಾಗಿ ಹಾಡಿದ್ದನ್ನು, ಅದನ್ನು ಯಾರಾದರೂ ಹೊಗಳಿದ್ದನ್ನು ಕೇಳಿದರೆ ಈ ಘಟಾನುಘಟಿಗಳು ಓ, ಅವನೋ! ಅದೇನು ಸಂಗೀತ? ಅವನ ಶರೀರ ಚೆನ್ನಾಗಿದೆ. ಕಂಠ ಮಧುರವಾಗಿದೆ ಇಷ್ಟೇ! ಎಂದು ನಸ್ಯವೇರಿಸಿ ಬಿಡುತ್ತಾರೆ. ಅಂದರೆ ಸಂಗೀತಕ್ಕೆ ಮಧುರ ಕಂಠವೇ ಒಂದು ಶಾಪ. ಇಂಪಾಗಿ ಹಾಡುವುದೆಂದರೆ ಸಂಗೀತ ಶಾಸ್ತ್ರದಲ್ಲಿ ಏನೋ ಪಾಪ ಮಾಡಿದಂತೆ! ಇನ್ನು ಈ ಟೀಕೆಯಲ್ಲಿಯೂ ಕೆಲವೊಂದು ತಥ್ಯವಿಲ್ಲದಿಲ್ಲ. ಸಾಮಾನ್ಯವಾಗಿ ಸಂಗೀತವನ್ನು ಶಾಸ್ತ್ರೀಯವಾಗಿ ವ್ಯಾಸಂಗಿಸುವವರು ಕಂಠ ಶರೀರ ಚೆನ್ನಾಗಿದ್ದರೆ ಈ ಶಾಸ್ತ್ರದಲ್ಲಿ ಹೆಚ್ಚಿನ ಪ್ರಗತಿಗಾಗಿ ಪ್ರಯತ್ನ ಮಾಡುವುದೇ ಇಲ್ಲ. ಹೇಗೆ ಹಾಡಿದರೂ ತಮ್ಮ ಕೊರಳ ಇಂಪಿಗೆ ಮಂದಿ ಸುಲಭವಾಗಿ ಮೆಚ್ಚುತ್ತಾರೆ, ತಲೆದೂಗುತ್ತಾರೆ ಎಂದಾಗ ಆ ಅಗ್ಗದ ಅಗ್ಗಳಿಕೆಯ ವ್ಯಾಮೋಹಕ್ಕೆ ಅವರು ಬಲಿಬಿದ್ದು ರಾಗ, ತಾಳ, ಶ್ರುತಿ-ಲಯಗಳ ನಿಜವಾದ ಆಳವಾದ ವಿದ್ವತ್ತಿಗೆ ಎರವಾಗುವ ಉದಾಹರಣೆಗಳು ಉಂಟು. ಆದರೆ ಇದರ ಅರ್ಥ ಶಾಸ್ತ್ರೀಯ ಸಂಗೀತ ಒರಟಾಗಿಯೇ ಇರಬೇಕು. ಕರ್ಣ ಕಠೋರವಾಗಿ ಹಾಡಿದರೇನೇ classical ಸಂಗೀತ ಎಂಬ ಭಾವನೆ ಸಂಗೀತ ಶಾಸ್ತ್ರಕ್ಕೂ ಶ್ರೋತ್ರ ವರ್ಗಕ್ಕೂ ಕೂಡಿಯೇ ಅಪಮಾನಕಾರಿ.

ಅದೇ ರೀತಿ 'ಜನಪ್ರಿಯ' ವೆಂದು ಮ್ಯಾಗಝೀನ್ ಕಥಾ ವಾಙ್ಮಯವನ್ನು ಟೀಕಿಸುವ ಈ ಹೊಸ (?) ಶಿಷ್ಟ ಸಂಪ್ರದಾಯ! ಈ ಕಥಾ ಲೇಖಕರು ಜನಪ್ರಿಯವಾಗಲೆಂದೇ ಮ್ಯಾಗಝೀನ್‌ಗಳಲ್ಲಿ

ವಿವಿಧ ನಿಯತಕಾಲಿಕಗಳಲ್ಲಿ ತಮ್ಮ ಕೃತಿಗಳನ್ನೂ ಪ್ರಕಟಿಸುತ್ತಾರೆ ಎಂದೇ ಇಟ್ಟುಕೊಳ್ಳೋಣ. ಮಾತ್ರಕ್ಕೆ ಅದು ಹೇಯವಾದ ಕೃತ್ಯವೇ? ಜನ, ಆದಷ್ಟೂ ಹೆಚ್ಚು ಜನ, ಓದಬೇಕೆಂದು ತಾನೆ ಕತೆ-ಕಾದಂಬರಿಗಳನ್ನು ಬರೆಯುವುದು? "ಜನ ಬದುಕಬೇಕೆಂದು" ರಾಘವಾಂಕ ಪಂಡಿತ ಕಾವ್ಯ ಬರೆದಾಗಲೂ ಜನ ಅದನ್ನು ಮೊದಲು ಓದಬೇಕು, ಮೆಚ್ಚಬೇಕೆಂದೇ ಅವನ ಅಭಿವ್ಯಕ್ತಿಯ ಉದ್ದೇಶವೂ ಪ್ರೇರಣೆಯೂ ಇತ್ತೆಂಬುದಕ್ಕೆ ಅನುಮಾನವೇ ಇಲ್ಲ. ಓದಿದ ಮಾತ್ರಕ್ಕೆ ಅಲ್ಲವೆ ಜನ ಅದರ ಬೋಧನೆಯಿಂದ ಬದುಕುವ ಬಗೆಯನ್ನು ಕಲಿತುಕೊಳ್ಳುವುದು? ಎಲ್ಲ ವ್ಯಂಜನೆಯ ಅಂಗವಾಗಿ ರಂಜನೆಯು ಇದ್ದೇ ಇರುತ್ತದೆ. ಕೃತಿಯ ನಾಣ್ಯದ ಒಂದು ಮಗ್ಗುಲಿಗೆ ಕಲಾತ್ಮಕತೆ ರಚನೆ. ಇದು ರಾಜಮುದ್ರೆ. ಅದರ ಇನ್ನೊಂದು ಮಗ್ಗುಲಿಗೆ ಕಲಾತ್ಮಕತೆ-ರಚನೆ. ಇದು ರಾಜಮುದ್ರೆ. ಅದರ ಇನ್ನೊಂದು ಮಗ್ಗುಲಿಗೆ ಆಸ್ವಾದನೆ- ರಸನೆ ರಸಿಕನಿಂದ ಕೋರುವ ಬೆಲೆ.

ಆದ್ದರಿಂದ ಮ್ಯಾಗಝೀನ್‌ಗಳಿಗಾಗಿ ಕತೆ-ಕಾದಂಬರಿ ಬರೆಯುವುದು ಒಂದು ನಾಚಿಕೆಯ ಸಂಗತಿ ಅಲ್ಲವೇ ಅಲ್ಲ. ಅದಕ್ಕಾಗಿ ಸಂಕೋಚಪಡಬೇಕಾಗಿಲ್ಲ. ಅದಕ್ಕೆ ಕ್ಷಮಾಪಣೆ-ಸಮರ್ಥನೆ ನೀಡಬೇಕಾಗಿಯೂ ಇಲ್ಲ. ಈ ಲೇಖನ ಇವೆರಡೂ ಅಲ್ಲ. ಈ ಪ್ರಶ್ನೆಯ ಕುರಿತ ಒಂದು ವಿವೇಚನೆ. ಈ ಮ್ಯಾಗಝೀನ್ ಪ್ರಕಟಣೆಯ ಪರಿಪಾಠ ಇಂದು ನಿನ್ನೆಯದಲ್ಲ. ಈ ಕತೆಗಾರರಿಗೆ ಪ್ರಪಂಚದ ಹಿರಿಯ ಸೃಜನಾ (ಸರ್ಜನಾ)ತ್ಮಕ ಸಾಹಿತಿಗಳ ಸತ್ಸಾಂಗ ಹಿಂದಿನಿಂದಲೂ ಇದೆ. ಚಾರ್ಲ್ಸ್ ಡಿಕಿನ್ಸ್ ಹೆನ್ರಿ ಜೇಮ್ಸ್, ಬಾಲಝಾಕ್, ಮೊಪಾಸಾ, ಚೆಕೋವ್, ಸಾಮರ್‌ಸೆಟ್ ಮೊಮ್ - ಎಷ್ಟೆಲ್ಲಾ ವಿಶ್ವವಿಖ್ಯಾತ ಕತೆಗಾರ-ಕಾದಂಬರಿಕಾರರು ತಮ್ಮ ಆ ವಿಶ್ವವಿಖ್ಯಾತಿಯನ್ನು ಗಳಿಸಿದ್ದು ಮ್ಯಾಗಝೀನ್ ಸ್ತಂಭಗಳೊಳಗಿಂದಲೇ. ನಮ್ಮಲ್ಲಿ ರವೀಂದ್ರನಾಥ ಟಾಗೋರ, ಪ್ರೇಮಚಂದ್ರ, ಹರಿನಾರಾಯಣ ಅಪ್ಟೆ, ಪ್ರಭೃತಿ ಆದ್ಯರೂ ತಮ್ಮ ಬಂಗಾಲಿ, ಹಿಂದಿ, ಮರಾಠಿ ನಿಯತಕಾಲಿಕಗಳಿಂದಲೇ ತಮ್ಮ ಕೃತಿಗಳ ಪ್ರಕಾಶನ ಮೊದಲು ಕೈಗೊಂಡರು. ಈ ಪರಂಪರೆಯನ್ನು ಗುರುತಿಸಿದಾಗ ನಾವು ಮ್ಯಾಗಝೀನ್ ಕತೆಗಳನ್ನು ಕಡೆಗಣಿಸಬೇಕಾಗಿಲ್ಲ.

ಸತ್ಯವನ್ನು ಪ್ರಿಯವಾಗಿ ಹೇಳಬೇಕೆಂದು ನಮ್ಮ ಸನಾತನ ಸಂಕೇತವಿರುವಾಗ ಲಲಿತಲೇಖನದಲ್ಲಿ ಜನಪ್ರಿಯತೆ ಒಂದು ದೋಷವೆಂದು ಹೇಗೆ ತಿಳಿಯಬೇಕು? ನಮ್ಮ ಅನುಭವ ಅದರ ಸತ್ವ, ಆಶಯ ಇತ್ಯಾದಿಗಳನ್ನೆಲ್ಲ ಅಭಿವ್ಯಕ್ತಿಗೊಳಿಸುವುದರ ಹಿಂದೆ ಈ ಆತ್ಮನಿವೇದನೆಯ ಹಿಂದೆ ಅದನ್ನು ಸಮಾನಧರ್ಮಿಗಳೊಂದಿಗೆ ಸಹೃದಯರೊಡನೆ ಹಂಚಿಕೊಳ್ಳಬೇಕೆಂಬ ಒಂದು ದುರ್ದಮ್ಯವಾದ ಪ್ರೇರಣೆ ಕೆಲಸಮಾಡುತ್ತಿರುತ್ತವೆ. ಅಂಡಮಾನದಲ್ಲಿ ಕರಿನೀರ ಶಿಕ್ಷೆ ಅನುಭವಿಸುತ್ತಿದ್ದ ಸ್ವಾತಂತ್ರ್ಯವೀರ ಸಾವರಕರರೂ ತಮ್ಮ ಕವನಗಳನ್ನು - 'ಕಮಲಾ' ಎಂಬ ಕಾವ್ಯವನ್ನು - ಉಗುರಿನಿಂದ ಸೆರೆಮನೆಯ ಕೋಣೆಯ ಗೋಡೆಯ ಮೇಲೆ ಗೀರಿ ಬರೆದಿಟ್ಟರು! ಏಕೆ? ಕೇವಲ "ಸ್ವಾಂತ ಸುಖಾಯಃ" ಎಂದಿದ್ದಾರೆ. ಅದನ್ನು ಮನಸ್ಸಿನಲ್ಲಿಯೇ ಮನನ ಮಾಡಿ ಉರು ಹಾಕಿಕೊಳ್ಳಬಹುದಿತ್ತಲ್ಲ. ವಾನ್ ಗೋ ಪ್ಯಾಸಿಫಿಕ್ಕಿನಲ್ಲಿ ಅಜ್ಞಾತ ದ್ವೀಪದಲ್ಲಿ ಕುಷ್ಟ ರೋಗಿಯಾಗಿ ಕಣ್ಣು ಕಳೆದುಕೊಂಡು ಗುಡಿಸಲ ಗೋಡೆಗಳ ಮೇಲೆ ತನ್ನ ಅದ್ಭುತ ಅಮರ ವರ್ಣಚಿತ್ರಗಳನ್ನು ಬರೆದಿಟ್ಟನು. ಏಕೆ? ಆತ್ಮತೃಪ್ತಿಯೊಂದಿಗೇ ಎಂದಾದರೂ ಯಾರಾದರೂ ಅವನ್ನು ನೋಡಿ ಮೆಚ್ಚಬೇಕೆಂದು, ಕಾವ್ಯವಿರಲಿ

ಕಥೆಯಿರಲಿ, ಆಲಾಪನೆ ಇರಲಿ, ಚಿತ್ರವಿರಲಿ, ಶಿಲ್ಪವಿರಲಿ - ಎಲ್ಲ ಸೃಜನ ಮೂಲತಃ ಹೊರಗೆಡಹುವ ಕ್ರಿಯೆ. ಮನಸ್ಸಿನ ಆಂತರಿಕ ಉಮ್ಮಳವನ್ನು, ಒತ್ತಡವನ್ನು, ತಿಕ್ಕಾಟವನ್ನು ಒಂದು ಸಮರ್ಪಕ ಮಾಧ್ಯಮದೊಳಗೆ ಉದ್ಗಾರದಿಂದ ಪರಿಹರಿಸಿಕೊಳ್ಳುವ ಕ್ರಿಯೆ. ಅದರ ಒಂದು ಮಗ್ಗಲು ಅಂತಃಪ್ರೇರಣೆ, ಅದರ ಇನ್ನೊಂದು ಆತ್ಮಪ್ರಕಟಣೆ. ಇದರ ಉದ್ದೇಶ ಇತರರು ಕೇಳಲಿ, ಓದಲಿ, ಮೆಚ್ಚಲಿ, ನೋಡಲಿ ತನ್ನ ಅನುಭವವನ್ನು ಹಂಚಿಕೊಳ್ಳಲಿ ಎಂಬುದೇ ಆಗಿದೆ.

ಮತ್ತು ಈ ಉದ್ದೇಶದ ಸಾಧನೆಯು ಆತ್ಮತೃಪ್ತಿಗೆ ಹಿಂದೆಂದಿಗಿಂತಲೂ ಮಿಗಿಲಾಗಿ ವಿಶಾಲವಾಗಿ ಇಂದು ನಿಯತಕಾಲಿಕಗಳ ಮಾಧ್ಯಮ ಪ್ರತಿ ವಾರ ಪ್ರತಿ ತಿಂಗಳು ಅಲ್ಲ, ಪ್ರತಿದಿನವೂ ಸುಲಭವಾಗಿಯೇ ಒದಗಿಬರುತ್ತದೆ. ಅಂದಾಗ ಅದರ ಪ್ರಯೋಜನವನ್ನು ಸಾರ್ಥಕವಾಗಿ ಪಡೆಯಬಾರದೇಕೆ?

ಕನ್ನಡದಲ್ಲಿಯೊಂದೇ ಅಲ್ಲ, ಆಧುನಿಕ ಯುಗದ ಸುತ್ತಲಿನ ಮರಾಠಿ, ಗುಜರಾಥಿ, ತೆಲಗು, ಮಲೆಯಾಳಿ- ಎಲ್ಲ ಪ್ರಾದೇಶಿಕ ಭಾಷೆಗಳಲ್ಲಿಯೂ ಸೃಜನಾತ್ಮಕ ಸಾಹಿತ್ಯದಲ್ಲಿ ಒಂದು ಹೊಸ ಹಾಗೂ ಬಹುಮಟ್ಟಿಗೆ ವೈಜ್ಞಾನಿಕವೂ ಎಂಬಂಥ ಸ್ಫೋಟ (Explosion) ಆಗಿಬಿಟ್ಟಿದೆ. ರಾಸಾಯನಿಕ ಕ್ರಿಯೆಯಲ್ಲಿ Sublimation ಎನ್ನುತ್ತಾರಲ್ಲ ಆ ರೀತಿ. ಘನರೂಪದ ದ್ರವ್ಯ ದ್ರವರೂಪಗೊಳ್ಳದೆ ಒಮ್ಮೆಲೇ ವಾಯುರೂಪವನ್ನು ತಾಳುವಂತೆ. ಕಾವ್ಯ, ನಾಟಕ, ಕಥೆ-ಕಾದಂಬರಿಗಳೆಲ್ಲ ಹೀಗೆ ತಮ್ಮ ಮಂತ್ರ-ತಂತ್ರ, ನ್ಯಾಸ-ವಿನ್ಯಾಸಗಳಲ್ಲಿ ಒಮ್ಮೆಲೇ ಒಂದು ದೊಡ್ಡ ದಾಪಿನ ಮುನ್ನೆಗೆತ (big leap forward) ಸಾಧಿಸಿದೆ. ಇದರಿಂದ ಆದದ್ದೇನು? ಸಾಮಾನ್ಯ ಓದುಗರ ಸಮುದಾಯ ಮತ್ತು ಈ ಸೃಜನಶೀಲ ಕೃತಿಕಾರರ ವರ್ಗ ಇವರ ನಡುವೆ ಒಂದು ಅನುಲ್ಲಂಘ್ಯ ಕಂದಕ - ಆಳವಿದ್ದಷ್ಟೇ ಅಗಲ. ಇಂದಿನ ವಿಚಿತ್ರವೆಂದರೆ ಕೃತಿಕಾರ, ವಾಚಕ ಮತ್ತು ವಿಮರ್ಶಕ ಇವರದೊಂದು ತ್ರಿಕೋನ ಸ್ಥಾಪಿತವಾಗಿದೆ. ಕೃತಿಕಾರ ಮತ್ತು ವಾಚಕರ ನಡುವೆ ಒಂದು ಸೇತುವೆಯಾಗುವ ಬದಲು ಕೃತಿಯ ಕುರಿತು ವಾಚಕರಿಗೆ ಮಾರ್ಗದರ್ಶಿಯಾಗುವ ಬದಲು ಈ ಮೂವರು ಮುಖಾಮುಖಿಯಾಗಿ ನಿಂತಂತಿದೆ! ಅಲ್ಲಿಯೂ ಕೃತಿಕಾರ ವಾಚಕನನ್ನು ಸಮೀಪಿಸಿದಂತೆ ಆತ ವಿಮರ್ಶಕನಿಂದ ದೂರವಾಗುತ್ತಾನೆ. ಅಥವಾ ವಿಮರ್ಶಕನು ಕೃತಿಕಾರನನ್ನು ಹತ್ತಿರವಾಗಿ ಕಂಡಷ್ಟೂ ಅವನಿಂದ ವಾಚಕ ದೂರಸರಿಯುತ್ತಾನೆ! ಸಾಮಾನ್ಯವಾಗಿ ಇಂದಿನ ಸಾಹಿತ್ಯ ಪ್ರಪಂಚದಲ್ಲಿ ವಿಮರ್ಶಕ ಮೆಚ್ಚಿ ಕೊಂಡಾಡುವ ಕೃತಿಯನ್ನು ವಾಚಕ ಮೆಚ್ಚುವಂತಿಲ್ಲ. ವಾಚಕ ಮೆಚ್ಚಿ ಕೊಂಡಾಡುವ ಕೃತಿಯನ್ನು ವಿಮರ್ಶಕ ಮೆಚ್ಚುವದಿಲ್ಲ.

ಇಂಥ ಮುಗ್ಗಟ್ಟಿನಲ್ಲಿ ಕೃತಿಕಾರ, ಗ್ರಂಥಕರ್ತ ತನ್ನ ಉಳಿಗಾಲಕ್ಕಾಗಿ ಕೊನೆಗೆ ವಾಚಕನನ್ನು ಮೆಚ್ಚಿಸಬೇಕು, ಒಲೈಸಬೇಕು, ತನ್ನದೇ ಆದ ವಾಚಕವರ್ಗವೊಂದನ್ನು ಕಾಪಾಡಿಕೊಳ್ಳಬೇಕು. ಇಲ್ಲಿಯೂ ಈ ವರ್ಗ ಎರಡು ಬಗೆ ಗುಂಪುಗೊಳ್ಳುತ್ತದೆ. ಡಾ|| ಯು. ಆರ್. ಅನಂತಮೂರ್ತಿ-ಡಾ|| ಶಿವರಾಮ ಕಾರಂತರ ಒಂದು ಸಂದರ್ಶನದಲ್ಲಿ ಇದನ್ನು ಸೂಚಿಸಿದ್ದಾರೆ. ಒಂದು ಗುಂಪು ನಿರ್ದಿಷ್ಟ ವಾಚಕ ವರ್ಗ (Defined Readership) ಇನ್ನೊಂದು ಸರ್ವಸಾಮಾನ್ಯ (General Readership) ಶರಚ್ಚಂದ್ರ ಚಟರ್ಜಿಯವರಿಗೆ ಡಾ|| ಶಿವರಾಮ ಕಾರಂತರಿಗೆ, ಹಾಗೆಯೇ

ಶ್ರೀಮತಿ ತ್ರಿವೇಣಿಯವರಿಗೆ, ಪತ್ತೇದಾರಿ ಕಥಾ ಲೇಖಕರಿಗೆ ಅವರವರದೇ ಆದ ವಿಶಿಷ್ಟ ಓದುಗರ
ಪೇಟೆ ಇದೆ. ಆ ಪೇಟೆಯಲ್ಲಿ ಅವರಿಗೆ ಯಾವಾಗಲೂ ನಿರ್ದಿಷ್ಟ ಬೇಡಿಕೆ ಇದೆ.

ಆದರೆ ಸರ್ವಸಾಮಾನ್ಯ ವಾಚನಾಭಿರುಚಿಯನ್ನು ಪೂರೈಸಲಿಕ್ಕೆ ಪೋಷಿಸಲಿಕ್ಕೆ ಹಾದಿ ಹೋಕನಿಗೆ ಸಾಮಾನ್ಯ (ಸನ್ಮಾನ್ಯ) ಸುಶಿಕ್ಷಿತನಿಗೆ ರೋಚಕವಾದ ಕಥಾ ವಾಙ್ಮಯವನ್ನು ಒಳ್ಳೆಯ ಮಟ್ಟದಲ್ಲಿಯೂ ಒದಗಿಸಲಿಕ್ಕೆ (ವಿಶಿಷ್ಟ ವಾಚಕ ವರ್ಗ ಇಂಥವರೊಳಗಿಂದಲೇ ಕ್ರಮೇಣ ರೂಪುಗೊಳ್ಳುವುದು) ವ್ಯವಸ್ಥೆ ಏನು? ಅದಕ್ಕೆ ನಮ್ಮ ಮ್ಯಾಗಝೀನ್ ಕಥಾ ಪ್ರಪಂಚದ ನಿರ್ವಂಚನೆಯ ಸೇವೆಯೇ ಜೀವಾಳದ ಸಾಧನೆ. ಒಬ್ಬ ಕಥೆಗಾರನ ಕಾದಂಬರಿಕಾರನ ಹಾಗೆಯೇ ನಾಟಕಕಾರನ ಅಳಿವು-ಉಳಿವು ಕೊನೆಗೂ ಆತ ನಿಲುಕುವ, ಅವನನ್ನು ಮೆಚ್ಚುವ ವಾಚಕ ಸಮುದಾಯದ ಸಂಖ್ಯಾಬಲವನ್ನೇ ಅವಲಂಬಿಸಿ ಇರುತ್ತದೆ. ಆತನ ಯಶಸ್ಸು ಅವರ ಕೃತಿ best-seller ಆಗಿ ನಿಲ್ಲಬೇಕು- ಬಿಸಿಬಿಸಿ ದೋಸೆಗಳಂತೆ ಪೇಟೆಯಲ್ಲಿ ಖರ್ಚಾಗಿ ಹೋಗಬೇಕು. ಒಂದು ಉದ್ದೇಶವನ್ನೋ ಧ್ಯೇಯವನ್ನೋ ಇಟ್ಟುಕೊಂಡು ತಾನು ಆದಷ್ಟು ಜನಪ್ರಿಯನಾಗಬೇಕೆಂಬ ಹಂಬಲದಿಂದ ಯಾವುದೇ ಸೃಜನಾತ್ಮಕ ಲೇಖಕ ಹೊರಟರೆ, ಹವ್ಯಾಸಪಟ್ಟರೆ ಅದೇನು ಸಂಕೋಚಪಟ್ಟುಕೊಳ್ಳಬೇಕಾದ ಮಾತಲ್ಲ.

'ಕಥಾಕಾಲಕ್ಷೇಪ' ನಮ್ಮ ಜನಕ್ಕೆ ಇಂದಿನ ಚಪಲವಲ್ಲ. ಸಾವಿರ ವರ್ಷ ಹಿಂದೆ 'ಮೃಚ್ಛಕಟಿಕ' ನಾಟಕದಲ್ಲಿ ಆರ್ಯಕನು ಆರ್ಯ ಚಾರುದತ್ತ ಒಬ್ಬರನೊಬ್ಬರು ಬೀಳ್ಕೊಡುವಾಗ ಬಯಸುವುದೇನು? "ಸ್ಮರ್ತವ್ಯಃ ಅಹಂ ಕಥಾಂತರೇಷು" "ನನ್ನನ್ನು ನಿಮ್ಮ ಕತೆ ಸಲ್ಲಾಪಗಳಲ್ಲಿ ನೆನೆದುಕೊಳ್ಳಿರಿ" ಸಾಮರ್‌ಸೆಟ್ ಮೋಮ್ ಅನ್ನುವಂತೆ ಈ ಸ್ಮೃತಿಚಿತ್ರಗಳೇ ಕತೆ-ಕಾದಂಬರಿಗಳ ತಳಹದಿ (Anecdote is the basis of fiction) ಆದ್ದರಿಂದ ಜನರಿಗೆ ಅವರು ಹಳ್ಳಿಯವರಿರಲಿ ಪಟ್ಟಣಿಗರಿರಲಿ, ಹೊತ್ತುಗಳೆಯಲು ಬೇಸರವಳಿಸಲು ಕತೆಗಳು ಬೇಕು- ಮಾನವ ಜೀವನದ "ಸುಖದುಃಖಸಂಗಮ"ದ ಸಂಕಥಾವಿನೋದ ಬೇಕು. ಅದಕ್ಕಾಗಿಯೇ ಮ್ಯಾಗಝಿನ್ ಕತೆಗಳ ಬೇಡಿಕೆ ಪೂರೈಕೆ. ನಾಗರಿಕನ ಮತ್ತು ಅವನ ಹೆಂಡತಿಯ ವಾಚನಾಭಿರುಚಿಯನ್ನು ಭಾವ ಸಂಸ್ಕಾರವನ್ನು ಕಾಪಾಡಿಕೊಂಡು ಬರಲಿಕ್ಕೆ ಅದೊಂದೆ ಸಾಧನ. ಆದರೆ ಇಲ್ಲಿಯೂ ಒಂದು ಸೂಕ್ಷ್ಮ. ಮ್ಯಾಗಝಿನ್ ಕತೆಗಳಿಗೆ ಒಂದು ವಿಶಿಷ್ಟ ಸ್ವರೂಪ ಬಂದಿದೆ. ನಿಯತಕಾಲಿಕಗಳನ್ನು ಪ್ರಕಟಿಸಲು ಚಂದಾದಾರ ಕೊಡುವ ಕ್ರಯಕ್ಕಿಂತ ಎಷ್ಟೋ ಹೆಚ್ಚು ಹಣ ಬೀಳುತ್ತದೆ. ಆ ಹಣ ಬರುವುದು ಜಾಹೀರಾತುಗಳಿಂದ ಜಾಹೀರಾತುಗಳಿಗೆ ಜನಪ್ರಿಯ ಮ್ಯಾಗಝೀನ್‌ಗಳೇ ಬೇಕು. ಆದರೆ ಮ್ಯಾಗಝಿನ್ ಜನಪ್ರಿಯವಾಗುವುದು ಜಾಹೀರಾತುಗಳಿಂದ ಅಲ್ಲ-ಕತೆ-ಕಾದಂಬರಿ (ಧಾರಾವಾಹಿ)ಗಳಿಂದ ಆದ್ದರಿಂದ ಈ ಕತೆಗಳನ್ನು ಮ್ಯಾಗಝಿನ್ ಸಂಪಾದಕರು, ಕೆಲಸಲ ಪ್ರಭಾವಿ ಜಾಹೀರಾತುದಾರರು ತಮ್ಮ ಮ್ಯಾಗಝಿನ್‌ಗಳಲ್ಲಿ ಅಪೇಕ್ಷಿಸುತ್ತಾರೆ. ಆದರೆ ಕಥಾ ಲೇಖಕನಿಗೆ ತನ್ನ ಕತೆ ಓದುಗನಿಗೆ ಆದಷ್ಟೂ ಅಖಂಡವಾಗಿ ಒಂದೇ ಸವನೆ ಓದಲು ಸಿಗಬೇಕೆಂದಿರುತ್ತದೆ. ಆದರೆ ಸಂಪಾದಕನಿಗೆ ಅದನ್ನು ಆರಂಭದಲ್ಲಿ ಚಿತ್ರದೊಂದಿಗೆ ಕೆಲವಂಶಕೊಟ್ಟು ಉಳಿದ (ಸ್ವಾರಸ್ಯದ) ಅಂಶವನ್ನು ಮುಂದ ಜಾಹೀರಾತುಗಳೊಂದಿಗೆ ಕೊಡಬೇಕೆಂಬ ಹಂಚಿಕೆ ಇರುತ್ತದೆ. 'ಇಂತಿಷ್ಟನೇ ಪುಟ ನೋಡಿರಿ

ಂದಾಗಲೂ ಓದುಗ ಅಲ್ಲಿಗೆ ಹಾಯದೇ ತನ್ನ ಕಥೆಯನ್ನು ಮೊದಲು ಓದಿದಷ್ಟಕ್ಕೇ ಮುಗಿಸಬಹುದೆಂಬ ಅಳುಕು ಲೇಖಕನಿಗೆ ಇದ್ದೇ ಇರುತ್ತದೆ! ಈ ಸಂಪಾದಕ ಜಾಹೀರಾತುದಾರರ ತ್ತಡದಿಂದ ಕಥೆಯ ಸ್ವರೂಪ, ತಂತ್ರಗಳು ಮಾರ್ಪಡುತ್ತವೆ. ಉದಾಹರಣೆಗೆ, ಧಾರಾವಾಹಿಯ ಂದೊಂದು ಪ್ರಕರಣವೂ ರೋಚಕವಾಗಿ ಕುತೂಹಲ ಕೆರಳಿಸುವಂತೆ ಮುಗಿಯಬೇಕು- ಮುಂದಿನ ಾರದ ಘಟನಾವಳಿಯತ್ತ ಆಸಕ್ತಿ ಕೆರಳಿಸಲಿಕ್ಕೆ.

ಹೀಗೆ ಮ್ಯಾಗೆಝಿನ್‌ಗಳಿಗೆ ಕಥೆ ರಚಿಸುವುದು ಒಂದು ಉತ್ತೇಜಕ ಶಿಸ್ತು. ಕಲಾ ಪ್ರಜ್ಞೆಗೆ ಹ್ವಾನ. ಅಲ್ಲದೆ ವಾರವಾರ ಭಾಗಶಃ ಪ್ರಕಟವಾಗುವಾಗ ತನ್ನ ಕೃತಿಯ ಕೆಲವೆಡೆಗಳನ್ನು ಓದುಗರ ತಿಕ್ರಿಯೆಗಳಿಂದ ಕಥೆಗಾರ ಅರಿತುಕೊಳ್ಳಲು ಉಪಕಾರವಾಗುತ್ತದೆ. ಇದೂ ಕಥನ ಕಲೆಯ ಶಲ್ಯಕ್ಕೆ ತುಂಬ ಪೋಷಕವೇ. ಅಂದಾಗ ಮ್ಯಾಗೆಝಿನ್ ಕಥೆಯೆಂದು ಮೂಗು ಮುರಿಯುವ ಡಿವಂತಿಕೆ ನಮ್ಮ ಹುಬ್ಬುಗಂಟಿನ ವಿಮರ್ಶಕರಿಗೆ ಒಂದು ಆತ್ಮಸಂಭಾವನೆಯ ವೈಖರಿಯೇ ೊರತು ಅದಕ್ಕೆ ನಮ್ಮ ಕಥಾ-ಕಾದಂಬರಿಕಾರರು ವಿಶೇಷ ಗಮನ ಕೊಡಬೇಕಾಗಿಲ್ಲ.

●

('ರಂಜನಾ' ೧೯೮೬)

# ಪೋಲೀಸರು ಮತ್ತು ಸಾರ್ವಜನಿಕರು

ಪೋಲೀಸ್ ಶಬ್ದದಲ್ಲಿಯೇ ಅದರ ಸಾರ್ವಜನಿಕ ಸಂಬಂಧಗಳ ಅಗತ್ಯ ಮತ್ತು ಮಹತ್ವ ಅಡಕವಾಗಿದೆ. ಪೋಲೀಸ್ ಅಂದರೇನೇ ಪಬ್ಲಿಕ್ ಆರ್ಡರ: ಸಾರ್ವಜನಿಕ ಸುವ್ಯವಸ್ಥೆಗಾಗಿ ಉಂಟಾದ ವಿಶಿಷ್ಟ ಸೇವಾ ಸಂಘಟಣೆ. ಈ ಶಬ್ದದ ಮೂಲ ಪೋಲೀಶ್, ಇದೊಂದು ಗ್ರೀಕ್ ಶಬ್ದ. ಇದರ ಅರ್ಥ ನಗರವೆಂದು. ಅಂದರೆ, ಪೊಲೀಸ್ ಸಂಘಟಣೆಯು ನಾಗರಿಕ ಬಂದೋಬಸ್ತು, ಶಿಸ್ತು ಶಾಂತತೆಗಳ ಯೋಗಕ್ಷೇಮಕ್ಕೆ ಅಂದಾಗ ನೇರವಾಗಿ ಪ್ರಜೆಗಳೊಂದಿಗೆ ಶ್ರೀ ಸಾಮಾನ್ಯರೊಂದಿಗೆ ಸಂಬಂಧ ಪಟ್ಟದ್ದು.

ರಾಜ್ಯಶಾಸ್ತ್ರದ ಯಾವ ವಿದ್ಯಾರ್ಥಿಗೂ ಗೊತ್ತಿರುವಂತೆ, ಪೊಲೀಸ ಪದ್ಧತಿ ಆರಂಭವಾದದ್ದು ಇಂಗ್ಲೆಂಡಿನಲ್ಲಿ. ಅದಕ್ಕೆ ಕಾರಣ ಪುರುಷ ೧೮ ನೆಯ ಶತಮಾನದಲ್ಲಿಯ ಬ್ರಿಟಿಷ ಪ್ರಧಾನಿ ರಾಬರ್ಟ ಪೀಲ. ಆದ್ದರಿಂದ ಬ್ರಿಟನ್ನಿನಲ್ಲಿ ಪೋಲೀಸರನ್ನು ಜನ ಬಳಕೆಯ ಮಾತಿನಲ್ಲಿ ಕರೆಯುವದು ಬೊಬಿ ಎಂದು (ಬೊಬಿ ಇದು ರೋಬರ್ಟದ ಆಡು ನುಡಿಯ ರೂಪ, ಕೃಷ್ಣನನ್ನು ಕಿಟ್ಟಿ, ಕುಟ್ಟಿ ಎಂದಂತೆ-

ಇದೆಲ್ಲ ಗುಡ್ಡ ಸುತ್ತಿದ್ದು ಯಾವ ಮೈಲಾರ ಮುಟ್ಟಲಿಕ್ಕೆ? ಒಂದನೆಯದಾಗಿ, ಸರಕಾರದ ಬೇರೆ ಯಾವ ಆಡಳಿತ ವಿಭಾಗಕ್ಕಿಂತ ಹೆಚ್ಚು ನಿಕಟ ಹಾಗೂ ನಿರಂತರವಾಗಿ ಸಾರ್ವಜನಿಕರೊಂದಿಗೆ ಸಂಪರ್ಕ ಬರುವ ಸೇವಾ ವಿಭಾಗ ಈ ಪೋಲೀಸರದು. ಎರಡನೆಯದಾಗಿ, ಪೋಲೀಸ ಸಂಘಟಣೆ ಹುಟ್ಟಿ ಬೆಳೆದ ನಾಡಿನಲ್ಲಿ ಜನರು ಪೋಲೀಸರನ್ನು ಎಷ್ಟು ಸಲಿಗೆಯಿಂದ ಕಾಣುವರೆ ಎಂಬುದು-ಇದಿಷ್ಟು ನನ್ನ ಪ್ರಾಸ್ತಾವಿಕ ಅಭಿಪ್ರಾಯದಿಂದ ಮನದಟ್ಟಾಗಬೇಕು.

ಪೋಲೀಸ ಸಂಘಟಣೆ ಹುಟ್ಟಿದಂದಿನಿಂದ ಇಂದಿನವರೆಗೂ ಅದು ಹುಟ್ಟಿದ ರಾಷ್ಟ್ರದ ಪೋಲೀಸನು ಶ್ರೀ ಸಾಮಾನ್ಯನ, ಹಾದಿಹೋಕನ, ಅಬಾಲವೃದ್ಧರ, ಅಸಹಾಯಕ ಅಂಗವಿಕಲ ಅಪ್ತ ಮಿತ್ರನಾಗಿರುತ್ತಾನೆ. ರಸ್ತೆ ದಾಟುವಲ್ಲಿ, ಬೀದಿಯ ಚೌಕಿನಲ್ಲಿ ಶಾಲೆಯ ಮಕ್ಕಳನ್ನು ಕೈಹಿಡಿದು ಅಥವಾ ಎತ್ತಿಕೊಂಡು ಆತ ಸುರಕ್ಷಿತವಾಗಿ ಆಚೆಗೆ ದಾಟಿಸುತ್ತಾನೆ. ಊರಿಗೆ ಬಂದ ಆಗಂತುಕರಿಗೆ ಅಪರಿಚಿತರಿಗೆ ಸೌಜನ್ಯದಿಂದ ಯೋಗ್ಯ ಮಾರ್ಗದರ್ಶನ ಮಾಡುತ್ತಾನೆ. ಇನ್ನೂ ನಮ್ಮಲ್ಲಿ ಕೆಲವರು ಒಳ್ಳೆಯ ಹಾಗೂ ಸಭ್ಯ ಪೋಲೀಸರಿರುವಂತೆ ಬ್ರಿಟನ್, ಅಮೇರಿಕೆಗಳಲ್ಲಿಯೂ ಕೆಲವು ಕೆ ಅಸಭ್ಯ ಪೋಲೀಸರು ಇಲ್ಲದಿಲ್ಲ. ಆದರೂ ಒಟ್ಟಿನಲ್ಲಿ ನಾಗರಿಕರ ಸೇವೆಗಾಗಿಯೇ ಹುಟ್ಟಿ ಬೆಳೆ ಈ ಸಂಘಟಣೆಯ ಸದಸ್ಯರು ಸರ್ವೇಸಾಧಾರಣ ಪೋಲೀಸರು ನಾಗರಿಕರೊಂದಿಗೆ ವಿನಯ ವಿನೋದ ಹಾಗೂ ವಿವೇಕಪೂರ್ಣವಾಗಿಯೇ ವ್ಯವಹರಿಸುತ್ತಾರೆ. ದರ್ಪದ ಭಾವನೆ, ದುರ್ವರ್ತ ಅಲ್ಲಿಯ ಪೋಲೀಸರಿಂದ ಅಪರೂಪ. ಪೋಲಿಸರ ಮತ್ತು ಸಾರ್ವಜನಿಕರ ನಡುವಿನ ಸಂಬಂಧಗಳ ಪಾಶ್ಚಾತ್ಯ ದೇಶಗಳಲ್ಲಿ ತುಂಬ ಅನ್ಯೋನ್ಯವಾಗಿ ಸ್ನೇಹಸಾಮರಸ್ಯಗಳಿಂದ ಕೂಡಿರುತ್ತವೆ.

ಆದರೆ ನಮ್ಮ ದೇಶದಲ್ಲಿ? ಇದಕ್ಕೆ ತೀರ ವಿಪರೀತವಾದ ವಾತಾವರಣ ಹಾಗೂ ವ್ಯವಹಾ ಕಂಡುಬರುತ್ತದೆ. ದೇಶದ ದುರ್ದಶೆಯ ದಶಾವತಾರಗಳಲ್ಲಿ ಇದು ಒಂದು. ಹಿಂದೆ ಹೇಳಿವ

ಪೋಲೀಸನ ಕರ್ತವ್ಯವೇ ಅವನ ಸೇವೆಯ ಸಾಫಲ್ಯವೇ, ಸಾರ್ವಜನಿಕರೊಂದಿಗೆ ಇಟ್ಟಿರಬೇಕಾದ ಸಂಪರ್ಕದ ಯಶಸ್ಸಿನ ಹಾಗೂ ಸಾಫಲ್ಯದ ಮೇಲೆಯೇ ಅವಲಂಬಿಸಿರುತ್ತದೆ. ಆತ ಒಂದು ಪೊಳ್ಳಿನಲ್ಲಿ ಕೆಲಸ ಮಾಡುವದಿಲ್ಲ. ಆತನ ವ್ಯವಹಾರ ಒಡನಾಟ ಆಡಳಿತವೆಲ್ಲ ಜನರೊಂದಿಗೆ ಜನರಿಗೋಸ್ಕರ ಹಾಗೂ ಜನರ ಪರವಾಗಿಯೇ. ಶಿಸ್ತು, ಬಂದೋಬಸ್ತು ಶಾಂತಿ ರಕ್ಷಣೆ, ಗಲಭೆ-ದೊಂಬಿಗಳ ನಿಯಂತ್ರಣ ಕಳ್ಳಕಾಕರ ಪಾರುಪತ್ಯ, ತನಿಖೆ, ಫಿರ್ಯಾದು ಪುರಾವೆ ಯಾವುದೇ ಕ್ರಿಯಾ ಕ್ರಮಕ್ಕೂ ಪೋಲೀಸರಿಗೆ ಜನತೆಯ, ಸಾರ್ವಜನಿಕ ಸಹಕಾರ ಸಹಾಯ ಸಹಾನುಭೂತಿಗಳು ಬೇಕೇ ಬೇಕು. ಶಿಷ್ಟರ ಬೆಂಬಲ, ನೆರವು ಇಲ್ಲದೆ ದುಷ್ಟರ ದಂಡನೆ ಅಸಾಧ್ಯ.

ಆದರೆ ನಮ್ಮ ಹಳ್ಳಿಪಟ್ಟಣಗಳಲ್ಲಿ ಈ ಸಹಕಾರವೇ ಸರಿಯಾಗಿ ಸಾಕಷ್ಟು ಸಿಗುವುದಿಲ್ಲ. ಬ್ರಿಟಿಶ ಸರಕಾರದ ಜಾಯಮಾನದಿಂದಲೂ ಇಲ್ಲಿ ಪೊಲೀಸರೂ ಸಾರ್ವಜನಿಕರೂ ಪರಸ್ಪರರನ್ನು ಭಯ, ಸಂಶಯಗಳಿಂದ ಇಲ್ಲವೇ ತಿರಸ್ಕಾರ ಉದಾಸೀನತೆಗಳಿಂದ ನೋಡಿ ನಡೆದುಕೊಳ್ಳುತ್ತ ಬಂದಿದ್ದಾರೆ. ಇದಕ್ಕೆ ಕಾರಣವೇನು?

ಬ್ರಿಟಿಷರ ರಾಜ್ಯ ಪೊಲೀಸ ರಾಜ್ಯವಾಗಿತ್ತು. ಪಾರತಂತ್ರ್ಯದಲ್ಲಿ ಬದುಕುವ ಜನರೆಲ್ಲ ಭಾವೀ ಬಂಡುಗಾರರೇ-ಎಂಬ ಭಾವನೆಯಿಂದ ಅಂದಿನ ಆಳರಸರು ನೋಡುತ್ತ ಬಂದರು. ನಮ್ಮ ನಾಡೇ ನಮಗೆ ಪ್ರಚಂಡ ಸೆರೆಮನೆಯಂತಾಗಿ ಪೊಲೀಸ ಸಂಘಟನೆ ಸೆರೆಯಾಳುಗಳ ಮೇಲೆ ಸರ್ಪಗಾವಲಿನಿಂದ ನೋಡಿಕೊಳ್ಳಲು ನೇಮಕಗೊಂಡ ಜೇಲು ಸಿಬ್ಬಂದಿಯಂತೆ. ಆದರೆ, ೧೮೫೭ರ ಸಿಪಾಯಿ ಬಂಡಾಯದಿಂದ ೧೯೪೭ರ ಸ್ವಾತಂತ್ರ್ಯ ಪ್ರಾಪ್ತಿಯವರೆಗೂ ಇದೇ ದೃಷ್ಟಿ ಇದೇ ಧೋರಣೆ ಸರಕಾರದ್ದೂ ಪೊಲೀಸರದ್ದೂ ಆಗಿತ್ತು.

ಸ್ವಾತಂತ್ರ್ಯ ಬಂದನಂತರವೂ ಈ ಧೋರಣೆ ವಿಶೇಷ ಬದಲಾಗಲಿಲ್ಲ. ತಿರುಗಿ ಇನ್ನಿಷ್ಟು ಸಂಕೀರ್ಣ ಹಾಗೂ ವಿಷಮವಾಯಿತು. ಈ ಸ್ವಾತಂತ್ರ್ಯ ಚಳುವಳಿಗಳಲ್ಲಿ ಪೊಲೀಸ ದಬ್ಬಾಳಿಕೆಗೆ, ಪೀಡೆಗೆ ಬಲಿಯಾದ ರಾಷ್ಟ್ರೀಯ ಧುರೀಣರೇ ಸ್ವರಾಜ್ಯದಲ್ಲಿ ಆಳರಸರಾದರು. ಈ ಆಕಸ್ಮಿಕ ಬದಲಾವಣೆ ಸರಕಾರದ ನೌಕರ ಶಾಹಿಯಲ್ಲಿ ಹೇಗೋ ಪೊಲೀಸ ವಿಭಾಗದಲ್ಲಿಯೂ ದಿಗಿಲಸ್ಸುಂಟು ಮಾಡಿತು. ಸೇಡು-ಸಿಡುಕುಗಳಿಗೆ ತಾವು ಇನ್ನೂ ಬಲಿ ಆಗುವೆಂಬುದೇ ಆ ದಿಗಿಲು. ಜತೆಗೆ ಈ ಹೊಸ ಸರಕಾರದ ಇಂದಿನ ಆಳುವ ಪಕ್ಷದ ಹಿರಿ ಕಿರಿ ಮುಂದಾಳುಗಳ ಹಾಗೂ ಅವರನ್ನಂಟಿ ಕೊಂಡವರ ಒತ್ತಾಯ ವರ್ಚಸ್ಸುಗಳಿಗೂ ಈ ಕರ್ಮಚಾರಿಗಳು ಚಾಲಾಕಿನಿಂದ, ಚಾಕಚಕ್ಯದಿಂದ ವಶವರ್ತಿಯಾಗಿ ನಡೆಯಲು ಕಲಿತರು. ಸ್ವರಾಜ್ಯವು ಸ್ವಾಹಾರಾಜ್ಯವಾಗಿ ಭರದಿಂದ ಬೆಳೆದಂತೆ ಹೊಸ ಬಗೆಯ ಕಾಯದೆ ಭಂಗಚಳವಳಿ ಪ್ರತಿಷ್ಠಿತವಾಯಿತು. ಕಳ್ಳಪೇಟೆ, ಕಳ್ಳಸಾಗಾಟ, ಕಳ್ಳದಾಸ್ತಾನು, ಕಳ್ಳಭಟ್ಟಿ ಇತ್ಯಾದಿಯಾಗಿ ಅಕ್ರಮಗಳು ಬಹುಮುಖವಾಗಿ, ಬಹುಮುಖ್ಯವಾಗಿ ಅತ್ಯಗತ್ಯವೆಂದು ಕೊಳ್ಳುವಂತೆ ಆಯಿತು.

ಇದರಿಂದ ಉತ್ತರ ಪ್ರದೇಶದಲ್ಲಿ ರಾಜಕಾರಣೆಗಳು ಡಕಾಯಿತರೊಂದಿಗೆ ಸಂಪರ್ಕವಿಟ್ಟು ಕೊಳ್ಳುವಂತೆ ದೇಶದಲ್ಲಿ ರಾಜಕಾರಣಗಳು ಡಕಾಯಿತರೊಂದಿಗೆ ಸಂಪರ್ಕವಿಟ್ಟುಕೊಳ್ಳುವಂತೆ

ದೇಶದಲ್ಲಿ ಸರ್ವತ್ರ ಆಡಳಿತಗಾರರೂ ಈ ರಾಜಕಾರಣಿಗಳೊಂದಿಗೆ ಅವರ ಬೆನ್ನೆಲುಬಾದ ಈ ಹೊಸ ಶ್ರೇಷ್ಠ ವರ್ಗದೊಂದಿಗೂ ಯೋಗ್ಯ ಹೊಂದಾಣಿಕೆ ಮಾಡಿಕೊಂಡು ಸಾರ್ವಜನಿಕ ಜೀವನದಲ್ಲಿಯೇ ಒಂದು ವಶೀಲಿ ವಶೀಕರಣದ ಲಾಭದ ಮೋಹ ಅಧಿಕಾರದ ದಾಹ ಹಾಗೂ ಸ್ವಜನ ಪಕ್ಷಪಾತ ಇತ್ಯಾದಿಗಳ ವ್ಯವಹಾರಗಳಲ್ಲಿ ಇತರ ಆಡಳಿತಗಾರ ವರ್ಗದೊಂದಿಗೆ ಈ ಪೊಲೀಸ ಸಂಘಟನೆಯೂ ತೊಡಗಿಕೊಂಡಿತು. ಆ ಮೂಲಕ ಅದು ಶ್ರೀ ಸಾಮಾನ್ಯರಿಂದ ಬಹು ಜನ ಸಮುದಾಯದಿಂದ, ಇನ್ನೂ ದೂರ ಸರಿಯುವಂತಾಯಿತು. ಹಾಗೆ ಹೇಳುವದಾದರೆ ಪೊಲೀಸ ವಿಭಾಗದವರಿಗೂ ಸಾರ್ವಜನಿಕರಿಗೂ ನಿಕಟವಾದ ಸಂಬಂಧ ಇದ್ದೇ ಇದೆ. ಆದರ ಅದು ಮೇಲೆ ಹೇಳಿದ ಪಟ್ಟಭದ್ರ ಹಿತಾಸಕ್ತಿಗಳ ಪ್ರತಿಷ್ಠಿತ ಸಾರ್ವಜನಿಕರೊಂದಿಗೆ ರೈತ, ಕೂಲಿಕಾರ, ಕೆಲಸಗಾರ, ಮಧ್ಯಮ ವರ್ಗದ ಸಂಬಳಗಾರ, ಕೈಗಾರಿಕೆ ಕಸಬುಗಾರ, ಕಾರಕೂನ, ಶಿಕ್ಷಕ, ಚಿಕ್ಕ ಅಂಗಡಿಕಾರ ಇವರ ಪಾಲಿಗೆ ಪೊಲೀಸ ಸಂಘಟಣೆ ಸುಲಭವಾಗಿ ಸೇವೆಗೆ ಸಹಾಯಕ್ಕೆ ಒದಗದು.

ಇನ್ನೂ ಒಂದು ತೊಡಕು. ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಒಳ್ಳೆಯ ಶಿಕ್ಷಣ ಸಂಸ್ಕಾರವುಳ್ಳ ಪೊಲೀಸ ಅಧಿಕಾರಿಗಳ ಸಂಖ್ಯೆ ಹಿಂದಿಗಿಂತ ಹೆಚ್ಚಾಗಿದೆ. ಆದರೂ ಎಂದಿನಂತೆಯೇ ಪೊಲೀಸ ಪಡೆಗಳ ಭರ್ತಿ ಅಶಿಕ್ಷಿತ, ಅರ್ಧಶಿಕ್ಷಿತ, ಅಸಂಸ್ಕೃತ ವರ್ಗಗಳಿಂದಲೇ ಹೆಚ್ಚಾಗಿ ನಡೆಯುತ್ತದೆ. "ಕಲಿತ ಮಂದಿಯಲ್ಲಿ ಕಾನೂನು ಜ್ಞಾನ ಬಲಿಯುತ್ತದೆ, ಅವರಿಂದ ಯಾವುದೇ ಕೆಲಸ ತೆಗೆದು ಕೊಳ್ಳುವುದು ತುಸು ಕಷ್ಟವಾಗುತ್ತದೆ. ಹುಂಬ ಜವಾನರು ಹೆಚ್ಚು ವಿಧೇಯ" ಎಂದಿದ್ದರು ಸಹ ಒಬ್ಬ ಪೊಲೀಸ ಅಧಿಕಾರಿ ಮಿತ್ರರು. ಈ ಪಥ್ಯಪಾಲನೆಯಿಂದ ಅಂಥ ಪೊಲೀಸರಿಗೂ ಸುಶಿಕ್ಷಿತ ಸುಸಂಸ್ಕೃತ ಸಾರ್ವಜನಿಕರಿಗೂ ಇನ್ನಿಷ್ಟು ಅಂತರ ಬೆಳೆಯುತ್ತದೆ: ಇದರಿಂದ ಒಟ್ಟಾರೆ ಸಾರ್ವಜನಿಕರಲ್ಲಿ ಪೊಲೀಸ ಬಿಂಬ ಮಾಸಿ ಹೋಗುತ್ತದೆ. ಇದಕ್ಕೇನು ಉಪಾಯ? ಸಭ್ಯರೆಲ್ಲರೂ ಪೊಲೀಸರಾಗುವಂತಿಲ್ಲ ಪೊಲೀಸರೆಲ್ಲರೂ ಸಭ್ಯರಾಗುವಂತೆ ಸತತ ಪ್ರಯತ್ನ ನಡೆಯಬೇಕು. ಹಾಗೆ ನೋಡಿದರೆ ಸಜ್ಜನರೂ, ಸುಸಂಸ್ಕೃತರೂ ಸದಭಿರುಚಿಯ ಸಾತ್ವಿಕ ಹಾಗೂ ಸಾರ್ವಜನಿಕ ಹಿತಾಸಕ್ತಿಯ ಸಮರ್ಥ ಪೊಲೀಸ ಅಧಿಕಾರಿಗಳು ಹಿಂದೂ ಇದ್ದರು. ಇಂದೂ ಇದ್ದಾರೆ. ಅಂಥವರನ್ನು ನಾನು ಹತ್ತಿರದಿಂದ ಬಲ್ಲೆ, ಆದರೆ ಇವರೆಲ್ಲ ಸುತ್ತಲಿನ ಮರಳುಗಾಡಿನಲ್ಲಿ ಒಯಾಸಿಸ್‌ಗಳಂತೆ. ಈ ಹಸಿರು ಸ್ಥಳಗಳು ಹೆಚ್ಚಬೇಕು, ಹಬ್ಬಬೇಕು, ವಿವಿಧ ಸಾರ್ವಜನಿಕ ಸೇವಾಕ್ಷೇತ್ರಗಳಲ್ಲಿ ಸಂಸ್ಕೃತಿ ಸಂಘಟನೆಗಳಲ್ಲಿ ಹಿರಿಕಿರಿ ಪೊಲೀಸ ಅಧಿಕಾರಿಗಳು ಕೇವಲ ಮಾನವರಾಗಿ, ಸಭ್ಯನಾಗರಿಕ ರಾಗಿ ಸೇರಬೇಕು. ಪೊಲೀಸರಿಗೂ ಹೃದಯವಿದೆ, ಸದಭಿರುಚಿ ಇದೆ. ಅವರೂ ನಮ್ಮಂತೆ ಮನುಷ್ಯರೇ ಎಂಬ ಬಿಂಬ ತಿಳಿಯಾಗಿ ತಿಳಿಯುವಂತೆ ಜನತೆಯಲ್ಲಿ ಮೂಡಿ ನಿಲ್ಲುವಂತೆ ಆಗಬೇಕು.

ಅತ್ತ ಭಯ, ಇತ್ತ ಸಂಶಯ: ಅತ್ತ ಉದ್ಧಟತನ, ಇತ್ತ ಉದಾಸೀನತೆ ಕೂಡಿಯೇ ಕಡಿಮೆ ಆಗಬೇಕು. ಅಳಿದು ಹೋಗಬೇಕು. ಇಂದು ನಡೆಯುವದೇನು? ಸಾರ್ವಜನಿಕರ ಸಹಕಾರವಿಲ್ಲದ ಪೊಲೀಸ ಕ್ರಿಯಾಚರಣೆಗೆ ಯಶಸ್ಸಾಗಲಿ ಶ್ರೇಯಸ್ಸಾಗಲಿ ಸಿಗುವುದಿಲ್ಲ. ಅಂಥ ಆಪತ್ತು ಗೇಡಿನಿಂದ ಪೊಲೀಸ ವರ್ಗ ಸಾರ್ವಜನಿಕರಲ್ಲಿ ಇನ್ನೂ ಅಸಡ್ಡೆಗೆ, ಅಸಹ್ಯಕ್ಕೆ ತುತ್ತಾಗುತ್ತದೆ. ಇದರಿಂದ ನೊಂದ ಹಾಗೂ ಹತಾಶಗೊಂಡ ಪೊಲೀಸ ಪ್ರವೃತ್ತಿ ಇನ್ನೂ ದರ್ಪದಿಂದ ದೂರ ಸರಿದು ಬಿಂಕ, ಬಿಗುಮಾನ

ಬಲವಂತಗಳಿಂದ ವರ್ತಿಸುತ್ತಿದೆ.

ಇದೊಂದು ವಿಷಚಕ್ರ, ಇದನ್ನು ಒಡೆಯಲೇ ಬೇಕು. ಅತ್ತ ಪೊಲೀಸ ಪ್ರವೃತ್ತಿ ಅವರ ಸಾರ್ವಜನಿಕ ಬಿಂಬ ಸುಧಾರಿಸಬೇಕಾದರೆ ಇತ್ತ ಸಾರ್ವಜನಿಕರು ಅವರಲ್ಲಿಯ ಓದು ಕಲಿತು ತಿಳುವಳಿಕೆಯುಳ್ಳವರೆಂಬ ಸಭ್ಯ ವರ್ಗಗಳು ಧೈರ್ಯದಿಂದ ವಿಶ್ವಾಸದಿಂದ ಪೊಲೀಸರನ್ನು ಕಾಣಬೇಕು. ಅವರನ್ನು "ವ್ಯಾವಹಾರಿಕ ಅಸ್ಪೃಶ್ಯ" ರಂತೆ ನಡೆಯಿಸಿ ಕೊಳ್ಳಬಾರದು. ಸಧ್ಯ, ಪೊಲೀಸರು ಮನೆಗೆ ಬೆಂಕಿ ಬಿದ್ದಾಗ ಧಾವಿಸುವ ಅಗ್ನಿಶಾಮಕದಳದಂತೆ ಕೇವಲ ಅಗತ್ಯಕ್ಕೆ ಬೇಕಾದ ಅನಿವಾರ್ಯ ಸಿಬ್ಬಂದಿಯಂತೆ ಸಾರ್ವಜನಿಕರು ಭಾವಿಸುತ್ತಾರೆ. ಆ ಭಾವನೆ ಹೋಗಬೇಕು. ಪಾಶ್ಚಾತ್ಯರಲ್ಲಿ ನಾಗರಿಕರು ಕಾಣುವಂತೆ ನಾವು ಪೊಲೀಸನನ್ನು ಮಿತ್ರನಾಗಿ, ಬಂಧುವಾಗಿ, ನಮ್ಮವನಾಗಿ ನೋಡಲು ಯತ್ನಿಸಬೇಕು.

# 'ಕೇಳನೋ ಹರಿ ತಾಳನೋ!'

ಭಕ್ತಿ ಮತ್ತು ಭಜನೆ ಇವುಗಳಿಗೆ ಒಂದೇ ಮೂಲಧಾತು ಭಜ್. ಆದರೆ ಭಕ್ತಿಗೊಂದು ಸ್ಥಾಯೀ ಭಾವನೆ, ಮಧುರ ರಸಾನುಭೂತಿ ಮತ್ತು ಭಜನೆ ನಾಮಸಂಕೀರ್ತನೆಯ ವ್ಯಾವಹಾರಿಕ ರೂಪ ರೂಢಿಯಲ್ಲಿ. ಅದು ಭಕ್ತಿಯ ಬಹಿರಂಗಪ್ರದರ್ಶನೆಯ ಒಂದು ರೀತಿ. ದೇವರನಾಮಗಳನ್ನೋ, ದಾಸರ ಪದ್ಯಗಳನ್ನೋ, ಸಂತರ ಅಭಂಗಗಳನ್ನೋ ಸರಾಗವಾಗಿ ಒಬ್ಬರೋ, ಬಹುಜನರೋ ಕೂಡಿ ದೇವರ ಎದುರು ಹಾಡುವುದು ಭಜನೆಯೆಂದುಕೊಳ್ಳುತ್ತದೆ.

ಆದರೆ ನಿಜವಾದ ಅರ್ಥದಲ್ಲಿ ಇದು ಭಜನೆಯೇ? ಅಲ್ಲ, ಇದು ಸಂಕೀರ್ತನೆ ನಾಮಸಂಕೀರ್ತನೆ. ದೇವರ ಮಹಿಮೆಯನ್ನು ವಿಭೂತಿಗಳನ್ನು ಕೊಂಡಾಡುವುದು ಆಯಾ ಸಂಗೀತಮಯವಾಗಿ "ಕಲಿಯುಗದಲ್ಲಿ ಹರಿನಾಮವ ನೆನೆದರೆ ಕುಲಕೋಟಿಗಳುದ್ಧರಿಸುವವೆಂದು" ದಾಸರು ಸಾರಿದರು. ("ಕಲೌತತ್ ಹರಿಕೀರ್ತನಂ") ದೇವರಿಗಿಂತ ದೇವರ ಭಜನೆ - ನಾಮೋಚ್ಚಾರಣೆ ಮಿಗಿಲೆನ್ನುವ ತನಕವೂ ದಾಸರ ಭಕ್ತಿ ಪರವಶತೆ, ಕೀರ್ತನಾಸಕ್ತಿ ಬೆಳೆಯಿತು "ನೀನ್ಯಾಕೋ?! ನಿನ್ನ ಹಂಗ್ಯಾಕೋ? ನಿನ್ನ ನಾಮದ ಬಲ ಒಂದಿದ್ದರೆ ಸಾಕೋ!" ಎಂದು ದಾಸವರೇಣ್ಯರು ದೇವರಿಗೇ ಸವಾಲು ಎಸೆದರು!

ಆದರೆ ಇಲ್ಲಿ ಒಂದು ಸೂಕ್ಷ್ಮ, ನಾವು ದಾಸರ ಪದಗಳನ್ನು ಎತ್ತಿ ಒತ್ತಿ ಭಜನೆ ಮಾಡುತ್ತೇವೆ. ತಾಳಗೆಟ್ಟು ತಾಳಕೊಟ್ಟು ಕೂಗಾಡುತ್ತೇವೆ. ಆದರೆ ದಾಸರ ಮಾತಿನ ಮರ್ಮವನ್ನರಿಯುವ ತಾಳ್ಮೆ ತೋರಿಸುವವರು ಎಷ್ಟು? ಅವರು ಈ ಪದ್ಯದಲ್ಲಿ ಹೇಳಿದ್ದು ಹರಿನಾಮವನ್ನು ನೆನೆಯಬೇಕೆಂದು. ನಾಮದ ಬಲ ಅದರ ಪುನರುಚ್ಚಾರಣೆ ಅಲ್ಲ. ಅದರ ಚಿಂತನೆಯಲ್ಲಿ, ಅದರ "ಅನನ್ಯ ಪ್ರಚೋದನೆ"ಯಲ್ಲಿ. ಇದನ್ನು ನಾವು ಅಷ್ಟೊಂದು ಗಮನಿಸಿದಂತೆ ಇಲ್ಲ. ಇಂದು ಭಜನೆ ಎಂಬುದು "ರಾಮಧ್ಯಾನ" ದಂತೆ ಆಗಿಬಿಟ್ಟಿದೆ. ಮತ್ತೂ "ರಾಮಧ್ಯಾನ" ಗಾಂಧೀಜಿಯ ಪುಣ್ಯಸ್ಮರಣೆಯ ಒಂದು ಪಲ್ಲವಿ ಆಗಿಬಿಟ್ಟಿದೆ. "ರಾಮ ನಾಮ! ಸತ್ಯ ಹೈ!" ಶವಯಾತ್ರೆಯ ಸೊಲ್ಲು ಆದಂತೆ!

"ವೈಕುಂಠವು ಕೂಗಳತೆಯಲ್ಲಿ" ಎಂಬುದನ್ನು ಅಕ್ಷರಶಃ ನಿಜವೆಂದು ನಂಬುವ ಭಜನೆ ಮಂಡಳಿಗಳು ತಮ್ಮ ಕೂಟಗಳಲ್ಲಿ 'ಸಪ್ತಾಹ'ಗಳಲ್ಲಿ ದೇವರನಾಮಗಳನ್ನು ಕೂಗುವುದರಲ್ಲಿ ಒಬ್ಬರನೊಬ್ಬರು ಮೇಳಾಡಿಸುತ್ತಿರುತ್ತಾರೆ, ಅದೊಂದು "ನಾದಬ್ರಹ್ಮ"ನ ಸಾಕ್ಷಾತ್ಕಾರವನ್ನಾಗಿ ಮಾಡುತ್ತಾರೆ. ದೇವರು ಗಾನಲೋಲ, "ಮದ್ಭಕ್ತಾಃ ಯತ್ರ ಗಾಯಂತೇ ತತ್ರತಿಷ್ಠಾಯ"-ಎಂದು ಆತ ನಾರದರಿಗೆ ಆಶ್ವಾಸನೆಕೊಟ್ಟದ್ದಿದೆ. ಆದರೆ ಇಲ್ಲಿ ಆತ "ತಿಷ್ಠಾಯ" ಎನ್ನುವ ಎಚ್ಚರಿಕೆ ತೆಗೆದುಕೊಂಡಿದ್ದಾನೆ. ಆ ಗಾಯನದಲ್ಲಿ - ಭಗವನ್ನಾಮ ಸಂಕೀರ್ತನೆಯಲ್ಲಿ ಏನಾದರೂ ಕೀಸರ ಬಾಸರ ಅಪಸ್ವರ ಕೇಳಿಬಂದರೆ ಆತ ಅಲ್ಲಿಂದ ಕಾಲ್ದೆಗೆಯುತ್ತಾನೆ. ಅದಕ್ಕಾಗಿಯೇ ಅಲ್ಲಿ ಸ್ಥಾನಾಪನ್ನವಾಗದೆ ನಿಂತೇ ಇರುತ್ತಾನೆ!

ಭಜನಾ ಸಪ್ತಾಹವೆಂಬುದಂತೂ ದೊಡ್ಡ ವಿಡಂಬನೆಯೇ. ನಾನು ಚಿಕ್ಕಂದಿನಿಂದಲೂ ಇಂಥ ಹೇರಳ ಸಪ್ತಾಹಗಳನ್ನು ನೋಡಿದ್ದೇನೆ. ಕೃಷ್ಣಜಯಂತಿ, ದತ್ತಜಯಂತಿ ಸಂದರ್ಭದಲ್ಲಿ

ಅವು ನಡೆಯುತ್ತವೆ. ಆಗ ಅಖಂಡಭಜನೆ ೨ ದಿನ ನಡೆಯಬೇಕು. ಈ ಅಖಂಡತೆ ನಿರಂತರವಾಗಿ ಹೀಗೆ ಸಾಗಬೇಕು. ನಡು ನಡುವೆ ಒಬ್ಬಿಬ್ಬರು ತಾಳ ಕೆಳಗಿಡದೆ ಗೊಣಗುಟ್ಟಿರುತ್ತಾರೆ. ವಿಶೇಷತಃ ಅವರ ತಾಳ್ಮೆಯಲ್ಲಿ ಅದೊಂದು Relay ನ್ಯಾಸ: ಎರಡೆರಡು ತಾಸು ಸರದಿಯಂತೆ ಒಂದೆ ತಾಳ. ('ಏಕತಾಳವಲ್ಲ') ಇಲ್ಲಿ ಒಂದು ಶಂಕೆ. ಸಪ್ತಾಹವೆಂದಾಗ ಅದರಲ್ಲಿ ರಾತ್ರಿಯೂ ಸೇರಿರಬೇಕೆಂಬ ಕಡ್ಡಾಯವೇಕೆ? 'ಅಹನ್' ಅಂದರೆ ಹಗಲು. ಏನೇ ಇರಲಿ ಇದೊಂದು ಸಾಂಕೇತಿಕ ಕ್ರಿಯೆಯಾಗಿ ಬಿಡುತ್ತದೆ.

ಇನ್ನು ನೆನೆಯುವುದು ಮಾನವ ಸಂಸ್ಕರಣ ಮಾಡುವುದೂ ಒಂದು ಯಾಂತ್ರಿಕ ಜನಕ್ರಿಯೆಯಾಗಿಬಿಟ್ಟಿದೆ. ಜಪಮಾಲೆಯ ಮಣಿಗಳು ಬೆರಳುಗಳಲ್ಲಿ ಸರಿಯುತ್ತಿರುತ್ತವೆ. ಅಬೇಧ "ಕರಸೇವೆ"ಯಲ್ಲಿ! ಅಲ್ಲಿಯೂ ಸಂಜ್ಞೆಗೂ ಸಂಖ್ಯೆಗೂ ಮಹತ್ವ. ಇಂಥ ದೇವರ ಹೆಸರಿನ ಇಂತಿಷ್ಟು ಜಪ! ಕೈಯಲ್ಲಿ ಜಪಮಾಲೆ ತಿರುಗುತ್ತಿರುವಂತೆ ಚಿತ್ತವೂ ಎಲ್ಲೆಲ್ಲೋ ತಿರುಗುತ್ತಿರುತ್ತದೆ! "ಜಪಃ ತದಾರ್ಥಾ ಭಾವನಂ" - ಎಂದಿದೆ. ಯಾವುದನ್ನು ನಾವು ಜಪಿಸುತ್ತೇವೆಯೋ (ನೆನೆಯುತ್ತೇವೆಯೋ) ಅದರ ಅರ್ಥದ ಮರ್ಮವನ್ನು ನಾವು ಮೆಲುಕು ಹಾಕುವುದು. ಆದರೆ ನಮಗೆ ಪುನರುಚ್ಚಾರಣೆಯೇ ಮುಖ್ಯ. ('ಹರಿಮುಖೀಂ ಮ್ಹಣಾ ಹರಿಯು ಚೇಂಮ್ಹಣಾ!") ಅರ್ಥವ್ಯೇ? ಅರ್ಥಾಮನರ್ಥಂ ಭಾವಯಂ ನಿತ್ಯಾಃ! ಉಚ್ಚಾರಣೆ ಚಿತ್ತಾದ ಕೇಂದ್ರಿಕರಣಕ್ಕೆ ಒಂದು ದಾರಿ. ಆದರೆ ಅದೂ ಗತಾನುಗತವಾಗಿ ಲೋಕವು ಪಾರಮಾರ್ಥಿಕತೆಯನ್ನು ಕಳೆದುಕೊಳ್ಳುತ್ತದೆ.

ಇಂಥ ವಿಡಂಬನೆಗೆ ಅನುರೂಪವಾಗಿ ನಾವು ಕಥೆ ಕಟ್ಟುತ್ತೇವೆ. ನಾರದರು ವ್ಯಾಧನಿಗೆ "ಮರಾ ಮರಾ" ಅನ್ನಲು ಹೇಳಿದರು. ಅದೇ "ರಾಮ ರಾಮ"ವಾಗಿ ಆತ್ಮಸಂಸ್ಕಾರವಾಗಿ ಆತ ವಾಲ್ಮೀಕಿ ಆದ (ಬಹುಶಃ ಆ ಬೇಡ ಕನ್ನಡಿಗನೇ ಆಗಿರಬೇಕು) ಹಾಗೆಯೇ ಪಾಪಿ ಅಜಾಮಿಳ ಸಾಯುವ ಸಮಯ ಮಗ ನಾರಾಯಣನನ್ನು ಕೂಗಿದ ಮಾತ್ರಕ್ಕೆ ಶ್ರೀಮನ್ನಾರಾಯಣನ ಕೃಪೆಗೆ ಪಾತ್ರನಾದ! ಇಲ್ಲಿ 'ಅರ್ಥ ಭಾವನ' ಎಲ್ಲಿ ಬಂತು? ಆದರೆ ಇದಕ್ಕೆ ಸಮರ್ಥನೆ - ಅರಿವಿಲ್ಲದೆ ಕಾದ ಬೆಂಕಿಯಲ್ಲಿ ಬಿದ್ದರೂ ಅದು ಸುಟ್ಟೇ ಸುಡುತ್ತದೆ! ಇತ್ಯಾದಿ ಇತ್ಯಾದಿ ಇರಲಿ.

ಆದರೆ ನಾನು ಚರ್ಚಿಸಲು ಹೊರಟಿದ್ದು ಭಜನೆಯ ಬಗೆಗೆ. ಭಜನೆಯೆಂದರೆ ನಾಮ ಸಂಕೀರ್ತನೆಯೆ? ಭಜ್ ಧಾತುವಿನ ಈ ಕೆಲವು ಪ್ರತಿಷ್ಠಿತ ಪ್ರಯೋಗಗಳನ್ನು ಗಮನಿಸಬಹುದು:

ಕಾಳಿದಾಸನು 'ಅಜವಿಲಾಪ'ದಲ್ಲಿ ಹೇಳುತ್ತಾನೆ: "ಅಭ ತತ್ವಂ ಆಯೋಪಿ ಮಾರ್ದವಂ ಭಜತೇ-" (ಕಾದ ಕಬ್ಬಿಣವೂ ಮಿದುತನವನ್ನು ಹೊಂದುತ್ತದೆ.)

ಭಗವಂತನೇ ಗೀತೆಯಲ್ಲಿ ಹೇಳಿದ್ದಾನೆ: ತಾನ್ ತಥಾ ಏವ ಭಜಾಮ್ಯಹಂ (ಅವರನ್ನು ಕುರಿತು ಅದೇ ರೀತಿಯಾಗಿ ನಾನು ನಡೆದುಕೊಳ್ಳುತ್ತೇನೆ.)

ಭರ್ತೃಹರಿಯ ಒಂದು ಶ್ಲೋಕ ಹೀಗೆ ಹೇಳುತ್ತದೆ: "ತೃಷ್ಣಾಂ ಛಂದಿ ಭಜಕ್ಷಮಾಂ" (ಅಭಿಲಾಷೆಯನ್ನು ಕಡಿದು ಹಾಕು. ತಾಳ್ಮೆಯನ್ನು ಸ್ವೀಕರಿಸು)

ಈ ಅವತರಣಿಕೆಗಳು ಬೇರೆ ಬೇರೆ ಸಂದರ್ಭದವು. ನೆನಪಿಗೆ ಬಂದಂತೆ ಉದಾಹರಿಸಿದ್ದೇನೆ. ಇವುಗಳಲ್ಲಿ 'ಭಜ್' ಅಂದರೆ ಹೊರಡು, ಅಂಗೀಕರಿಸು, ಒಪ್ಪಿಕೊಳ್ಳು ಎಂದೇ ಅರ್ಥ. Take

to, adopt, take a liking for, habituate one's self to ಅಂದರೆ ತನ್ನದಾಗಿ ಮಾಡಿಕೊ. ಆತ್ಮಸಾತ್ ಮಾಡಿಕೋ ಎಂದು ಮುಂತಾದಾಗಿ 'ಭಜ್' ದ ಅರ್ಥ ಹೊರಡುತ್ತದೆ. ಆದಿ ಶಂಕರಾಚಾರ್ಯರು "ಭಜ ಗೋವಿಂದಂ" ಅಂದರು. ಇದರ ಅರ್ಥ "ಗೋವಿಂದ! ಗೋವಿಂದ!" - ಎಂತ ಭಜನೆ ಮಾಡುವದಲ್ಲ. 'ಗೋವಿಂದನನ್ನು ತನ್ನವನನ್ನಾಗಿ ಮಾಡಿಕೊ' ಅಥವಾ 'ತನ್ನನ್ನು ಗೋವಿಂದನಿಗೆ ಒಪ್ಪಿಸಿಕೊ'- ಎಂಬುದೇ ಆಚಾರ್ಯರ ಆದೇಶ. ಇನ್ನು "ಸದಾ ಗೋವಿಂದ ಕೀರ್ತನಂ" ಏಕೆ? ಯಾವುದೇ ಸಂಗತಿ ಒಂದಕ್ಕಿಂತ ಹೆಚ್ಚು ಇಂದ್ರಿಯಗಳಿಂದ ಗ್ರಹಿಸಿದಾಗ ಅದು ಮನಸ್ಸಿನಲ್ಲಿ ಹೆಚ್ಚು ದೃಢವಾಗುತ್ತದೆ. ಧ್ಯಾನದಲ್ಲಿ ಇದ್ದುದನ್ನೇ ಆಚರಿಸುವುದು. ಪದೇ ಪದೇ ಜಪಿಸುವುದು ಇದರಿಂದ ಆ ಭಾವ ಆ ತತ್ವ, ಆ ತಥ್ಯ ಇನ್ನೂ ಆಳಕ್ಕೆ ನಟ್ಟು ನಿಲ್ಲುವುದು. ಆದರೆ ನಮ್ಮ ಭಜನಾ ಮಂಡಳಿಗಳ ಕೋಲಾಹಲವು ಇದನ್ನು ಸಾಧಿಸಬಹುದೇ? ಅದರಿಂದ ಚಿತ್ತ ಶುದ್ಧಿ ಮನಃಶಾಂತಿ ಭಗವತ್ ಪ್ರಜ್ಞೆ ಸಿದ್ಧಿಸುವುದು ಸಾಧ್ಯವೇ? "ಕಂಠ ಕಲ ಕಲ ನಿನಾದ ಕರಾಲ"ವಾಗುವದೊಂದೇ ಇಂಥ ಭಜನೆಯ ಸ್ವರೂಪ.

ಪ್ರಪತ್ತಿ ಮತ್ತು ಭಜನೆ ಸಮಾನಾರ್ಥಕ-ಮೇಲೆ ಉದಾಹರಿಸಿದ ಗೀತಾ ವಾಕ್ಯದ ಪೂರ್ವಾರ್ಧ "ಯೇ ಯಥಾ ಮಾಂ ಪ್ರಪದ್ಯಂತೇ" ಎಂದಿದೆ. ಅಂದರೆ ಪ್ರಪತ್ತಿ ಮತ್ತು ಭಜನೆಗಳ ಸಮೀಕರಣವಾಗುತ್ತದೆ. ಅಲ್ಲದೆ ಯೌಗಿಕವಾಗಿ ಭಜನ-ಭಕ್ತಿ ಇವು ಭಜ್ ಧಾತುವಿನ ಭಾವರೂಪಗಳೂ ಸದಾ ಯೇತಾಂ ಜಾತಾಂ ಇತ್ಯಾದಿ ವಾಮನ ಪರಿಚಿತದ ಶ್ಲೋಕ ಪ್ರಸಿದ್ಧವೇ ಇದೆ. ಅದರ ಕೊನೆ: "ಸಮಸ್ತಾಂ ಬೇಲಜ್ಜಾ ತ್ವಜುನಿ" ಭಗವತ್ ಚಿಂತನಕಾರಿ. ಈ ಚಿಂತನೆ ಬಾಳಿನ ನೆಯ್ಗೆಯಲ್ಲಿ ಹಾಸುಹೊಕ್ಕಾಗಿರಬೇಕು. ಧೂವಾ ಸ್ಮೃತಿಯಾಗಿರಬೇಕು. ನೀರಿಗೆ ಹೋದ ನಾರಿ ತಲೆಯ ಮೇಲೆ ಕೊಡದ ಮೇಲೆ ಕೊಡಗಳ ಅಡಕಲೇರಿಸಿ ಗೆಳತಿಯರೊಂದಿಗೆ ಹರಟುತ್ತಾ ಬರುತ್ತಾಳೆ. ಇದೇ ಭಕ್ತನಾದ ಭುವಿಗೆ ಆದರ್ಶ. ಆತ ಇತರೇತರ ವ್ಯವಹಾರಗಳಲ್ಲಿ ಮಗ್ನನಾಗಿ ಕುಳಿತಿದ್ದರೂ ಅವನ ಅಂತರ್ಗಮನ ಆ ಹೆಣ್ಣಿನ ಕೊಡಗಳ ಮೇಲೆಯೇ ಇರುವಂತೆ ಭಗವಂತನ ಮೇಲೆ ತದೇಕಚಿತ್ತವಾಗಿರಬೇಕು. ಇದೇ ನಿಜವಾದ ಭಜನೆ.

ಇನ್ನು ನಾಮ ಸಂಕೀರ್ತನೆ ಹೇಗಿರಬೇಕು? ನಾವು ಭಜನೆ ಮಾಡುವುದೆಂದರೆ ದಾಸರ ಪದವನ್ನೋ, ಸಂತರ ಅಭಂಗವನ್ನೋ, ಕಬೀರ-ಮೀರಾ ಸೂರದಾಸ ಮುಂತಾದವರ ಪದಗಳನ್ನೋ ದೀರ್ಘವಾಗಿ ಹಾಡುತ್ತಿರುತ್ತೇವೆ. ಜತೆಗಾರರು ದನಿಗೂಡಿಸುವರು. ಈ ಭಜನೆಯ ಪಾಠ ಸರಿ ಅರಿಯದೆ ಕೇಳದೆ ಹೇಗೋ ಅಪಭ್ರಂಶವಾಗಿ ಹೇಳುತ್ತಿರುತ್ತಾರೆ. ಅಥವಾ ಪಲ್ಲವಿಯನ್ನು ಜೋರಾಗಿ ಕೂಡಿ ಹಾಡುತ್ತಾರೆ. ಒಂಟಿಯಾಗಿ ಹಾಡುತ್ತಿದ್ದರೆ ಸರಿ. ಆದರೆ ಈ ಜಂಟಿ ಭಜನೆ ಒಂದು ವಿಡಂಬನೆ. ಮುಂದಾಗಿ ಹಾಡುವವನ ಪದ್ಯದ ಶಬ್ದ ಸರಣಿ ಎಲ್ಲರಿಗೂ ಸಲೀಸಾಗಿ ಒಗ್ಗುವುದಿಲ್ಲ. ಅನೇಕ ಪದ್ಯಗಳು, ಕೇವಲ ಸ್ತವನಗಳೇ ಕೀರ್ತನೆಗಳೇ ಆಗಿರುವುದಿಲ್ಲ. ಅವು ತತ್ವದ ಪದ್ಯಗಳೋ ಆಯಾ ಭಕ್ತರ ಆತ್ಮನಿವೇದನೆಗಳೋ ಆಗಿರುತ್ತವೆ. ಸಾರ್ವತ್ರಿಕ ಪರಿಚಯದ 'ರಾಷ್ಟ್ರಗೀತ' ದಂತೆ ಕೇಳಿದವರೆಲ್ಲ ಕೂಡಿ ಹಾಡುವಂತಿರುವುದೇ ಕಡಿಮೆ.

ಈ ದೃಷ್ಟಿಯಿಂದ ನಾವು ಸತ್ಯಸಾಯೀ ಭಜನೆಗಳನ್ನು ವೀಕ್ಷಿಸಬಹುದು. ಅವುಗಳಲ್ಲಿ ಇಂಥಾ ಭಾವಾರ್ಥಕ ಆಶಯವಿರುವುದೇ ವಿರಳ. ಹೆಚ್ಚಾಗಿ ದೇವರ ವಿವಿಧ ನಾಮಾವಳಿಗಳೇ ಸೊಗಸಾದ

ಸ್ವರ ರಚನೆಯಲ್ಲಿ ಪೋಣಿಸಿರುತ್ತವೆ. ಕೇಳುವಾಗಲೇ ಅನೇಕಾನೇಕ ಭಜಕರು ಅವುಗಳಲ್ಲಿ ಸಲೀಸಾಗಿ ಭಾಗವಹಿಸುವಂತೆ ಇರುತ್ತವೆ. ಅವುಗಳಿಂದ ಒಂದು ಸಾಮೂಹಿಕ ತಲ್ಲೀನತೆ ಉಂಟಾಗುತ್ತದೆ. ಸದ್ಯದ ಚಿಂತೆಗಳನ್ನು ಅಷ್ಟೂ ಕಾಲ ಮರೆಯುವಂತೆ ಆಗುತ್ತದೆ. ಇವು ಅಕ್ಷರಶಃ ದೇವರ ನಾಮಗಳು. ("ದಾಸವಾಣಿ" ಯಲ್ಲಿ ಪ್ರಕಟವಾಗುವ ಸಂತ ಕೇಶವದಾಸರ ಕೃತಿಗಳಲ್ಲಿ ಹಲವಾರು ಇದೇ ಮಾದರಿಯವು) ಭಜನೆ ನಡೆಯುವಾಗ ಕೇಳುವ ಯಾರೂ, ಎಲ್ಲರೂ ಅದರಲ್ಲಿ ದನಿಗೂಡಿಸಿ ಭಾಗಿಯಾಗಿ ಭಕ್ತಿ ರಸವನ್ನು ಸವಿಯಬಹುದು. ನಾನೇನು ಭಕ್ತನಲ್ಲ. ಆದಾಗ್ಯೂ ಇಂಥ ಭಜನೆಯಿಂದ ಆನಂದಪಟ್ಟಿದ್ದೇನೆ. ಇದು ಉತ್ತಮ ನಾಮ ಸಂಕೀರ್ತನೆಯ ಮಾದರಿ (ಇಲ್ಲಿ 'ಬಾ ಬಾ' ಗೌಣ).

ದಾಸರು ಅಂದರು "ಕೃಷ್ಣಾ ಅನ್ನಬಾರದೇ ಕೃಷ್ಣನ ನೆನೆದರೆ ಕಷ್ಟ ಒಂದಿಷ್ಟಿಲ್ಲ!" ಆದರೆ ರೂಢಿಯಲ್ಲಿದ್ದ ಭಜನಾ ಕಾರ್ಯಕ್ರಮಗಳಲ್ಲಿ ಅದನ್ನು ಹಾಡುವುದೂ ಕೇಳುವುದೂ ಅದೊಂದು ಕಷ್ಟವೆಂಬುದನ್ನು ನಾವು ಅನುಭವಿಸುತ್ತೇವೆ. ಅಂತೆಯೇ ದಾಸರು ಅಂದಿರಬೇಕು- "ಕೇಳನೋ ಹರಿ ತಾಳನೋ ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ" ಇತ್ಯಾದಿ.

ಇದೂ ಅಲ್ಲದೆ ಭಗವಂತನ ಆದೇಶವನ್ನು ತನ್ನ ನಿತ್ಯ ಜೀವನದಲ್ಲಿ ಆಚಾರ-ವಿಚಾರ, ಆಹಾರ-ವಿಹಾರಗಳಲ್ಲಿ ಪಾಲಿಸದೆ ಸುಮ್ಮನೆ(?) ಅವನ ಹೆಸರ ಹಾಡಿ ತಾಳ ಬಡಿಯುತ್ತ ಕುಳಿತರೆ ಆತ ಮೆಚ್ಚುವನೇ? ನಾರದ ಭಕ್ತಿ ಸೂತ್ರ ಹೇಳುತ್ತದೆ- "ಸ ಈಶ ಅನಿರ್ವಚನೀಯ ಪ್ರೇಮ ಸ್ವರೂಪಃ" ಆ ಈಶ ಪ್ರೇಮ ಸ್ವರೂಪ. ಪ್ರೇಮವೇ ಈಶನ ಸ್ವರೂಪ. ಅನ್ಯೋನ್ಯ ಅನ್ಯಾನ್ಯ ಪ್ರೀತಿಯಲ್ಲಿಯೇ ಆತ ವ್ಯಕ್ತ, ಹೊರತು ಆತನ ವ್ಯಾಖ್ಯೆ ನಿರ್ವಚನ ಶಕ್ಯವಿಲ್ಲ. "ಸ್ವಕರ್ಮಣಾ ತಂ ಅಭ್ಯರ್ಚ್ಯ" ಅಂದಿದೆ ಗೀತೆ. ಆದರೆ ನಮ್ಮ ಭಜನೆ ಯಾವ ದಾರಿ ಹಿಡಿದಿದೆ?

ಲೋಕಮಾನ್ಯ ತಿಲಕರು ತಮ್ಮ "ಗೀತಾ ರಹಸ್ಯ"ದಲ್ಲಿ ಕರ್ಮಯೋಗವನ್ನು ವಿವರಿಸುತ್ತಾ "ಶೂದ್ರ ಕಮಲಾಕರ" ಎಂಬ ಗ್ರಂಥವನ್ನು ರಚಿಸಿದ ಭಟ್ಟ ಕಮಲಾಕರನ ಈ ಶ್ಲೋಕವನ್ನು ಉದಾಹರಿಸಿದ್ದಾರೆ.

ಅಸಹಾಯ ನಿಜಂ ಕರ್ಮ
ಕೃಷ್ಣ ಕೃಷ್ಣೇತಿ ವಾ ದಿನಃ!
ತೇ ಹರೇ! ದ್ವೇಷಣಃ ಪ್ರೋಕ್ತಾ
ಕರ್ಮಾರ್ಥಂ ಜನ್ಮ ಯತ್ ಹರೇಃ॥
ಇದು ಭಜನ ಮಂಡಳಿಗಳಿಗೆಲ್ಲ "ಕೆಂಪು ದೀಪ"ವಾಗಲಿ!

●

('ದಾಸವಾಣಿ' ೧೯೯೧)

# ಪ್ರಾಚೀನ ಭಾರತದಲ್ಲಿ ವಿಮಾನ ವಿದ್ಯೆ ಇತ್ತೇ?

ಪ್ರಾಚೀನ ಭಾರತದಲ್ಲಿ ಎಲ್ಲ ಬಗೆಯ ಯಂತ್ರವಿದ್ಯೆ ಪ್ರಗತಿ ಹೊಂದಿತ್ತು ಎಂದು ನಮ್ಮಲ್ಲಿಯ ಸನಾತನ ಸಂಪ್ರದಾಯದ ಅಭಿಮಾನಿಗಳು ಹಠದಿಂದ ಪ್ರತಿಪಾದಿಸುತ್ತ ಬಂದಿದ್ದಾರೆ. ಆಧುನಿಕ ವೈಜ್ಞಾನಿಕ-ಯಾಂತ್ರಿಕ ಶೋಧಗಳು ಆ ಪುರಾಣಕಾಲದ ನಮ್ಮ ಪೂರ್ವಿಕರಿಗೆ ಗೊತ್ತಿದ್ದವು ಎಂದೆಲ್ಲ ಹೇಗಾದರೂ ಶಾಸ್ತ್ರಾಧಾರಗಳನ್ನು ಸುತ್ತಿ ಬಳಸಿ ತಿರುಚಿ ಎತ್ತಿ ಕೊಡುವ ವಾಡಿಕೆ ಈ ಪಂಡಿತರದು. ಇಂಥವರಿಗೆ ಸುದೈವದಿಂದ ಕೆಲವೊಮ್ಮೆ ಸುಲಭವೂ ಆಗುವಂತೆ ನಮ್ಮ ಪುರಾಣಗ್ರಂಥಗಳಲ್ಲಿ ಅನುಕೂಲವಾಗಬಹುದಾದ ಉಲ್ಲೇಖಗಳೂ ಪದಪ್ರಯೋಗಗಳೂ ಸಿಗುವುದುಂಟು. ಇವು ಸಂದಿಗ್ಧ ಅಸ್ಪಷ್ಟ ದೂರಾನ್ವಯದವಾಗಿದ್ದರೂ ಅವುಗಳಿಂದ ಬೇಕಾದಂತೆ ಅನ್ವಯಾರ್ಥವನ್ನು ಹೊರಡಿಸುವುದು ಈ ಜಾಣರಿಗೆ ಕಠಿಣವೆನಿಸುವುದೂ ಇಲ್ಲ.

'ಮೈತ್ರಾವರುಣೌ' ಅಂದರೆ $H_2O$. ಆಕಾಶವಾಣಿಯೆಂದರೆ wireless, ಶತಘ್ನಿ ಎಂದರೆ ತೋಪು. 'ಉದಾನವಾಯು'ವೆಂದರೆ ಹೈಡ್ರೋಜನ್-ಇತ್ಯಾದಿ. ಇತ್ಯಾದಿ ಉದಾಹರಣೆಗಳನ್ನು ಈ ಪುರಾಣವಾದಿಗಳು ನೀಡುತ್ತಾರೆ. ಇಂದಿನ ವಿಮಾನ, ಕ್ಷಿಪಣಿ, ಅಣ್ವಸ್ತ್ರಾದಿಗಳು ಹಿಂದೆಯೂ ಇದ್ದವು ಎಂದೂ ಹೇಳುವುದುಂಟು. ಅಷ್ಟೇ ಅಲ್ಲ, ಪಾಶ್ಚಾತ್ಯರಿಂದ ಬಂತೆಂಬ ಈ ಯಂತ್ರ ತಂತ್ರವಿದ್ಯೆಯೆಲ್ಲ ನಮ್ಮಿಂದಲೇ ಅವರು ಅಪಹರಣ ಮಾಡಿದ್ದು. ಇದೆಲ್ಲಾ ನಮ್ಮ ಲುಪ್ತ(ಖಿಲ)ವಾದ ವೇಧಿಗಳಿಂದ ಅವರು-ವಿಶೇಷತಃ ಜರ್ಮನಿಯ "ಶರ್ಮ"ರು ಪಡೆದು ಮುಂದೆ ತಮ್ಮದೇ ಶೋಧನೆಗಳೆಂದು ಪ್ರಕಟಿಸಿದ್ದಾರೆ ಎಂದೆಲ್ಲ ಆಗ್ರಹದಿಂದ ನಂಬುವವರಿಗೆ ಕೊರತೆ ಇಲ್ಲ. ಅಜ್ಞಾನಕ್ಕೆ ಅಹಂಕಾರ ಬೆರೆತಾಗ ಒಂದು ವಿಚಿತ್ರ ಸ್ಫೋಟಶಕ್ತಿ ಹೊರಹೊಮ್ಮುತ್ತದೆ. ಅಂಧಭಕ್ತಿ, ರಾಷ್ಟ್ರಾಭಿಮಾನ ಅರೆಬರೆ ವಿಜ್ಞಾನ ಇವೆಲ್ಲವುಗಳ ಮಿಶ್ರಣದ ಪರಿಪಾಕವಿದು. ಇದಕ್ಕೆ ಆಧುನಿಕ ಪರಿಭಾಷೆಯಲ್ಲಿ ಹಳೆಯ ಪರಿಕಲ್ಪನೆಗಳನ್ನು ಹೇಗಾದರೂ ನಿರೂಪಿಸುವ, ಅದಕ್ಕೆ ವಿರುದ್ಧವಾಗಿಯೂ ಹೊಸ ಪರಿಭಾಷೆ ನಿರ್ಮಿಸಲು ಹಳೆಯ ಶಬ್ದಗಳನ್ನು ಬಳಸಬೇಕಾಗಿ ಬಂದು ಆ ಮೂಲಕ ಆತ್ಮಸಂತುಷ್ಟವಾದ ವಿತರ್ಕ-ವಿತಂಡವಾದದ ಚಾಪಲ್ಯವೂ ಇಲ್ಲಿ ಕೆಲಸ ಮಾಡುತ್ತದೆ. ಆಗ ನಾವು ಬಳಸುವ ಸಂಸ್ಕೃತ ಪದಪುಂಜಗಳೇ ಅಬಾಧಿತವಾಗಿ ನಮಗೆ ಮೋಸ ಮಾಡುತ್ತವೆ!

ಇದಕ್ಕೆ ಒಂದು ದೊಡ್ಡ ಉದಾಹರಣೆ- ವಿಮಾನ. ವಿಮಾನ ವಿದ್ಯೆ ಎಂಬುದು ಪ್ರಾಚೀನ ಭಾರತದಲ್ಲಿ ಇತ್ತೇ? ತಾನು ಹಕ್ಕಿಯಂತೆ ಹಾರಾಡಬೇಕೆಂಬ ಒಂದು ಸ್ವೈರಕಲ್ಪನೆ ಮಾನವನಿಗೆ ಎಂದಿನಿಂದಲೂ ಇತ್ತು. ಅತಿಮಾನುಷಕ್ಕೆ ಅಂತೂ ಈ ಆಕಾಶಗಮನ ಒಂದು ಅವಶ್ಯ ಲಕ್ಷಣ ಅಥವಾ ಸಾಮರ್ಥ್ಯ. ನಾವು ಭೂಚರರೇ ಆಗಿದ್ದರೂ ನಮ್ಮ ದೇವತೆಗಳು, ಯಕ್ಷ ರಾಕ್ಷಸ ಗಂಧರ್ವ ಅಪ್ಸರೆಯರೆಲ್ಲರೂ ಲೀಲಾಜಾಲವಾಗಿ ಗಗನಗಾಮಿಗಳಾಗಿದ್ದರು. ಅದಕ್ಕೂ ಅಂದು ಪಕ್ಷಿಗಳನ್ನು ವಾಹನವಾಗಿ ಒದಗಿಸಲಾಗಿದೆ. ವಿಷ್ಣುವಿಗೆ ಗರುಡ, ಬ್ರಹ್ಮನಿಗೆ ಹಂಸ, ಶನಿಗೆ ಕಾಗೆ, ಶಾರದೆಗೆ (ಸುಬ್ರಹ್ಮಣ್ಯನಿಗೂ) ನವಿಲು ಇತ್ಯಾದಿ. ಇಂದ್ರನಿಗೆ ಜೀಮೂತ ಮೋಡವೇ ವಾಹನ. ಆದರೂ ಅವನಿಗೆ ಐರಾವತ ಒಂದಿದೆ. ಹಾಗೆಯೇ ಶಿವನಿಗೆ ನಂದಿ, ದುರ್ಗೆಗೆ ಸಿಂಹ, ಹೆಗ್ಗಣಪತಿಗೆ ಹೆಗ್ಗಣ, ಯಮನಿಗೆ ಕೋಣ. (ಆದರೆ ಈಚೆಗೆ ಯಮನು ಕೋಣವನ್ನೂ ಸ್ವರ್ಗದ ನಗರಪಾಲಿಕೆಗೆ

ದಾನಮಾಡಿ ಒಂದು ದಿವ್ಯ ಜೀಪನ್ನು ಪಡೆದಿದ್ದಾನೆಂದು "ಸುವಾರ್ತೆ"!) ಆದರೆ ಈ ಪಶುಗಳೂ ಆಕಾಶದಲ್ಲಿ ಸಂಚರಿಸುವಂತೆಯೇ ಕಲ್ಪಿಸಿದ್ದಾಗಿದೆ. "ಆ ಜಲಧಿಯನೆ ಜಿಗಿದ ಹನುಮಂತ"ನಿಗೆ ಅವನ ಅತಿಮಾನುಷ ಬಲಕ್ಕೆ ಒಪ್ಪುವಂತೆ ಸ್ವಯಂ ಆಕಾಶಗಮನ ಶಕ್ಯವಿತ್ತು. ತನ್ನ ಪ್ರಭುವನ್ನು ಆತ ಹೆಗಲ ಮೇಲೇರಿಸಿಕೊಂಡು ಹೋಗುತ್ತಿದ್ದನಂತೆ! ಆದರೆ ಶ್ರೀರಾಮನೆ (ನಮ್ಮ ಮಹಾಕಾವ್ಯಗಳಲ್ಲಿ) ಮೊದಲಿಗೆ ಮತ್ತು ಕೊನೆಗೆ ಉಪಯೋಗಿಸಿದ್ದ- ಪುಷ್ಪಕವೆಂಬ ವಿಮಾನ!

ವಿಮಾನ ಯಾನದ ಉಲ್ಲೇಖ ಮಹಾ ಭಾರತದಲ್ಲಿ ಇಲ್ಲ. ಅದು ಕಂಡುಬರುವುದು ರಾಮಾಯಣದಲ್ಲಿಯೇ. ಅಲ್ಲಿಯೂ ಈ ವಿಮಾನವು ರಾವಣನ ವಶದಲ್ಲಿದ್ದುದು. ಅವನು ಯಕ್ಷರಾಜ ಕುಬೇರನಿಂದ ಗೆದ್ದು ತಂದದ್ದು. ಅವನ ವಧೆಯ ನಂತರ ವಿಭೀಷಣ ಶ್ರೀರಾಮನಿಗೆ ನೀಡಿದ್ದು- ಸಪರಿವಾರ ಅಯೋಧ್ಯೆಗೆ ಮರಳಿಹೊಗಲಿಕ್ಕೆ. ರಾವಣನಾದರೂ ಅದನ್ನು ಯುದ್ಧದಲ್ಲಿ ಉಪಯೋಗಿಸಿಲ್ಲ. ಸೀತಾಪಹರಣದಲ್ಲಿ ಉಪಯೋಗಿಸಿದ್ದಿರಬಹುದು. ರಾಮ ರಾವಣರ ಯುದ್ಧ ರಥಾರೂಢವಾಗಿಯೇ ನಡೆದವು. ಮಹಾಭಾರತದಲ್ಲಿ ರಥಗಳೇ ಪ್ರಾಮುಖ್ಯವಾಗಿ ಓಡಾಡಿದವು. ಶ್ರೀ ಕೃಷ್ಣನು ದ್ವಾರಕೆಯನ್ನು ಸ್ಥಾಪಿಸಲಿಕ್ಕೆ ಯಶ ಸ್ಥಳವನ್ನು ನಿಗದಿಮಾಡುವಾಗ ಸ್ಥಳದ ವೀಕ್ಷಣೆಗೆ ಗರುಡನನ್ನೇ ಕಳುಹಿಸಿದನು. ನರಕಾಸುರನ ಸಂಹಾರಕ್ಕೆ ರಥಾರೂಢನಾಗಿಯೇ ಹೋದದ್ದು. ಕೃಷ್ಣಾರ್ಜುನರಿಗಂತೂ ಒಂದೇ ರಥ.

೫-೬ನೇ ಶತಮಾನದ (ಗುಪ್ತಕಾಲದ) ಶಿಲ್ಪಗಳಲ್ಲಿ ದೇವಾದಿಕರು ವಿಮಾನಗಳಲ್ಲಿ ಕೂತಂತೆ ಕೆತ್ತನೆಗಳಿವೆ. ಕಿನ್ನರರಿಗೆ ಸೊಂಟದಿಂದ ಕೆಳಗೆಲ್ಲ ಹಕ್ಕಿಗಳಂತೆ ರೆಕ್ಕೆಗಳು. ಅಪ್ಸರೆಯರು ನೀರಿನಲ್ಲಿ ಸರಿದಾಡುವವರೆಂದು ತಿಳಿದರೂ ಗಗನಗಾಮಿಗಳೇ. ನಮ್ಮ ಶಿಲ್ಪಶಾಸ್ತ್ರಗಳಲ್ಲಿ ವಾಸ್ತು ಶಿಲ್ಪದ ವಿಶಿಷ್ಟ ವೇಶ್ಮ ವಿನ್ಯಾಸಕ್ಕೆ 'ವಿಮಾನ' ವೆಂಬ ಹೆಸರು. ಶಿಖರದಲ್ಲಿ ಅಲ್ಲಲ್ಲಿ ಮುಂದೆ ಚಾಚಿ ಅಂತರಾಳದಲ್ಲಿದ್ದಂತೆ ತೋರುವ "ಬಾಲ್ಕನಿ" ಯಂದದ ಮಂಟಪವೇ ವಿಮಾನ. "ಕನ್ನಡ ರತ್ನಕೋಶ"ದಲ್ಲಿ ವಿಮಾನದ ಅರ್ಥಗಳಲ್ಲಿ "ದೇವಾಲಯದ ಗೋಪುರ, ದೇವಳ ರಥ, ಹೆಣವನ್ನು ಸಾಗಿಸುವ ಮಂಟಪ(ಸಿದಿಗೆ?)" ಎಂಬ ಅರ್ಥಗಳೂ ಇವೆ. ಜೈನ ಧರ್ಮದಲ್ಲಿ ಊರ್ಧ್ವ ಲೋಕದ ಪುಣ್ಯ ಜೀವಿಗಳ ಸ್ಥಾನಕ್ಕೆ ವಿಮಾನವೆಂಬ ಹೆಸರು. ಹೇಗೋ ಎಂದೊ ಆಕಾಶಯಾನಕ್ಕೂ ವಿಮಾನವೆಂಬ ಹೆಸರು ಕೊಡಲಾಯಿತು.

ಇನ್ನೂ ಈ 'ಪುಷ್ಪಕ'ವೆಂಬ ವಿಮಾನ ಹೇಗಿತ್ತು? ಹೆಸರು 'ಪುಷ್ಪಕ' ವಾದರೂ ಅದು ಹೂವಿನಂತೆ ಹಗುರಾಗಿ ಇದ್ದಿಲ್ಲ. ಹವೆಗಿಂತ ಭಾರವಾದ-ಇಂದಿನ 'ಬೋಯಿಂಗ್' ನಂತೆ ವಿಶಾಲವಾದ ಭವ್ಯವಾದ ಉತ್ತಮ ಸಿಂಗರಿಸಿದ ವಾಹನವಾಗಿತ್ತು. "ಒಳಗೆ ಕೂತವನ ಇಚ್ಛೆಗೆ ಅನುಸಾರವಾಗಿ ವೇಗವನ್ನು ತಾಳುವ ಗುಡ್ಡದಂಥ 'ವಿಮಾನವದು'. ಅದನ್ನು ನೋಡಿ ಶ್ರೀರಾಮ ಲಕ್ಷ್ಮಣರು ಸ್ಥಿಮಿತರಾದರಂತೆ "ಆಮೇಲೆ ವಾನರರೊಂದಿಗೆ ಸುಗ್ರೀವ, ವಿಭೀಷಣ ಅವನ ಅಮಾತ್ಯರನ್ನೊಡಗೊಂಡು, ಸೀತಾರಾಮ ಲಕ್ಷ್ಮಣರು ಆನಂದದಿಂದ ಈ ಪುಷ್ಪಕವನ್ನೇರಿದರು. ಅವರೆಲ್ಲರೂ ಏರಿ ಕುಳಿತ ಮೇಲೆ ಶ್ರೀರಾಮನ ಅಪ್ಪಣೆಯಂತೆ ಕುಬೇರನ ಆ ದಿವ್ಯ ವಿಮಾನವು ಆಕಾಶಕ್ಕೆ ಹಾರಿತು.

"ಚಿತ್ರಕೂಟ ಹಂಸಗಳಿಂದ ಯುಕ್ತವಾದ ಆ ದೇದಿಪ್ಯ ವಿಮಾನದಲ್ಲಿ ಮಹಾ ಬಲಾಢ್ಯ

ರಾಕ್ಷಸರೂ ಎಲ್ಲ ವಾನರ ಶ್ರೇಷ್ಠರೂ ಯಕ್ಷರೂ ಸುಖಾಸೀನರಾಗಿದ್ದರು. ಪ್ರಚಂಡ ಗರ್ಜನೆ ಮಾಡುತ್ತ (ಇಂದಿನ ವಿಮಾನಗಳಂತೆಯೇ!) ಅದು ಆಕಾಶಕ್ಕೆ ಹಾರಿತು. ಅದನ್ನು ವಿಶ್ವಕರ್ಮನೇ ತಯಾರಿಸಿದ್ದು." ಅದರ ಇನ್ನಷ್ಟು ವಿವರಗಳನ್ನು ನೋಡಿರಿ. "ಅದರ ಒಳಭಾಗ ಚಿನ್ನ ಬೆಳ್ಳಿಗಳಿಂದ ಹೊದ್ದಿದ್ದು. ವೈಢೂರ್ಯಗಳಿಂದ ಸಿಂಗರಿಸಿದ್ದು, ತಳಕ್ಕೆ ಸ್ಫಟಿಕ ಹಾಸಿದ್ದು, ಪೀಠಗಳ ಮೇಲೆ ಬೆಲೆಯುಳ್ಳ ಹೊದಿಕೆಗಳಿದ್ದವು. ಗವಾಕ್ಷಗಳ ಸಲಾಕೆಗಳಿಗೆ ಗಂಟೆಗಳ ಮಾಲೆಗಳು ತೂಗಿದ್ದವು. ಮೇರು ಶಿಖರದಂತೆ ಆಕಾರವುಳ್ಳ ಈ ವಿಮಾನದಲ್ಲಿ ಎಲ್ಲ ಬದಿಗೂ ಕೂಟಾಗಾರಗಳೂ (?) ಶಾಲಾಗೃಹಗಳೂ ಖಾಸಗೀ ಕೋಣೆಗಳೂ ಇದ್ದವು."

ಅಂದರೆ ಅದೊಂದು ಭಾರೀ ಪ್ರಚಂಡವೂ ಪ್ರಶಸ್ತವೂ ಆದ ಯಾನ. ಆಕಾಶಯಾನ ವೆಂಬುದಕ್ಕೆ ಹಂಸಗಳ ಚಿತ್ತಗಳೇ ಸೂಚಕ. ಯಕ್ಷರಲ್ಲಿಯೇ ಇಂಥ ವಿಮಾನಗಳ ಬಳಕೆ ಇದ್ದಿರಬೇಕು. ಚಿತ್ರರಥ ಗಂಧರ್ವ (ಗಯ?) ಕೆಳಗೆ ಅರ್ಘ್ಯ ನೀಡುತ್ತಿರುವ ಗಾಲವ ಋಷಿಯ ಬೊಗಸೆಗೆ ಉಗುಳಿದ್ದು ವಿಮಾನದಿಂದಲೇ! ಆದರೆ ಭೂಮಿಯಲ್ಲಿ ಅತಿರಥ, ಮಹಾರಥ, ಬೃಹದ್ರಥ, ದಶರಥ, ರುಕ್ಮರಥ- ಹೀಗೆಲ್ಲ ರಥಗಳಿಗೇ ಪ್ರಾಧಾನ್ಯ. ವಿಮಾನಯಾನದ ಸಂಚಾರದ ಸುಳಿವೇ ಇಲ್ಲ! ಈ ಪುರಾಣ ಕಾಲದ ವಿಮಾನ ಭೂಮಿಗೆ ಇಳಿದ ಕೊನೆಯ ಪ್ರಸಂಗ ಇಂದ್ರಾಯಣೀ ತೀರದಲ್ಲಿ ಸಂತ ತುಕಾರಾಮನ ಸದೇಹ ವೈಕುಂಠ ಗಮನ!

ಆದರೆ ನಮ್ಮ ಭಾರತೀಯ ಶಿಲ್ಪಶಾಸ್ತ್ರದಲ್ಲಿ ವಿಮಾನದ ಉಲ್ಲೇಖವಿದೆ- ಗಗನಗಾಮಿ ಯೆಂಬಂತೆ. ಈ ಕುರಿತು ಭೋಜರಾಜನದೆಂಬ "ಸಮರಾಂಗಣ ಸೂತ್ರ"ದಲ್ಲಿಯ ವಿವರಣೆ ಪ್ರಮಾಣವೆಂದುಕೊಂಡಿದೆ. (ಇದು ಹನ್ನೆರಡನೆಯ ಶತಮಾನದ ಗ್ರಂಥವಂತೆ.) "ಲಘುದಾರುಮಯಂ ವಿಹಂಗಮಂ ದೃಢಸುಶ್ಲಿಷ್ಟ ತನುಂ ವಿಧಾಯ ತಸ್ಯಟದರೆ ರಸಯಂತ್ರಂ ಅದಧೀತ" "ಅಯಂತ್ರಪ್ಯ ಜ್ವಲನಾಧಾರ" "ಅಗ್ನಿಪೂರ್ಣ"ವಿರಬೇಕು. "ತಸ್ಯ ಪಕ್ಷ ದ್ವಂದ್ವೋಚಾಚಲನಂ" "ತತ್ರ ಆರೂಢಃ ಪುರುಷಃ" ಮಾಡಬೇಕು. ಅದರಿಂದ ಹೊತ್ತಿ ಉರಿಯುವ "ಅನಿತೇನ" ಒಳಗಿದ್ದ "ಪಾರದ" (ಪಾರಜ)ವು ಕಾದು ಹೊರ ಬರುವ ಶಕ್ತಿಯಿಂದ ಆಕಾಶದಲ್ಲಿ ಅದು ದೂರ ಹೋಗುವುದು ("ಅಂಬರೇ ಯಾತಿದೂರತಂ") ಈ ಪಾರಜವನ್ನು ನಾಲ್ಕು ಅಂತಸ್ತುಳ್ಳ ಮಣ್ಣಿನ ಕುಂಭಗಳಲ್ಲಿ ಅವುಗಳಿಗೆ ಕಬ್ಬಿಣದ ಮುಚ್ಚಳ ಇಕ್ಕಿ ಕಾಯಿಸಬೇಕು. ಆ ಕುಂಭಗಳಲ್ಲಿ ಆಗ ಕುದಿದು ಉಂಟಾದ ಪಾದರದ ಗುಣದಿಂದ ("ಪ್ರತಪ್ತ ಕುಂಭ ಭುವಾಗುಣೇನ) ವಿಮಾನವು ಆಕಾಶಕ್ಕೆ ಹಾರುತ್ತದೆ" ಇತ್ಯಾದಿ. (ನನ್ನ ಈ ಟಿಪ್ಪಣಿಗಳಲ್ಲಿ ದುರ್ಬೋಧವಾದ ಕೆಲವು ಪದಗಳನ್ನು ಅಲ್ಲಲ್ಲಿ ಬಿಟ್ಟು ಕೊಡಬೇಕಾಗಿ ಬಂತು.)

ಈ ವರ್ಣನೆಯಿಂದ ೨-೩ ಸಂಗತಿಗಳನ್ನು ಸ್ಥೂಲವಾಗಿ ಗುರುತಿಸಬಹುದು. ೧. ವಿಮಾನದ ಆಕಾರ ಪಕ್ಷಿಯಂತೆ ಇರಬೇಕು. ೨. ಅದು ಭಾರದಲ್ಲಿ ಹಗುರಾಗಿರಬೇಕು. ೩. ಅದರ ಉಡ್ಡಾಣಕ್ಕೆ ಬೇಕಾದ ಶಕ್ತಿ ಕುದಿಸಿದ ಪಾರಜದಿಂದ ಪಡೆಯಬೇಕು. ೪. ಪಾರಜವನ್ನು ಮರದ ಬೆಂಕಿಯ ಮೇಲೆ ಮಣ್ಣಿನ ಕುಂಭಗಳಲ್ಲಿ ಕುದಿಸಬೇಕು. ಆದರೆ ಎಲ್ಲಕ್ಕೂ ಮಹತ್ವದ ಹಾಗೂ ಸೋಜಿಗದ ಶ್ಲೋಕ ಕೊನೆಗೆ ಬರುತ್ತದೆ:- "ಯಂತ್ರಾಣಾಂ ಘಟನಾನೋಕ್ತಾ ಗುಪ್ತಾರ್ಥಾಂ ಅನ ಅಜ್ಞತಾವಶಾತ್ ತತ್ರ ಹೇತುರಯಂ ಜ್ಞೇಯಃ ವ್ಯಕ್ತಾನೇತೇ ಫಲಪ್ರದಾಃ!" ಹಿಂದಿನ ಕಾಲದಲ್ಲಿ ಗುರುಮುಖದಿಂದಲೇ

ಯಾವ ವಿದ್ಯೆಯ ಮಂತ್ರ ತಂತ್ರಗಳನ್ನೂ ಪಡೆಯುವುದೇ ಸಂಪ್ರದಾಯವಾಗಿತ್ತು. ಆದರೆ ಈ ಗುಪ್ತತೆಯಿಂದ ಆದದ್ದೇನು? ಅಂದಿನ ವಿಜ್ಞಾನದ ಪ್ರಗತಿಯು ಮಾತ್ರ ಕುಂಠಿತ, ಸ್ಥಗಿತ.

ಇನ್ನೂ ಮೇಲಿನ ವಿವರಗಳಿಂದಲೇ ಏಳುವ ಕೆಲವು ಪ್ರಶ್ನೆಗಳು ಹೀಗಿವೆ:

ಪಾರಜದ ಗುಣಧರ್ಮಗಳಿಂದ ಈ ಪ್ರಕ್ರಿಯೆ ಸತ್ಯವೂ ಸಾಧ್ಯವೂ ಎನಿಸಬಹುದೇ?

ಪಾರಜದ "ಉಗಿ"ಯಿಂದ ಆಕಾಶಯಾನ ಹಾರಾಡಬಹುದಾದ ಶಕ್ತಿ ಉಂಟಾಗಬಹುದೇ? ಮೊದಲು ಅಟಿಗೆಗೆ (ಉಷ್ಣ) ಪಾರಜಕ್ಕೆ ಆ ಶಕ್ತಿ ಇರಬಹುದೇ?

ಮಂದಾಗ್ನಿಯಿಂದ ಅಂಥ ಉಗಿ ಉಂಟಾಗಲು ಸಾಧ್ಯವೇ? ಅದಕ್ಕಾಗಿ ಎಷ್ಟು ಉಷ್ಣತೆ ಕೊಡಬೇಕಾದೀತು? ಎಲ್ಲವೂ ಅನೂಹ್ಯ, ಅಗಮ್ಯ!

ಇನ್ನು "ಕಾಶ್ಯಪ ಸಂಹಿತೆ" ಎಂಬುದೊಂದು ಇದೆ. ಅದರಲ್ಲಿ ಈ ಪ್ರಕ್ರಿಯೆ ನಮೂದಿಸಲಾಗಿದೆ-

'ಮಿತ್ರಾ ವರುಣೌ'- ಎಂದರೆ $H_2O$. ಇಲ್ಲಿ ಮಿತ್ರಾ ಧನ, ವರುಣ ಋಣ-ವಿದ್ಯುತ್ತು. ಇದನ್ನು ಭರಣಿಗಳಲ್ಲಿ ತುಂಬಿ ನೀರಿನ ವ್ಯಥಃಕರಣ ಮಾಡಬೇಕು. ಆ ಮೂಲಕ 'ಉದಾನವಾಯು' (ಹೈಡ್ರೋಜನ್) ಹುಟ್ಟುತ್ತದೆ. ಅದನ್ನು ಸಂಗ್ರಹಿಸಿ ಆ ಮೂಲಕ (ಹೈಡ್ರೋಜನ್ ತುಂಬಿದ ದೊಡ್ಡ ಬಲೂನಿನಂತೆ) ವಿಮಾನವನ್ನು ಉಡ್ಡೈಸಬಹುದು! ಈ ವಾಹನಕ್ಕೆ ಹಕ್ಕಿಗಳನ್ನು ಜೋಡಿಸಿದರೆ ಅದನ್ನು ಅತ್ತಿತ್ತ ಒಯ್ಯಲು ಸಾಧ್ಯ. ಇಲ್ಲಿ ಪಕ್ಷಿಯನ್ನೋ ರೆಕ್ಕೆಗಳನ್ನೋ ಯಾವುದನ್ನು ಜೋಡಿಸುವುದು? ಅದರ ಚಲನೆಯನ್ನು ಹೇಗೆ ನಿಯಂತ್ರಿಸುವುದು. ಎಲ್ಲವೂ ಸಂದಿಗ್ಧ, ಅಸ್ಪಷ್ಟ, ಅನಿರ್ದಿಷ್ಟ.

ಇಂಥ ವಿಮಾನ ವಿದ್ಯೆಯೆಂಬ ವಿಜ್ಞಾನದ ಬುರುಕಿ ಹೊದ್ದ ಪ್ರಕ್ರಿಯೆಗಳ ವರ್ಣನೆಗಳಿಂದ ವಿಮಾನ ನಿಯಂತ್ರಣ ಸಾಧ್ಯವಾಗುವುದುಂಟೇ? ಎಟುಕದ ಮಾತು!

ಅಲ್ಲದೆ ಒಂದು ವಿಮಾನವನ್ನು ಕಟ್ಟುವ ಯಂತ್ರೋಪಕರಣ ಸಾಮಗ್ರಿಯ ತಯಾರಿಕೆಗೆ ಎಷ್ಟೆಲ್ಲ ಏನೆಲ್ಲ ವಿವಿಧ ವೈಜ್ಞಾನಿಕ ಶಾಖೆಗಳ ತಜ್ಞತೆ, ತಂತ್ರ ವಿಧಾನಗಳ ಅವಶ್ಯಕತೆ ಪೂರ್ವಭಾವಿಯಾಗಿ ಇರುತ್ತದೆ. ಪ್ರಾಚೀನ ಕಾಲದಲ್ಲಿ ವಿಜ್ಞಾನವಿತ್ತು ಎಂದಾಗ, ಅಂದಿನ ಎಲ್ಲ ಸಮಾಜದ ವೈಜ್ಞಾನಿಕ ಪಾತಳಿಯ ಬಗೆಗೆ ನಾವು ಪರ್ಯಾಯವಾಗಿ ಹೇಳಿದಂತೆ ಇನ್ನೂ ಇದೆಲ್ಲ ಆಗಿರಬಹುದೆಂದು ವಾದಕ್ಕಾಗಿ ಒಪ್ಪಿಕೊಂಡರೂ ಐತಿಹಾಸಿಕವಾಗಿ ಅಂಥ ಆ ವಿದ್ಯೆ ಅದಕ್ಕೆ ಅನುವಂಶಿಕವಾಗಿ ವಿವಿಧ ತಜ್ಞತೆಗಳ ವ್ಯೂಹ ಒಮ್ಮಲೇ ಹೇಗೆ ಮಾಯವಾಯಿತು? ಬಾಬರನ ದಾಳಿಯ ಮುಂಚೆ ನಮಗೆ ತೋಪುಗಳೇ ಗೊತ್ತಿದ್ದಿಲ್ಲ. ಮಿಂಚಿನ ಶಕ್ತಿ ಎಂಬುದು ಇಂದ್ರನ ಕೈಯ ವಜ್ರಾಯುಧವಾಗಿತ್ತು! ಕಳೆದ ೨,೦೦೦ ವರ್ಷಗಳಲ್ಲಿ ನಮ್ಮ ಸಂಗ್ರಾಮಗಳೆಲ್ಲ ಪಶು ಶಕ್ತಿಯಿಂದಲೇ ನಡೆದಿದ್ದವು. ಪುರಾಣ ಕಾಲದಲ್ಲಿ ಬಿಲ್ಲು-ಬಾಣ, ಗದೆ, ಮುಸಲ, ಮುದ್ಗರ, ಖಡ್ಗ ತೋಮರಗಳು ಎಂಬ ಶಸ್ತ್ರಾಸ್ತ್ರಗಳೂ ಇದ್ದವು. ಇಲ್ಲಿ ಶಸ್ತ್ರವೆಂದರೆ ಈಗ ನಮೂದಿಸಿದ ಆಯುಧಗಳು. "ಅಸ್ತ್ರ" ವೆಂದರೆ ಮಂತ್ರಗಳ ಶಕ್ತಿಯಿಂದ ಎಸೆದ ಬಾಣವೋ ದರ್ಭೆಯೋ ಬೊಗಸೆನೀರೋ ಆಗುತ್ತಿತ್ತು! ಆದರೆ ಯಾರೂ ಎಂದೂ ವಿಮಾನಗಳನ್ನು ಉಪಯೋಗಿಸಿದ್ದು ಇಲ್ಲ. (ತ್ರಿಪುರ ಸಂಹಾರದಲ್ಲಿ

ಶಿವನು ತ್ರಿಪುರಗಳ ಹಾರಾಟ ತೊಡೆದು ಹಾಕಿದ್ದು ಬಿಟ್ಟರೆ!) ಮಾನವ ಪ್ರಗತಿ ಪ್ರಾಥಮಿಕ ಬಲಪ್ರಯೋಗಕ್ಕೂ ಮುಂದೆ ಹೋದಂತಿಲ್ಲ.

ಅಂದಾಗ ಅಂದು ವಿಮಾನ ವಿದ್ಯೆಯಿಂದೊಡಗೂಡಿ ವೈಜ್ಞಾನಿಕ ಪ್ರಗತಿ ಉಚ್ಚಮಟ್ಟದಲ್ಲಿತ್ತೆಂಬುದಕ್ಕೆ ಯಾವ ಆಧಾರ? ಅದರ ವ್ಯಕ್ತಾವ್ಯಕ್ತ ಕುರುಹುಗಳು ಇಂದು ಎಲ್ಲಿಯೂ ಏನೂ ಸಿಗುವುದಿಲ್ಲವೇಕೆ? ಭಾರತೀಯರ ದೃಷ್ಟಿ ಕೇವಲ ಆಮುಷ್ಮಿಕ ಆಧ್ಯಾತ್ಮಿಕವೆಂಬುದರಿಂದಲೇ? ಆದರೆ ಇದೂ ನಿಜವಲ್ಲ. ನಮ್ಮಲ್ಲಿಯ ಆಯುರ್ವೇದ, ಕಾಮಶಾಸ್ತ್ರ, ಜ್ಯೋತಿಃಶಾಸ್ತ್ರ, ಶಿಲ್ಪಶಾಸ್ತ್ರ, ಧರ್ಮಶಾಸ್ತ್ರಗಳೆಲ್ಲ ನಮ್ಮ ಐಹಿಕ ಅಭ್ಯುದಯದ ಆಸಕ್ತಿಯನ್ನೇ ಕಾಣಿಸುತ್ತವೆ. ಮಧ್ಯಯುಗದ ವಾಸ್ತುಶಿಲ್ಪ ಮೂರ್ತಿಶಿಲ್ಪ ಇದಕ್ಕೆ ಉಜ್ವಲ ನಿದರ್ಶನ. ಹಾಗೆಯೇ ನೃತ್ಯ ಸಂಗೀತ ವಾದ್ಯ ವೈವಿಧ್ಯ ಇತ್ಯಾದಿಗಳ ವಿದ್ಯೆಗಳು. ಭಾರತೀಯರ ಐಹಿಕವನ್ನು ಎಂದಿಗೂ ಉಪೇಕ್ಷಿಸಿದ್ದಿಲ್ಲ.

ಅಂದಾಗ ನಮ್ಮಲ್ಲಿ ಇತ್ತೆಂಬ ವಿಮಾನ ವಿದ್ಯೆ ಎಲ್ಲಿ ಹಾರಿ ಹೋಯಿತು?

# ಕೊಂಕಣಿ: ಕೆಲವು ಪ್ರಮೇಯಗಳು

ಕುಮಟೆಯಲ್ಲಿ ೧೭-೧-೧೯೯೧ರಂದು ಸಮಾವೇಶಗೊಂಡ ಅಖಿಲ ಕರ್ನಾಟಕ ಕೊಂಕಣಿ ಸಮ್ಮೇಳನದಲ್ಲಿ ಕೆಲವು ಸೂಕ್ಷ್ಮ ಮಹತ್ವದ ಗೊತ್ತುವಳಿಗಳನ್ನು ಸರ್ವಾನುಮತದಿಂದ ಸ್ವೀಕರಿಸಲಾಯಿತು. ಅವು ಸಾರಾಂಶವಾಗಿ ಇಂತಿವೆ;

೧. ಕೊಂಕಣಿ ಭಾಷೆಯನ್ನು ಭಾರತ ಸಂವಿಧಾನದ ಎಂಟನೆಯ ಪರಿಚ್ಛೇದದಲ್ಲಿ ಸೇರಿಸಬೇಕು.

೨. ಕರ್ನಾಟಕದಲ್ಲಿಯೂ ಗೋವಾ, ಕೇರಳಗಳಲ್ಲಿಯಂತೆಯೇ ಸರಕಾರವು ಕೊಂಕಣಿಗೊಂದು ಪ್ರತ್ಯೇಕ ಅಕೆಡೆಮಿ ಸ್ಥಾಪಿಸಬೇಕು.

೩. ಆಕಾಶವಾಣಿ ದೂರದರ್ಶನಗಳಲ್ಲಿ ಕೊಂಕಣಿ ಭಾಷೆಯ ಸಾಹಿತ್ಯ ನಾಟಕಾದಿಗಳಿಗೆ ಪ್ರಾಶಸ್ತ್ಯ ಕೊಡಬೇಕು.

೪. ಬರುವ ಜನಗಣತಿಯಲ್ಲಿ ಕೊಂಕಣಿ ಭಾಷಿಕರೆಲ್ಲರೂ ತಮ್ಮ ಮಾತೃಭಾಷೆ ಕೊಂಕಣಿ ಎಂದು ಸ್ಪಷ್ಟವಾಗಿ ಬರೆಯಿಸಬೇಕು.

೫. ಕೊಂಕಣಿಗರು ಮುಂಜಿ, ಮದುವೆಯೇ ಮುಂತಾದ ಸಮಾರಂಭಗಳ ಕರೆಯೋಲೆಗಳನ್ನು ಕೊಂಕಣಿಯಲ್ಲಿಯೇ ಮುದ್ರಿಸಬೇಕು.

೬. ಖಾಸಗೀ ಪತ್ರ ವ್ಯವಹಾರವನ್ನು ಕೊಂಕಣಿಯಲ್ಲಿಯೇ ಮಾಡಬೇಕು.

**ದಶಕಗಳ ಹಿಂದೆ**

ಈ ಸಮ್ಮೇಳನಗಳು ಇತ್ತೀಚೆಗೆ ಸುರುವಾಗಿವೆ. ಹಲವು ದಶಕಗಳ ಹಿಂದೆಯೇ ಕಾರವಾರದಲ್ಲಿ ದಿ। ಎಂ.ಎಸ್. ಶಾನಭಾಗ ವಕೀಲರು ಕೊಂಕಣಿಯ ಕಹಳೆಯನ್ನು ಮೊಟ್ಟಮೊದಲು ಕರ್ನಾಟಕದಲ್ಲಿ ಊದಿದರು. ಕೊಂಕಣಿ ಮಕ್ಕಳಿಗೆ ಕೊಂಕಣಿಯಲ್ಲಿಯೇ ಕಲಿಸಬೇಕೆಂದು ಗೊತ್ತುವಳಿ ಮಾಡಿದರು. ಅದಕ್ಕಾಗಿ ತಾವೇ ಕೊಂಕಣಿ ಕ್ರಮಿಕ ಪಠ್ಯಪುಸ್ತಕಗಳನ್ನೂ ರಚಿಸಿದರು. ಆದರೆ ಮುಂದೆಲ್ಲ ಈ ಚಳವಳಿ ಚಾಲ್ತಿಯಲ್ಲಿ ಉಳಿಯಲಿಲ್ಲ.

ಹಾಗೆಯೇ ೮೦ರ ದಶಕದಲ್ಲಿ ದಿ। ದಿನಕರ ದೇಸಾಯಿಯವರಲ್ಲಿ ಕೊಂಕಣಿಯ ಅಭಿನಿವೇಶ ಕಾಣಿಸಿಕೊಂಡಿತು. ಅವರು ಕನ್ನಡದ ಕವಿಗಳಾಗಿಯೂ ಹಲವಾರು ಕೊಂಕಣಿ ಕವನಗಳನ್ನು ರಚಿಸಿದರು. ಅವು ಅಂಕೋಲೆಯ ಕೊಂಕಣಿಗರಲ್ಲಿ ತುಂಬ ಜನಪ್ರಿಯವೂ ಆದವು. ಕೆಲವು ಕೊಂಕಣಿ ಲೇಖಕರಿಂದ ಕತೆ ಹರಟೆಗಳನ್ನು ಬರೆಯಿಸಿ 'ವೊವಳುಂ' (ಬಕುಲ) ಎಂಬ ಸಂಕಲನವನ್ನು ಪ್ರಕಟಿಸಲು ಪ್ರೇರಿತರಾದರು. ಅದಕ್ಕೂ ಹಿಂದೆ ಕೊಂಕಣಿಯಲ್ಲಿ 'ಚಂದ್ರಹಾಸ' ನಾಟಕವು ಮಂಗಳೂರಿನಲ್ಲಿ ಭಾರಿ ಜನಪ್ರಿಯವಾಯಿತು. ಇಷ್ಟಾದರೂ ಈ ಕೊಂಕಣಿಯ ಗಾಳೀಪಟ

ಹಾರಾಡಲಿಲ್ಲ. 'ಪಂಜೆಯವರು ಕೊಂಕಣಿಯಲ್ಲಿ ಬರೆದರೆ ಅವರು ದೋತರವಾಗಬಹುದಿತ್ತು!' ಎಂದಿದ್ದರು ದಿನಕರ ದೇಸಾಯಿ. 'ಆದರೆ ಅವರು ಮುಂದೆ ಕನ್ನಡದಲ್ಲಿಯೇ ಗೀಜಿ ಶ್ರೀಗಂಧವನ್ನು ನಿರ್ಮಿಸಿದರು!' ಕೊಂಕಣಿಯ ಭಾಷಾಂದೋಲನ ಗತಿಗೊಳ್ಳಲಿಲ್ಲ, ಏಕೆ?

ಈ ಸಮ್ಮೇಳಗಳು ಇತ್ತೀಚೆಗೆ ಶುರುವಾಗಿವೆ. ಇನ್ನೂ ಕೊಂಕಣಿಗರೆಂಬ ಸಾಮುದಾಯಿಕ ಅಸ್ಮಿತೆ ಪೂರ್ತಿ ಎಚ್ಚೆತ್ತಿಲ್ಲ. ಅದಕ್ಕೆ ಇಂಥ ಸಮ್ಮೇಳನಗಳು ಮತ್ತೆ ಮತ್ತೆ ಹೆಚ್ಚು ಹೆಚ್ಚು ನೆರೆಯಬೇಕು. ನಡೆಯಬೇಕು. ಕೊಂಕಣಿಯಲ್ಲಿಯೇ ವ್ಯವಹರಿಸುವ ಸಂಘ, ಕ್ಲಬ್ಬು, ಎಸೋಸಿಯೇಷನ್‌ಗಳು ನಾಡಿದಾದ್ಯಂತ ಹುಟ್ಟಬೇಕು ಹುಬ್ಬಳ್ಳಿ, ಧಾರವಾಡ, ಗದಗಗಳ ಕಡೆಗೆ ಮರಾಠೀ ಮಂಡಳಗಳು ನಡೆಯುತ್ತಿರುವಂತೆ ಆ ಮಟ್ಟಿಗೆ ನಮ್ಮಲ್ಲಿ ಕೊಂಕಣಿಯ ಭಾಷಾಪ್ರಜ್ಞೆ ಇನ್ನೂ ಅಚ್ಚೊತ್ತಿಲ್ಲ. ಕೊಂಕಣಿ ಬರಿ ಒಂದು ಆಡುನುಡಿಯಾಗಿಯೇ ಉಳಿಯಬೇಕಾಗಿಲ್ಲ. ಅದೊಂದು ಪ್ರಗಲ್ಭ, ಪ್ರಬುದ್ಧ ಭಾಷೆಯಾಗಿ ನಿಲ್ಲಬಲ್ಲದು ಎಂಬ ಭಾವನೆ ಬೇರೂರಬೇಕು, ಬೆಳೆಯಬೇಕು.

ಆದರೆ ಈ ಓರಿಯಂಟೇಷನ್ ಕೂಡಿ ಬರಲು ಕಾಲಾವಧಿ ಬೇಕು. ಆ ಅವಧಿಯಲ್ಲಿ ಮತ್ತೆ ಮತ್ತೆ ಒಪ್ಪಿಕೊಳ್ಳುವ ಇಂಥ ಗೊತ್ತುವಳಿಗಳು ನಿಂತಲ್ಲಿಯೇ ಓಡುವ (ಸ್ಪಾಟ್ ರನ್ನಿಂಗ್) ವ್ಯಾಯಾಮವಾಗಬಾರದು. ದೊಂಬರಾಟದವನು ಊರಿಂದೂರಿಗೆ ಹೋಗಿ ಆಟ ತೋರಿಸುವಾಗ ಅದೇ ಸರಳನ್ನು ನೇರಗೊಳಿಸಿ ಮತ್ತೆ ಮತ್ತೆ ಬಗ್ಗಿಸಿ ಪ್ರದರ್ಶಿಸುವಂತೆ ಅವೇ ಅವೇ ಗೊತ್ತುವಳಿಗಳನ್ನು ಪಾಸ್ ಮಾಡಿ ಹಾಗೆಯೇ ಬೈಪಾಸ್ ಮಾಡಿ ಅಧಿವೇಶನದಿಂದ ಅಧಿವೇಶನಕ್ಕೆ ಸಾಗುವುದು ಹುಸಿ ಪ್ರದರ್ಶನವಾಗುತ್ತದೆ, ಆಭಾಸವೆನಿಸುತ್ತದೆ.

**ಹಂಬಲವಷ್ಟೆ ಸಾಲದು**

ಕದವನ್ನು ತೆರೆಯುವವರೆಗೂ ತಟ್ಟಬೇಕಾಗುತ್ತದೆ. ಕೊನೆಗೂ ತೆರೆಯದಿದ್ದರೆ ಮುರಿದು ಮುನ್ನುಗ್ಗಬೇಕಾಗುತ್ತದೆ. ಬೇಡಿಯೂ ಸಿಗದಿದ್ದಾಗ ಕಾಡಿಯೇ ಪಡೆಯಬೇಕಾಗುತ್ತದೆ. ಇದಕ್ಕೆ ಮನೋಬಲ, ಸಂಖ್ಯಾಬಲಗಳ ಬೆಂಬಲ ಬೇಕು. ಬರಿ ಹಂಬಲ ಸಾಲದು. ಇಂದು ಕೊಂಕಣಿ ಗೋವೆಯಲ್ಲಿ ಸರ್ಕಾರಿ ಭಾಷೆಯಾದಂತಿದೆ. ಏಕೆಂದರೆ ಈ ಭಾಷೆಯಾಡುವವರ ಸಂಖ್ಯೆ ಪ್ರಾದೇಶಿಕವಾಗಿ ಅಲ್ಲಿ ಹೆಚ್ಚು. ಹಿಂದುಗಳೂ, ಕ್ರೈಸ್ತರೂ ಎಲ್ಲ ವರ್ಗದವರೂ ತಾವೆಲ್ಲ ಕೊಂಕಣಿಗರು ಎಂಬ ಪ್ರಜ್ಞೆಯನ್ನು ಊರ್ಜಿತವಾಗಿ ಇಟ್ಟುಕೊಂಡಿದ್ದಾರೆ. ಜನರ ಒತ್ತಾಯ, ಸರಕಾರದ ಶಾಸನದ ಮುದ್ರೆ ಒಟ್ಟಾದಾಗ ಕೊಂಕಣಿಗೆ ಅಗ್ರಮಾನ್ಯತೆ ದೊರೆತದ್ದು ಸಹಜ.

ಆದರೆ ನಮ್ಮ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ಹಾಗೂ ಕೇರಳದಲ್ಲಿ ಚೆದರಿ ಹಬ್ಬಿದ ಕೊಂಕಣಿ ಜನಕ್ಕೆ ಈ ಅನುಕೂಲವಿಲ್ಲ. ಇಲ್ಲಿ ಜನ ಸಂಘಟನೆಯೇ ತೀವ್ರವಾಗಬೇಕು. ಬಲಿಷ್ಠವಾಗಬೇಕು. ಕೇರಳದಲ್ಲಿ ಗೋವೆಯಂತೆಯೇ ಕೊಂಕಣಿ ಅಕೆಡಮಿ ಸಾಧ್ಯವಾಯಿತಂತೆ. ಹಾಗಿದ್ದರೆ ಕರ್ನಾಟಕದಲ್ಲಿ ಏಕೆ ಸಾಧ್ಯವಾಗಬಾರದು? ನಮ್ಮ ಅಸಂಘಟಿತ ಸ್ಥಿತಿಯೇ ಇದಕ್ಕೆ ಕಾರಣ. ಅನಾಸ್ಥೆಯೇ ಈ ಅವಸ್ಥೆಗೆ ಮೂಲ.

ಇದು ಬದಲಾಗಬೇಕು. ಶಾಸನದ ಮೇಲೆ ಒತ್ತಾಯ ತರುವಷ್ಟು ನಮ್ಮ ಕೊಂಕಣಿಗರ

ದನಿ ಬಲಗೊಳ್ಳಬೇಕು. ಛಲ ತಾಳಬೇಕು. ಸಾಹಿತ್ಯಕ್ಕಿಂತ ಮುಂಚೆ ಜನ ಭಾಷೆಯೆಂಬ ದೃಷ್ಟಿಯಿಂದ ಕೊಂಕಣೆಯು ಕನ್ನಡ ನಾಡಿನಲ್ಲಿ ದೃಢವಾಗಿ ಸಂಘಟಿತವಾಗಬೇಕು. ಎಷ್ಟೇ ಚೆಲ್ಲಾಪಿಲ್ಲಿಯಾಗಿದ್ದರೂ ಕೊಂಕಣಿಗರು ಒಂದು ವೋಟಿನ ಬ್ಯಾಂಕ್ ಎಂಬುದು ನಮ್ಮ ಶಾಸಕರಿಗೆ ಮನದಟ್ಟಾಗಬೇಕು.

ಕೊಂಕಣಿ ಭಾಷಿಕರು ದೇಶದಲ್ಲಿ ೨೫ ಲಕ್ಷವಿದ್ದರೂ ಅವರಲ್ಲಿ ಪ್ರಾದೇಶಿಕ ಐಕ್ಯವಿಲ್ಲ. ಕನ್ನಡಿಯ ನೂರು ಚೂರುಗಳಲ್ಲಿ ನೂರು ಮೋರೆಗಳು ಕಾಣಿಸುವಂತೆ ಕೊಂಕಣಿಯ ಶ್ರೀಮುಖ ಅಂದಗೆಟ್ಟಿದೆ. ಭಿನ್ನ ಭಿನ್ನ ಸಾಮಾಜಿಕ ಸ್ತರಗಳಲ್ಲಿ, ಶ್ರೇಣಿಗಳಲ್ಲಿ, ವರ್ಗಗಳಲ್ಲಿ ಅನಾದಿಯಿಂದಲೂ ಅನ್ಯೋನ್ಯರಿಂದ ವಿಂಗಡವಾಗಿ ಉಳಿದು ಬದುಕುತ್ತ ಬಂದಿದ್ದಾರೆ. ಬ್ರಾಹ್ಮಣರು, ಕ್ಷತ್ರಿಯ, ವೈಶ್ಯರಲ್ಲಿ ಮಾತ್ರವಲ್ಲ. ಕೆಲಸಗಾರ ಕಸುಬುಗಾರ ವರ್ಗಗಳಲ್ಲಿಯೂ ಶೂದ್ರರೆಂಬುವವರಲ್ಲಿಯೂ ಕನ್ನಡಿಗರಂತೆ ಕೊಂಕಣಿಗರೂ ಇದ್ದಾರೆ. ಭಾಷೆಯ ತಳಹದಿಯಲ್ಲಿ ಇಬ್ಬಗೆಯಾದ ಈ ವರ್ಗಗಳ ಜಾತಿಗಳ ಸಂಘಟನೆ ವರ್ಗನಿಷ್ಠವಾಗಿ ಆರ್ಥಿಕವಾಗಿ ಮಾಡಬೇಕೋ ಭಾಷಿಕವಾಗಿ ಮಾಡಬೇಕೋ? ಆರ್ಥಿಕ ಸಂಘಟನೆ ವರ್ಟಿಕಲ್. ಭಾಷಿಕವು ಹಾರಿಜಾಂಟಲ್. ನಾಡಿನ ಮನ್ನಡೆಗೆ ಎರಡೂ ಅಗತ್ಯ. ಆದರೆ ಆರ್ಥಿಕ ಸಂಘಟನೆಗೆ ವರ್ಗಕಲಹಕ್ಕೆ ದಾರಿ. ಭಾಷಿಕ ಸಂಘಟನೆಯು ಭಾವೈಕ್ಯಕ್ಕೆ ತಳಹದಿ.

**ಆದ್ಯ ಕರ್ತವ್ಯ**

ಮುಂದಿನ ಜನಗಣತಿಯಲ್ಲಿ ಕೊಂಕಣಿ ತಮ್ಮ ಮಾತೃಭಾಷೆಯೆಂದು ನಿಖರವಾಗಿ ನಮೂದಿಸುವುದು ಆದ್ಯ ಕರ್ತವ್ಯ. ಆಮಂತ್ರಣ ಪತ್ರಿಕೆಗಳಿಗೆ ಕೊಂಕಣಿ ಮುದ್ರಣ ಸರಿ. ಆದರೆ ಅನ್ಯಭಾಷಿಕರಿಗೆಲ್ಲ ಆಮಂತ್ರಣ ಸಲ್ಲಬೇಕಾದರೆ? ರೇಡಿಯೋ ಟಿ.ವಿ.ಗಳಲ್ಲಿ ಕೊಂಕಣಿ ಕಾರ್ಯಕ್ರಮಗಳಿಗೆ ಹೆಚ್ಚು ಪ್ರಾಶಸ್ತ್ಯ ಬೇಕು. ಆದರೆ ಅದು ಪ್ರಸಾರಾವಧಿಯ ಮೊತ್ತದಲ್ಲಿ ಅಲ್ಪಸಂಖ್ಯಾಕರ ಭಾಷೆಗೆ ಎಷ್ಟು ಪಾಲು? ಎಂಬುದರ ಮೇಲೆ ಆವಲಂಬಿಸಿದೆ. ಅಲ್ಲದೆ ಹೆಚ್ಚು ಅವಕಾಶವನ್ನು ಹೇಗಾದರೂ ತುಂಬಲು ಕಳಪೆ ಕಾರ್ಯಕ್ರಮವನ್ನು ಸೇರಿಸುವ ಪ್ರಮೇಯ ಉಂಟಾಗಬಾರದು. ಅನೇಕ ಸಲ ಕಾರ್ಯಕ್ರಮ ಆಯೋಜಕರಿಗೆ ಕೊಂಕಣಿಯಲ್ಲಿ ಸಾಕಷ್ಟು ಕಲಾವಿದರನ್ನು ಕೂಡಿಸುವುದು ಕಷ್ಟವಾಗುತ್ತದೆ. (ಇದು ಆಕಾಶವಾಣಿಯ ಮಟ್ಟಿಗೆ ನನ್ನದೇ ಅನುಭವ.)

ಇನ್ನೂ ಖಾಸಗೀ ಪತ್ರ ವ್ಯವಹಾರ. ಇದು ಅವರವರ ವೈಯಕ್ತಿಕ ಬಾಂಧವ್ಯಕ್ಕೆ ಬದ್ಧ. ಇಲ್ಲಿ ಹೊರಗಿನ ಒತ್ತಾಯ ಹೇಗೆ ಪರಿಣಾಮಕಾರಿ ಆದೀತು? ಭಾಷಾಭಿನಿವೇಶದಿಂದ ಇಡಿಯ ಸಮಾಜವೇ ಭಾಷಾವೇಶಗೊಂಡಲ್ಲಿ ಮಾತ್ರ ಇಂಥ ಸಂಕಲ್ಪ ಸಿದ್ಧಿಸಬಹುದು. ಖಾದೀ ಸ್ವದೇಶೀ ವಸ್ತುಗಳ ಪ್ರಚಾರದಂತೆ.

ಇವೆಲ್ಲಕ್ಕೂ ಮಿಗಿಲಾದ ವ್ಯಾಪಕ ಮಹತ್ವದ ಮತ್ತೂ ಅಗತ್ಯದ ಪ್ರಶ್ನೆ ಸಾಹಿತ್ಯದ್ದು. ಅದೂ ಲೇಖಕರದು ಮಾತ್ರವಲ್ಲ, ಗ್ರಂಥಗಳ ಹಾಗೂ ನಿಯತಕಾಲಿಕೆಗಳ ಪ್ರಸಾರದ್ದು. ಈ ಪ್ರಶ್ನೆಗೆ ಎರಡು ಮುಖ. ಒಂದು ಬರಹಗಾರರ ಮುಖ. ಇನ್ನೊಂದು ಓದುಗರ ಮುಖ. ಇಲ್ಲಿ ಕೊನೆಗೂ ನಿರ್ಣಾಯಕವೂ ಪ್ರಭಾವಿಯೂ ಆದ ಅಂಗ ಓದುಗರದು. ಸಾಹಿತ್ಯಕ್ಕೆ ಗ್ರಂಥಕರ್ತನ ಅಭಿವ್ಯಕ್ತಿಯಷ್ಟೇ

ವಾಚಕರ (ಗ್ರಾಹಕರ) ಕುರಿತ ಸಂವಹನವೂ ಮುಖ್ಯ. ಬರೆದದ್ದು ಬಹುಜನ ಓದಬೇಕು. ಅದು ಬಹುಜನ ಅದನ್ನು ಕೊಳ್ಳುವುದರಿಂದಲೇ ಶಕ್ಯ. ಪತ್ರಿಕೆಗಳ ಇತರ ನಿಯತಕಾಲಿಕೆಗಳ ಬದುಕೇ ಈ ಗ್ರಾಹಕ ಸಮುದಾಯದ ಬೇಡಿಕೆಯ ಮೇಲೆ. ಕಥೆ ಕಾದಂಬರಿಗಳು ಬೆಸ್ಟ್ ಸೆಲರ್ಸ್ ಆಗುವುದೇ ಈ ಸಮುದಾಯದ ಆಸಕ್ತಿಯ ಮೂಲಕ. (ಕವಿಗಳ ಮಾತು ತುಸು ಬೇರೆ. ಅವರು 'ಸ್ವಾಂತಃ ಸುಖಾಯ' ಬರೆಯಬಹುದು. 'ಸಮಾನ ಧರ್ಮ'ದ ಬಗ್ಗೆ ಕಾಯಬಹುದು.')

ಈ ಸಂದರ್ಭದಲ್ಲಿ ಲೇಖಕರೆಲ್ಲ ಇದುರಿಸಬೇಕಾದ ತೊಡಕು ಲಿಪಿಯದು. ಕೊಂಕಣಿಗೆ ಒಂದೇ ಲಿಪಿ ಅಧಿಕೃತವಾಗಿಲ್ಲ. ಒಂದು ಅದನ್ನು ಮೂರೂ ರಾಜ್ಯಗಳಲ್ಲಿ ಮೂರು ಬೇರೆ ಬೇರೆ ಲಿಪಿಗಳಲ್ಲಿ ಬರೆಯುತ್ತಾರೆ. 'ಗೋವೆಯಲ್ಲಿ ದೇವನಾಗರಿ, ಕನ್ನಡ ಜಿಲ್ಲೆಗಳಲ್ಲಿ ಕನ್ನಡ, ಕೇರಳದಲ್ಲಿ ಮಲೆಯಾಳಿ. (ಇದರ ಜತೆಗೆ ಗೋವಾದಲ್ಲಿ ರೋಮನ್ ವರ್ಣಮಾಲೆಯಲ್ಲಿಯೂ ಇಂಗ್ಲಿಷಿನಂತೆ ಕೊಂಕಣಿ ಬರೆಯುವುದೂ ಉಂಟು.) ಗೋವೆಯಲ್ಲಿ ಗಣನೀಯ ಸಂಖ್ಯೆಯಲ್ಲಿ ಇರುವ ಮರಾಠಿಗರಿಗೂ, ದೇವನಾಗರಿ ಲಿಪಿಯ ಮೂಲಕ ಕೊಂಕಣಿ ಒಗ್ಗುತ್ತದೆ.

ಲಿಪಿಯ ವ್ಯತ್ಯಾಸದ ಗುಣಾವಗುಣ ಇಲ್ಲಿ ಮುಖ್ಯವಲ್ಲ. ಈ ಮೂರು ಲಿಪಿಗಳಿಂದಾಗಿ ಕೊಂಕಣಿ ವಾಚಕ ಸಮುದಾಯ ತ್ರಿದಲವಾಗಿದೆ. ಈ ಮೂಲಕ ಕೊಂಕಣಿ ಪುಸ್ತಕಗಳ ಪ್ರಸಾರ ಮೂರಾಬಟ್ಟೆಯಾಗಿದೆ. ಎಲ್ಲರೂ ಎಲ್ಲ ಪ್ರಕಾಶಿತ ಕೃತಿಗಳನ್ನೂ ಓದುವಂತಿಲ್ಲ. ಪ್ರತಿ ಒಂದು ಕೃತಿಗೂ ಮೂರೂ ಲಿಪಿಗಳಲ್ಲಿ ಪ್ರಕಾಶಿತವಾದರೇನೇ ಅದಕ್ಕೆ ಪ್ರಶಸ್ತವಾದ ವಿಶಾಲ ವಾಚಕ ಸಮುದಾಯ ಲಭಿಸುತ್ತದೆ. ಮೂರು ರಾಜ್ಯಗಳಲ್ಲಿಯ ಉತ್ತಮ ಪುಸ್ತಕಗಳು ಆಯಾ ರಾಜ್ಯದ ಓದುಗರ ಪಾಲಿಗೇ ಉಳಿದು ಬಿಡುತ್ತವೆ. ಇದು ತಪ್ಪಬೇಕಾದರೆ ಕೊಂಕಣಿ ವಾಚಕರಿಗೆ, ಅವರು ಯಾವ ರಾಜ್ಯದವರೇ ಆಗಿರಲಿ ಮೂರು ಲಿಪಿಗಳು ಗೊತ್ತಿರಬೇಕು. ಇದೊಂದು ಅನವಸ್ಥಾ ಪ್ರಸಂಗ. ಆರ್ಥಿಕವಾಗಿಯೂ, ಸಾಹಿತ್ಯದ ಅಭಿರುಚಿ ಅಭಿವೃದ್ಧಿಗಳ ದೃಷ್ಟಿಯಿಂದಲೂ ಈ ಪರಿಮಿತಿ ಪ್ರಕಾಶನ ಪ್ರಪಂಚಕ್ಕೆ ಆರ್ಥಿಕವಾದ ಮುಗ್ಗಟ್ಟು.

**ಬೋಧ ಭಾಷೆ**

ದಿ: ಎಂ.ಎನ್. ಶಾನಭಾಗರೂ ಕೊಂಕಣಿ ಪ್ರಾಥಮಿಕ ಇಯತ್ತೆಗಳಿಗಾಗಿ ಭಾಷಾ ಪಠ್ಯಗಳನ್ನು ತಯಾರಿಸಿದ್ದರು. ಕೊಂಕಣಿಗರ ಮಕ್ಕಳಿಗೆ ಕೊಂಕಣಿಯೇ ಬೋಧ ಭಾಷೆ ಆಗಬೇಕೆಂದು ಅವರ ಆಗ್ರಹದ ಪ್ರಯತ್ನವಾಗಿತ್ತು! ಆದರೆ ಅದು ಯಶಸ್ವಿಯಾಗಲಿಲ್ಲ. ಪ್ರಾದೇಶಿಕ ಭಾಷೆಯೇ ಸಾರ್ವತ್ರಿಕವಾಗಿ ಬೋಧ ಭಾಷೆಯಾಗಿ ಉಳಿಯಿತು. ಕೊಂಕಣಿ ಮಕ್ಕಳಿಗೆ ಅದೇ ಬೋಧ ಭಾಷೆಯಾಗಿ ಕನ್ನಡ ಎರಡನೆಯ ಭಾಷೆ ಆಗಬಹುದೇ? ಬೇಕೆ? ಇದು ಇಂಗ್ಲಿಷ್ ಮಾಧ್ಯಮ ಶಾಲೆಗೆ ಸರಿಸಾಟಿ ಆಗಲಾರದೇ? ಈ ಹೂಟ ತೋರುವಷ್ಟು ಸರಳವಲ್ಲ. ಆದರೆ ಇದಕ್ಕೆ ಪರ್ಯಾಯ? ದೇವನಾಗರಿ ಕನ್ನಡ, ಮಲೆಯಾಳಿ ಮೂರು ಲಿಪಿಗಳನ್ನು ಕೊಂಕಣಿ ಮಕ್ಕಳಿಗೆ ಕಡ್ಡಾಯವಾಗಿ ಕಲಿಸುವುದು. (ಜತೆಗೆ ಇಂಗ್ಲಿಷ್ ಲಿಪಿಯೂ ಇದ್ದೇ ಇದೆ!)

ಇನ್ನೂ ಒಂದು ತೊಡಕು ಇದೆ. ಮೂರು ರಾಜ್ಯಗಳಲ್ಲಿಯ ಕೊಂಕಣಿಗಳ ಮೇಲೆ ಮೂರೂ

ಪ್ರಾದೇಶಿಕ ಭಾಷೆಗಳ ಪ್ರಭಾವ ಸಾಕಷ್ಟು ಆಗಿವೆ. ನುಡಿಗಟ್ಟು, ಪಡೆನುಡಿ, ವಾಗ್ಧೋರಣೆ ಇತ್ಯಾದಿಗಳಲ್ಲಿ ಗಮನಾರ್ಹ ವ್ಯತ್ಯಾಸ ಕಂಡುಬರುತ್ತದೆ. ಮೂರು ಬಗೆಯ ಕೊಂಕಣಿಗರು ಒಬ್ಬರಿಗೊಬ್ಬರು ದುರ್ಭೋಧವಾಗುವಂತೆ ಭಾಷೆಯನ್ನು ಬಳಸುತ್ತಾರೆ. ಎಲ್ಲರಿಗೂ ಅರ್ಥವಾಗಬಹುದಾದ ಒಂದು ಸಾಮಾನ್ಯ ಸ್ಟಾಂಡರ್ಡ್ ಭಾಷೆ ಸಿದ್ಧವಾಗಿಲ್ಲ.

ಕನ್ನಡದಲ್ಲಿಯೂ ಪ್ರಾದೇಶಿಕ ಭಾಷಾ ವೈವಿಧ್ಯ ಇದ್ದರೂ ಗ್ರಂಥಸ್ಥ ಭಾಷೆ ಹೆಚ್ಚು ಕಡಿಮೆ ಏಕರೂಪ. ಆದರೆ ಕೊಂಕಣಿಯಲ್ಲಿ ಸಾಕಷ್ಟು ಗ್ರಂಥಗಳೇ ಸಾರ್ವತ್ರಿಕವಾಗಿ ಇಲ್ಲ. ಗ್ರಂಥಸ್ಥ ಭಾಷೆ ಎಲ್ಲಿ ಬಂತು? ಇದು ಹುಚ್ಚು ಮದುವೆಯ ನ್ಯಾಯದ ನಂಟು! ಗ್ರಂಥಗಳು ಪ್ರಚಾರವಾದ ಹೊರತು ವೃತ್ತಪತ್ರಗಳು ಸಾರ್ವತ್ರಿಕವಾದ ಹೊರತು ಭಾಷೆ ಸ್ಟಾಂಡರ್ಡ್ ಆಗುವುದಿಲ್ಲ. ಸ್ಟಾಂಡರ್ಡ್ ಆದ ಹೊರತು, ಆಡುನುಡಿಯಾಗಿಯೇ ಇರುವತನಕ ಸಾಹಿತ್ಯ ನಿರ್ಮಿತಿಗೆ ಅಂತರಾಮ! ಇದಕ್ಕೆಲ್ಲ ಕಾಲಾವಧಿ ಬೇಕು. ಇನ್ ದಿ ಲಾಂಗ್ ರನ್ ಎಲ್ಲ ಸರಿಹೋಗುವುದು ನಿಜ. ಆದರೆ ಹೌ ಲಾಂಗ್ ಹ್ಯಾವ್ ವಿ ಟು ರನ್?

●

('ಕನ್ನಡ ಪ್ರಭ' ೧೯೯೧)

# ಭಗವದ್ಗೀತೆ: ಕೆಂಪು ನೀಲಿ ಕಪ್ಪು

ಪುಣೆಯ ವಿಖ್ಯಾತ ಶಿಕ್ಷಣ ತಜ್ಞರಾದ ದಿ: ಡಾ|| ಖೈರ್ ಭಗವದ್ಗೀತೆಯ ಕುರಿತು ಆಳವಾದ ದೀರ್ಘವಾದ ಸಂಶೋಧನೆ ಮಾಡಿದವರು. ಅವರು ತಾವು ಕಂಡುಕೊಂಡ ಗೀತೆಯನ್ನು ಮೂರು ಬಗೆಯಾಗಿ ವಿಂಗಡಿಸಿ ಪ್ರಕಟಿಸಿದ್ದಾರೆ. ನೀಲಿ ಕೆಂಪು ಮತ್ತು ಕಪ್ಪು ಶಾಯಿಯಲ್ಲಿ ಮುದ್ರಿಸಿ; ಅದೇಕೆ- ಎಂದು ತಮ್ಮ ಸುದೀರ್ಘವಾದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿದ್ದಾರೆ.

ಅವರ ಅಭಿಪ್ರಾಯದಂತೆ ಭಗವದ್ಗೀತೆಯ ಮೂರು ಆವತ್ತಿಗಳಾಗಿವೆ. ಆ ಆವೃತ್ತಿಗಳನ್ನು ಡಾ: ಖೈರರು ತಮ್ಮದ್ದೇ ಆದ ರೀತಿಯಲ್ಲಿ ಗುರುತಿಸಿ ಶ್ಲೋಕಗಳನ್ನು ವಿಂಗಡಿಸಿ ಗೀತೆಯನ್ನು ಮೂರು ಬಗೆಯಾಗಿ ಸಂಪಾದಿಸಿ ಒಂದೇ ಸಂಪುಟದಲ್ಲಿ ಪ್ರಕಟಿಸಿದ್ದಾರೆ.

ಈ ಸಂದರ್ಭದಲ್ಲಿ ಪೂಜ್ಯ ಮಾಸ್ತಿಯವರೂ ಇದೇ ರೀತಿ ಗೀತೆಯು ಎರಡು ಆವೃತ್ತಿಗಳಾಗಿರಬೇಕೆಂದು ವಿವೇಚಿಸಿದ್ದರು. ಹಿಂದೆ ಅವರು ಸಂಪಾದಕರಾಗಿ ನಡೆಯಿಸುತ್ತಿದ್ದ 'ಜೀವನ' ಮಾಸಿಕದ 'ಭಗವದ್ಗಿತಾಂಕ' ದಲ್ಲಿ. ಸ್ಥೂಲವಾಗಿ ಅವರ ಈ ಅಭಿಪ್ರಾಯಕ್ಕೆ ಕಾರಣ ಶ್ರೀಕೃಷ್ಣನು ಒಮ್ಮೆ ತೃತೀಯ ಪುರುಷದಲ್ಲಿಯೂ ಒಮ್ಮೆ ಪ್ರಥಮ ಪುರುಷದಲ್ಲಿಯೂ ದೇವರ ಕುರಿತು ಮಾತಾಡುವ ಸಂದರ್ಭಗಳಿಂದ. ಉದಾಹರಣೆಗೆ "ಈಶ್ವರಃ ಸರ್ವಭೂತಾನಾಂ ಹೃದ್ದೇಶೇರ್ಜುನ ತಿಷ್ಠತಿ:- ಹಾಗೆಯೇ "ಸರ್ವಸ್ಯಚ್ಯಾಹಂ ಹೃದಿಸನ್ನಿವಿಷ್ಟಃ" ಇಂಥ ಪುನರುಕ್ತಿಗಳಿಗೆ ಕಾರಣವೇನು? ಕೃಷ್ಣನು ಅವತಾರನೆಂಬ ಧಾರಣೆಯ ಮಟ್ಟಕ್ಕೆ ಏರಿದ ಕಾಲದಲ್ಲಿ ಈ ಉತ್ತಮ ಪುರುಷದ ಸಂಭೋಧನೆ ಈ ಪುರುಷೋತ್ತಮನಿಗೆ ಸಂದಿರಬೇಕು, ಇರಲಿ.

(ಒಂದು ಕುತೂಹಲದ ಅಂಶವೆಂದರೆ, ಭಗವದ್ಗೀತೆಯನ್ನು ಬಿಟ್ಟರೆ ಮಹಾಭಾರತದಲ್ಲಿ ಇನ್ನೆಲ್ಲೂ ಶ್ರೀಕೃಷ್ಣನನ್ನು 'ಭಗವಾನ್' ಎಂದು ಕರೆದಂತಿಲ್ಲ. ಗೀತೆಯಲ್ಲಿಯೇ 'ಭಗವಾನ್ ಉವಾಚ' ಎಂದು ಬರುತ್ತದೆ.)

**ಸ್ವತಂತ್ರ ಕೃತಿಯೇ?**

ಈ ಕುರಿತು ಚಿಂತಿಸುವಾಗ ನನಗೆ ನೆನಪಾದದ್ದು ಗೀತಾಮಹಾತ್ಮದ ಒಂದು ಸಾಲು. "ವ್ಯಾಸೇನ ಗ್ರಥಿತಾ ಪುರಾಣ ಮುನಿನಾ ಮಧ್ಯೇ ಮಹಾಭಾರತೇ". ಇದರ ಮರ್ಮವೇನು? 'ವ್ಯಾಸರು ಭಗವದ್ಗೀತೆಯನ್ನು ಮಹಾಭಾರತದಲ್ಲಿ ನಡುವೆ ಪೋಣಿಸಿದರು. ಅಂದಾಗ ಈ ಗ್ರಂಥ ಮೂಲದಲ್ಲಿ ಬೇರೆಯೇ ಆಗಿದ್ದಿರಬಹುದೇ? ಮಹಾಭಾರತದ ಮಹಾಕೋಶದಲ್ಲಿ ಏನೆಲ್ಲ ಸಮಾವೇಶಗೊಂಡಿದೆ-ಸಾವಿತ್ರಿ, ನಳ-ದಮಯಂತಿ ಮುಂತಾದ ಆಖ್ಯಾನಗಳು, ಯಕ್ಷಪ್ರಶ್ನೆ, ನಹುಷ ಪ್ರಶ್ನೆ ವಿದುರನೀತಿ, ಅದೇಕೆ ಸಮಗ್ರ ರಾಮಾಯಣ ಇವೆಲ್ಲ ಅಡಕವಾಗಿದೆ.

"ಯತ್ ಇಹಾ ಸ್ತಿತದನ್ಯತ, ಯನ್ನೇಹಾಸ್ತಿವ ತತ್ ಕ್ವಚಿತ್" -ಎಂಬುದೇ ಮಹಾಭಾರತದ ಅದರ ಪ್ರತಿಜ್ಞೆ! ಅಂದಾಗ ಭಗವದ್ಗೀತೆ (ಆಮೇಲೆ ಅನುಗೀತೆ) ಮಹಾಭಾರತದ ವಿಶಾಲ ಉದರದಲ್ಲಿ ಸಮಾವೇಶಗೊಳ್ಳುವದೇನು ದೊಡ್ಡ ಮಾತಲ್ಲ!

ಹಿಂದೂ ಕಾಲಖಂಡದಲ್ಲಿ ಭಾರತ ಮಹಾಭಾರತಗಳು ಪ್ರತ್ಯೇಕವಾಗಿಯೇ ಪ್ರಚಲಿತ ವಿದ್ದಿರಬೇಕು. (ಅಶ್ವಲಾಯನ ಗೃಹ್ಯಸೂತ್ರಗಳಲ್ಲಿ ಭಾರತ ಮಹಾಭಾರತಾಚಾರ್ಯ ಎಂಬ ಉಲ್ಲೇಖವಿದೆ!) ಭಾರತವು 'ಮಹಾ' ಭಾರತವಾದ ಕಾಲದಲ್ಲಿ ಭಗವದ್ಗೀತೆ ಎಂಬ ಉಪನಿಷತ್ತು ಕೃಷ್ಣಾರ್ಜುನ ಸಂವಾದದ ರೂಪದಲ್ಲಿ ಈ ಮಹಾ ಕಾವ್ಯವನ್ನು ಸೇರಿತು.

ಈ ಕೃಷ್ಣಾರ್ಜುನ ಸಂವಾದಕ್ಕೆ 'ಭಗವದ್ಗೀತೆ'- ಎಂಬ ಹೆಸರು ಹೇಗೆ ಬಂತು? ಎಂದು ಬಂತು? ಭೀಷ್ಮಪರ್ವದ ಅಂತರ್ಗತವಾದ ಈ ಸಂವಾದವನ್ನೊಳಗೊಂಡ ಭಾಗಕ್ಕೇ ಮಹಾಭಾರತ ದಲ್ಲಿ 'ಭಗವದ್ಗೀತಾಪರ್ವ'ವೆಂದು ಹೆಸರಿಸಿದ್ದಾಗಿದೆ. ಈ ಪರ್ವದಲ್ಲಿ ೮೨ ಅಧ್ಯಾಯಗಳು. ಅವುಗಳಲ್ಲಿ ೧೮ ಪರ್ವಗಳು ೨೫ ರಿಂದ ೪೭ರವರೆಗೆ ನಿಜವಾದ ಭಗವದ್ಗೀತೆ. ಆದ್ಯ ಶಂಕರಾಚಾರ್ಯರು ಪರಿಗಣಿಸಿದ ಗ್ರಂಥ. ಪ್ರತಿ ಅಧ್ಯಾಯದ ಕೊನೆಗೆ 'ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗ ಶಾಸ್ತ್ರೇ-' ಇತ್ಯಾದಿ ಸಮಾರೋಪದ ಒಕ್ಕಣೆ ಮಹಾಭಾರತದಲ್ಲಿ ಕಂಡುಬರುವುದಿಲ್ಲ. ಅಂದರೆ ಈ ಸಂವಾದ ಯೋಗಶಾಸ್ತ್ರ ಬ್ರಹ್ಮವಿದ್ಯೆ, ಉಪನಿಷತ್ತು ಎಂಬುದಾಗಿ ಮಹಾಭಾರತಕಾರರಿಗೆ ತೋಚಿದ್ದಿಲ್ಲವೇ? .

ಈ 'ಭಗವದ್ಗೀತಾ ಪರ್ವ'ವನ್ನು ಓದುವಾಗ ಅಲ್ಲಿ ಭಗವದ್ಗೀತೆ ಗ್ರಂಥಿತವಾದ ಸಂದರ್ಭದ ಬಗೆಗೆ ಏನೋ ಸಂದೇಹ ಉಂಟಾಗುತ್ತದೆ. ಭಗವದ್ಗೀತೆಯ ಆರಂಭದಲ್ಲಿ ಬರುವ 'ಅರ್ಜುನ ವಿಷಾದಯೋಗ'ಕ್ಕಿಂತ ಮೊದಲಿಗೇ ೨೧ನೆಯ ಅಧ್ಯಾಯದಲ್ಲಿ ಯುಧಿಷ್ಠಿರನ ವಿಷಾದಯೋಗ ಬರುತ್ತದೆ. ಕೌರವರ ಬೃಹತ್ ಸೇನೆಯನ್ನು ನೋಡಿ, ಅದೂ ಭೀಷ್ಮನ ಸೇನಾಧಿಪತ್ಯದಲ್ಲಿ ಯುಧಿಷ್ಠಿರನು ಕಂಗೆಟ್ಟು ಮಾತಾಡುತ್ತಾನೆ. ಆಗ ಅವನನ್ನು ಹುರಿದುಂಬಿಸುವವನು ಅರ್ಜುನ!

ಮುಂದಿನ ಅಧ್ಯಾಯದಲ್ಲಿ ಯುಧಿಷ್ಠಿರನ ಯಾತ್ರೆ. ಭೀಮಾರ್ಜುನರ ಪ್ರಶಂಸೆ (ಅರ್ಜುನನೇ ರಚಿಸಿದ ವಜ್ರವ್ಯೂಹದ ಮುಖಕ್ಕೆ ಭೀಮನೇ ರಕ್ಷಕ) ಕುರುಸೇನೆ ಸಂಹರಿಸುವಂತೆ ಅರ್ಜುನನಿಗೆ ಅಣ್ಣನ ನಿರ್ದೇಶನ.

ಅನಂತರ 'ಅರ್ಜುನಸ್ಯ ಹಿತಾರ್ಥಾಯ' ಕೃಷ್ಣನ ಆದೇಶದಂತೆ ಅರ್ಜುನನಿಂದ ದುರ್ಗಾ ಸ್ತೋತ್ರ. ಮುಂದಿನ ಅಧ್ಯಾಯ (೨೪)ರಲ್ಲಿ ಸೈನಿಕರ ಹರ್ಷೋದ್ಗಾರ, ಉತ್ಸಾಹಗಳ ಬಗೆಗೆ ಧೃತರಾಷ್ಟ್ರ-ಸಂಜಯರಲ್ಲಿ ·ಸಂವಾದ. ಉಭಯ ಸೇನೆಗಳೂ ಪ್ರಹೃಷ್ಟವಾಗಿಯೇ ಇದ್ದವು. ದೇವತೆಗಳಿಂದಲೂ ಪುಷ್ಪವೃಷ್ಟಿ. ಅದುವರೆಗೂ ಅನ್ಯೋನ್ಯವಾಗಿ ದುರುಗುಡುತ್ತಿದ್ದ ಉಭಯ ಪಕ್ಷಗಳ ಸೇನೆಗಳಲ್ಲಿ ದೊಡ್ಡ ಘರ್ಷಣೆ.

ದುರ್ಗಾದೇವಿ ಶ್ರೀಕೃಷ್ಣನ ಇದುರಿಗೇ ಅಂತರಿಕ್ಷದಲ್ಲಿ ಕಾಣಿಸಿಕೊಂಡು-

ಸ್ವಲ್ಪೇನೈವತು ಕಾಲೇನ ಶತ್ರೂನ ಜೇಷ್ಯಸಿ ಪಾಂಡವ!
ನರಃ ತ್ವಮಸಿ ದುರ್ಧರ್ಷಃ ನಾರಾಯಣ ಸಹಾಯವಾನ್॥
ಅಜೇಯಸ್ತು ರಣೇ ರೀಣಾಂ ಅಪಿವಜ್ರಭೃತಃ
ಸ್ವಯಂ

ಎಂದೆಲ್ಲ ಅಭಯ ಹೇಳಿ ವರವನ್ನು ನೀಡುತ್ತಾಳೆ. ಆದ್ದರಿಂದ ಅರ್ಜುನ ತಾನು ವಿಜಯಿಯೆಂದೇ ಭಾವಿಸುತ್ತಾನೆ. ರಥವನ್ನೇರಿ ಕುಳಿತು ಕೃಷ್ಣಾರ್ಜುನರಿಬ್ಬರೂ ದಿವ್ಯವಾದ ಶಂಖಗಳನ್ನು ಊದುತ್ತಾರೆ.

**ಎಂಥ ಆರಂಭ, ಕೊನೆ!**

ಅಂದಾಗ ಅದೇ ಮುಂದಿನ ಅಧ್ಯಾಯದ ಆರಂಭಕ್ಕೆ ಉಭಯ ಸೇನೆಗಳ ನಡುವೆ ನಿಂತು ನೋಡಿದಾಗ ಅರ್ಜುನ ಸ್ವಜನಹತ್ಯಾ ಪಾಪಕ್ಕೆ ಭಯಪಟ್ಟು ಕಂಗೆಟ್ಟು ರಥದಿಂದ ದುಮಿಕ್ಕಿ 'ನಾನೊಲ್ಲೆ!' ಎಂದು ಬಿಲ್ಲು ಬಾಣಗಳನ್ನು ಚೆಲ್ಲಿ ವಿಷಾದ ಪಡುತ್ತಾನೆ. ಎಂಥ ಆರಂಭಕ್ಕೆ ಎಂಥ ಕೊನೆ!

ಅರ್ಥಾತ್ ಈ ಸಂದರ್ಭವೇ ಸಂಶಯಾಸ್ಪದ. ಭಗವದ್ಗೀತೆಯನ್ನು ಒಂದು ಸ್ವತಂತ್ರ ಕೃತಿಯೆಂದು ಭಾವಿಸಿದಾಗ ಈ ಆರಂಭ ಸಮರ್ಪಕ, ಅತ್ಯಂತ ಸ್ವಾರಸ್ಯದ ಮನೋವೈಜ್ಞಾನಿಕ ಮರ್ಮದ ಸನ್ನಿವೇಶ. ಭಗವಂತನ ಮಾತುಗಳಿಗೆ ಸುಯೋಗ್ಯ ಪೀಠಿಕೆ. ಆದರೆ ಇದರ ಪೂರ್ವಾಪರ ವನ್ನು ಗಮನಿಸದಾಗ? ಅಣ್ಣನಿಗೆ ಯುದ್ಧೋನ್ಮುಖವಾಗಲು ಪ್ರೋತ್ಸಾಹಿಸಿದ ಅರ್ಜುನ ಒಮ್ಮೆಲೇ ಹೀಗೆ ವಿಷಣ್ಣನಾಗಿ ನಿರ್ವಿಣ್ಣನಾಗಿ ಕುಸಿಯುವುದು ತುಂಬ ವಿಸಂಗತವೆನಿಸುತ್ತದೆ- ಅದೂ ದುರ್ಗಾದೇವಿಯು ಅನುಗ್ರಹಿಸಿದ ನಂತರ.

ಮುಂದೆಯೂ, ಗೀತಾಬೋಧದ ನಂತರ ಯುದ್ಧ ಆರಂಭವಾದಾಗ ಭೀಷ್ಮನ ಪ್ರಚಂಡ ಪ್ರತಾಪಕ್ಕೆ ಯುಧಿಷ್ಠಿರನು ಪೂರ್ತಿ ನಿರ್ವಿಣ್ಣನಾಗಿ ಮೊದಲನೆ ದಿನದ ಯುದ್ಧ ಸಮಾಪ್ತಿಗೇ ಎಲ್ಲ ಬಿಟ್ಟು ವನಕ್ಕೆ ತೆರಳುವೆನೆಂದು ಶೋಕ ಸಂತಪ್ತನಾಗಿ ಶ್ರೀ ಕೃಷ್ಣನಲ್ಲಿ ಗೋಳು ಹೊಯ್ದುಕೊಳ್ಳುತ್ತಾನೆ. ಆಗ ಅರ್ಜುನನ ಹೆಸರನ್ನು ಎತ್ತದೆ "ಈ ನಿನ್ನ ಗೆಳೆಯ (ಇಯಂ ತೇ ಸಖಾ) ನಮ್ಮನ್ನು ಉಪೇಕ್ಷಿಸುತ್ತಾನೆ. ನಾವು ದ್ರೋಣ-ಭೀಷ್ಮರ ಶಸ್ತ್ರಗಳ ಅಗ್ನಿಯಲ್ಲಿ ಸುಡುತ್ತಿದ್ದರೂ 'ಉದಾಸೀನ!'- ಹೀಗೆ ಗೋಗರೆಯುತ್ತಾನೆ. ಅರ್ಜುನನ ಇದುರಿಸಲ್ಲಿಯೇ 'ಕರಿಷ್ಯೇವ ಚನಂತವ'- ಎಂದು ಧನುರ್ಬಾಣಗಳನ್ನು ಎತ್ತಿಕೊಂಡು ಪುನಃ ರಥಾರೂಢನಾದ ಅರ್ಜುನನ ಈ ನಡತೆ ಭಗವದ್ಗೀತೆಯನ್ನೇ ವ್ಯರ್ಥಗೊಳಿಸಿದಂತೆ. ಆಗ ಕೃಷ್ಣ ಯುಧಿಷ್ಠಿರನನ್ನು ಮತ್ತೆ ಹುರಿದುಂಬಿಸುತ್ತಾನೆ. ಆಗ ಆತ ಅರ್ಜುನನ ಮಾತನ್ನೇ ಎತ್ತುವುದಿಲ್ಲ. ಬದಲಾಗಿ ದೃಷ್ಟದ್ಯುಮ್ನನನ್ನು ತೋರಿಸಿ ಯುದ್ಧವನ್ನು ಮುಂದರಿಸಲು ಸೂಚಿಸುತ್ತಾನೆ.

ಇಲ್ಲಿ ನಡುವೆ ಬಂದ ಕೃಷ್ಣಾರ್ಜುನ ಸಂವಾದವನ್ನು ಮರೆತರೆ, ಇದೆಲ್ಲ ನಡೆದದ್ದು ಉದ್ದಕ್ಕೂ ಸುಸಂಗತ ಸುಸೂತ್ರವಾದ ಘಟನಾವಳಿಯೇ. ಆದ್ದರಿಂದಲೇ ಅಂದದ್ದು ಭಗವದ್ಗೀತೆ ಅದರ ಸಂದರ್ಭಕ್ಕೆ ಉಚಿತವಾಗಿ ಕಾಣುವದಿಲ್ಲ. ಪ್ರಕ್ಷಿಪ್ತವಾಗಿ ಕಾಣುತ್ತದೆ! ಏಕೆಂದರೆ ಗೀತಾಬೋಧದ ನಂತರವೂ ಅರ್ಜುನನ ನಿಷ್ಕ್ರಿಯತೆ ಅನ್ಯಮನಸ್ಕತೆ ಹಿಂದಿನಂತೆಯೇ ಮುಂದರಿದದ್ದನ್ನು ಕಾಣುತ್ತೇವೆ.

ಹೀಗೆಂದ ಮಾತ್ರಕ್ಕೆ ಇದು ಗೀತೆಯ ಕುರಿತು ಆಕ್ಷೇಪವಲ್ಲ. ಭಗವದ್ಗೀತೆಯ ಅವಹೇಳನ ಅನಮೂಲ್ಯನವಲ್ಲ. ಅದೊಂದು 'ಸಂವಾದಮಿದಮದ್ಭುತಂ' ಅಪ್ರತಿಮ ಉತ್ಕೃಷ್ಟ ಕೃತಿ. ಕಾರ್ಯಾಕಾರ್ಯ ವ್ಯವಸ್ಥಿತಿ ಶಾಸ್ತ್ರದ ಅಮೂಲ್ಯ ಕೈಪಿಡಿ. ಒಟ್ಟು ಮಹಾಭಾರತದ ಶಿಲ್ಪ, ಶಬ್ದಸೌಷ್ಠವ, ಅರ್ಥಗೌರವ, ಪ್ರಬುದ್ಧ ಪ್ರಗಲ್ಭ ಪ್ರಾಸಾದಿಕ ಶೈಲಿಗೆ ಸಮರಸವಾಗಿ ಹೊಂದಿಕೊಂಡು ಅದೇ ಓಜೆಯಲ್ಲಿ ಸಾಗುವ

ತಾತ್ವಿಕ ಕಾವ್ಯಧಾರೆ. ಇದು ಭಗವದ್ಗೀತೆಯ ಆಂತರಿಕ ಮೌಲ್ಯ. ಮಹತ್ವ ಔನ್ನತ್ಯಗಳ ವಿಚಾರ. ಆ ಮಟ್ಟಿಗೆ ಭಗವದ್ಗೀತೆ ಅನನ್ಯ ಅನನ್ವಯ ಕೃತಿ.

ನಾವಿಲ್ಲಿ ಶಂಕಿಸುವುದು ಕೇವಲ ಮಹಾಭಾರತದಲ್ಲಿ ಅದರ ಸಂದರ್ಭವನ್ನು ಆ ಸಂದರ್ಭಕ್ಕೆ ಈ ಗೀತೋಪನಿಷತ್ತು ಸುಸಂಗತವಾಗಿ ಹೊಂದಿಕೊಳ್ಳುವುದಿಲ್ಲವೆಂಬ ವಿಚಾರವಷ್ಟೇ. ಅರ್ಜುನನ ವಿಷಾದ ವೈರಾಗ್ಯದಂತೆ ಈ ಗೀತಾಗ್ರಂಥವೂ, 'ವಿಷಯೇನ ಸಮುಪಸ್ಥಿತಂ' ಈ ಕುರಿತು ಬಲ್ಲವರು ಹೆಚ್ಚಿನ ಬೆಳಕು ಬೀರಬಹುದೇ?

●

('ಕನ್ನಡ ಪ್ರಭ' ೧೯೯೩)

# ದ್ರೌಪದಿ ವಸ್ತ್ರಾಪಹರಣ: ನಿಜವಾಗಿ ನಡೆದದ್ದೇನು?

ಮಹಾಭಾರತದಲ್ಲಿ ದುರಂತ ಘಟನಾವಳಿಗಳಿಗೆ ಮೂಲ ಸಭಾಪರ್ವದಲ್ಲಿ ನಡೆದ ದ್ಯೂತ ಪ್ರಸಂಗ. ಅದರ ಕೆಟ್ಟ ಕೇಂದ್ರ "ದ್ರೌಪದಿಯ ವಸ್ತ್ರಾಪಹರಣ". ಆದರ ಈ ಕುರಿತೇ ಸಂದೇಹಕ್ಕೆ ಅವಕಾಶವಿದ್ದಂತೆ ತೋರುತ್ತದೆ. ನಿಜವಾಗಿಯೂ ಆ ಪ್ರಸಂಗದಲ್ಲಿ ನಡೆದದ್ದು ಏನು?

ಯುಧಿಷ್ಠಿರ ದ್ರೌಪದಿಯನ್ನು ಪಣಕ್ಕೆ ಹಚ್ಚಿ ಸೋತನಂತರ ಅವಳನ್ನು ಸಭಾಗೃಹಕ್ಕೆ ಎಳೆದು ತರಲು ಕರ್ಣನ ಆದೇಶದಂತೆ ದುಃಶಾಸನ ಹೋಗುತ್ತಾನೆ. (ಈ ಮುಂಚೆ ಪ್ರತಿಕಾಮಿ ಎಂಬ ದೂತ ಹೋಗಿ ಕೈಚೆಲ್ಲಿಕೊಂಡು ಬರುತ್ತಾನೆ) ಆಕೆ ಆಗ ರಜಸ್ವಲೆ ಆಗಿದ್ದರಿಂದ 'ಏಕವಸ್ತ್ರೆ' ಆಗಿರುತ್ತಾಳೆ. ಪ್ರತಿಭಟಿಸುತ್ತಾಳೆ. ಆದರೂ ದುಃಶಾಸನ ಅವಳನ್ನು ಕೂದಲು ಹಿಡಿದೆಳೆದು ಸಭೆಗೆ ತರುತ್ತಾನೆ. ಆಮೇಲೆ ಆಕೆ ದಾಸಿಯೆಂದು ಸಾರಿ ಕರ್ಣನು ಅವಳನ್ನು ವಿವಸ್ತ್ರಗೊಳಿಸಲು ಹೇಳುತ್ತಾನೆ. ದುಃಶಾಸನನ ಈ ದುಷ್ಪ್ರಯತ್ನದಲ್ಲಿ ಶ್ರೀಕೃಷ್ಣನ ಪ್ರಭಾವದಿಂದ 'ಅಕ್ಷಯಾಂಬರ'ದ ಪವಾಡ ನಡೆಯುತ್ತದೆ. ದುಃಶಾಸನ ಹತಬದ್ಧವಾಗಿ ನಾಚಿಕೊಂಡು ಕುಸಿಯುತ್ತಾನೆ.

ಆದರೆ ಅಂದು ಆ ಪ್ರಸಂಗದ ಹಕೀಕತ್ತು ಏನು? ದುಃಶಾಸನ ದ್ರೌಪದಿಯನ್ನು 'ವಿವಸ್ತ್ರ' (ಬತ್ತಲೆ) ಗೊಳಿಸಲು ಹೋಗಿದ್ದನೇ?

ಮಹಾಭಾರತದ ಹಲವಾರು ಪಾಠಾಂತರ ಪ್ರಚಲಿತವಾಗಿ ಬಂದಿವೆ. ಮುಖ್ಯತಃ ಉತ್ತರದ ಪಾಠಗಳೂ, ದಕ್ಷಿಣದ ಪಾಠಗಳೂ ಭಿನ್ನವಾಗಿವೆ. ಆದರೆ ಇಂದು ಇವೆಲ್ಲ ಪಾಠಗಳನ್ನು ತೌಲನಿಕವಾಗಿ ವಿಮರ್ಶಿಸಿ ಸಂಶೋಧಿಸಿ ಪುಣೆಯ ಭಂಡಾರಕರ ಸಂಶೋಧನ ಸಂಸ್ಥೆ ಸಿದ್ಧಪಡಿಸಿದ ಅಧಿಕೃತ (ಪ್ರಮಾಣಭೂತ) ಪ್ರತಿ ಪ್ರಸಿದ್ಧವೇ ಇದೆ. ಅದರಲ್ಲಿ ಬೇರೆ ಬೇರೆ ಪ್ರತಿಗಳಲ್ಲಿ ಸೇರಿಕೊಂಡ ಪ್ರಕ್ಷಿಪ್ತ ಶ್ಲೋಕಗಳನ್ನು ವಿಂಗಡಿಸಿದ್ದು ತೋರಿಸಲಾಗಿದೆ. ಈ ಅಧಿಕೃತ ಪಾಠ ಮೂಲ ಮಹಾಭಾರತಕ್ಕೆ ಸರಿಯೆಂದೆ ಪರಿಗಣಿಸಲಾಗಿದೆ.

ಈ ಅಧಿಕೃತ ಪಾಠದಂತೆ ಈ ವಸ್ತ್ರಾಪಹರಣದ ವೃತ್ತಾಂತ ಹೀಗಿದೆ.

ಅಕೃಷ್ಯಮಾಣೇ ವಸನೆ ದ್ರೌಪದ್ಯಸ್ತು ವಿಶಾಂಸತೇ।
ತದ್ರೂಪಂ ಅಪರಂ ವಸ್ತ್ರ ಪ್ರಾದುರಾ ಸೀದವೇಶಶ:॥
ತತೋಹಲಹಲಾಶಬ್ದ: ತತ್ತಶಿಸೀತ್ ಘೋರ ನಿಸ್ವನ:।
ತತ್ ಅದ್ಭುತತಮಯಂ ಲೋಕೇ ವೀಕ್ಷ ಸರ್ವೇ ಮಹೀಕ್ಷಿತಾ:॥

ಯದಾತು ವಾಸಸಾಂ ರಾಶಿ: ಸಭಾಮಧ್ಯೆ ಸಮಾಚಿತ:
ತತೋ ದುಃಶಾಸನೊ ಶ್ರಾಂತೊ ವ್ರೀಡಿತೋ ಸಮುಪಾವಿಶತ್॥

-ಇಲ್ಲಿ ಏನೋ ಅದ್ಭುತ ನಡೆಯಿತು ಎಂದಿದೆ. ಇದೂ 'ಪ್ರಕ್ಷಿಪ್ತ'ವೆಂಬ ಶ್ಲೋಕಗಳಲ್ಲಿ ಇದೆ.

"ಒಂದು ವಸ್ತ್ರದ ಸ್ಥಳದಲ್ಲಿ ಇನ್ನೊಂದು ಕಾಣಿಸಿತು" ಈ ಶ್ಲೋಕದ ನಂತರ ಉತ್ತರದ ಪ್ರತಿಗಳಲ್ಲಿ ಈ ಶ್ಲೋಕ ಬಂದಿದೆ:

ನಾನಾ ರಾಗ ವಿರಾಗಾಣಿ ವಸನಾನಿ ಅಥಾತೇ ಪ್ರಭೋ। ಪ್ರಾಧುರ್ಭವಂತಿ ಶತತ: ಧರ್ಮಸ್ಯಪರಿಪಾಲನಾತ್॥

ಆದರೆ ದಕ್ಷಿಣದ ಪ್ರತಿಗಳಲ್ಲಿ ಈ ಶ್ಲೋಕವಿಲ್ಲ. ಸಂಶೋಧಿತ ಪ್ರತಿಯಲ್ಲಿ 'ಅವಳ ಮೈಮೇಲೆ ಕಾಣಿಸಿಕೊಂಡ ಬಟ್ಟೆ ಒಂದೇ ರೂಪದ್ದು' (ತದ್ರೂಪಂ ಅಪರಂ). ಆದರೆ ಪ್ರಕ್ಷಿಪ್ತ ಶ್ಲೋಕದಲ್ಲಿ 'ನಾನಾ ಬಣ್ಣಗಳುಳ್ಳವು' ಎಂದಿದೆ. ಉತ್ತರದ ಪ್ರತಿಗಳಲ್ಲಿ ದ್ರೌಪದಿಯ ಅಪತ್ಕಾಲದಲ್ಲಿ ಶ್ರೀಕೃಷ್ಣನ ಸ್ತುತಿ ಮಾಡಿದ್ದು ಆತ ದ್ವಾರಕೆಯಲ್ಲಿ ತನ್ನ ಶಯ್ಯಾಗಾರದಿಂದ ಎದ್ದು ಓಡಿ ಬಂದು ಅಕ್ಷಯಾಂಬರ ನೀಡಿದ್ದೂ ಇತ್ಯಾದಿ ಇದೆ. ಈ ಸಂದರ್ಭದ ವಿಸ್ತರಣೆಗೆ ಮಹಾಭಾರತದಲ್ಲಿ ಅವಕಾಶವಿದೆ. ದುಃಶಾಸನ ಎಳೆದು ತರುವಾಗ ದ್ರೌಪದಿಗೆ ಹೇಳುತ್ತಾನೆ.

ಕೃಷ್ಣಂಚ, ವಿಷ್ಣುಂಚ, ಹರಿನರಂಚ।
ತ್ರಾಣಾಯ ವಿಕ್ರೋಶ, ನಮೀಮಿಹಿತ್ವಾ॥

ಈ ಮಾತೇ ಕೃಷ್ಣನ ಪ್ರಾರ್ಥನೆಗೆ ಪ್ರಕ್ಷಿಪ್ತವಾಗಿ ಸೇರಿಸಲು ಪ್ರೇರಣೆ ನೀಡಿರಬೇಕು. ಉತ್ತರದ ಪ್ರತಿಗಳಲ್ಲಿ ಈ ಸ್ತುತಿ ತುಸು ದೀರ್ಘವಾಗಿಯೇ ಇದೆ.

ಆದರೆ ಪ್ರಾರ್ಥನೆ ಶ್ರೀಕೃಷ್ಣನದು. ವಸ್ತ್ರ ಪೂರೈಕೆ ಧರ್ಮದ್ದು.

ತತಃ ತು ಧರ್ಮೋ ಅನುಷ್ಠಿತೋ ಮಹಾತ್ಮಾ।
ಸಮಾವೃಷೇತ್ ತಾಂ ವಿವಿಧವಸ್ತ್ರಪೂಗ:॥

ಮೇಲೆ ಹೇಳಿದ 'ಧರ್ಮ ಪರಿಪಾಲನೆ' ಯಾವುದು? ಶ್ರೀಕೃಷ್ಣನ ಸ್ತೋತ್ರವೇ ಅಲ್ಲ. ಅದು ಸತ್ಯಕ್ರಿಯೆ. ಅಂದು ಪ್ರಚಲಿತವಿದ್ದ ಸಾಧ್ವಿಗೆ ಒಪ್ಪಿದ ಒಂದು ದೈವೀ ತಂತ್ರ. ಮಹಾಭಾರತದಲ್ಲಿ ಅಪತ್ಕಾಲದಲ್ಲಿ ಸ್ವಸಂರಕ್ಷಣೆಗಾಗಿ ಸಾಧ್ವಿಯರು ಇದನ್ನು ಆಶ್ರಯಿಸಿದ್ದುಂಟು. ಕೀಚಕನಲ್ಲಿಗೆ ಹೋಗಬೇಕಾಗಿ ಬಂದಾಗ, ದ್ರೌಪದಿ 'ಸತ್ಯಕ್ರಿಯೆ' ಮಾಡಿದಳು. ಅಂದರೆ ತನ್ನ ಧರ್ಮಾಚರಣೆಯ ಉಚ್ಚಾರ "ಈ ವಿಧಾನ ಸತ್ಯವಿದ್ದರೆ ನನ್ನ ರಕ್ಷಣೆ ಈ ಸಂಕಟದಲ್ಲಿ ಆಗಲಿ". ಅದೇ ರೀತಿ ಈ ಸಭೆಯಲ್ಲಿ ಬೇರೆ ಉಪಾಯವಿಲ್ಲದಾಗ ಆಕೆ 'ಸತ್ಯಕ್ರಿಯೆ' ಮಾಡಿದಳು. "ತಾನು ಪತಿವ್ರತಾ ಧರ್ಮದ ಪಾಲನೆ ಮಾಡಿದ್ದು ಸತ್ಯವಿದ್ದರೆ, ದುಃಶಾಸನನ ಪ್ರಯತ್ನ ವಿಫಲವಾಗಲಿ।" ಎಂದು ಸಾರಿದಳು. ವಸ್ತ್ರಸೆಳೆಯುವ ಮುಂಚೆ ಕರ್ಣ ಸಭೆಯ ಇದಿರು ಆಕೆಯನ್ನು ಅಪಮಾನಗೊಳಿಸಿದ್ದನು. 'ಅನೇಕವರಾಗಿ ಬಂದರೇ' ಎಂದು ಬರೆದಿದ್ದನು. ಕರ್ಣನ ಈ ಆರೋಪ ಪೂರ್ತಿ ಸುಳ್ಳೆಂದು ಆಕೆ ಸಿದ್ಧಮಾಡಿದಳು. (ಅಂದು ಮಹಾಭಾರತ ಕಾಲದಲ್ಲಿ ಜನ ಈ 'ಸತ್ಯಕ್ರಿಯೆ'ಯನ್ನು ನಂಬಿದ್ದರು).

ಈ ಊಹೆಗೆ ಆಧಾರ? ಧೃತರಾಷ್ಟ್ರನಿಂದ ಶಾಂತಿ ಸಂದೇಶ ತಂದ ಸಂಜಯನಿಗೆ ಶ್ರೀಕೃಷ್ಣನೇ ಪಾಂಡವರ ಶಿಬಿರದಲ್ಲಿ ಹೇಳುತ್ತಾನೆ.

ಕಷ್ಣಾಂತು ಏತತ್ ಕರ್ಮ ಚಕಾರ ಶುದ್ಧಂ।
ದುಷ್ಕರಂ ತತ್ ಹಿ ಸಭಾಂ ಸಮೇತ್ಯ॥
ಯೇನ ಕೃಚ್ಛ್ರಾತ್ ಪಾಂಡವಾನ್ ವ್ಯಾಜಹಾರ।

ತಥರತ್ನಾನಂ ನೌರಿವಸಾಗರೌ ಘತ॥

(೫ ೨೯:೧೫)

ಈ 'ಶುದ್ಧಕರ್ಮ' ಬೇರೆ ಅಲ್ಲ. ಸಭೆಯ ಇದುರಿನಲ್ಲಿ ಜಝಗಿದ 'ಸತ್ಯಕ್ರಿಯೆ'ಯೇ ಅಂದರೆ 'ಅಕ್ಷಯಾಂಬರ' ಕೃಷ್ಣನ ಪವಾಡವಲ್ಲ. ಇದು ಕೃಷ್ಣನ ಈ ಮಾತಿನಿಂದಲೇ ಸೂಚಿತವಾಗುತ್ತದೆ. (ದಕ್ಷಿಣದ ಪ್ರತಿಗಳಲ್ಲಿ ದ್ರೌಪದಿಯ ಮೊರೆ, ಕೃಷ್ಣನಿಂದ ಪವಾಡ ಇತ್ಯಾದಿ ಕಂಡು ಬರುತ್ತದೆ).

ಈ 'ಧರ್ಮಪಾಲನೆ'ಯ ಪಾರಂಪರಿಕ ಪ್ರಜ್ಞೆ ಉಳಿದದ್ದರಿಂದ ಉತ್ತರದ ಪ್ರತಿಕಾರರು ಶ್ರೀಕೃಷ್ಣನಿಂದಲೇ ಚಮತ್ಕಾರವಾಯಿತೆಂದು ಹೇಳಿಲ್ಲ. ಪತಿವ್ರತಾ ಧರ್ಮಕ್ಕೆ ಆಹ್ವಾನ ಮಾಡಿ 'ಸತ್ಯಕ್ರಿಯೆ' ನಡೆಯುವುದೇ ಮೂಲ ಭಾರತಕ್ಕೆ ನಿಕಟ. ದ್ರೌಪದಿಯ ಮೊರೆ ನಂತರ ಸೇರಿಸಿದ ಸನ್ನಿವೇಶ. ಅರ್ಥಾತ್, ಈ ಮೊರೆ ಕೇಳಿ ಶ್ರೀಕೃಷ್ಣ ದ್ವಾರಕೆಯ ಶಯನಾಗಾರದಿಂದ ಎದ್ದು ಓಡಿ ಬಂದದ್ದೂ ಪ್ರಕ್ಷಿಪ್ತವೆನ್ನಬೇಕು.

ನಿಜವಾಗಿಯೂ ದ್ಯೂತದ ವೇಳೆಗೆ ಶ್ರೀಕೃಷ್ಣ ದ್ವಾರಕೆಯಲ್ಲಿಯೇ ಇದ್ದಿಲ್ಲ! ದ್ವಾರಕೆಯಿಂದ ದೂರ ಶಾಲ್ವನೆಂಬ ದೈತ್ಯನೊಡನೆ ಕಾದಾಡುತ್ತಿದ್ದನು. ದ್ಯೂತದ ವೃತ್ತಾಂತ ಅವನಿಗೂ ಗೊತ್ತೇ ಇದ್ದಿಲ್ಲ. ಇದು ಶ್ರೀಕೃಷ್ಣನಿಂದಲೇ ವನವಾಸದಲ್ಲಿ ಯುಧಿಷ್ಠಿರನಿಗೆ ತಿಳಿದುಬರುತ್ತದೆ.

ಅದೇ ರೀತಿ ದ್ರೌಪದಿಯು ತನ್ನ ಮೇಲೆ ಎರಗಿದ ಸಂಕಟಗಳ ವರದಿ ಶ್ರೀಕೃಷ್ಣನಿಗೆ ಒಪ್ಪಿಸುವಾಗ ಮೂರು ಸಲ ಏಕವಸ್ತ್ರಳಾದ ತನ್ನನ್ನು ಕೂದಲು ಹಿಡಿದೆಳೆದು ತಂದ ಬವಣೆ ಹೇಳಿಕೊಳ್ಳುತ್ತಾಳೆ. ಆಗಲೂ 'ನೀನು ಬಂದು ನನಗೆ ರಕ್ಷಣೆ ನೀಡಿದೆ ಎಂದು ಆಕೆ ಹೇಳುವುದಿಲ್ಲ!

ಇದರ ಅರ್ಥವೇನು?

**ಕಟಿವಸ್ತ್ರ**

ಹಾಗಿದ್ದರೆ ದ್ರೌಪದೀ ವಸ್ತ್ರಾಪಹರಣದ ಸ್ವರೂಪವೇನು? ಆಕೆಯನ್ನು ಬತ್ತಲೆ ಮಾಡಲು ದುಃಶಾಸನನು ನಿಜವಾಗಿಯೂ ಯತ್ನಿಸಿದನೇ? ಇದನ್ನು ತುಸು ಆಳದಲ್ಲಿ ಪರಿಶೀಲಿಸಬೇಕು.

ದ್ರೌಪದಿ ರಜಸ್ವಲೆ ಆಗಿದ್ದಳು. 'ಏಕವಸ್ತ್ರ'ಳಾಗಿದ್ದಳು' ಅಂದರೆ ಕಟಿವಸ್ತ್ರ ಒಂದೇ ಉಟ್ಟವಳು. ಹೆಗಲ ಹೊದಿಕೆ (ಉತ್ತರೀಯ) ಇಲ್ಲದವಳು ಎಂಬ ಭಾವನೆ ಪ್ರಚಲಿತವಾಯಿತು. ಆದರೆ ಹಾಗೆ ಭಾವಿಸಬೇಕಾಗಿದ್ದಿಲ್ಲ. 'ಏಕವಸ್ತ್ರಾ' ಅಂದರೆ 'ಅಸಂವೀತ' ಮೇಲುದವಿಲ್ಲದವಳು ಎಂಬ ಅರ್ಥವಿದೆ. ಆದರೆ ವನವಾಸದಲ್ಲಿ ಜಯದ್ರಥ ದ್ರೌಪದಿಯ ಹತ್ತಿರ ಚೌಕಶಿಗಾಗಿ ಬರುತ್ತಿದ್ದಾಗ 'ತಾನು ರಜಸ್ವಲೆ ಎಂದು ಮೆಲ್ಲಗೆ ಹೇಳಿದಳು. (ಶನೈ: ಉವಾ೯ಚ ಅಥ ರಜಸ್ವಲಾಸ್ಮಿ) ಆಗ ಆಕೆ "ಸಂಗೃಣಹರತೀ ಕೌಶಿಕಂ ಉತ್ತರೀಯಂ' ಎಂದಿದೆ (ಕೌಶಿಕದ ಉತ್ತರೀಯವನ್ನು ಹಿಡಿದುಕೊಂಡಿದ್ದಳು).

ಆದರೆ ಇಲ್ಲಿ ದ್ರೌಪದಿ ಒಂದೇ ಬಟ್ಟೆ ಉಟ್ಟವಳು ಅಂದಮೇಲೆ ಅದನ್ನು ಸೆಳೆದು ದುಃಶಾಸನ ಆಕೆಯನ್ನು ವಿವಸ್ತ್ರಳನಾಗಿ ಮಾಡಲು ಹೆಣಗಿದನು ಎಂಬುದು ರೂಢವಾದ ತಿಳಿವಳಿಕೆ ಆಯಿತು. ಆದರೆ ಅವಳ ಹೆಗಲಿಗೆ ಎದೆ ಮುಚ್ಚುವ ಉತ್ತರೀಯವಿತ್ತು ಎಂಬುದು ಸಾಂದರ್ಭಿಕ ಉಲ್ಲೇಖಗಳಿಂದ ಗೊತ್ತಾಗುವಂತಿದೆ.

ಸಭೆಗೆ ಎಳೆದೊಯ್ಯುವಾಗ ದುಃಶಾಸನ ದ್ರೌಪದಿಯ ಹೆಳಲು ಜಗ್ಗುತ್ತಿದ್ದನು. ಆಗ ಅವಳ ಮೈಮೇಲಿನ ವಸ್ತ್ರಸರಿದಾಡಲು ಆಕೆ ಬಿನ್ನವಿಸಿದಳು "ಮಾ ವಿಕರ್ಷ್ಯ ಮಾಂ ವಿವಸ್ತ್ರಾ ಕೃಥಿ!" (2.60.30). ಇಲ್ಲಿ ಅದು ಉಟ್ಟ ವಸ್ತ್ರವಿರಲಾರದು. ಉಟ್ಟ ಬಟ್ಟೆಯ ಹೊರತು. ಕೂದಲೆಳೆದಾಟದಿಂದ. 'ವಿವಸ್ತ್ರ'ಳಾಗಲು ಬೇರೊಂದು ವಸ್ತ್ರ (ಹೆಗಲ ಹೊದಿಕೆ) ಇದ್ದಿರಬೇಕು. ಹಾಗೆಯೇ ಇನ್ನೊಂದು ಉಲ್ಲೇಖ: "ತಾಂ ಕೃಷ್ಣಮಾಣಾಂ ಪ್ರಸ್ರೋತ್ತರೀಯಾಂ" (2.60.47). ಭಾರತಕಾರರು ಒದಗಿಸಿದ್ದುಂಟು. (ಎಳೆದು ಒಯ್ಯುತ್ತಿರುವಾಗ ಮೇಲುದ ಜಾರುತ್ತಿರುವವಳು).

ಇಲ್ಲಿ ಒಂದು ವಸ್ತುಸ್ಥಿತಿಯನ್ನು ಗಮನಿಸಬೇಕು. ಆ ಕಾಲದಲ್ಲಿ ದಾಸ ದಾಸಿಯರಿಗೆ ಉತ್ತರೀಯವಿದ್ದಿಲ್ಲ. ಅದು ಸ್ವತಂತ್ರ ನಾಗರಿಕರ ಮರ್ಯಾದೆಯ ಹಕ್ಕು. ದ್ಯೂತದಲ್ಲಿ ಸರ್ವಸ್ವವನ್ನೂ ಸೋತು ಪಾಂಡವರು ದಾಸರಾಗಿದ್ದರು. ಆದರೆ ದ್ರೌಪದಿಯು ಇನ್ನೂ ಆಗಿದ್ದಿಲ್ಲ. ಆಕೆ ಎತ್ತಿದ ಪ್ರಶ್ನೆಯ ಇತ್ಯರ್ಥ ಆಗಿದ್ದಿಲ್ಲ. (ಆಕೆಯ ಆ ಮಹತ್ವದ ಪ್ರಶ್ನೆ ಇನ್ನೂ ಸಭೆಯ ಇದಿರೇ ಬಂದಿದ್ದಿಲ್ಲ! ಆಗ ಅವಳ ಉತ್ತರೀಯ ಸೆಳೆಯುವ ಅತ್ಯಾಚಾರ ಅಕ್ರಮವಾಗುತ್ತಿತ್ತು. ಈ ಅತ್ಯಾಚಾರಕ್ಕೆ ಕಾರಣವೇನು?).

"ಪಾಂಡವಾನಾಂ ವಾಸಾಂಸಿ ಅಪರ" ಎಂದು ಕರ್ಣನ ಆದೇಶ. ಆಗ, ತತ್ ಶ್ರುತ್ವಾ ಪಾಂಡವಾ: ಸರ್ವೇ ಸ್ವಾನಿವಾಸಂಸಿ ಭಾರತ।

ಅವತೀರ್ಯ ಉತ್ತರೀಯಾಣಿ ಸಭಾಯಾಂ ಸಮುಪಾವಿಶನ್॥

(ಪಾಂಡವರೆಲ್ಲರೂ ಕರ್ಣನ ಮಾತು ಕೇಳಿದೊಡನೆ ತಮ್ಮ ಉತ್ತರೀಯ ವಸ್ತ್ರಗಳನ್ನು ತೆಗೆದೊಗೆದು ಸಭೆಯಲ್ಲಿ ಕುಳಿತರು) ಆದರೆ ದ್ರೌಪದಿಯು ಉತ್ತರೀಯವನು ತೆಗೆದೊಗೆಯಲಿಲ್ಲ. ಅದಕ್ಕೇ ಕರ್ಣನ ಆಜ್ಞೆಯಂತೆ ದುಃಶಾಸನ ಅದಕ್ಕೆ ಕೈಯೊಡ್ಡಿದನು. ಕರ್ಣನ ಆದೇಶದಲ್ಲಿ 'ವಾಸನ್ ಅಂದರೆ ಉತ್ತರೀಯವೇ ಹೊರತು ಕಟಿವಸ್ತ್ರ (ಅಂತರೀಯ)ವಲ್ಲ. ಇದು ಪಾಂಡವರ ಪ್ರತಿಕ್ರಿಯೆಯಿಂದ ಸ್ಪಷ್ಟ.

ಅಂದರೇನು? ದುಃಶಾಸನ ದ್ರೌಪದಿಯನ್ನು ಬತ್ತಲೆ ಮಾಡಲು ಹೋಗಲಿಲ್ಲ. ಆತ ಅವಳ ಉಟ್ಟ ಸೀರೆಗೆ (ಕಟಿವಸ್ತ್ರಕ್ಕೆ) ಕೈಹಾಕಿದ್ದಿಲ್ಲ. ಕರ್ಣನು ಹೇಳಿದ 'ವಾಸನ್' ಕಟಿವಸ್ತ್ರವಲ್ಲ. ಇದು ಪಾಂಡವರಿಗೂ ಗೊತ್ತು. ದುಃಶಾಸನನಿಗೂ ಗೊತ್ತು. ಪಾಂಡವರಂತೆ, ಪಣಕ್ಕೆ ಸೋತ ದ್ರೌಪದಿಯೂ ಕರ್ಣನ ಆದೇಶವನ್ನು ಪಾಲಿಸಲಿಲ್ಲವೆಂದು ದುಃಶಾಸನನು ಆಕೆಯ ಉತ್ತರೀಯ (ವಾಸನ್) ಸೆಳೆದೊಗೆಯಲು ಹವಣಿಸಿದನು.

ಇನ್ನು ಇವೆರಡೂ ಕೃತ್ಯಗಳು ನಿಂದ್ಯವೇ. ಕಟಿವಸ್ತ್ರವೇನು? ಎದೆವಸ್ತ್ರವೇನು? ಸೆಳೆಯುವುದು ಎರಡೂ ಗರ್ಹಣೀಯವೇ. ಆದರೆ ಟು ಗಿವ್ ದಿ ಡೆವಿಲ್ ಹಿಸ್ ಡ್ಯೂ-ಎಂಬಂತೆ ದುಃಶಾಸನನ ಆ ದುಷ್ಟ ಯತ್ನದ ಪರಿಮಿತಿಯನ್ನು ಗೊತ್ತುಪಡಿಸಬೇಕು.

ಭಾರತಕಾರನು ಪಾಂಡವರು ಕರ್ಣನ ಆದೇಶವನ್ನು ಪಾಲಿಸಿದರು - ಎಂದು ಹೇಳುವಾಗ 'ವಾಸಾಂಸಿ' ಮತ್ತೂ 'ಉತ್ತರೀಯಾಣಿ' ಇವೆರಡೂ ಪರ್ಯಾಯಾರ್ಥದಲ್ಲಿಯೇ ಪ್ರಯೋಗಿಸಿದ್ದಾರೆ.

ಅದೇ ಅರ್ಥವು ದ್ರೌಪದಿಯ ಮೇಲುದದ ಬಗೆಗೂ ಸಲ್ಲುತ್ತದೆ. ಅವಳು ದುಃಶಾಸನನು ತನ್ನ ಜಾರುತ್ತಿರುವ ಉತ್ತರೀಯಕ್ಕೆ ಕೈಚಾಚುವುದನ್ನು ಪ್ರತಿಭಟಿಸಿದಳು-ಪಾತಿವ್ರತ್ಯದ ಆಣೆ ಹೊತ್ತು.

**ಏಕವಸ್ತ್ರ**

ಪಾಂಡವರು ಉತ್ತರೀಯಗಳನ್ನು ತೆಗೆದಿಟ್ಟಿದ್ದರೆಂಬ ಅರ್ಥ 13ನೆಯ ಶತಮಾನದ ಸಂಸ್ಕೃತ ಕವಿಗಳಿಗೆ ಗೊತ್ತಿತ್ತು. ಆಗಿನ ಅವರ ಚಂದ್ರನೆಂಬ ಕವಿಯು 'ಬಾಲಭಾರತ'ದಲ್ಲಿ 'ಪಾಂಡವಾ: ಮುಕ್ತೋತ್ತರೀಯಾ: ಸದಸಿವ್ಯರಾಜನ್' ಎಂದಿದ್ದಾನೆ. ಆದರೆ ಕ್ಷೇಮೇಂದ್ರನ ಕಾಲದಿಂದ ದುಃಶಾಸನನು ಸೀರೆ ಸೆಳೆದನೆಂಬ ಅರ್ಥವೂ ಪ್ರಚಲಿತವಾಯಿತು! ಇದಕ್ಕೆ ಒಂದು ಕಲ್ಪನೆ ಕಾರಣ. ದ್ರೌಪದಿಯು 'ಏಕವಸ್ತ್ರಾ' ಇದ್ದಾಗ ಸಭೆಗೆ ತರಲಾಯಿತು. 'ಏಕಂ ಚ ವಾಸೇ ಮಮ ಮಂದಬುದ್ಧೇ ಸಭಾಂ ಸೇತುಂ ನ ಅರ್ಹಸಿ ಮಾಂ ಅನಾರ್ಯ!'-ಎನ್ನುತ್ತಾಳೆ ದ್ರೌಪದಿ. ಅಂದಾಗ ಆಕೆ ಒಂದೇ ಬಟ್ಟೆಯಲ್ಲಿ ಇದ್ದಳು. ದುಃಶಾಸನನು ಅದನ್ನೇ ಸೆಳೆದನು. ಮುಂದಿನ ಕವಿಗಳೆಲ್ಲ ದ್ರೌಪದಿಯ ಸೀರೆ ದುಃಶಾಸನನು ಸೆಳೆದನೆಂಬ ಅತಿರಂಜಿತ ವರ್ಣನೆಯ ಸುರಿಮಳೆಯನ್ನೇ ಗೈದರು-ವಾಲ್ಮೀಕಿ ರಾಮಾಯಣದಲ್ಲಿ ಇಲ್ಲದ ಎಷ್ಟೋ ಕಥಾ ಪ್ರಸಂಗಗಳನ್ನು ತುಲಸೀ ದಾಸನ ರಾಮಾಯಣ (ರಾಮಚರಿತಮಾನಸ)ದ ಮೇಲಿಂದ ನಂತರದ ಕವಿಗಳು ಪ್ರಚುರಪಡಿಸಿದಂತೆ ಇದೂ ಘಟಿಸಿತು.

ಆದರೆ, ಈ ಅರ್ಥ ಎಷ್ಟು ಪ್ರಾಚೀನ? ೭ನೆಯ ಶತಮಾನದವರೆಗೆ, ಭಟ್ಟ ನಾರಾಯಣನ ಕಾಲತನಕ, ದುಃಶಾಸನ ಉತ್ತರೀಯ ವಸ್ತ್ರವನ್ನು ಸೆಳೆದನೆಂದೇ ಇತ್ತು. ವೇಣೀ ಸಂಹಾರದಲ್ಲಿ ದುರ್ಯೋಧನನ ವರ್ಣನೆ-"ಕೃಷ್ಣಾಕೇಶೋತ್ತರೀಯ ವ್ಯಪನಯನ ಮಾಸನ್"-ಎಂದಿದೆ.

'ಕೇಶಾಂಬರಕರ್ಷಣ' ಪ್ರಯೋಗದಲ್ಲಿ 'ಅಂಬರ' ಶಬ್ದದ ಅರ್ಥ, 'ಉತ್ತರೀಯ'ವೆಂದು ಮಾಡಿದ್ದಾನೆ. ಆದರೆ ಮುಂದೆ 11ನೆಯ ಶತಮಾನದ ಕ್ಷೇಮೇಂದ್ರನ 'ಭಾರತ ಮಂಜರಿ'ಯಿಂದ ಮುಂದೆ 'ವಸ್ತ್ರಾಕರ್ಷಣ'ವೆಂದರೆ ಸೀರೆ ಸೆಳೆಯುವುದು (ಚೀರಹರಣ)ವೆಂದು ಅರ್ಥವಾಗಹತ್ತಿತ್ತು.

ಕ್ರಿ.ಪೂ. 3200ರ ತನಕ ವೈದಿಕ ಕಾಲಖಂಡದಲ್ಲಿ ಹೆಂಗಸರ ಉಡಿಗೆ ತೊಡಿಗೆ-ಎರಡು ಬಟ್ಟೆಗಳು: "ಕಟಿವಸ್ತ್ರ' ಅಥವಾ 'ಅಂತರೀಯ' ಮತ್ತು ಹೆಗಲ ಹೊದಿಕೆ 'ಉತ್ತರೀಯ' (ಬಳಕೆಯ ಮಾತಿನಲ್ಲಿ 'ಅಂಗವಸ್ತ್ರ'). ಇದರ ಹೊರತು ಮೈಗೆ ಅಂಟಿಕೊಂಡು ಉಳಿಯಬಲ್ಲ ಕಂಚುಕ. ಸ್ತನಾಂಶುಕಗಳ ಬಳಕೆಯೂ ಇತ್ತು. ಕ್ರಿ.ಪೂ. 3200ರ ತನಕ ಉತ್ತರ ಭಾರತದ ಪಶ್ಚಿಮ ಮಧ್ಯಭಾಗಗಳಲ್ಲಿ 'ಕಂಚುಕ'ದ ಬಳಕೆ-ಶಿಲ್ಪಗಳಲ್ಲಿ ಅದರ ನಿದರ್ಶನ ಸಿಗುತ್ತದೆ. ಆದರೆ ಅಂದು ಪೂರ್ವ ಭಾರತದಲ್ಲಿ 'ಕಂಚುಕ' ಕಂಡುಬರುವುದಿಲ್ಲ, ಶಿಲ್ಪಗಳಲ್ಲಿ.

ಬೌದ್ಧ ವಾಙ್ಮಯದಲ್ಲಿ ಪುರುಷರಿಗೆ 'ಅಂತವಾಸನ್' (ಕಟಿವಸ್ತ್ರ) ಉತ್ತರಾಸಂಗ (ಉತ್ತರೀಯ) ಮತ್ತೂ 'ಉಷ್ಣೀಷ' (ಮುಂಡಾಸ). ಹಾಗೆಯೇ ಸ್ತ್ರೀಯರಿಗೆ 'ಕಂಚುಕ' ಅವಶ್ಯವಾಗಿತ್ತು. ಅವರಿಗೆ ಮೂರು ಬಟ್ಟೆ. ಅವುಗಳ ಉಲ್ಲೇಖ ಬಹುವಚನದಲ್ಲಿ. ಉದಾ: ರಾಜಕನ್ಯೆ ಲೋಪಾಮುದ್ರೆಗೆ ಅಗಸ್ತ್ಯ ಅನ್ನುತ್ತಾನೆ: 'ಮಹಾರ್ಹಾಣಿ ತ್ಯಾಜ ಏತಾನಿ ವಾಸಾಂಸಿ ಆಭರಣಾನಿ ಚ"

ಅಜ್ಞಾತವಾಸದಲ್ಲಿ ಸೈರಂಧ್ರಿಯು ವಿರಾಟನಗರಿಯನ್ನು ಪ್ರವೇಶಿಸುವಾಗ ಒಂದೇ ಕಪ್ಪು ಹಾಗೂ ಮಲಿನ ಸೀರೆಯನ್ನು ಉಟ್ಟಿದ್ದಳು. "ಪರಿಭಾವಮೇಕಂ ಕೃಷ್ಣಂ ಸುಮಲಿನಂ ಮಹತ್"

(4:8:2:7) ಮುಂದೆ ಕೀಚಕನ ಕುರಿತು ಭೀಮನಲ್ಲಿ ದೂರಿಕೊಳ್ಳಲು ಹೋಗುವಾಗ ಸೈರಂಧ್ರಿಯು ತನ್ನ ಎರಡು ಬಟ್ಟೆಗಳನ್ನು ತೊಳೆದು ತೊಟ್ಟುಕೊಂಡಳು ಎಂದಿದೆ. "ಗಾತ್ರಾಣ ವಾಸಸೀ ಚ ಏವ ಪ್ರಕ್ಷಾಲ್ಯ ಸಲಿಲೇವ ಚ" (4:16:7).

ಅಜ್ಞಾತವಾಸದಲ್ಲಿದ್ದಾಗ ಉತ್ತರ ಗೋಗ್ರಹಣದ ಸಂದರ್ಭದಲ್ಲಿ ಉತ್ತರೆಯ ಸಖಿಯರು ಬೃಹನ್ನಳೆಗೆ ಭೀಷ್ಮ ದ್ರೋಣಾದಿ ವೀರರ ಬಣ್ಣ ಬಣ್ಣದ ಬಟ್ಟೆಗಳನ್ನು ತರಲು ಹೇಳುತ್ತಾರೆ - ತಮ್ಮ ಗೊಂಬೆಗಳಿಗೆ ತೊಡಿಸಲಿಕ್ಕೆ. "ಬೃಹನ್ನಡೆ ಅನಯೇಥಾ: ವಾಸಾಂಸಿ ರುಚಿರಾಣಿನ:" ಮುಂದೆ ಸಂಮೋಹನಶಾಸ್ತ್ರ ಪ್ರಯೋಗದ ನಂತರ ಬೃಹನ್ನಡೆ ಉತ್ತರನಿಗೆ ಭೀಷ್ಮ ದ್ರೋಣರ ಬಳಿ ಕರ್ಣನ ಹಳದಿ, ಅಶ್ವತ್ಥಾಮ ದುರ್ಯೋಧನರ ನೀಲಿ ವಸ್ತ್ರಗಳನ್ನು ತೆಗೆದು ತರಲು ಹೇಳುತ್ತಾನೆ. ಮುಂದೆ ಅವನ್ನು ತಂದು ಉತ್ತರೆಗೆ ಕೊಡುತ್ತಾನೆ: 'ವ್ಯದದೌತಾನಿ ವಾಸಾಂಸಿ'-ಎಂದಿದೆ. ಇಲ್ಲಿ 'ವಾಸನ್' ಅಂದರೆ ಉತ್ತರೀಯವೆಂದೇ ಅರ್ಥ. ಏಕೆಂದರೆ ಯುದ್ಧದಲ್ಲಿ ಭೀಷ್ಮ ದ್ರೋಣಾದಿಗಳನ್ನು ಬತ್ತಲೆಗೊಳಿಸಿ ಅವರ ಕಟಿವಸ್ತ್ರಗಳನ್ನು ತರಲು ಆ ಸಖಿಯರು ಹೇಳಿದ್ದಿಲ್ಲ!

ಹಾಗೆಯೇ ಸಂಶಪ್ತಕರು ಕೃಷ್ಣಾರ್ಜುನರನ್ನು ಬಾಣಗಳಿಂದ ಸುತ್ತುವರಿದಾಗ ಅವರ ಸೈನಿಕರು ಕೃಷ್ಣಾರ್ಜುನರು ಹತರಾದರೆಂದು ಹರ್ಷದಿಂದ 'ವಾಸಾಂಸಿ ಧುಧುವು: ತಹಾ (ತಮ್ಮ ವಸ್ತ್ರಗಳನ್ನು ತೂರಾಡಿದರು). ಅದೇ ರೀತಿ ದ್ರೋಣನನ್ನು ಪಾಂಚಾಲಿ ವೀರ ಸತ್ಯಜಿತ್ ಮುತ್ತಿದಾಗ ಪಾಂಡವರು ಹರ್ಷದಿಂದ ತಮ್ಮ ವಸ್ತ್ರಗಳನ್ನು ತೂರಾಡಿದರು. 'ವಸ್ತ್ರಾಣ ದುಧುವು: ಚಹಿ' 'ಇಲ್ಲೆಲ್ಲ ವಸ್ತ್ರ-ವಾಸಾನ್-ಉತ್ತರೀಯ ಎಲ್ಲ ಒಂದೇ. ಹೆಗಲ ಹೊದಿಕೆ.

ಉದ್ಯೋಗ ಪರ್ವದಲ್ಲಿ 'ರಾಮೋಪಾಖ್ಯಾನ' ಒಂದಿದೆ. ಅದರಲ್ಲಿ ಸೀತೆ ರಾವಣನು ಒಯ್ಯುವಾಗ ವಾನರ ಪ್ರಮುಖರನ್ನು ಕೆಳಗೆ ಪರ್ವತದ ಶಿಖರದಲ್ಲಿ ಕಂಡು ಮೈಮೇಲಿನ ಹಳದಿ ವಸ್ತ್ರವನ್ನು ಅವರತ್ತ ಒಗೆಯುತ್ತಾಳೆ. 'ತತ್ತವಾಸ: ಮಹಾ ದಿವ್ಯಂ ಉತ್‌ಸಸರ್ಜ ಮನಸ್ವಿನಿ... ತೇಷಾಂ ಮಧ್ಯೆ ವಿಶಾಲಾಕ್ಷೀ ಉತ್ತರೀಯಂ ಮುಮೋಚಹಿ". ಹಾಗೆಯೇ 'ಉತ್ತರೀಯಂ ತಯಾ ತ್ಯಕ್ತಂ'- ಇತ್ಯಾದಿಗಳಿಂದಲೂ ವಾಸನ್ ಅಂದರೆ ಉತ್ತರೀಯವೆಂದೇ ಅರ್ಥವಾಗುವಂತಿದೆ. ಅರ್ಥಾತ್ ದುಃಶಾಸನ ಸೆಳೆದದ್ದು ಸೀರೆಯಲ್ಲ. ಅಕ್ಷಯಾಂಬರದ ಪವಾಡವೂ ಶ್ರೀ ಕೃಷ್ಣನದಲ್ಲ.

ಇದೇನು ದುಃಶಾಸನನ ಸಮರ್ಥನೆ ಅಲ್ಲ. ನಾನೇನು 'ಸೈತಾನನ ವಕೀಲ' (ಡೆವಿಲ್ಸ್ ಅಡ್ವೋಕೇಟ್) ಅಲ್ಲ. ಮಹಾಭಾರತವು ಒಂದು 'ಇತಿಹಾಸ'. 'ಇತಿಹ ರಸ' ಅಂದರೆ ಅದು ಹೀಗೆ ಇತ್ತು. (ಹಕೀಕತ್ತು. ಹಕ್-ಸತ್ಯ). ದ್ರೌಪದೀ ವಸ್ತ್ರಾಪಹರಣದಲ್ಲಿ ನಿಜವಾಗಿ ನಡೆದದ್ದೇನು?-ಎಂಬುದರ ಕುರಿತು ನನಗೆ ದೊರೆತ ವಿವಿಧ ಮೂಲಗಳಿಂದ ವಿವರಗಳನ್ನು ಸಂಗ್ರಹಿಸಿ ಈ ದಾಖಲೆ ದುರಸ್ತು ಮಾಡಲು (ಟು ಕೀಪ್ ದಿ ರೆಕಾರ್ಡ್ ಸ್ಟ್ರೈಟ್) ಇಲ್ಲಿ ದುಡುಕಿದ್ದೇನೆ.

●

(ಕನ್ನಡ ಪ್ರಭ ೧೯೯೫)

# ಶ್ರೀರಾಮ ಜನ್ಮಭೂಮಿ ಪರೀಕ್ಷಣಂ

ಲೋಕಸಭೆಯ ಚುನಾವಣೆಗಳ ದ್ಯೂತ ಸಭೆಯಲ್ಲಿ ನಮ್ಮ ಇತಿಹಾಸದಲ್ಲಿಯೇ ಮೊದಲ ಬಾರಿ ಶ್ರೀರಾಮನನ್ನು ಪಣಕ್ಕೆ ಹಚ್ಚಲಾಯಿತು! ಇನ್ನು ಮುಂದೇನು? ಹಾಗೇನೂ ಆಗದಿರಲಿ. ಆದಾಗ್ಯೂ ಭಾರತೀಯ ಜನತಾ ಪಕ್ಷವು ರಾಮನಾಮದ ಬಲದಿಂದ ನಿಶ್ಚಿತ ಬಹುಮತಗಳಿಸಿ ಕೇಂದ್ರದಲ್ಲಿ ಸರಕಾರ ಕಟ್ಟಲು ಸೋತರೆ (ಈ ಲೇಖನ ಚುನಾವಣೆಯ ಫಲಿತಾಂಶಕ್ಕೂ ಹಿಂದಿನದು) ಶ್ರೀರಾಮನ ಅಪಮೂಲ್ಯನವಾದಂತೆ ಆಗಲಾರದೇ?

ನಮಗೆಲ್ಲ ಪ್ರಭು ರಾಮಚಂದ್ರ ಮಾದರಿಯ ಮಾನವಾವತಾರ. ಮರ್ಯಾದಾ ಪುರುಷೋತ್ತಮ. ಮಾದರಿಯ ಮಗ. ಮಾದರಿಯ ಸೋದರ, ಮಾದರಿಯ ಪತಿ, ಮಾದರಿಯ ಮಿತ್ರ, ಮಾದರಿಯ ವೀರ ಮತ್ತು ಮಾದರಿಯ ರಾಜ-ಹೀಗೆ ಹಲವಾರು ರೀತಿ ಮಾನವ್ಯದ ಭವ್ಯ ಮಾದರಿಗಳನ್ನು ತನ್ನ ಚಾರಿತ್ರ್ಯದಿಂದ ಚರಿತ್ರದಲ್ಲಿ ನಿಲ್ಲಿಸಿದ ಮರ್ಯಾದಾ ಪುರುಷೋತ್ತಮ. ಅದಕ್ಕೇ ಮಹಾತ್ಮಾಜೀ ಸ್ವರಾಜ್ಯವನ್ನು "ರಾಮರಾಜ್ಯ"ದ ಮಾದರಿಯಲ್ಲಿ ರೂಪಗೊಳ್ಳಬೇಕೆಂದು ಕನಸು ಕಂಡಿದ್ದರು. ರಾಮಾಯಣವೇ ಆದಿಕವಿ ವಾಲ್ಮೀಕಿ ನಿರ್ಮಿಸಿದ ಒಂದು ಮಾದರಿಯ ಮೂರ್ತಿಗಳ 'ಪ್ರತಿಮಾ ಗೃಹ'. ಭಾಸ ಕವಿಯು ರಾಮಕಥಾ ವಸ್ತುವಿನ ತನ್ನ ಮೊದಲನೆಯ ನಾಟಕಕ್ಕೆ 'ಪ್ರತಿಮಾ ನಾಟಕ'ವೆಂದೇ ಕರೆದಿದ್ದಾನೆ. ಶ್ರೀರಾಮನೇ ಚಿತ್ರಕೂಟದಲ್ಲಿ ಭರತನಿಗೆ ಹೇಳುತ್ತಾನೆ. 'ಭಿನ್ನ ಚಾರಿತ್ರ್ಯ ದರ್ಶನ ನಾಗಬಾರದೆಂದು'. ಅಂಥ ಆದರ್ಶ ಪ್ರತಿಮೆಯನ್ನು ನಮ್ಮ ರಾಜಕೀಯ ಪಕ್ಷಗಳ ಜೂಜಾಟಕ್ಕೆ ಒಡ್ಡುವುದೇ?

ವ್ಯಕ್ತಿಜೀವನದ, ಕೌಟುಂಬಿಕ ಚರಿತ್ರದ ಆದರ್ಶ ಪುರುಷನಾಗಿ ನಡೆದ ಶ್ರೀ ರಾಮನು ರಾಜಕೀಯುವಾಗಿ ನಡೆದದ್ದು ಹೇಗೆ? ಪಿತೃವಚನ ಪರಿಪಾಲನೆಗಾಗಿ ರಾಜ್ಯವನ್ನು ಬಿಟ್ಟು ಹೊರಟಾಗಲೂ ತನ್ನ ಪಾದುಕೆಗಳನ್ನು ತನ್ನ ಪ್ರತೀಕವಾಗಿ ಪಟ್ಟದಲ್ಲಿ ಇರಿಸಿ, ತನ್ನ ಪ್ರತಿನಿಧಿಯಾಗಿ ಅಯೋಧ್ಯೆಯನ್ನು ಆಳಲು ಭರತನನ್ನು ನೇಮಿಸಿದ್ದು, ಆಮೇಲೆ ಬ್ರಿಟಿಷರು ಹಿಂದುಳಿದ ಜನಾಂಗಗಳ ಹೊಣೆ ತಮ್ಮದೆಂದು ಧೈರ್ಯ ಸಂಕಲ್ಪವಿದೆಯೆಂದು (ವೈಟ್ ಮ್ಯಾನ್ಸ್ ಬರ್ಡನ್ಸ್) ಸಾರಿದಂತೆ ಸಮಗ್ರ-ಪೃಥ್ವಿಗೆ ಇಕ್ಷ್ವಾಕು ವಂಶವೇ ಅಧಿಪತಿ ಎಂದು ಸಾರಿ ಸುಗ್ರೀವನ ಕಿಷ್ಕಿಂಧೆಯನ್ನು ಮುಂ ವಿಭೀಷಣನ ಲಂಕೆಯನ್ನು ತನ್ನ ಆಧಿಪತ್ಯಕ್ಕೆ (ಸುಜರೈನಿಟಿ) ಒಳಪಡಿಸಿಕೊಂಡದ್ದು. ಅದೂ ಅವರವ ಗೃಹಕಲಹದಲ್ಲಿ ಅವರಿಗೆ ಬಲ ಸಹಾಯವನ್ನು ನೀಡಿ. (ಇಲ್ಲಿಯೂ ಸುಗ್ರೀವನಿಗಿಂತ ವಿಭೀಷಣ ರಾಜಕೀಯ ಅಂತಸ್ತು ಕೆಳಗೆ. ಇದು ಶ್ರೀರಾಮ ಪಟ್ಟಾಭಿಷೇಕದಲ್ಲಿ ವ್ಯಕ್ತವಾಗುತ್ತದೆ!)

ವೈದಿಕ ಪರಿಭಾಷೆಯಲ್ಲಿ ಸ್ವರಾಜ್ಯ, ವೈರಾಜ್ಯ, ಪಾರಮೇಷ್ಠಿ ರಾಜ್ಯ'ಗಳ ನೀತಿನೈಪುಣ್ಯ ಅಂದಿನ ಸಾಮಂತವಾದಿ ಲೋಕಾಭಿಪ್ರಾಯಕ್ಕೆ ಇದೆಲ್ಲ ಸರ್ವಸಮ್ಮತವಾಯಿತು. ಅದಕ್ಕಾಗಿ ಸಾ ಅಧುನಿಕರು. ಆಕ್ಷೇಪಿಸಬೇಕಾಗಿಲ್ಲ. ಆ ಮಾತು ಬೇರೆ. ಹಾಗೆಯೇ ಶೂದ್ರ ತಪಸ್ವಿ ಶಂಬೂಕ

ಪ್ರಸಂಗದಲ್ಲಿ ವರ್ಣಧರ್ಮ ವ್ಯವಸ್ಥೆಯ ನೇಮ (ಸ್ಟೇಟಸ್‌ಕ್ವೊ) ಪರಿಪಾಲನೆಯ ರಾಜ್ಯ ವ್ಯವಹಾರ ಧೋರಣೆಯೂ ಸ್ಪಷ್ಟವಾಗುತ್ತವೆ.

ಇದೂ ಅಲ್ಲದೆ ಐತಿಹಾಸಿಕವಾಗಿ ನಾವು ಭಾರತೀಯರು ರಾಮಾಯಣದಿಂದ ಹೀರುತ್ತಾ ಬಂದ ರಾಜಕೀಯ ಪಾಠವೇನು? ರಾಜ್ಯದೊಳಗಿನ ವ್ಯಾಜ್ಯದಲ್ಲಿ ಹೊರಗಿನ ಶಕ್ತಿಯನ್ನು ಆಮಂತ್ರಿಸಿ ಒಟ್ಟಾರೆ ತಮ್ಮ ಸ್ವತ್ವವನ್ನು ಕಳೆದುಕೊಳ್ಳುವುದು. ವಾಲಿ-ಸುಗ್ರೀವರು, ರಾವಣ-ವಿಭಿಷಣರು ಅಂತಃ ಕಲಹದಲ್ಲಿ ಶ್ರೀ ರಾಮನ ಬಲಸಹಾಯ ಪಡೆದರು ಮತ್ತು ತಮ್ಮ ತಮ್ಮ ಸಾರ್ವಭೌಮತ್ವವನ್ನು ಕಳೆದುಕೊಂಡರು. ಸುಗ್ರೀವನ ಅಮಾತ್ಯ ಹನುಮಂತ ಶ್ರೀರಾಮನ ಪರಮ ಸೇವಕನಾದನು. ವಿಭೀಷಣ ಒಬ್ಬ ಭಕ್ತಾಗ್ರಣಿಯಾದನು.

ಇದೇ ಪಾಠವನ್ನು, ಪೋರಸನೊಂದಿಗೆ ಹೋರಾಡುವ ಗಾಂಧಾರ ನರೇಶ ಅಂಬಿ ಅಲೆಕ್ಸಾಂಡರನನ್ನು ಕರೆಯಿಸಿಕೊಂಡನು. ಪೃಥ್ವೀರಾಜ ಜಯಚಂದರ ಕಲಹದಲ್ಲಿ ಮಹಮ್ಮದ ಘೋರಿ ರಾಣಾಸಂಗ-ಇಂಬ್ರಾಹಿಂ ಲೋದಿಗಳ ಕದನದಲ್ಲಿ ಬಾಬರ ಹಸ್ತಕ್ಷೇಪ ಮಾಡಿದನು. ಅಷ್ಟು ದೂರವೇಕೆ? ಎರಡನೆಯ ಮಹಾಯುದ್ಧದ ಸಂದರ್ಭದ ಸಂಧಿ ಸಾಧಿಸಿ ಬ್ರಿಟಿಷರನ್ನು ಓಡಿಸಲು ಜಪಾನದ ನೆರವು ಪಡೆಯಲು ನೇತಾಜೀ ಸುಭಾಸರು ಹೆಣಗಿದರು. ಹೀಗೆ ರಾಜಕೀಯವಾಗಿ ನಾವು ರಾಮಾಯಣದ ಮಾದರಿಯನ್ನು ಅನುಸರಿಸುತ್ತಾ ಬಂದಿದ್ದೇವೆ. (ಪುಣ್ಯಕ್ಕೆ ಪಾತಿವ್ರತ್ಯದ ಮತ್ತು ಶೀಲ ಶುದ್ಧಿಯ ಪರೀಕ್ಷೆಗಾಗಿ ಹೆಂಡಂದಿರನ್ನು, ಅಗ್ನಿ ದಿವ್ಯಕ್ಕೆ ಗುರಿಮಾಡಲು ಯಾರೂ ಹೊರಟಂತಿಲ್ಲ-ಶ್ರೀ ರಾಮನಂತೆ!) ಇವೆಲ್ಲ ಘಟನೆಗಳ ಹಿಂದೆ ಸತ್ ಪ್ರೇರಣೆಗಳೇ ಇರಬಹುದು. ಅವುಗಳ ನ್ಯಾಯ ಸಮರ್ಥನೆಯೂ ಆಗಬಹುದು. ಆದರೆ ವಸ್ತು ನಿಷ್ಠವಾಗಿ ನೋಡಿದಾಗ ಕಂಡುಬರುವ ಐತಿಹಾಸಿಕ ಸತ್ಯವು ಈ ರೀತಿಯಾಗಿದೆ ಎಂದೆನಿಸುತ್ತಿದೆ.

ಇಂದು ರಾಮ ಜನ್ಮಭೂಮಿಯ ವಿವಾದದಿಂದಾಗಿ ಶ್ರೀ ರಾಮನನ್ನು ನಮ್ಮ ರಾಜಕೀಯಕ್ಕೆ ಹೂಡಿದಂತಾಯಿತು. ಈ ರಾಮ ಜನ್ಮಭೂಮಿ ನಿಜವಾಗಿಯೂ ಎಲ್ಲಿದೆ?.. ದಶರತನ ಮಕ್ಕಳ ಜನನ ಸ್ಥಾನ ಯಾವುದು? ಅಯೋಧ್ಯೆಯ ಯಾವ ಭಾಗದಲ್ಲಿ? ಇದೇನೂ ಗೊತ್ತಿಲ್ಲ; ಗೊತ್ತಾಗುವಂತೆಯೂ ಇಲ್ಲ.

## ಸೀತೆಯ ಅಡುಗೆ ಮನೆ

ಪರಂಪರೆಯ ನಂಬಿಕೆಯಂತೆ ಮಹಾಭಾರತವು ಇತಿಹಾಸ. ಆದರೆ ರಾಮಾಯಣವು ಆದಿ ಕವಿಯ ಮಹಾಕಾವ್ಯ. ಇನ್ನು ಇದರ ಕಥೆ. ಪಾತ್ರ-ಪ್ರಸಂಗಗಳು ನಮ್ಮ ಚಿತ್ತಭಿತಿಯಲ್ಲಿ ಇಂದಿಗೂ ಕೊರೆದು ನಿಂತಿವೆ. ಇವು ಇಂಥಲ್ಲಿಯೇ ನಡೆದವು ಎಂದು ಭಾವುಕರು ನಂಬುವಷ್ಟು ಅವು ನಮಗ ಜೀವಂತ ಸ್ಮೃತಿಯಾಗಿದೆ. ಇಂದು ಅಯೋಧ್ಯೆಗೆ ಹೋದರೆ ಅಲ್ಲಿ 'ಜಾನಕಿ ರಸೋಯಿ' (ಸೀತೆಯ ಅಡುಗೆಯ ಮನೆ) ಎಂದು ೨-೩ ಸ್ಥಳಗಳನ್ನು ಅಲ್ಲಿನ ಪಂಡ್ಯಾಮಂದಿ ಯಾತ್ರಿಕರಿಗೆ

ಕಾಣಿಸುತ್ತಾರೆ. ನಮ್ಮ ಗೋಕರ್ಣದಲ್ಲಿ ರಾವಣನ ಮೂತ್ರಕುಂಡ ಕಾಣಿಸುವಂತೆ! ರಾಜಕುಮಾರಿ, ಸಮ್ರಾಜ್ಞಿ ತಾನೇ?.. ಅವಳು ಅಡುಗೆ ಮಾಡುತ್ತಿರಬಹುದೇ? (ಪಂಚವಟಿಯಲ್ಲಿ ಆಕೆ ಮಾಡುತ್ತಿದ್ದಿರಬಹುದು: ಆದರೆ ಅಯೋಧ್ಯೆಯ ಅರಮನೆಯಲ್ಲಿ?)

ಶ್ರೀ ರಾಮನ ಜನನ ಸ್ಥಾನ ಕಳೆದ ೪೦೦-೫೦೦ ವರ್ಷಗಳಿಂದ ಬಾಬರಿ ಮಸೀದಿ ನಿಂತಿರುವಲ್ಲಿಯೇ ಸಾವಿರಾರು ವರ್ಷಗಳ ಹಿಂದೆ ತ್ರೇತಾಯುಗದಲ್ಲಿ ಇತ್ತೆಂದು ನಮ್ಮ ವಿಶ್ವ ಹಿಂದುಗಳು ಹಟಹಿಡದು ವಿಶ್ವಾಸ ತಾಳುವುದು ಎಷ್ಟೊಂದು ಸಮಂಜಸ? ಈಗ ಮಸೀದಿ ಇದ್ದಲ್ಲಿ ಶತಮಾನಗಳ ಹಿಂದೆ ಬೌದ್ಧ ಮಂದಿರವಿತ್ತೆಂದು ಉತ್ಖನನಗಳಿಂದ ಗೊತ್ತಾಗಿದೆ. ಅದು ರಾಮ ಜನ್ಮಭೂಮಿಯೇ ಎಂದು ಸಾಬೀತು ಮಾಡಲು ೪೦ ವರ್ಷಗಳ ಹಿಂದೆ ಆ ಮಸೀದಿಯಲ್ಲಿ ಯಾರೋ ವೀರಭಕ್ತರು ರಾಮ-ಸೀತಾ-ಲಕ್ಷ್ಮಣರ ಮೂರ್ತಿಗಳನ್ನು ತಂದಿಟ್ಟರು. ಅಂದಿನಿಂದ ಆ ಸ್ಥಾನ ಕರ್ಮಠ ಮುಸ್ಲಿಮರಿಗೆ ಪ್ರಾರ್ಥನೆಗೆ ವರ್ಜ್ಯವಾಯಿತು. “ನಮಾಜ ಮಾಡಲು ಹೋಗಿದ್ದೆ. ಮಸೀದಿ ತಲೆಯ ಮೇಲೆ ಕುಸಿಯಿತು!” ಎಂದು ಒಂದು ಹಿಂದಿ (ಉರ್ದು) ಗಾದೆಯಿದೆ. ಇಲ್ಲಿ ಇದು ತಿರುವು ಮುರುವು ಮಾಡಲು ಹೊರಟಂತಿದೆ. ನಮಾಜು ನಿಲ್ಲಿಸಿದ್ದೇ ತಡ, ಮಸೀದಿ ಕೆಡಹುವ ಆಪತ್ತು ಕುಸಿಯಲಿದೆ. ಇದೇನೇ ಇದ್ದರೂ ಇಂದು ಮಸೀದಿ ಇದ್ದಲ್ಲಿ ಶತಮಾನಗಳ ಹಿಂದೆ ಬೌದ್ಧ ಮಂದಿರವಿತ್ತು.

**ಶರ್ಲಾಕ್ ಹೋಮ್ಸ್**

ಸರ್ ಅರ್ಥರ್ ಕೊನೊಂಡೈಲರ ಪತ್ತೇದಾರಿ ಕತೆಗಳಲ್ಲಿ ಅಜರಾಮರನಾದ ಶರ್ಲಾಕ್ ಹೋಮ್ಸ್ ಎಂಬ ಪತ್ತೇದಾರನು ವಾಸಿಸಿದ್ದನೆಂಬ ಬೇಕರ್ ಸ್ಟ್ರೀಟ್ ಲಂಡನ್ನಿನ ಒಂದು ಓಣಿ. ಹೋಮ್ಸನು ಕೇವಲ ಕಾಲ್ಪನಿಕ ವ್ಯಕ್ತಿ. ಆದರೆ ಅವನ ನಡೆ ನುಡಿ ಚರ್ಯೆ ಚಹರೆ ಮನೆ ಅಲ್ಲಿಯ ಪೀಠೋಪಕರಣ ಇತ್ಯಾದಿ ಕೊನೊಂಡೈಲ್ ಇಷ್ಟು ಸಜೀವ ಸೌಷ್ಠವದಿಂದ ಚಿತ್ರಿಸಿದ್ದಾರೆ. ಎಷ್ಟೆಂದರೆ ಆ ವಿವರಗಳ ನೆರವಿನಿಂದ ಶರ್ಲಾಕ್ ಹೋಮ್ಸನ ಪ್ರೇಮಿಗಳಾದ ಜನ ಬೇಕರ್‌ಸ್ಟ್ರೀಟನಲ್ಲಿ ಅವನದೆಂಬ ಆ ಮನೆ ಯಾವುದಿರಬಹುದುದೆಂದು ಊಹಿಸಿ ಅದನ್ನು ಕೊನೊಂಡೈಲ್ ಬಣ್ಣಿಸಿದಂತೆಯೇ ಎಲ್ಲ ವಿವರಗಳೊಂದಿಗೆ ಹೋಮ್ಸನ ಕೋಟು, ಹ್ಯಾಟು, ಬೆತ್ತ, ಬೂಟು, ಪೈಪು, ನಿಲುವಂಗಿ, ಪ್ರಯೋಗೋಪಕರಣ, ಗೃಹೋಪಸ್ಕರ, ಎಲ್ಲವನ್ನೂ ಯಥಾವತ್ತಾಗಿ ನಿರ್ಮಿಸಿ ಸಜ್ಜುಗೊಳಿಸಿದ್ದಾರೆ. ಅದನ್ನು ಅನೇಕ ಪ್ರೇಕ್ಷಕರು ಹೋಮ್ಸನ ಮನೆಯೆಂದು ನೋಡಿಹೊಗುತ್ತಾರೆ. ಸಾವಿರಾರು ಮಂದಿ ಹಾಗೆ ನಂಬಿದ ಮಾತ್ರಕ್ಕೆ ಹೋಮ್ಸ ವಾಸ್ತವವಾಗಿಯೇ ಬೇಕರ್ ಸ್ಟ್ರೀಟಿನಲ್ಲಿ ಇದ್ದನೆಂದು ಸಿದ್ಧವಾಗುವುದಿಲ್ಲ. ಆದರೂ ಅದಕ್ಕೆ ಒಂದು ಪ್ರದರ್ಶನೀಯ ಮೌಲ್ಯವಿದೆ.

ಶ್ರೀರಾಮನ ಜನ್ಮಭೂಮಿಯೆಂಬ ಭಾವಿಕ ಕಲ್ಪನೆಯೂ ಹಾಗೆಯೇ. “ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ” ಎಂದು ಶ್ರೀರಾಮನೇ ಹೇಳಿದ್ದಿದೆ. ಅಂಥ ಜನ್ಮಭೂಮಿ ಯಾವುದು? ನಿಜವಾಗಿಯೂ ಭರತ ಭೂಮಿ. ಅಲ್ಲಿಯೂ ಶ್ರೀರಾಮನ ಹೆಸರಿನಿಂದ ಭರತನು ಆಳಿದ ಅಯೋಧ್ಯೆ.

ಆದಿಕವಿ ವಾಲ್ಮೀಕಿಯಾಗಲೀ ರಾಮನ ಪರಮಭಕ್ತ ಸಂತಕವಿ ತುಲಸೀದಾಸನಾಗಲೀ ತಮ್ಮ ರಾಮಾಯಣದಲ್ಲಿ ಅಥವಾ ರಾಮಚರಿತ ಮಾನಸದಲ್ಲಿ ಶ್ರೀರಾಮನ ಜನನಸ್ಥಾನ (ಲೊಕೇಶನ್)ದ ಪರಿಚಯ ಇಂದಿನ ಯುಗದ ಅಯೋಧ್ಯೆಯಲ್ಲಿ ವಿವಿಕ್ತವಾಗಿ ಎಲ್ಲ ಹೇಗೆ ಸಾಧ್ಯ?

ಸಾಂಪ್ರದಾಯಿಕ ಶ್ರದ್ಧೆಯ ಪ್ರಪಂಚ ಬೇರೆ. ಐತಿಹಾಸಿಕ ವಾಸ್ತವದ ಪ್ರಮಾಣವೇ ಬೇರೆ. ಸೋಮನಾಥ ದೇವಾಲಯದ ಪುನರ್ನಿರ್ಮಾಣದ ಹೋಲಿಕೆ ಶ್ರೀರಾಮ ಜನ್ಮಭೂಮಿಯೊಂದಿಗೆ ಮಾಡುವುದು ಸಮಂಜಸವಲ್ಲ. ಅಲ್ಲಿಯ ಹಿಂದಿನ ಭಗ್ನಮಂದಿರದ ಅವಶೇಷಗಳಂಥ ದಾಖಲೆಗಳು ಇಲ್ಲಿ ಸಿಗುವುದಿಲ್ಲ. ಸಿಕ್ಕವು ತ್ರೇತಾಯುಗದ ದಶರಥನ ಅರಮನೆಯವು ಅಲ್ಲವೇ ಅಲ್ಲ.

ನಿಜವಾಗಿಯೂ ನಮ್ಮ ಭಾವನಾ ತೃಪ್ತಿಗೆ, ಶ್ರದ್ಧಾಭಕ್ತಿಗಳ ಸಂತೋಷಕ್ಕೆ ಜನ್ಮಭೂಮಿಯಾದ ಅಯೋಧ್ಯೆಯಲ್ಲಿ ಎಲ್ಲಿಯೂ ಪ್ರಶಸ್ತ ಸ್ಥಳದಲ್ಲಿ ಶ್ರೀರಾಮನ ಭವ್ಯಮಂದಿರವನ್ನು ಕಟ್ಟಬಹುದು. ಇದು ಮಾತ್ರ ಜನ್ಮಭೂಮಿಗಿಂತ ಶ್ರೀರಾಮನ ಹೆಸರಿನಲ್ಲಿ ಮುಂದೆ ತಂದ ವಾದ ಭೂಮಿ!

●

(ಕನ್ನಡ ಪ್ರಭ, ೧೯೯೬)

# ಗಜಗೌರೀವ್ರತಕ್ಕೆ ಐರಾವತ ಬೇಕೇ?

ಸಂಕ ಮುರಿದಲ್ಲಿ ಸ್ನಾನ-ಎಂಬ ನಾಣ್ನುಡಿಯೇ ಇದೆ. ನಮ್ಮ ಪುಢಾರಿಗಳು ಸಹಜ ಅಂಥ ಸ್ನಾನದ ಯೋಗ ಒದಗಿ ಬಂದರೆ ಬಿಡುವುದಿಲ್ಲ. ಆದರೆ ಅವರ ಈ ಮಾಘ ಸ್ನಾನಕ್ಕಾಗಿಯೆ ಸಂಕ ಮುರಿದುಕೊಳ್ಳುವುದೆಂದರೆ ಹೇಗೆ?

ಈಚೆಗೆ ಬೆಂಗಳೂರಿಗೆ ಬರಲಿದ್ದ ನಮ್ಮ ಪ್ರಧಾನಿ ಚಂದ್ರಶೇಖರರ ಭೇಟಿಗಾಗಿ ಫೆಡರೇಷ ಆಫ್ ಚೇಂಬರ್ ಆಫ್ ಕಾಮರ್ಸ್ (ಇದರ ಕನ್ನಡ ಪರ್ಯಾಯ ಗೊತ್ತಿಲ್ಲ, ಕ್ಷಮಿಸಿ) ವಿಶೇ ಸಮಾರಂಭದ ಸಂಭ್ರಮದ ಸನ್ನಾಹವನ್ನು ಏರ್ಪಡಿಸಿದ್ದರು. ಆದರೆ ಅದೇಕೋ ಅಂತು ಆ ಸಮಯ ಪ್ರಧಾನಿಗಳ ಭೆಟ್ಟಿ ರದ್ದಾಯಿತು. ಅವರ ಭವ್ಯ ಸ್ವಾಗತಕ್ಕಾಗಿ ಮಾಡಿದ ೫೦,೦೦೦ ರೂ. ವೆ ವ್ಯರ್ಥವಾಯಿತು. ಇದರ ಅಂಗವಾಗಿ ಚೌಡಯ್ಯ ರಂಗಮಂದಿರದ ಶೋಭಾಲಂಕಾರ ಸಜ ತಾಗಿದ ೧೫,೦೦೦ ರೂ. ವೆಚ್ಚವೂ ನಷ್ಟ.

ಇಂಥ ಭಾರೀ ಮಹತ್ವದ ಧುರೀಣರ ಸನ್ಮಾನಕ್ಕಾಗಿ ಸಾರ್ವಜನಿಕ ಸಂಘಟನೆಗ ಎಷ್ಟೊಂದು ಭೂರ್ದಂಡ ತೆರಬೇಕಾಗುವುದೆಂಬುದಕ್ಕೆ ಇದೊಂದು ಸಣ್ಣ ಸ್ಯಾಂಪಲ್. ಆದ ಇಂಥ ಭಾರೀ (ದುಬಾರಿ!) ಮಹಾಪುರುಷರನ್ನು ಸಭೆ ಸಮ್ಮೇಳನಗಳ ಉಪೋದ್ಘಾತಕ್ಕೆ ಉಪಸಂಹಾರಕ್ಕೋ ಆಮಂತ್ರಿಸುವುದು, ಹೀಗೆ ಗೌರವದ ಘಾತವನ್ನೋ, ಸಂಹಾರವನ್ ಬರಮಾಡಿಕೊಳ್ಳುವ ಚಾಳಿ ಒಂದು ಹಾವಳಿಯಾಗಿಬಿಟ್ಟಿದೆ! ಇದು ತಾಯಿ ಕುಂತಿಗಾಗಿ ಬ ಮಕ್ಕಳು ಮಾಡಿಸುವ ಗಜಗೌರೀ ವ್ರತ. ಅದಕ್ಕೆ ಇಂದ್ರನ ಐರಾವತ ಬೇಕು. ಇದರಿಂದ ಯಾರಿ ಯಾವ ಲಾಭವೋ ಯಾರಿಗೆ ಗೊತ್ತು? ಹಾರುವ ಹಕ್ಕಿಯನ್ನು ನಂಬಿ ಮಸಾಲೆ ರುಬ್ಬಿಟ್ಟಂತೆ!

ಬಹಳ ವರ್ಷಗಳ ಹಿಂದೆ ಕಡೆಂಗೋಡ್ಲು ಶಂಕರಭಟ್ಟರ ಅಧ್ಯಕ್ಷತೆಯಲ್ಲಿ ಕಾರವಾರದ ಕರ್ನಾಟಕ ಸಾಹಿತ್ಯ ಸಮ್ಮೇಳನ ಜರುಗಿತು. (ಆಗ ಅದು ಅಖಿಲ ಭಾರತೀಯವೆಂ ಕರೆಯಿಸಿಕೊಂಡಿದಿಲ್ಲ!) ಅದಕ್ಕೆ ಅಂದಿನ ಮುಖ್ಯಮಂತ್ರಿ ಮಾನ್ಯ ನಿಜಲಿಂಗಪ್ಪನವರು ಉದ್ಘಾಟಕರಾ ಆಗಮಿಸಿದ್ದರು - ಸಮಾರಂಭ ಆರಂಭವಾಗುವ ವೇಳೆಗೆ ಒಂದು ತಾಸು ತಡವಾಗಿ. ಆದರ ನಾವೆಲ್ಲ ಕಾಯುತ್ತ-ಬಿಸಿಲುಗಾಯುತ್ತ-ನಿಂತೆವು. ಬಂದಮೇಲೆ ಅವರು ಹೆಚ್ಚಾಗಿ ಮಾತನಾಡಿ ಹೆಣ್ಣು ಹೊನ್ನು ಮಣ್ಣು ನಿಂದ್ಯವಲ್ಲವೆಂದು ಸಮರ್ಥಿಸಿ. ಇಂಥ ಮಹಾಪುರುಷರ ಇಂಥ ಶೋಭ ಭಾಷಣಗಳಿಗೆ ಸಂದರ್ಭೌಚಿತ್ಯವಿರುವುದು ಹೆಚ್ಚಾಗಿ ಕಡಿಮೆಯೇ! ಅದೊಂದು ಗೇರು ಹಣ ಬೀಜ ಅಂಟಿಕೊಂಡಿದ್ದಂತೆ-ಸ್ವಾರಸ್ಯವಿದ್ದರೂ ಸಾಮರಸ್ಯವಿಲ್ಲ.

ಅದೇ ರೀತಿ ಈಚೆಗೆ ಮಡಿಕೇರಿಯಲ್ಲಿ ಸಮಾವೇಶಗೊಂಡ ಸಾಹಿತ್ಯ ಸಮ್ಮೇಳನ ಉದ್ಘಾಟನೆ ಅಂದಿನ ಮುಖ್ಯಮಂತ್ರಿ ಮಾನ್ಯ ಗುಂಡೂರಾವ್‌ರ ಅಮೃತ ಹಸ್ತದಿಂದ ಆಯಿ ಆಗಲೂ ಹೀಗೆಯೇ ಆಯಿತು. ಮಾನ್ಯರ ಆಗಮನಕ್ಕೆ ಅಸಹನೀಯ ವಿಳಂಬ. ಮುಖ್ಯಮಂತ್ರಿಗಳ ಕಾಣಲು, ಕೇಳಲು ಬಂದ ಜನಸ್ತೋಮ ವಿಪರೀತ. ಅದ್ದೂರಿಯ ಅವರ ಉದ್ಘಾಟನ ಭಾಷಣ ಅವರ ಹಸ್ತಕ್ಕಿಂತ ಹೆಚ್ಚು ಅಮೃತವಾಗಿ ಸಾಗಿತು.

ಅದು ಅಬ್ಬರದಿಂದ ಸಾಗಿ ಅಪರಾಹ್ನ ೨ ಗಂಟೆಗೆ ಹೇಗೋ ಮುಗಿಯಿತು. ಆ ಬ್ರಹ್ಮಾಂಡ ಪುರಾಣದಲ್ಲಿ ಸಾಹಿತ್ಯದ ಮಾತೊಂದು ಬಿಟ್ಟು ಏನೆಲ್ಲ, ಏಷ್ಟೆಲ್ಲ ನಿರರ್ಗಳವಾಗಿ ಹರಿಯಿತು. ಮುಖ್ಯಮಂತ್ರಿಗಳ ಬೆನ್ನಿಗೆ ಅವರ ಭಾಷಣ ಲೇಖಕರಾಗಿದ್ದ ಪ್ರಾ. ಎಲ್.ಟಿ. ಶರ್ಮರು ಬಂದಿದ್ದರು. "ಇದೇನ್ರೀ?" ನಾನು ಅವರನ್ನು ಕೇಳಿದೆ "ಮಾಡೋದೇನ್ರೀ?" ಅವರು ನಿಟ್ಟುಸಿರು ಬಿಟ್ಟು ಅಂದರು. "ಅವರದು ಹೀಗೆಯೇ. ಬರೆದುಕೊಟ್ಟ ಸ್ಕ್ರಿಪ್ಟ್ ಬದಿಗಿಟ್ಟು ತಾತ್ಕಾಲಿಕ ಸ್ಫೂರ್ತಿಯಿಂದ ಬೋರು ಹೊಡೆಯುತ್ತಾರೆ."

ಇಂಥ ರಾಜಕಾರಣಿ ಮಹನೀಯರಿಂದ ಇನ್ನೊಂದು ಉಪಟಳ. ಇದ್ದಾಗ ಬೋರು. ಎದ್ದು ಹೋದರೆ ಬೇಜಾರು. ಮಾನ್ಯರು ಹೊರಟು ಹೋದಾಗ ಶಾಮಿಯಾನ ಮುಕ್ಕಾಲು ಪಾಲು ಬರಿದು! ಅವರಿಗಾಗಿಯೇ ಹಿಂ-ಬಾಲಿಸಿ- ಬಾಲಕರಂತೆ ಬಂದ ಜನಸ್ತೋಮ ಅವರ ಬೆನ್ನಿಗೇ ಎದ್ದುಹೋಗುತ್ತಾರೆ. ೮೦ರ ಹೊಸ್ತಿಲು ದಾಟಿದ ಪೂಜ್ಯ ಶಂ.ಬಾ. ತಮ್ಮ ಅಧ್ಯಕ್ಷೀಯ ಭಾಷಣದ ಒಂದೇ ಪುಟ ಓದಿ, "ಮುದ್ರಿತ ಭಾಷಣ ನಿಮಗೆ ಕೊಟ್ಟಿದೆ. ಅದನ್ನು ಓದಿಕೊಳ್ಳಿ. ಸದ್ಯ ಊಟಕ್ಕೆ ತೆರಳಿ" ಎಂದು ಅಪ್ಪಣೆ ಕೊಡಿಸಿದರು.

ಮೊನ್ನೆ ಮೈಸೂರ ಸಾಹಿತ್ಯ ಸಮ್ಮೇಳನವನ್ನು ಉದ್ಘಾಟಿಸಲು ಬಂದ ನಮ್ಮ ಮುಖ್ಯಮಂತ್ರಿಗಳ ಕತೆಯೂ ಇದೇ. ಅವರೊಬ್ಬರೇ ಅಲ್ಲ. ಇನ್ನು ೨-೩ ಮಂತ್ರಿಗಳೂ ಒಟ್ಟೊ ವೇದಿಕೆ ಹಿಡಿದು ನಿಂತರು. ಈಗಲೂ ಅಧ್ಯಕ್ಷರು 'ಬಡ ವಿರಾಟ'ರಾದರು. ಯಾರು ಕೇಳಬೇಕು? ಹೊತ್ತು ನೆತ್ತಿಗೇರಿ ಇಳಿಯಿತು. ಪೂಜ್ಯ ಕೆ.ಎಸ್.ಎನ್. ಸಾಂಕೇತಿಕವಾಗಿ ತಮ್ಮ ಭಾಷಣದ ಒಂದಂಶ ಓದಿ ಮುಗಿಸಿದರು. ಅಧ್ಯಕ್ಷರ ಪರಿಚಯ ಮಾಡಿಕೊಟ್ಟಾಗ ಮುಖ್ಯಮಂತ್ರಿಗಳು ಕೇಳಿದ ರಂತೆ-"ನರಸಿಂಹಮೂರ್ತಿಗಳು ನೀವೇನಾ?" ಈ ಒಂದು ಮಾತಿನಲ್ಲಿ ಅವರ ಪರಿಚಯವೂ ಆಯಿತು!

ಈ ಬಗೆಯ ಅಂದಗೇಡು ಈ ಸನ್ಮಾನ್ಯ ಅತಿಥಿಗಳ ಅಪರಾಧವಲ್ಲ. ಅವರನ್ನು ತಮ್ಮ ವಿಶಿಷ್ಟ ಪ್ರಯೋಜನಗಳ ನಿರೀಕ್ಷೆಯಲ್ಲಿ ಆಮಂತ್ರಿಸುವ ಸಂಚಾಲಕರ ಪ್ರಮಾದ. ಈ ರಾಜಕೀಯ ವ್ಯಕ್ತಿಗಳು ಯಾವ ಸಾರ್ವಜನಿಕ ವೇದಿಕೆಯನ್ನು ಅಲಂಕರಿಸಲು ಯಾವಾಗಲೂ ಸಿದ್ಧ. ಅವರಿಗೆ ಮಹಾಜನಸಂಪರ್ಕ ಮುಖ್ಯ. ತಮ್ಮ ಶಾಸನದ ಧೋರಣೆಗಳನ್ನು ಹೀಗೆ ಜಾಹೀರು ಮಾಡಲು ಅದೊಂದು ಅಯಾಚಿತವಾಗಿ ನಡೆದು ಬಂದ ಸರದಿ. ಅಂಥವರನ್ನು ಬರಮಾಡಿಕೊಂಡಾಗ ಇದೆಲ್ಲ ಅವರೊಂದಿಗೆ ಬರಮಾಡಿಕೊಂಡಂತೆ, ಅವರ ವ್ಯಕ್ತಿತ್ವ-ಮಹತ್ವಗಳಿಗೆ ಅನಿವಾರ್ಯವಾಗಿ ಅಂಟಿಕೊಂಡ ಅಪರಂಜಿ.

ಈ ವಿ.ಐ.ಪಿ.ಗಳಿಗೆ ಅವರವರ ಅಧಿಕಾರಕ್ಕೆ ತಕ್ಕ ಪ್ರಭಾವ ವಲಯ ಇದ್ದೇ ಇದೆ. ಆದರೆ ಸಾಹಿತ್ಯ-ಕಲೆ ಮುಂತಾದ ವಿಶಿಷ್ಟ ಪ್ರಪಂಚ ಅವರದಲ್ಲ. ಅಲ್ಲಿ ಸಲ್ಲುವವರು ಇಲ್ಲಿಯೂ ಸಲ್ಲಬೇಕೆಂತಿಲ್ಲ. ಗಾಂಧೀಜಿ ಮಹಾತ್ಮರೆಂದು ಅವರನ್ನು ಗಾಯನ ಮಾಡಲು ಹಚ್ಚುವದೇ?

ಕೆಲವು ವರ್ಷಗಳ ಹಿಂದೆ ಇದೇ ಅವಾಂತರಕ್ಕಾಗಿ ಮಹಾರಾಷ್ಟ್ರದಲ್ಲಿ ಪ್ರತಿಷ್ಠಿತ ಸಾಹಿತ್ಯ ಸಮ್ಮೇಳನವನ್ನು ಪ್ರತಿಭಟಿಸಿ ಮುಂಬಯಿಯಲ್ಲಿ ಇನ್ನೊಂದು ಪ್ರತ್ಯೇಕ ಸಮ್ಮೇಳನ ನಡೆಯಿತು.

ಪ್ರಚೋದನೆಗೆ ಕಾರಣ ಪ್ರತಿಷ್ಠಿತ ಸಮ್ಮೇಳನದಲ್ಲಿ ಮುಖ್ಯಮಂತ್ರಿ ಯಶವಂತರಾವ್ ಚವಾಣ್ ಮತ್ತು ಇತರ ಮಂತ್ರಿಗಳನ್ನು ಕರೆಯಲಾಗಿತ್ತು. ಈ ಮಂತ್ರಿಗಳು ಸಾಹಿತ್ಯಿಕ ಆಸಕ್ತಿಯವರೇ ಆಗಿದ್ದರು. ಆಗ ಪ್ರತಿಭಟನಾ ಸಮ್ಮೇಳನದ ಅಧ್ಯಕ್ಷೆ ಖ್ಯಾತ ಲೇಖಕಿ ಶ್ರೀಮತಿ ಮಾಲತೀ ದಾಂಡೇಕರರಿದ್ದರು. ಅವರು ತಮ್ಮ ಭಾಷಣದಲ್ಲಿ ಶ್ರೀ ವೆಂಕಟೇಶ ಮಾಡಗೂಳಕರ ಒಂದು ಕತೆಯನ್ನು ಹೇಳಿದರು. ಅದು ನಮಗೂ ಉದ್ಬೋಧಕವಿದೆ.

ಒಂದು ಆನೆಗೆ ಅದರ ಮಾವುತನ ಮೇಲೆ ಬಹಳ ಪ್ರೀತಿ ಇತ್ತು. ಒಂದು ರಾತ್ರಿ ಮಾವುತನ ಚಾಪೆಯಲ್ಲಿ ತಾನೂ ಮಲಗುವೆನೆಂದು ಹಟತೊಟ್ಟಿತು. ಆನೆ ಯಾವಾಗಲೂ ಹೊರಗೆ ಮರದಡಿಗೆ, ಮಾವುತ ಹತ್ತಿರವೇ ತನ್ನ ಗುಡಿಸಲಿನಲ್ಲಿ ಮಲಗುವ ಪರಿಪಾಠ. ಆದರೆ ಅಂದು ಆನೆ ಕೇಳಲೇ ಇಲ್ಲ. ಮಾವುತನೊಂದಿಗೆ ಮಲಗುವ ಹಟ ಬಿಡಲಿಲ್ಲ. ಗುಡಿಸಲಿನೊಳಗೆ ಹೇಗೋ ನುಗ್ಗಿ ಬಂತು. ಅವನ ಪಕ್ಕದಲ್ಲಿ ಮಲಗಿತು. ರಾತ್ರಿಯಿಡೀ ಮಾವುತನಿಗೆ ಪೇಚಾಟ. ಆನೆ ಸರಿದರೆ ಮಗ್ಗುಲು ಮುರಿದರೆ ಅವನ ಕತೆ ಮುಗಿದಂತೆಯೇ. ಆನೆ ಬೇಕೆಂತ ಪೀಡೆಕೊಡುತ್ತಿದ್ದಿಲ್ಲ. ಅದರ ಪ್ರಚಂಡ ದೇಹದ ಚಲನವಲನಗಳಿಂದ ಸಹಜವಾಗಿಯೇ ಮಾವುತನಿಗೆ ಪ್ರಾಣಸಂಕಟ. ಉಸಿರುಕಟ್ಟಿ ನಿದ್ದೆಗೆಟ್ಟು ಆತ ಇರುಳು ಕಳೆದ.

ಇದೇ ಅವಸ್ಥೆ ಸಮ್ಮೇಳನದ ಸಂಘಟಕರದು. ಈ ಮಂತ್ರಿಮಹಾಶಯರು ಸಾಹಿತಿಗಳೋ, ಸಾಹಿತ್ಯ ಪ್ರೇಮಿಗಳೋ ಆದರೆ ಸರಿ. ಆಗಲೂ ಅವರು ಸರಕಾರಿ ಅಧಿಕಾರ ಅಧ್ಯತೆಗಳ ಸಂಭ್ರಮ ಸರಂಜಾಮುಗಳೊಂದಿಗೆ ಬರಬಾರದು. ಆ ಸಡಗರ ಈ ಶಾರದಾ ಪೀಠದಲ್ಲಿ ಸಲ್ಲದು. ಅವರು ತಮ್ಮ ಇತರೇತರ ವ್ಯಾಪ್ತಿಗಳನ್ನು ಕಟ್ಟಿಕೊಂಡೇ ಇಂಥ ಕಾರ್ಯಕ್ರಮಕ್ಕೆ ಬರುವುದುಂಟು. ಅವರದು ಎಲ್ಲ ಅನಿಶ್ಚಿತ, ಅತಂತ್ರ. ಅಕಸ್ಮಾತ್ ಅನಿವಾರ್ಯವಾಗಿ ಬರದೇ ಹೋಗಬಹುದು. ಈ ಮಂತ್ರಿವರ್ಯರಿಗೂ ಗೊತ್ತಿರಬೇಕು. ತನಗೆ ಕರೆಯುವುದು ತನ್ನ ವಿಶಿಷ್ಟ ಅಧಿಕಾರ ಸ್ಥಾನದ ಮಹತ್ವಕ್ಕಾಗಿ. ಆ ಸ್ಥಾನಬಲ ಕಳೆದುಹೋದಮೇಲೆ ಅವರ ನಿಜವಾದ ಬೆಲೆ ಗೊತ್ತಾಗುತ್ತದೆ. ಅಂದಾಗ ತನ್ನ ಆಗುಂತುಕ ಸ್ಥಾನ ಬಲದಿಂದ ಇಂಥ ಆಸ್ಥಾನಗಳನ್ನು ತಮ್ಮ ಆಸ್ಥಾನವನ್ನಾಗಿ ಭಾವಿಸಬಾರದು. ಹಾಗೆ ಬಂದರೆ ಅವರನ್ನು ತಂದರೆ ಭಾರಿ ತೊಂದರೆ ಸಂಘಟಕರಿಗೆ, ತಲೆತಿನ್ನುವ ತಲೆಭಾರ.

ಈ ಸರಕಾರೀ ರಾಜಕೀಯ ಮಹತ್ವದ ಮಂದಿಗೆ ಪ್ರಥಮ ಪ್ರಾಶಸ್ತ್ಯದ ವಿಷಯ ಅವರ ಅಧಿಕೃತ ಕರ್ತವ್ಯಗಳು. ಅಂದಾಗ ಈ ಅಪಾಯ ಗಮನಿಸಿಯೇ ಅವರನ್ನು ಆಮಂತ್ರಿಸಬೇಕು. ಇಂಥ ಮಹನೀಯರನ್ನು ಪರಿಷತ್ತಿಗೆ ಬೇರೆಯಾಗಿ ಬರಮಾಡಿಕೊಂಡು ಸತ್ಕರಿಸಿ ಅವರಿಂದ ಬೇಕಾದ ಪ್ರಯೋಜನ ಪಡೆಯಬಹುದು. ಅದಕ್ಕಾಗಿ ಅದರ ಬದಲು, ಈ ಸಂಕ-ಸ್ನಾನ ಮಾಡಿಸುವುದೇಕೆ?

ಒಟ್ಟಿನಲ್ಲಿ ಇಂಥ ಶುದ್ಧ (?) ರಾಜಕೀಯ ಸಾರ್ವಜನಿಕ ಮಹತ್ವದ ಮಹಾಶಯ ಸಾಹಿತ್ಯ, ಸಂಗೀತ, ಕಲೆ ಇತ್ಯಾದಿ ಸಾಂಸ್ಕೃತಿಕ ರಂಗಗಳ ಪ್ರವೇಶಕ್ಕೆ ಹೇಳಿ ಮಾಡಿಸಿದ ವಿಗ್ರಹಗಳಲ್ಲ. ಮೊನ್ನೆ ತಾನೇ ಇಂಥ ಮಹನೀಯರೊಬ್ಬರಿಗೆ ಬೇಂದ್ರೆ ಇನ್ನೂ ಬದುಕಿದ್ದಾರೆಯೋ ಇಲ್ಲವೋ ಎಂಬುದನ್ನು ಕುರಿತು ದಿವ್ಯ ಅಜ್ಞಾನವಿದ್ದದ್ದೂ ಪ್ರಕಟವಾಯಿತು.

ಇನ್ನು ಇದಕ್ಕೂ ಅಪವಾದಗಳಿಲ್ಲದಿಲ್ಲ. ಅಗ್ರಸ್ಥಾನದಲ್ಲಿಯ ಅನರ್ಹತೆ ಇಂದು ಸರ್ವಸಾಮಾನ್ಯವಾದರೂ ಅಲ್ಲಲ್ಲಿ ಇದಕ್ಕೆ ಕೆಲವು ಭೂಷಣಾಸ್ಪದ ಅಪವಾದಗಳೂ ಇವೆ. ಶ್ರೀಮತಿ ಸರೋಜಿನಿ ನಾಯ್ಡು ರಾಷ್ಟ್ರೀಯ ನಾಯಿಕೆಯಾಗಿಯೂ ಅತ್ಯುತ್ತಮ ಕವಯತ್ರಿ ಆಗಿದ್ದರು. ಹಾಗೆಯೇ ಸ್ವಾತಂತ್ರ್ಯವೀರ ಸಾವರಕರು, ಲೋಕಮಾನ್ಯ ತಿಲಕರು, ರಂಗರಾವ್ ದಿವಾಕರರು, ಮಾಸ್ತಿಯವರು, ನ.ಚಿ. ಕೇಳಕರರು, ಜಿ.ವಿ. ದೇಶಮುಖರು-ಇತ್ಯಾದಿ ಇತ್ಯಾದಿ. ನಮ್ಮ ಸಿದ್ಧಯ್ಯ ಪುರಾಣಿಕರು, ಮರಾಠಿಯ ಮರ್ಢೇಕರರು ಐ.ಎ.ಎಸ್. ಅಧಿಕಾರಿಗಳಾಗಿಯೂ, ಹಿರಿಯ ಕವಿಗಳು. ಹಾಗೆಯೇ ಚಿತ್ತಾಲ ಬಂಧುಗಳು, ವಿಜಯ ಸಾಸನೂರ, ಪೊಲೀಸ್ ಅಧಿಕಾರಿಗಳು. ಯಶಸ್ವೀ ಸಾಹಿತಿಗಳು. ಆದರೂ ಸರ್ವಜ್ಞ ಕವಿ ಹೇಳಿದಂತೆ "ಸಾಹಿತ್ಯ ಸರ್ವರಿಗಲ್ಲ". ನಮ್ಮ ಮಂತ್ರಿ ಮಹೋದಯರೂ ಸಾರ್ವಜನಿಕರ ಧುರೀಣರೂ ನಿಷ್ಠೆಯ ವಾಚಕರಾಗಿ, ಮಹಾಪೋಷಕರಾಗಿ, ಸಾಹಿತ್ಯ ಕೃತಿಗಳ ಉದಾರ ಗ್ರಾಹಕರಾಗಿ, ಸಾಹಿತ್ಯ ಚಟುವಟಿಕೆಗಳಿಗೆ ಪ್ರೋತ್ಸಾಹಕರಾಗಿ ತಮ್ಮ ತಮ್ಮ ಕಾರ್ಯಕಕ್ಷೆಗಳಲ್ಲಿಯೇ ನಿಂತು ವಿಪುಲ ಹಾಗೂ ವಿವಿಧ ಸಹಾಯವನ್ನು ಸಲ್ಲಿಸಬಹುದು-ಬೇಕು. ಬಯಲಾಟದಲ್ಲಿ ಬಣ್ಣದ ಚೌಕದಲ್ಲಿ ಹಿಮ್ಮೇಳದಲ್ಲಿ ಉತ್ತಮ ಸೇವೆ ಸಲ್ಲಿಸುವವರೂ ವೇಷ ಕಟ್ಟಿ ರಂಗದಲ್ಲಿ ಕುಣಿತಕ್ಕೆ ಹೆಜ್ಜೆ ಇಟ್ಟರೆ ಹೇಗೆ? ಆಗ ಎಷ್ಟು ಚೆಂದ?

●

(ಕನ್ನಡ ಪ್ರಭ, ೧೯೯೨)

# ಹಾಡುಗಬ್ಬ ಮತ್ತು ಸಂಗೀತ

"ಇಂದಿನ ಹಾಡುಗಬ್ಬಗಳು ಮತ್ತು ಸಂಗೀತ":

ಈ ವಿಷಯವನ್ನು ಕುರಿತು ವ್ಯಾಖ್ಯಾನಿಸುವಾಗ ನಾವು ಒಂದು ಸಂಗತಿಯನ್ನು ಗಮನಿಸಬೇಕು. ಅದೇನೆಂದರೆ ಹಾಡುಗಬ್ಬಗಳು ಇಂದಿನವೆನಿಸಿಕೊಂಡರೂ ಸಂಗೀತ ಇಂದಿನದಲ್ಲ. ಅದು ಪ್ರಾಚೀನ ಪರಂಪರಾಗತ. ಈ ಮೂಲಕ ಅವನ್ನು ಅಳವಡಿಸಿಕೊಂಡ ಹಾಡುಗಬ್ಬಗಳಿಗೂ ಒಂದು ಅನುಪೂರ್ವಿ ಇದೆ, ಇತಿಹಾಸವಿದೆ. ಇಂದಿನ ಹೂವು ಅರಳುವುದು ನಿನ್ನೆಯ ಬೇರಿನಿಂದ ಅಂದಾಗ ಇಂದಿನ ಹಾಡುಗಬ್ಬಗಳ ಸಂದರ್ಭವನ್ನು ಹಿಂದಿನ ಇಂಥ ಕವನ ಪ್ರಕಾರದ ವಿಕಾಸ ಕ್ರಮದಲ್ಲಿ ಒಮ್ಮೆ ಪರಾಮರ್ಶಿಸಿಕೊಂಡರೆ ಪ್ರಮಾದವಾಗಲಿಕ್ಕಿಲ್ಲ. ಬೇರಿನಿಂದ ಹೂವು ನಿಜ. ಆದರೆ ಬೇರಿನಂತೆ ಹೂವಿಲ್ಲ. ಆದ್ದರಿಂದ ಅದು ಹೇಗೆ ಬೇರೆ ಎಂಬುದನ್ನೂ ಅರಿತು ಕೊಳ್ಳಲಿಕ್ಕೆ ಇದು ಅನುಕೂಲವಾದೀತು.

ಸಂಗೀತ ಶಾಸ್ತ್ರದಲ್ಲಿ ಹಾಡುಗಾರಿಕೆ ಎರಡು ವಿಧವೆಂದು ೧೩ನೆಯ ಶತಮಾನದ ಆರಂಭದಲ್ಲಿಯೇ ಶಾರ್ಙ್ಗದೇವನು ತನ್ನ "ಸಂಗೀತ ರತ್ನಾಕರ"ದಲ್ಲಿ ಹೇಳಿಬಿಟ್ಟಿದ್ದಾನೆ. ಒಂದು ಗಂಧರ್ವ, ಇನ್ನೊಂದು ಗಾನ.

ರಂಜಕಸ್ವರ ಸಂದರ್ಭಃ ಗೀತಮಿತ್ಯಭಿದೀಯತೇ।
ಗಾಂಧರ್ವಂ ಗಾನಮಿತ್ಯಸ್ವಭೇದದ್ವಯ ಮುದೀರಿತಂ॥

ಇವೆರಡರಲ್ಲಿ ಭರತ ಮುನಿ ಪ್ರಣೀತವಾಗ "ಅನಾದಿ ಸಂಪ್ರದಾಯ"ದಿಂದ ಬಂದ ಜನರ ಜಾತಿ ಸ್ವರ ಮೇಳಗಳ ಪ್ರಕಾರವು ಗಾಂಧರ್ವ. ಆದರೆ

ಮತ್ತು, "ವಾಗ್ಗೇಯ ಕಾರ್ರೈ ರ್ರಚಿತಂ
ಲಕ್ಷಣಾವೃತಂ। ದೇಶೀರಾಗಾದಿ
ಪುಪ್ರೋಕ್ತಂ ತದ್ಗಾನಂ ಜನರಂಜನಂ॥

ಇಲ್ಲಿ "ವಾಗ್ಗೇಯ ಕಾರ"ನೆಂಬ ಹೆಸರು ಹಾಡುಗಬ್ಬಗಳ ಕರ್ತನಿಗೆ ನಮ್ಮ ಪೂರ್ವಿಕರು ಇಟ್ಟ ಹೆಸರು. ಶಾರ್ಙ್ಗದೇವನನ್ನೂ ಕೇಳೋಣ, ಈ "ವಾಗ್ಗೇಯ ಕಾರ"ನು ಯಾರೆಂದು:

"ವಾಕ್‌ಮಾತುರುಚ್ಯತೇಗೇಯಂ ಧಾತುರಿತ್ಯಭಿಧೀಯತೇ।
ವಾಚಂಗೇಯಂಚಕುರುತೇಯಃ ಸ ವಾಗ್ಗೇಯಕಾರಕಃ"

"ವಾಚಂಗೇಯಂಚಕುರುತೇ" ಮಾತನ್ನು ಹಾಡಾಗಿಸಬಲ್ಲವನು ವಾಗ್ಗೇಯಕಾರನು. ಇಲ್ಲಿ ಮೊದಲು ಬಂದ "ವಾಙ್ಗಮಾತುರುಚ್ಯತೇ" ಎಂಬ ಮಾತು ಸೋಜಿಗವಾಗಿದೆ. ಇಲ್ಲಿ ಶಾರ್ಙ್ಗದೇವನು

* ಇಲ್ಲಿಂದ ಮುಂದೆ ಬರುವ ಎಲ್ಲ ಲೇಖನಗಳು 'ಆರ್ಕೆಸ್ಟ್ರಾ ಮತ್ತು ತಂಬೂರಿ' ಎಂಬ ಶೀರ್ಷಿಕೆಯ ಒಂದು ಪ್ರತ್ಯೇಕ ಹೊತ್ತಿಗೆಯಾಗಿ ೧೯೬೩ರಲ್ಲೇ ಅಶೋಕರ ಸಂಪಾದಕತ್ವದಲ್ಲಿ ಪ್ರಕಟವಾಗಿದೆ. - ಸಂ.

"ಮಾತು" ಎಂಬ ಕನ್ನಡ ಶಬ್ದವನ್ನು ಪಾರಿಭಾಷಿಕ ಪದವಾಗಿ ಬಳಸಿದ್ದಾನೆ; ಅಂದರೆ "ಮಾತು" ಗೇಯವಾಗಬಲ್ಲ ವಾಕ್ಯ ಎಂದೆನ್ನುವಾಗ ಶಾರ್ಙ್ಗದೇವನ ಕಾಲದಲ್ಲಿ ಈ ಕನ್ನಡ ಪದವು ಸಂಗೀತ ಶಾಸ್ತ್ರದಲ್ಲಿ ಪಾರಿಭಾಷಿಕ ಪದವಾಗುವಷ್ಟು ವಿಶಿಷ್ಟ ಅರ್ಥಸಾರವನ್ನು ಪಡೆದಿತ್ತು. ಇದರಿಂದ ಸಿದ್ಧವಾಗುವುದೇನು? ವಾಗ್ಗೇಯಕಾರ ಮತ್ತು ಅಂಥವನ ಕೃತಿ, ಕನ್ನಡವೇ ಭಾರತೀಯ ಸಂಗೀತ ಶಾಸ್ತ್ರಕ್ಕೆ ನೀಡಿದ ಒಂದು ದಿವ್ಯ ಕೊಡುಗೆ. ಹಾಡುಗಬ್ಬವೆಂದರೆ ಮಾತು+ಧಾತು ಕೂಡಿ ಎರಕವಾದ ಕೃತಿ ("ಹಾಡುಗಬ್ಬ" ಈ ಕೃತಿಯ ಅನುವಾದ).

ಶಾರ್ಙ್ಗದೇವನ ಸಮಕಾಲೀನ ವಾಗ್ಗೇಯಕಾರ ಗೋಪಾಲ ನಾಯಕನು ಉತ್ತರ ಭಾರತದಲ್ಲಿ ಈಗ ಉತ್ತರಾದಿಯೆಂದು ಪರಿಗಣಿಸಲಾಗುವ ಸಂಗೀತವನ್ನು ಪ್ರಸಾರ ಮಾಡಿದನು. ಮುಂದೆ ೧೪೪೦ರಿಂದ ೧೪೬೦ರ ವರೆಗೆ ಅಚಲಾನಂದದಾಸರು. ಶ್ರೀ ನರಹರಿತೀರ್ಥರೂ, ಶ್ರೀಪಾದರಾಯರೂ, ದಾಸ ಶ್ರೇಷ್ಠ ಪುರಂದರದಾಸರೂ ನಮ್ಮ ಹಾಡುಗಬ್ಬಗಳ ವಿವಿಧ ಪ್ರಕಾರಗಳಿಗೆ ಮೂಲ ಪುರುಷವಾಗಿ, ಪ್ರಮಾಣ ಪುರುಷರಾಗಿ ಸಂಗೀತ ಚರಿತ್ರೆಯನ್ನು ನಿರ್ಮಿಸಿದರು. ಪುರಂದರದಾಸರ ಸಮಕಾಲಿನನಾದ ಪುಂಡರೀಕ ವಿಠಲನು ಈ ಪದ್ಧತಿಗೆ ಶಾಸ್ತ್ರದ ಬೆಂಬಲ ಕಟ್ಟಿ ಕೊಟ್ಟನು.

ಹಿಂದುಸ್ತಾನೀ ಗಾಯನದಲ್ಲಿ ಹೇಗೆ ವ್ರಜ ಭಾಷೆಯೋ ಹಾಗೆಯೇ ಕರ್ನಾಟಕ ಸಂಗೀತದಲ್ಲಿ ಕನ್ನಡವೇ ಲಲಿತ ಮಧುರ ಹಾಡುಗಬ್ಬಗಳ ಮಾಧ್ಯಮವಾಯಿತು. ಕನ್ನಡವನ್ನು ಹೀಗೆ ಹದಗೊಳಿಸುವುದರಲ್ಲಿ ವಚನಕಾರರಂತೆಯೇ ಹರಿದಾಸರೂ, ಶ್ರೇಯಸ್ಸಿಗೆ ಭಾಜನರು, (ಸಂಗೀತಕ್ಕೆ ಸಲ್ಲುವ ಮೃದು ಭಾಷೆಯಲ್ಲಿ ರಚಿಸಿದ ಸಾಹಿತ್ಯ ವ್ರಜ ಭಾಷೆಯದೆ ಎಂಬ ಅಭಿಪ್ರಾಯವಿದೆ.)

ನಮ್ಮ ವಾಗ್ಗೇಯಕಾರರ ಮೊದಲಿನ ಕಾರ್ಯ "ಉಗಾಭೋಗ" ರಚನೆ. ಆರಂಭದಲ್ಲಿ ರಾಗ ವಿಸ್ತಾರದ ರೀತಿಯಿದೆ. "ಓಂ-ನೋಂ-ತೋಂ" ಅಥವಾ "ತರಾನಾ"ದಿಂದ ನಾದ ತುಂಬುವದೇ ಆಗಿತ್ತು.

"ನಾದಿರ್‌ತೋಂ ತನನತನದೆರೆನಾ----"ಹೀಗೆ ತರಾನಾ ತ-ರ-ನಗಳ ಬಾಹುಲ್ಯದಿಂದ ತುಂಬಿಡುತ್ತದೆ. ಅದು ಇಂದಿಗೂ ಶಾಸ್ತ್ರೀಯ ಸಂಗೀತದ ಒಂದು ಆಕರ್ಷಕ ಅಂಗವಾಗಿ ಪ್ರಚಲಿತವಿದೆ. ('ತರಾನಾ' ಶಬ್ದ ಫಾರಸೀ. ಇದರ ಅರ್ಥವೇ ಹಾಡು ಎಂದು. ಹಾಡಲ್ಲದ ಸ್ವರರಚನೆಗೆ "ತರ್ಜ" ಎನ್ನುತ್ತಾರೆ) ಆದರೆ ಇದು ಗಾಯನವೆನಿಸುವುದಿಲ್ಲ. ಬರೆ ಕಂಠವಾದನ, ವೀಣೆ, ಸಿತಾರ ಮುಂತಾದವುಗಳ ಸ್ವರ ವಿಸ್ತಾರದ ಅನುಕರಣ. ಇದರ ಸ್ಥಾನದಲ್ಲಿ ಶಾರ್ಙ್ಗದೇವನೂ, ಗೋಪಾಲನಾಯಕನೂ "ಉಗಾಭೋಗ"ಗಳ ಪ್ರಚಾರ ಮಾಡಿದರು. ಶಾಸ್ತ್ರೀಯ ಗಾಯನದಲ್ಲಿ ಒಂದು ಚೀಜ(ಪಲ್ಲವಿಯ) ವಿಸ್ತಾರದ ಕ್ರಮ. ಅಸ್ಥಾಯಿ, ಅಂತರಾ, ಮತ್ತು ಆಭೋಗ, "ಉಗಾಭೋಗ"ದಲ್ಲಿ ಇದೇ ಆಭೋಗ ಸೇರಿದೆ. ಪುರಂದರದಾಸರವರೆಗೂ ಈ ಉಗಾಭೋಗ ರಚನೆ ಹರಿದು ಬಂತು. "ಉಗಾಭೋಗ" ಒಂದು ಲಯಬದ್ಧ ವಚನ ಕೃತಿ, ಮುಂದೆ ಶಿವಶರಣರ ವಚನಗಳಿಗೆ ಇದೇ ಪ್ರೇರಣೆ ಆಗಿರಬಹುದು.

ಮೇಲೆ ಹೇಳಿದ ದೇಶಿಗಾನ ಪದ್ಧತಿಯಲ್ಲಿ "ಛಾಯಲಗ" ಮತ್ತು "ಸಂಕೀರ್ಣ ಎಂದು

ರೀತಿ ಭೇದವಿದೆ. "ಛಾಯಲಿನ"ವೇ "ಸಾಲಿಗ" ಸಾಲಿಂಗ - ಸಾಳಂಗವೆಂತಾಗಿದೆ. ಗಾಂಧರ್ವ ರೀತಿ ಶುದ್ಧಗಾನ ಸಾಲಿಂಗ ಲವಕುಶರು ರಾಮಾಯಣವನ್ನು ಶುದ್ಧ ಸಾಳಂಗದಲ್ಲಿ ಹಾಡಿದರೆಂದು ಲಕ್ಷ್ಮೀಶ ಹೇಳಿದ್ದಾನೆ, (ಸಂಗೀತ ಶಾಸ್ತ್ರದಲ್ಲಿ ಶುದ್ಧ ಸಾರಂಗವೆಂಬ ರಾಗವಿದೆ. 'ಸಾರಂಗ' ರಾಗದ ಭೇದಗಳಲ್ಲಿ ಉಳಿದ ಪ್ರಭೇದಗಳು ಮಧ್ಯಮಾವತಿ ಸಾರಂಗ (ಇದೇ ದಕ್ಷಿಣಾದಿಯ ಸಾರಂಗ, ಗೌಡ ಸಾರಂಗ ಬೃಂದಾವನೀ ಸಾರಂಗ ಇತ್ಯಾದಿ) ಸಾರಂಗ ಮಧ್ಯಾನ್ನದ (ಎರಡನೇ ಪ್ರಹರದ) ರಾಗ ಲವ ಕುಶರು ರಾಮನ ಸಭೆಯಲ್ಲಿ ಈ ಸಮಯವೇ ಹಾಡಿರಬಹುದೇ?

೧೬ನೆಯ ಶತಮಾನದ ವರೆಗೆ ವಾಗ್ಗೇಯಕಾರರು ರಾಗ - ಸ್ವರ ಪ್ರಸಾರಗಳ ದೃಢೀಕರಣಕ್ಕೆ ಸಾಹಿತ್ಯವನ್ನು ಪೂರೈಸಿದರು. ಅದು ಲಕ್ಷ್ಯಗೀತ, ದೇವಸ್ತುತಿ, ಋತುವರ್ಣನೆ ಮುಂತಾದ ಬಗೆಯದಾಗಿತ್ತು. ಮುಂದೆ ಹಾಡುಗಬ್ಬವು ಜನ ಪ್ರಿಯತೆಗೆ, ಮತಪ್ರಚಾರಕ್ಕೆ ಭಕ್ತಿ ತಂತ್ರಭೋದನೆಗೆ, ಭಾವೋನ್ಮಾದದ ಉದ್ಗಾರಗಳಿಗೆ ವಾಹಕವಾಯಿತು. ಓದುಗಬ್ಬ ಪಂಡಿತರ ಪಾಲಿಗೆ ಉಳಿದು ಹಾಡುಗಬ್ಬ ಭಾವವಾಹಕ ರಸಾತ್ಮಕ ಸಾಧನವಾಗಿ ಜನ ಸಮುದಾಯಕ್ಕೆ ಆಪ್ಯಾಯಮಾನವಾಯಿತು. ಮುಪ್ಪಿನ ಷಡಕ್ಷರಿ, ನಿಜಗುಣ ಶಿವಯೋಗಿ, ದಾಸ ಸಂಪ್ರದಾಯದ ವೈಷ್ಣವ ಕವಿಗಳು ತಮ್ಮ ಅನುಭಾವ, ಭಗವದ್ಭಕ್ತಿ ತತ್ವನೀತಿಬೋಧಗಳ ವ್ಯಂಜನೆಗೆ ಸ್ವರವನ್ನು ಪೂರೈಸಿದರು.

"ವಾಗ್ಗೇಯ"ವೆಂಬಲ್ಲಿ ಗೇಯವೇ ವಿಶಿಷ್ಟ. ಆದರೆ ಹಾಡುಗಬ್ಬದಲ್ಲಿ ಕಬ್ಬ ವಿಶೇಷ. ಹಾಡು ಅದಕ್ಕೆ ವಿಶೇಷಣ. ಈ ವ್ಯತ್ಯಾಸವೇ ಅದರ ಸ್ವರೂಪದದ್ಯೋತಕ. ಇದೇ ಧಾತು-ಮಾತುಗಳ ಎರಕ. ಹರಿದಾಸರ ಮಾದರಿಯಲ್ಲಿ ದಕ್ಷಿಣದ ವಾಗ್ಗೇಯಕಾರರಾದ ಕ್ಷೇತ್ರಜ್ಞ, ತ್ಯಾಗರಾಜ, ಮುತ್ತುಸ್ವಾಮಿ ದೀಕ್ಷಿತರ್ ಮತ್ತು ಶ್ಯಾಮಾಶಾಸ್ತ್ರೀ ಪ್ರಭತಿಗಳು ಸಂಸ್ಕೃತದಲ್ಲಿ ಮತ್ತು ತೆಲುಗಿನಲ್ಲಿಯೂ ಕೃತಿಯನ್ನು ರಚಿಸಿದರು. ಈ ಕೃತಿಗಳೇ "ಪ್ರಬಂಧ"ಗಳು ಅವುಗಳ ಅನುಬದ್ಧಗಳೇ ಉಗಾಭೋಗಗಳು, ನಿಬದ್ಧಗಳೇ ಸುಳಾದಿ, ಸೀಸ ಪದ್ಯ ಮುಂತಾದವು.

ಪ್ರಬಂಧಕ್ಕೆ ಐದು "ಧಾತು"ಗಳು ಅಥವಾ ಲಕ್ಷಣಗಳು: ಉತ್ಸಾಹ, ಮೇಲಾಪಕ, ಧ್ರುವಾ, ಅಂತರಾ, ಅಭೋಗ ಇವುಗಳ ಆದ್ಯಂತ ಧಾತುಗಳ ಹೆಸರು ಕೂಡಿ 'ಉತ್ಸಾಹ ಭೋಗ' ಎಂದಾಯಿತು. ಅದರ ಸಂಕ್ಷೇಪವೇ 'ಉಗಾಭೋಗ' ಆದರೆ ಶಬ್ದದ ಈ ಭಾವಶಕ್ತಿ ತುಂಬ ಕೃತಕವೆನಿಸುತ್ತದೆ. ಈ ಉಗಾಭೋಗವೇ ಮುಂದೆ ಹಿಂದುಸ್ಥಾನೀ (ಉತ್ತರಾದಿ)ಯಲ್ಲಿ ಸ್ಥಾಯಿ ಅಸ್ಥಾಯಿ ಅಥವಾ ಗ್ರಾಮ ಪದ್ಧತಿಯ ಗಾಯನವಾಯಿತು. ಈ ಐದು ಧಾತುಗಳಲ್ಲದೆ ಪ್ರಬಂಧಕ್ಕೆ ಆರು ಅಂಗಗಳನ್ನು ಹೇಳಲಾಗಿದೆ- ಸ್ವರ, ಮುದ್ರಿಕೆ (ಬಿರುದು) ಪದ (ಮುಖ್ಯಭಾಗ) ತೇವಕ (ತತ್ವವಿಚಾರ), ವಾಜಿ (ಭೋಗ, ನೃತ್ಯನಾದ ಸಂಜ್ಞೆಗಳು-ಗತತೋಡ ನೋಂ, ತೋಂ, ಮುಂತಾದವು) ಮತ್ತು ತಾಲಿ, ಹರಿದಾಸರಿಗೆ "ತೇನಕ"ವೇ ಪ್ರಧಾನವಾಗಿ, ಅವರು ಪದತೇನಕ ಬಿರುದು (ಮುದ್ರಿಕೆ) ಮುಂತಾದನ್ನೇ ಇಟ್ಟುಕೊಂಡರು. ಇಂಥ ಪ್ರಕಾರವೇ "ಸೂಡಾದಿ" ಅಥವಾ "ಸೂಳಾದಿ" ಪ್ರಕಾರವು ಹದಿನೈದನೇ ಶತಮಾನದ ಉತ್ತರಾರ್ಧದಲ್ಲಿ ಶ್ರೀಪಾದರಾಯರಿಂದ ಸಪ್ತ ತಾಳಗಳಲ್ಲಿ 'ಸಾಲಗ'ರಾಗ ಕ್ರಮದಲ್ಲಿ ಸ್ಥಿರಗೊಳಿಸಲ್ಪಟ್ಟಿತು. ಆಗ ಪಲ್ಲ, ಅನುಪಲ್ಲ, ಮತ್ತು ಚರಣ ಈ ಮೂರು ಭಾಗಗಳಾಗಿ ಅದು ರೂಪಗೊಂಡಿತು.

ಉಗಾಭೋಗವೇನು? ಸುಳಾದಿಯೇನು? ರಗಳೆ ಷಟ್ಪದಿ, ಸಾಂಗತ್ಯ ತ್ರಿಪದಿಗಳೇನು?

ಇವೆಲ್ಲ ಹಾಡುಗಬ್ಬರ ಪರಿಗಳು. ಮಾರ್ಗೀಯ ಗಾಂಧರ್ವ ಸಂಗೀತದಲ್ಲಿ ಸಂಗೀತಕ್ಕೆ ಸಾಹಿತ್ಯ ಒದಗಿಸಲಾಯಿತು. ಆಮೇಲೆ ದೇಶೀ ಕ್ರಮದಲ್ಲಿ ಸಾಹಿತ್ಯಕ್ಕೆ ಸಂಗೀತ ಅಳವಡಿಸಲಾಯಿತು. ಆದರೆ ಇವೆರಡೂ ಕ್ರಮಗಳಲ್ಲಿ ಒಂದು ಹೇತುಪೂರ್ವಕವಾದ ಧೋರಣೆ ಇತ್ತು.

ಆದರೆ ಇಂದಿನ ಹಾಡುಗಬ್ಬಗಳಲ್ಲಿ ಅಂಥ ಧೋರಣೆ, ಅದಕ್ಕೆ ಹಿನ್ನೆಲೆಯಾದ ಧ್ಯೇಯ ಧಾರಣೆ ಇಲ್ಲ. ಇಂದಿನ ಹಾಡುಗಳು ಹಿಂದಿನವುಗಳಿಂದ ಬೇರೆ. ಇಂದು ಹಾಡುಗಬ್ಬಗಳಿವೆ. ಹಾಡುವವರೂ ಇದ್ದಾರೆ, ಕೆಲವು ಹಾಡುಗಾರರು ಕೆಲವು ಗಬ್ಬಗಳನ್ನೂ ಹಾಡಿಗೆ ಒಗ್ಗಿದರೆ ಒಗ್ಗಿಸಿಕೊಂಡು ಹಾಡುತ್ತಾರೆ. ಆದರೆ ಹಿಂದಿನ ವಾಗ್ಗೇಯಕಾರರಂತೆ ಹಾಡುಗಾರಿಕೆಗಾಗಿಯೇ ಕೃತಿರಚಿಸುವವರು ಬೆರಳಲ್ಲಿ ಎಣಿಸುವಷ್ಟು. ಯಾವ ಗದ್ಯವನ್ನು ಸರಾಗವಾಗಿ ಹಾಡಬಹುದು. ಕೈಲಾಸಂ ಅವರ ನಾಟಕದಲ್ಲಿ ಒಂದು ಪಾತ್ರ ದಿನಪತ್ರಿಕೆಯಲ್ಲಿಯ ಒಂದು ಮಜುಕೂರು ಕಾಂಭೋದಿಯಲ್ಲಿ ಹಾಡುತ್ತಾನೆ. ನನ್ನ ಮಿತ್ರರೊಬ್ಬರು ಅಂಕಲಿಪಿಯ "ಅಕಬರ ಸಾಹೇಬರು ತರತರದ ಕೋಳಿ ಸಾಕಿರುವರು" ಎಂಬ ಮಹಾ ವಾಕ್ಯವನ್ನು ಒಂದು "ಚೀಜಿ"ನಂತೆ ದರಬಾರಿ ಕಾನಡಾ ರಾಗದಲ್ಲಿ ಹಾಡಿ ಕುಣಿಸುತ್ತಿದ್ದರು! ಆದರೆ ಇದೆಲ್ಲ ಸಾಹಸ ಹಾಡುಗಬ್ಬವಾಗಲಾರದು.

ಹಾಗಾದರೆ "ಹಾಡುಗಬ್ಬ"ದ ಮುಖ್ಯ ಗುಣವೇನು? ಸಂಗೀತ ಮುಖವಾಗಿಯೇ ಆದರೆ ಅದೇ ಮುಖ್ಯವಾಗದೆ, ಸ್ವತಃ ರಚನೆಯ ಚಾತುರ್ಯ ಮಾಧುರ್ಯಗಳ ಉದ್ದೀಪನೆಯಿಂದಲೇ ಕೃತಿಯ ಭಾವ ರಸಾವಿಷ್ಕಾರ ಹೊಂದುವಂತೆ ಆದರೇನೇ ಅದು ಹಾಡುಗಬ್ಬ. ಅದನ್ನು ಯಾರೂ ಹಾಡಲು ಎತ್ತಿಕೊಳ್ಳದಿದ್ದರೂ ಅದು ಹಾಡುಗಬ್ಬವೇ ಸರಿ - ತನ್ನ ಲಯಗಾರಿಕೆ ಅಂತಃಪ್ರಾಸ, ನಾದಮಯತೆಗಳಿಂದ ಕೂಡಿದ ಕಾವ್ಯ ಸತ್ವದ ಮೂಲಕ ಭಾಗವತದೊಳಗಿನ "ಗೋಪಿಗೀತ". ರುದ್ರ ಭಟ್ಟನ ಕೃಷ್ಣಲೀಲೆಯ ಪದ್ಯಗಳು ("ಮುರಾರಿ ಕೈಪರೆಗಾಡಿದಂ") ಶಂಕರಾಚಾರ್ಯರ ಚರ್ಪಟ ಮಂಜರಿ (ಭಜಗೋವಿಂದ) ಶಿವಶರಣರ ಲಯ ಬದ್ಧ ವಚನಗಳು ಮುಂತಾದುವು ರಂಜಕ ಸ್ವರವ್ಯಂಜನೆಗೆ ಯೋಗ್ಯವಾದವು. ಜಯದೇವನ "ಗೀತಗೋವಿಂದ"ವಂತೂ ಇಂಥ ತಾಳಕ್ಕೆ ಹಾಡಬೇಕೆಂಬ ಸೂಚನೆಗಳೊಂದಿಗೆ ರಚಿತವಾದ ಪ್ರಖ್ಯಾತ ಹಾಡುಗಬ್ಬ.

ಮುಖ್ಯವಾಗಿ ಹಾಡುಗಬ್ಬದಲ್ಲಿ ಲಯಗಾರಿಕೆ ಪುಷ್ಟವೂ ಸ್ಪಷ್ಟವೂ ಆಗಿರಬೇಕು. ಕಾವ್ಯಗುಣ ಸುಶ್ಲಿಷ್ಟವೂ ನಿರ್ದುಷ್ಟವೂ ಆಗಿರಬೇಕು. ಶ್ರುತಿ-ತಾಳ ಲಯಗಳ ಸಾಂಗತ್ಯವನ್ನು ಸಹಜವಾಗಿ ಹೊಂದುವಂತೆ ಇರಬೇಕು. ಜಯದೇವನ "ಗೀತ ಗೋವಿಂದ"ದಂತೆ ಹಾಡುಗಬ್ಬದಲ್ಲಿ "ಕೋಮಲಕಾಂತ ಪದಾವಲಿ" ಇರಬೇಕು. ಬರೀ ಕೋಮಲವಿದ್ದರೆ ಸಾಲದು; ಅದು ಕಾಂತವೂ (ಕಾಂತಿ ಮುಕ್ತವೂ) ಆಗಿರಬೇಕು. ಪದ ಪಂಕ್ತಿಗಳು ಗೇಯಾನುಕೂಲವಾಗಿ ನಾಲಿಗೆಗೆ ನಲಿನಲಿದು ನಿಲುವಂತೆ ಇರಬೇಕು. ಹಾಲಿನೊಂದಿಗೆ ಸಕ್ಕರೆಯು ಉದರವನ್ನು ಸೇರುವಂತೆ, ಸತ್ವವೆಲ್ಲ ಸ್ವಾದವಾಗಿ ಅಲಂಕಾರವೆಲ್ಲ ಸೌಂದರ್ಯವಾಗಿ, ಭಾವವೆಲ್ಲ ರಸವಾಗಿ ಹೃದಯವನ್ನು ತುಂಬಬೇಕು. Sound Echoing Sense ಅಂಬಿಕಾತನಯದತ್ತರ "ಮರುಳಸಿದ್ದನ ಮಾಯಕಿನ್ನರಿ"ಯಂತೆ ನಾದಲೀಲೆ ಆಗಬೇಕು. ನಮ್ಮ ಈ ವರಕವಿಗಳೇ ಅಂದಂತೆ "ಮಾತು ಮಾತು ಮಥಿಸಿಬಂದ ನಾದದ ನವನೀತ, ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿದು ಭಾವಗೀತ"ವಾಗಿ ಕವಿಯ ಏಕತಾನ ಕವನದಂತೆ ನಾದಲೀಲವಾಗಬೇಕು ಅಂದಾಗಲೇ ಅದು ಹಾಡುಗಬ್ಬ. ಎಷ್ಟೋ ಪ್ರಸಿದ್ಧ ಕವನಗಳು ನಮಗೆ

ಕಬ್ಬಿಣದ ಕಡಲೆ. ಹಲ್ಲು ಇಲ್ಲದವರಿಗೆ ಕಡಲೆಯೂ ಕಬ್ಬಿಣ!

ಆದರೆ ಕಾವ್ಯದ ದುರ್ದೈವವೆಂದರೆ ಇಂದು ಅನೇಕ ಕವನಗಳು ಕೇವಲ ಕಿನ್ನರ ಕಂಠದ ಅನುಗ್ರಹದಿಂದ ಜನಪ್ರಿಯವಾಗಿ ಅರ್ಥವಿಲ್ಲದಿದ್ದರೂ ಸ್ವಾರ್ಥ ಸಾಧಕವಾಗಿರುವುದು. ಇದಕ್ಕೆ ಒಂದು ಅಸಹ್ಯ ಉದಾಹರಣೆಯೆಂದರೆ ಮಾರುಗಟ್ಟಲೆ ಸಿನೇಮಾ ಹಾಡುಗಳು, ಅದೇಕೋ ಕನ್ನಡ ಚಿತ್ರಗೀತೆಗಳು ಹಿಂದಿನ ಮಾರಾಠಿಯ ಅಂಥಗೀತೆಗಳಷ್ಟು ಕಾವ್ಯದಲ್ಲಿ ಗುಣಮಟ್ಟ ಕಾಪಾಡಿಕೊಂಡಿರುವುದಿಲ್ಲ. "ಗ-ಪದ್ಯ"ವೋ "ಪ-ಗದ್ಯ"ವೋ ಆಗಿರುತ್ತದೆ. ಅವುಗಳ ಸಂಗೀತ ಯೋಜನೆ ಸಮೃದ್ಧವಾಗಿರುವಲ್ಲಿ ಈ ಶಬ್ದ ಯೋಜನೆಯ ದಾರಿದ್ರ್ಯರಸಿಕರಿಗೆ ಇನ್ನಷ್ಟು ಕಂಗೆಡಿಸುತ್ತದೆ. ಶ್ರುತಿ ತಪ್ಪಿ ಹಾಡಿದರೆ ಸ್ಮೃತಿ ತಪ್ಪಿಯೇ ಕೇಳಬೇಕು. ಆದರೆ ಕೃತಿಗೆಡುವಂತೆ ಹಾಡಿದರೆ ಧೃತಿಗೆಡದೆ ಇನ್ನೇನು ಆಗಬೇಕು?

ಹಾಡುಗಬ್ಬದ ಕಾವ್ಯ ಹೇಗಿರಬೇಕು? ಅದು ಉತ್ತಮ ಕಾವ್ಯಕ್ಕಿಂತ 'ಕಿಂಚಿದೂನ"ವೇ ಇರಬೇಕು. ಈ ನ್ಯೂನತೆಯನ್ನು ಸಂಗೀತವು ತುಂಬಿಕೊಡುವಂತಿರಬೇಕು. ಅಂದರೆ ಅರ್ಥಾನುಕೂಲ ಸ್ವರ ಯೋಜನೆಯ ಈ ಊನತೆಯನ್ನು ತುಂಬಿ ಕೊಡಬೇಕು. ಉದಾಹರಣೆಗೆ ಬೇಂದ್ರೆಯವರ "ಮಾಯಾಕಿನ್ನರಿ" "ಗಂಗಾವಾತರಣ" "ಭಾವಗೀತೆ" 'ಬೆಳದಿಂಗಳ ನೋಡ'ದಂಥ ಕವನಗಳಿಗೆ ಕುವೆಂಪು ಅವರ 'ಮಯೂರ' 'ಸುಗ್ಗಿ' ಮುಂತಾದವುಗಳಿಗೆ ಬೇರೆ ಸಂಗೀತ ಬೇಕಿಲ್ಲ. ಬೇಂದ್ರೆಯವರ ಕಾವ್ಯದಲ್ಲಿ 'ನಾದಲೀಲೆ' ಸಹಸ್ರ ತಂತಿ ನಿಸ್ವನದಂತೆ ವಿಜೃಂಭಿಸುತ್ತದೆ. ಅದೇ ರೀತಿ ಪಂಜೆಯವರ "ತೆಂಕಣ ಗಾಳಿಯ ಆಟ" ಕುವೆಂಪು ಅವರ 'ಕಲ್ಕಿ', ವಿ.ಸೀ. ಅವರ "ಕಸ್ಮೈದೇವಾಯ" "ಅಭೀಃ"ಯಂಥ ಕವನಗಳ ಭಾವಾವೇಶ, ವಾಗ್ಮಿತ್ವೆ ಮತ್ತು ಅರ್ಥ ಗೌರವಕ್ಕೆ ಸಂಗೀತದ ಸಿಂಗಾರ ಅನಗತ್ಯ-ಏಕೆ? ಒಂದು ರೀತಿ ಮಾರಕವೇ ! ಇವುಗಳಿಗೆ ಹಿನ್ನೆಲೆಯ ವಾದ್ಯ ಸಂಗೀತದ ಉಚಿತ ಪ್ರಯೋಗ ಪೋಷಕವಾಗಬಹುದು. ಆದರೆ ಇಂಥ ಕೃತಿಗಳಿಗೆ ಸ್ವರ ಪ್ರಸ್ತಾರ ಹಾಕಿ ಹಾಡುವುದೆಂದರೆ ಗೊಮ್ಮಟನಿಗೆ ನಿಲುವಂಗಿ ತೊಡಿಸಲು ಹೋದಂತೆಯೇ, ಅದೊಂದು ಹುಚ್ಚು ಹವ್ಯಾಸ.

ಭಾವಕ್ಕೆ ತಕ್ಕ ಭಾಷೆ-ಪದಲಾಲಿತ್ಯ ಅದಕ್ಕೆ ತಕ್ಕ ಛಂದೋವೃತ್ತವನ್ನು ತಿಳಿದು ಬರೆಯುವ ಕವಿಗಳು ನಮ್ಮಲ್ಲಿ ಎಷ್ಟು ಮಂದಿ? ಇವೆಲ್ಲವನ್ನೂ ಅನುರಣನ ಮಾಡುವಂತೆ ಆ ಕವನಕ್ಕೆ ರಾಗ ಯೋಜನೆ ಕೂಡಿ ಬರಬೇಕು. ಉದಾಹರಣೆಗೆ ನಮ್ಮ ರಾಷ್ಟ್ರಗೀತೆ "ಜನ ಗಣ ಮನ"ವನ್ನು ದೃತಲಯದಲ್ಲಿ ಭೈರವಿ, ಮಲ್ಹರಾಗ ಭೀಮಪಲಾಸದಲ್ಲಿಯೇ ಹಾಡಿದರೆ ಹೇಗೆ? ಹಾಡುಗಬ್ಬಗಳಿಗೆ "ಹಚ್ಚುವ" ಸಂಗೀತ ರಾಗ ಪ್ರಧಾನವಾಗಿರುವುದಕ್ಕಿಂತ ಸ್ವರ ಪ್ರಧಾನವಾಗಿರಬೇಕು. ಇರಲಿ.

ನಮ್ಮಲ್ಲಿ ಹಾಡುಗಬ್ಬವೆಂದೇ ಲಕ್ಷೀಕರಿಸಿ ಲಕ್ಷಣವಾಗಿ ಬರೆದ ಕವಿಗಳಿದ್ದಾರೆ, ಪೂಜ್ಯ ಡಿ.ವಿ.ಜಿ., ಶ್ರೀ ಬೆಟಗೇರಿ ಕೃಷ್ಣಶರ್ಮ, (ಆನಂದಕಂದ), ಕೆ.ಎಸ್. ನರಸಿಂಹಸ್ವಾಮಿ, ಮುಂತಾದವರು. ಇವರ ಕೃತಿಗಳೆಂದರೆ 'ಅಂತಃಪುರಗೀತೆ', "ವಿರಹಿಣೀ" 'ಮೈಸೂರಮಲ್ಲಿಗೆ'. ಇವುಗಳಲ್ಲಿಯ ಹಲವಾರು ಕವನಗಳು ಹಾಡಿಗಾಗಿಯೇ ಪಾಡಿಗೆ ಬಂದವು. ಅವುಗಳ ಕಂಪಿನ ಕರೆಯೋ ಸರಾಗವಾಗಿದೆ. ಅದೇ ಉನ್ಮಾದಕ ರಂಜಕತ್ವ ಶ್ರೀ ಸು.ರಂ. ಎಕ್ಕುಂಡಿಯವರ ಲಾವಣ್ಯ ಕವನಗಳಲ್ಲಿ ತುಳುಕಾಡುತ್ತಿದೆ.

ಇನ್ನು ಕೆಲವು ಹಿರಿಯ ಕವಿಗಳು ತಮ್ಮ ಕವಿತೆಗಳ ತಲೆಗೆ ರಾಗ-ತಾಳಗಳ ಪಟ್ಟಿಯನ್ನು

ಅಂಟಿಸಿದ್ದುಂಟು. ಆದರೆ ಆ ಮಟ್ಟಿಗೆ ಅವರ ಸಂಗೀತಾಭಿರುಚಿಯನ್ನು ಅದು ಸೂಚಿಸಬಹುದು, ಹೊರತು ಆಯಾ ಕೃತಿ, ಆಯಾ ರಾಗದಲ್ಲಿಯೇ ಆಕೃತಿ ಪಡೆಯಿತು-ಪಡೆಯಬೇಕು ಎಂಬಂತೆ ಅದನ್ನು ಓದಿದಾಗ ಅನಿಸುವುದಿಲ್ಲ. ವಿ.ಸೀ. ಯವರ "ಮನೆ ತುಂಬಿಸುವ ಹಾಡು", ಡಾ। ಮುಗಳಿ (ರಸಿಕರಂಗ) ಯವರ "ಮಂದಾರ ಹೂವು", ಶ್ರೀ ದೇಸಾಯಿ ದತ್ತಮೂರ್ತಿಯವರ "ಊದು ಕೊಳಲೂದು", ಡಾ। ಗೋಕಾಕರ "ಮಲ್ಲಿಗೆ", ಡಾ। ಗೋಪಾಲಕೃಷ್ಣ ಅಡಿಗರ "ಮೋಹನ ಮುರಳಿ" ಶ್ರೀ ಈಶ್ವರ ಸಣಕಲ್ ಅವರ "ಪ್ರಾರ್ಥನೆ" ಡಾ। ಕರ್ಕಿಯವರ 'ಗೀತಾಪ್ರಿಯ' ಮುಂತಾದವರ ಕವನಗಳು ಸ್ವರ ಬದ್ಧವಾಗಿ ಜನಪ್ರಿಯತೆಗಳಿಸಿವೆ, ಹಾಗೆಯೇ ಚೆನ್ನವೀರ ಕಣವಿ, ಡಾ। ಗೋಕಾಕ, ಅಕಬರಅಲಿ, ದಿನಕರ ದೇಸಾಯಿ, ಇಂಚಲ ಪ್ರಭೃತಿಗಳ ಹಲವು ಕೃತಿಗಳು "ವೈಣಿಕ (Lyrical) ಆಗಿವೆ. ಇವರಲ್ಲಿ ಕವಿ ಕಣವಿಯವರಿಗೆ ಅಗ್ರಪೂಜೆ.

ಇಷ್ಟೆಲ್ಲ ಇದ್ದರೂ ಗೇಯದ ಅಲಂಪಿನ ಇಂಪಿಗೆ ಆಗರವಾಗಲೆಂದೇ ಕವನ ಕಟ್ಟಿದವರು ನಮ್ಮಲ್ಲಿ ಕಡಿಮೆಯೇ. ಅಂಥ ಹಾಡುಗಬ್ಬಗಳೆಂದರೆ ಇಂದು ಚಲನ ಚಿತ್ರ, ಆಕಾಶವಾಣಿಗಾಗಿ ಹಾಡುಗಳನ್ನು ರಚಿಸುವವರೇ ಸರಿ. ಅಂಥವರಲ್ಲಿ ಶ್ರೀ ಎನ್.ಕೆ. ಕುಲಕರ್ಣಿಯವರು ಒಬ್ಬ ಉತ್ತಮ ಯಶಸ್ವೀ ಕವಿ.

ಮರಾಠಿಯಲ್ಲಿ ಆಕಾಶವಾಣಿಗಾಗಿಯೇ ಶ್ರೀ ಗ.ವಿ. ಮಾಡಗೂಳಕರರು "ಗೀತ ರಾಮಾಯಣ"ವನ್ನು ರಚಿಸಿದರು. ಅದು ಸಾವಿರಾರು ಮನೆಗಳಲ್ಲಿ ಲಕ್ಷಾಂತರ ಜನರಲ್ಲಿ ಉಲ್ಲಾಸವನ್ನು ಚೆಲ್ಲುವಂತಿತ್ತು. ಅಂಥ ವಿಕ್ರಮ ಕನ್ನಡದಲ್ಲಿ ಆಗುವದೆಂದೋ, ಮಾಡುವವರಾರೋ, ಇಲ್ಲಿ ಶ್ರುತಿ ಮತ್ತು ಶಬ್ದ ಇವೆರಡೂ ಬೇರೆ ಬೇರೆ ಹಾದಿ ಹಿಡಿದಿವೆ. ಕವಿಗೆ ಕಂಠವಿಲ್ಲ, ಗಾಯಕನಿಗೆ ಶಬ್ದಗಳ ಪರಿವೆ ಇಲ್ಲ. ಮಾದರಿಯ ಹಾಡುಗಬ್ಬ ಹುಟ್ಟಲಿಕ್ಕೆ ಶಬ್ದ-ಶ್ರುತಿಗಳ ಸಂಪೂರ್ಣ ಸಾಂಗತ್ಯ, ಅದಕ್ಕೆ ತಕ್ಕ ಲಾಲಿತ್ಯ ಔಚಿತ್ಯ ಕೂಡಿರಬೇಕು. ಇಂದಿನ ನಮ್ಮ ಅನೇಕ ಕವಿಗಳು ನಾದಲೋಲರಲ್ಲ, ಗಾನಲುಬ್ಧರಲ್ಲ, ಸಂಗೀತದ ಧರ್ಮ-ಮರ್ಮ ಇವರಿಗೆ ಗೊತ್ತಿರುವುದಿಲ್ಲ. ಹಿಂದಿನ ವಾಗ್ಗೇಯಕಾರರು ಸ್ವಯಂ ಸಂಗೀತರರಾಗಿದ್ದರು. ಡಾ। ಗೋಕಾಕರು ಹೇಳುವಂತೆ ಶಬ್ದ, ತಾಳ, ಲಯ ಮತ್ತು ಪ್ರತಿಮೆಗಳ ಸಾಮರಸ್ಯವೇ ಮಂತ್ರಸಿದ್ಧಿ. ಇಂಥ ಸಿದ್ಧಿಗೆ ಸಂಗೀತದ "ಕವಿ" ಇಂಥವನೇ ಕವಿಯಾಗಿರಬೇಕು. ಕೃತಿ ರಚನಾಕಾರನು ಕನಿಷ್ಟ ರಾಗ-ತಾಳಗಳ ಪರಿಚಯವುಳ್ಳವನಾಗಿರಬೇಕು. ಅಥವಾ ಕಾವ್ಯಾನುಶೀಲನೆಯುಳ್ಳ ಪರಿಣಾಮಕಾರಿಯಾಗಿ ಹಾಡುವ "ಗಮಕಿ" ಕವಿಯಾಗಿರಬೇಕು. ಹಿಂದೆ ರಾಜರುಗಳ ಆಸ್ಥಾನದಲ್ಲಿ "ಗಮಕಿ"ಗಳೆಂಬವರೇ ಇರುತ್ತಿದ್ದರು.

ನಮ್ಮಲ್ಲಿ ಅಂಥ ಸಾಮರಸ್ಯ ಕೆಲಮಟ್ಟಿಗೆ 'ಗೀತರೂಪಕ'ಗಳಲ್ಲಿ ಸಾಧಿಸಿದೆ. ಡಾ। ಪು.ತಿ.ನ ಡಾ। ಶಿವರಾಮ ಕಾರಂತ, ಇಬ್ಬರೂ ಸಂಗೀತಜ್ಞರೂ ಆಗಿದ್ದು, ಇಂಥ ರಚನೆಯಲ್ಲಿ ಪರಿಣತಮತಿಗಳಾಗಿದ್ದರು, ಒಂದು ಗೀತಮಾಲೆ ರಾಗಮಾಲಿಕೆಯಲ್ಲಿ ಹಾಡುವಂತೆ ಮಾಡಿದ ಮಾತ್ರಕ್ಕೆ ಅದು ಗೀತರೂಪಕ ಆಗಲಾರದು. ಗೀತ ರೂಪಕ ಒಂದು ಅಖಂಡ ರೂಪದ ಕೃತಿ (Composition) ಎಂಬ ಪ್ರಜ್ಞೆ ಡಾ। ಕಾರಂತರ ಪ್ರಯೋಗಗಳಲ್ಲಿ ಕಂಡು ಬರುತ್ತದೆ.

ಇನ್ನೂ ಸಾಹಿತ್ಯ ಮತ್ತು ಸಂಗೀತ ಒಬ್ಬರಲ್ಲಿಯೇ ಸಂಯೋಗ ಹೊಂದಿಲ್ಲವಾದರೆ, ಕವಿಯ ಹೃದ್ಗತವನ್ನು ಒಬ್ಬ ಸಂಗೀತಗಾರ ತಿಳಿದವನಾದರೂ ಇರಬೇಕು. ಶ್ರೀ ಮಾಡಗೂಳಕರರಿಗೆ ಶ್ರೀ

ಸುಧೀರ ಘಡಕೆ ಸೇರಿದಂತೆ ಆಗ ಹಾಡಗಬ್ಬ ಕಟ್ಟಿದ ಸ್ವಪ್ನ ಹಾಡುಗಾರ ಸಾಕಾರಗೊಳಿಸಬಲ್ಲ. ವೇದಕಾಲದಲ್ಲಿ "ಉದ್ಗಾತೃ"ವಿನಲ್ಲಿ ಹೀಗೆಯೇ ಆಗುತ್ತಿರಬೇಕು. ಗೀತಾ ರೂಪಕಗಳ ವಿಚಾರ ಪು.ತಿ.ನ ತಮ್ಮ "ಕಾವ್ಯ ಕುತೂಹಲ"ದಲ್ಲಿ ಅಧಿಕಾರವಾಣಿಯಿಂದ ಇತ್ಯರ್ಥ ಮಾಡಿದ್ದಾರೆ. ಕುತೂಹಲಿಗಳು ಅದನ್ನು ಅವಶ್ಯ ಓದಬೇಕು.

ಇನ್ನು ರಂಗಗೀತೆಗಳು ಹಾಡುಗಬ್ಬರ ಒಂದು ಪ್ರಕಾರವೇ ಸರಿ. ನಮ್ಮ ರಂಗ ಭೂಮಿಯಲ್ಲಿ ಸೊಗಸಾದ ಹಾಡುಗಾರಿಕೆಗೆ ಕೊರತೆಯಿಲ್ಲ. ಆದರೂ ಸೋಜಿಗವೆಂದರೆ ಕಳೆದ ಒಂದು ಶತಮಾನದಲ್ಲಿ ಅವಿಸ್ಮರಣೀಯವಾಗಿ ಜನರ ಶ್ರವ್ಯ - ಮನನಗಳಲ್ಲಿ ಉಳಿದು ಬಂದ ಎಷ್ಟೊ ರಂಗಗೀತೆಗಳು ಕನ್ನಡದಲ್ಲಿ ಇವೆ? ಮರಾಠಿಯಲ್ಲಿ ಹಳೆ - ಹೊಸ ನಾಟಕಗಳ ಕನಿಷ್ಠ ನೂರು ಹಾಡುಗಳಾದರೂ ಸಾರ್ವಜನಿಕ ಒಟ್ಟಾಭಿಪ್ರಾಯದಿಂದ ಇಂದಿಗೂ ಉತ್ತಮ ಜನಪ್ರಿಯವೆಂದು ಆಯ್ಕೆ ಕಾಣಿಸಬಹುದು. ೧೦೦ ವರ್ಷ ಹಿಂದಿನವೆನ್ನಬಹುದಾದ ಮೃಚ್ಛಕಟಿಕ, ಸೌಭದ್ರ, ಸಂಶಯ ಕಲ್ಲೋಲ, ಮುಂತಾದ ನಾಟಕಗಳೂ, ಅವುಗಳ ಆಯಾ ರಂಗಗೀತೆಗಳೂ ಇಂದಿಗೂ ಅತ್ಯಂತ ಮೆಚ್ಚುಗೆ ಪಡೆದಿವೆ. ಆದರೆ ಈ ಮಟ್ಟಿಗೆ ಕನ್ನಡದಲ್ಲಿ ಬಡತನದ ಭೂತವೇ ಕುಣಿಯುತ್ತಿದೆ. ಉತ್ತಮೋತ್ತಮ ರಂಗ ಗಾಯಕರಿದ್ದರೂ ನಾದಲುಬ್ಧರಿಗೆ ಅಂಥ ರಸದೂಟ ಸಿದ್ಧವಿಲ್ಲ. ಅದಕ್ಕೆ ಅಗತ್ಯವಾದ ತಾದಾತ್ಮ್ಯ - ತಾತ್ಪರ್ಯ ಹಾಡುವವರಲ್ಲಿಯೂ ಇಲ್ಲ, ಕೇಳುವವರಲ್ಲಿಯೂ ಇಲ್ಲ. ಎಲ್ಲವೂ ತಾತ್ಕಾಲಿಕ ಪ್ರಯೋಜನ. ಕೈತುತ್ತಿನ ಭೋಜನ.

ಈ ಯುಗದ ಸರ್ವಶ್ರೇಷ್ಠ ವಾಗ್ಗೇಯಕಾರರು ಗುರುದೇವ ರವೀಂದ್ರರು, ೨೦೦೦ಕ್ಕೆ ಮಿಕ್ಕಿ ಹಾಡುಗಬ್ಬಗಳನ್ನು ರಚಿಸಿ ಅದಕ್ಕೆ ತಮ್ಮದೇ ಸಂಗೀತವನ್ನು ಸಂಗೊಳಿಸಿ ಅವರು ಆಬಾಲವೃದ್ಧ ಪಂಡಿತ ಪಾಮರರನ್ನು ಮರುಳು ಮಾಡಿದರು. "ರೊಬಿಂದ್ರ ಸಂಗೀತ"ವೆಂಬ ಹೊಸ ಪ್ರಕಾರವನ್ನು ನಿರ್ಮಿಸಿದರು.

ಶ್ರುತಿಯಿಂದ ಶಬ್ದಕ್ಕೆ ಭಾವದ ನಿರ್ಭರತೆ ಮತ್ತು ವಿಲಕ್ಷಣ ಐಶ್ವರ್ಯಸಿಗುವಂದದ ರಚನೆಯೇ ನಿಜವಾದ ಹಾಡುಗಬ್ಬ. ನಮ್ಮ ಅಂಬಿಗರ, ಗರತಿಯರ, ಬೈರಾಗಿಗಳ (ಬಾವುಲ ಸಂನ್ಯಾಸಿಗಳ) ದಾಸರ, ಗೀಗೀಪದ್ಯಗಳ, ಲಾವಣಿಕಾರರ ಹಾಡಿಕೆಯಲ್ಲಿ ಇಂಥ ಭಾವ-ರಾಗ-ತಾಳಗಳ ವಿದ್ಯುದಾಲಿಂಗನವೆಲ್ಲ "ಮಾತು" ಜ್ಯೋತಿಯಾಗಿದೆ.

ಆಚಾರ್ಯ ಹೇಮಚಂದ್ರನು ತನ್ನ "ಕಾವ್ಯಾನು ಶಾಸನ"ದಲ್ಲಿ ಪ್ರಬಂಧ ಕಾವ್ಯವನ್ನು "ಶ್ರಾವ್ಯ" ಮತ್ತು "ಪ್ರೇಕ್ಷ್ಯ" ವೆಂದು ವಿಂಗಡಿಸಿ ಪ್ರೇಕ್ಷ್ಯವನ್ನೂ ಮತ್ತೆ "ಪಾಠ್ಯ" ಮತ್ತು "ಗೇಯ"ವೆಂದು ವರ್ಗೀಕರಿಸಿದ್ದಾನೆ. ನಮ್ಮ ಆಧುನಿಕ ಕನ್ನಡದಲ್ಲಿ ಶ್ರಾವ್ಯಗೇಯ ಕೃತಿಗಳ ಕೊರತೆ ನಮ್ಮ ಹೃದಯದ ಮರುಭೂಮಿಯನ್ನು ಹಬ್ಬಿಸುತ್ತಿದೆ. ಇಂದಿನ ನವ್ಯ ಯುಗದಲ್ಲಿಯಂತು ವಿಭಿನ್ನ ಪ್ರಭಾವ, ಆವಿರ್ಭಾವಗಳ ಅಡಿಗೆ ಬುದ್ಧಿಯ ಹೆಸರಿನಲ್ಲಿ ನಿರ್ಭಾವವೇ ವಿಕಾಸಗೊಂಡಂತಿದೆ. ಇದೆಲ್ಲ ಅಹಾರ್ಯ. ನಮ್ಮ ಹೊಸ ಕವಿಗಳು ತುಸು ಆಯಾಸ ಪಟ್ಟರೆ ಅಥವಾ ಅನುಗ್ರಹವಿಟ್ಟರೆ ನಮ್ಮಲ್ಲಿಯ ಸುಶಿಕ್ಷಿತ ಅರಸಿಕರಿಗೂ, ಅಶಿಕ್ಷಿತ ರಸಿಕರಿಗೂ ಮೋಹಕವಾದ, ಮೋದಕವಾದ ಹಾಡುಗಬ್ಬಗಳು ಹೇರಳವಾಗಿ ಹುಟ್ಟಿ ಜನತೆಯ ಹೃದಯ ಹಸನವಾಗಬಹುದು, ಹಸಿರು ಆಗಬಹುದು.

ನಮ್ಮಲ್ಲಿ ಲಾವಣಿಗಳೂ ಜೋಗುಳಗಳು ಭಜನೆಗಳು ಸುವ್ವಿ - ಸೋಬಾನೆಯ ಹಾಡುಗಳು

ಇಂಥ ಹೃದಯದ ಕೃಷಿಯನ್ನು ಅನಾದಿಯಿಂದಲೂ ಮಾಡುತ್ತ ಬಂದಿವೆ. ಜನರ ಎದೆಯಾಳದ ನೀರು ಇಲ್ಲಿ ಚಿಮ್ಮುತ್ತದೆ. ಪ್ರಾಸಪ್ರಪಂಚ, ಭಾವವಿಲಾಸ, ಕಲ್ಪನೆಯ ವೈಖರಿ, ನಿರರ್ಗಳವಾಗ್ಧೋರಣೆ, ಕಿರಿದರಲ್ಲಿ ಹಿರಿದನ್ನು ಒಡಮೂಡಿಸುವ ಓಜೆ, ದನಿಯ ಏರಿಳಿತ-ಇವೆಲ್ಲವೂ ದ್ರಾಕ್ಷಾಪಾಕವಾಗಿ ಇಳಿದಾಗಲೆ ಇಂಥ ಪ್ರಾಸಾದಿಕ ಹಾಡುಗಬ್ಬ ಸಾಧ್ಯ.

ಸಿದ್ಧಧಾಟಿಗೆ ಶಬ್ದಜೋಡಿಸುವದಕ್ಕಿಂತ ಸಿದ್ಧ ಕವನಕ್ಕೆ ಭಾವಾನುಕೂಲ ಸ್ವರ ರಚನೆ ಮಾಡುವುದು ಎಂದಿಗೂ ವಿಹಿತ. ಇಲ್ಲಿ ಸಂಗೀತಜ್ಞನು ಕವಿತೆಯ ಮರ್ಮಜ್ಞನೂ ಆಗಿರತಕ್ಕದ್ದು, ಮಾತ್ರೆ, ಸ್ವರ ಅಕ್ಷರಗಳು ಚಾಕಲೇಟಿನಂತೆ ಬಾಯಿಯಲ್ಲಿ ಕರಗಬೇಕು. “ಕೇಳನೋ ಹರಿತಾಳನೋ ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ” ಎಂಬ ದಾಸರ ಮಾತು ಇಂದಿನ ಕಾವ್ಯ ಗಾಯನಕ್ಕೂ ಅನ್ವಯಿಸುತ್ತದೆ.

ಇಂದಿನ ಕಾವ್ಯದ ಹಕ್ಕಿ ಬಲು ಮೇಲಕ್ಕೆ ಹಾರಿದೆ. ಮಂಗಳ ಲೋಕದ ಅಂಗಗಳ ಸೇರಿದೆ. ತಿಂಗಳ ಬೆಳಕಿಗೂ ಆಚೆ ಕನ್ನಡ ಕಾವ್ಯ ಒಮ್ಮೆಲೆ Sublimation ಹೊಂದಿದೆ. ಘನ ರೂಪದಿಂದ ನೇರ ವಾಯು ರೂಪಕ್ಕೆ ಹಾರಿದೆ. ಸಾಮಾನ್ಯ ಶಿಕ್ಷಣದ ಸಂಸ್ಕೃತಿಯ ಬಹುಜನ ಸಮೂದಾಯಕ್ಕೆ ಮುಟ್ಟಬಲ್ಲ, ಅವರ ಎದೆ ತಟ್ಟ ಬಲ್ಲ ಕವಿತೆ ವಿರಳವಾಗಿದೆ. ಧರ್ಮದಂತೆ ಇಂದು ಕಾವ್ಯವೂ ಮಾರುವದಿಲ್ಲ. ಕಾವ್ಯಕ್ಕೆ ರಸಿಕರು ಬೇಕಾಗಿದ್ದಾರೆ. “ಅರಸಿಕೇಷು ಕವಿತ್ವ ನಿವೇದನಂ, ಶಿರಸಿಮಾಲಿಖ, ಮಾಲಿಖ, ಮಾಲಿಖ!- ಎಂದು ಕವಿಯೊಬ್ಬ ಬ್ರಹ್ಮನಿಗೆ ಬಿನ್ನವಿಸಿಕೊಂಡಿದ್ದ. ಇಂದು ಬ್ರಹ್ಮನೂ ಏನೂ ಮಾಡುವಂತಿಲ್ಲ, ಇಂದು ರಸಿಕರನ್ನು ತಯಾರಿಸುವ ಹೊಣೆ ಕವಿಗಳ ಮೇಲೆಯೇ ಬಿದ್ದಿದೆ. ನಮ್ಮ ಶಾಲಾ ಕಾಲೇಜುಗಳು ಬರೆ ಪರೀಕ್ಷಾರ್ಥಿಗಳನ್ನು ತಯಾರಿಸುವ ಗಾಂಪರಗ್ಯಾರೇಜುಗಳಾಗಿವೆ, ಅಂದಾಗ ಹಾಡುಗಬ್ಬಗಳ ಸಾಂದ್ರಕೃಷಿಗೆ ನಮಗೆ “ಎದೆಯ ಒಕ್ಕಲಿಗ”ರು ಸಿಕ್ಕಷ್ಟೂ ಕಡಿಮೆ.

ಶ್ರೀರಾಮಚಂದ್ರನ ಇದಿರು ಲವಕುಶರು ರಾಮಾಯಣ ಹಾಡಿದರು. ಆಗ ಒಂದು ಚೋದ್ಯ ನಡೆಯಿತು. ಬಾಲಕರ ಹಾಡು ಮುಂದರಿದಂತೆ ಸಭೆಯೆಲ್ಲ ಚಿತ್ರದಲ್ಲಿ ಕೆತ್ತಿದಂತೆ ತನ್ಮಯ, ಸ್ತಬ್ಧವಾಯಿತು. ಮೌನವಿಸ್ಮಯದಲ್ಲಿ ಶ್ರೀರಾಮನಿಗೆ ತಡೆಯಲಾಗಲಿಲ್ಲ. ಆತನೂ ಮೆಲ್ಲನೆ ಸದ್ದು ಮಾಡದೆ ಗದ್ದುಗೆಯಿಂದ ಎದ್ದು ಇಳಿದು ಬಂದು ಸಭಿಕರಲ್ಲಿ ಹೋಗಿ ಕುಳಿತನಂತೆ. ವಾಲ್ಮೀಕಿ ಬರೆದ ಈ ಭಾಗ್ಯ ನಮ್ಮ ಹಾಡುಗಬ್ಬಗಳ ಹಣೆಯಲ್ಲಿ ಎಂದು ಬರೆದೀತು?

•

# ಆರ್ಕೆಸ್ಟ್ರಾ ಮತ್ತು ತಂಬೂರಿ

ಬ್ರಿಟಿಷರು ನಮ್ಮನ್ನು 250 ವರ್ಷ ಆಳಿದರು. ನಮ್ಮ ಪಾರಂಪರಿಕ ಸಂಸ್ಕೃತಿಯ ಮೇಲೆ ಹಲವು ನಿಟ್ಟಿನಿಂದ, ಹಲವು ಮಟ್ಟದಲ್ಲಿ ಅವರು ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ಬೀರಿದರು. ನಮ್ಮ ವೇಷ-ಭೂಷಣ, ಭಾಷೆ, ಆಚಾರ, ವಿಚಾರ, ಆಟ-ಪಾಠ, ಊಟ, ಆಡಳಿತ, ಸಂಸ್ಥೆ-ಸಂಘಟನೆ ಮುಂತಾದವುಗಳ ಮೇಲೆ ತಮ್ಮ ಜೀವನ ಶೈಲಿಯನ್ನು ಅಚ್ಚೊತ್ತಿದ್ದರು.

ಆದಾಗ್ಯೂ ನಮ್ಮ ಸಂಗೀತವನ್ನು ಭ್ರಷ್ಟ ಮಾಡಲು ಅವರಿಂದ ಆಗಲಿಲ್ಲ. ಮುಸ್ಲಿಂ ಆಳ್ವಿಕೆಯಲ್ಲಿ ಆದರೂ ನಮ್ಮ ಸಂಗೀತದಲ್ಲಿ ಅರಬ್, ಪಾರ್ಸಿ ಸಂಗೀತದ ವರ್ಚಸ್ಸು ಧಾರಾಳವಾಗಿ ಬಿದ್ದಿತ್ತು. ಖಮಜ, ಹಮೀರ, ಪಿಲೂ ಮುಂತಾದ ರಾಗಗಳು, ಕವ್ವಾಲಿ, ಗಝಲ್, ತರಾನಾ, ಖ್ಯಾಲ ಮುಂತಾದ ಪ್ರಾಕಾರಗಳು ಈ ವರ್ಚಸ್ಸಿನ ಫಲಗಳು; ಭಾರತೀಯ ಶಾಸ್ತ್ರೀಯ ಸಂಗೀತದ ಉದ್ದಾಮ ಗಾಯಕರು, ವಾದಕರು, ಪೋಷಕರು ಹೆಚ್ಚಾಗಿ ಶತಮಾನಗಳಿಂದಲೂ ಈ ನಿಷ್ಠಾವಂತ ಉಸ್ತಾದ ದೇಶೀಯರಿದ್ದಾರೆ, ತಾನ್‌ಸೇನ್, ಬೈಜೂಬಾವರ, ಹರಿದಾಸರೇ ಮುಂತಾದ ಹಿಂದೂ ಸಂಗೀತಗಾರರನ್ನು ಬಿಟ್ಟರೆ.

ಪಾಶ್ಚಾತ್ಯ ಸಂಪರ್ಕದಿಂದ ವಿಶೇಷತಃ ದಾಕ್ಷಿಣಾತ್ಯ ಸಂಗೀತದಲ್ಲಿ ಪಿಟೀಲು (Violin) ಭದ್ರವಾಗಿ ನೆಲೆಗೊಂಡಿತು. ಈಚೆಗೆ ಹಾರ್ಪ್, ಗಿಟಾರ್, ಮೆಂಡೋಲಿನ್‌ಗಳು ಸಂಗೀತಗಾರರ ಬಳಕೆಯಲ್ಲಿ ಬಂದಿವೆ. ಇನ್ನು ನಮ್ಮ ಸಮಾರಂಭಗಳ ಗದ್ದಲ ಗೊಂದಲಗಳಿಗೆ ಬಲಿಷ್ಠ ಹಿನ್ನೆಲೆಯಾಗಿ ಬ್ಯಾಂಡ್ ಬಜಾವಣೆ ಹಿಂದಿನಿಂದಲೂ ನಮ್ಮಲ್ಲಿ ರೂಢವಾಗಿದೆ. ಆದರೂ ಭಾರತೀಯ ಮತ್ತು ಐರೋಪ್ಯ ಸಂಗೀತ ಪದ್ಧತಿಗಳನ್ನು ಕಲಬೆರಕೆ ಮಾಡುವವರು, ಪಂಚೆ ಉಟ್ಟು ಹ್ಯಾಟ್ ಧರಿಸಿದಂತೆ; ಮಡಿ ಪೀತಾಂಬರವನ್ನುಟ್ಟು ಸ್ಕೂಟರ್ ಏರಿ ಪೂಜೆಗೆ ಹೋಗುವಂತೆ ಏನೋ ಅಸಂಗತವಾಗಿ ಕಾಣುತ್ತದೆ.

ಇದಕ್ಕೆ ಕಾರಣ ಭಾರತೀಯ ಹಾಗೂ ಪಾಶ್ಚಿಮಾತ್ಯ ಸಂಗೀತ ಪದ್ಧತಿಗಳು ಮೂಲತಃ ತತ್ವದಿಂದಲೂ, ಸತ್ವದಿಂದಲೂ ಬೇರೆ ಬೇರೆ ಆಗಿ ಸಾಗಿ ಬಂದಿವೆ. ಅವರ ಸಿಂಫೋನಿ (Symphony) ಸ್ವಾರಸ್ಯವೇ ಬೇರೆ, ನಮ್ಮ ರಾಗ ತಾಳಗಳ ಸ್ವಾರಸ್ಯವೇ ಬೇರೆ. ನಮ್ಮ ರಾಗಗಳಿಂದ ಕೆಲವೊಂದು ಪ್ರಸಂಗ ವಿಶೇಷಗಳು (Theme) ರೂಪಗೊಳ್ಳುತ್ತವೆ. ತಮ್ಮ ತಮ್ಮ ಮಟ್ಟಿಗೆ ಇವೆರಡೂ ಪದ್ಧತಿಗಳು ಸ್ವಯಂ ಪೂರ್ಣ. ಸ್ವಪರ್ಯಾಪ್ತ ಸಮಾಂತರ ರೇಖೆಗಳ ಮೇಲೆ ಸಾಗುವ ನಾದ ರೂಪಕಗಳು.

ನಮ್ಮ ಸಂಗೀತ ವ್ಯಕ್ತಿ ಪ್ರಧಾನ ಮತ್ತು ರಾಗ ಪ್ರಧಾನ. ಪಾಶ್ಚಾತ್ಯ ಸಂಗೀತ, ವೃಂದ ಪ್ರಧಾನ ಮತ್ತು ಸ್ವರ ಪ್ರಧಾನ. ಈಗಿತ್ತಲಾಗಿ ನಮ್ಮ ಸುಗಮ (ಲಘು) ಸಂಗೀತ, ಭಾವಗೀತ, ರಂಗಗೀತ, ಸಿನಿಮಾ ಸಂಗೀತ ಸ್ವರ ಪ್ರಧಾನವೇ ಆದಂತಿದೆ. ಅದು ಹೊಸತನ ಹೊಸ ಸೋಗಲಾಡಿತನಕ್ಕೆ ನಮ್ಮ ಸಂಗೀತದ ಅಭಿರುಚಿ ತೆರೆದುಕೊಂಡ ಇಂದಿನ ಸರ್ವಸಂಕರ ಯುಗದ ಒಂದು ಧರ್ಮ.

ಭಾರತೀಯ ಸಂಗೀತದ ಸ್ವರೂಪ ಮೆಲೊಡಿ (Melody) ಶೃತಿ ಸ್ವರ ರಚನೆಯ ಇಂಪಾದ ಮಿಲನ. ಪಾಶ್ಚಾತ್ಯ ಸಂಗೀತದ ಸ್ವರೂಪ ಹಾರ್ಮೊನಿ (Harmony) ವಿವಿಧ ಸ್ವರಗಳ ಸಂರಚನೆ-ಶ್ರಾವ್ಯವಾದ ಸಂಕಲನ. ಮೆಲೋಡಿಯಲ್ಲಿ ಕಂಠ ಮಾಧುರ್ಯಕ್ಕೆ ಪ್ರಾಧಾನ್ಯ. ಹಾರ್ಮೋನಿಯಲ್ಲಿ ಸಂವಾದಿ-ವಿವಾದಿ, ಸಮ್ಮಿಶ್ರ ಸ್ವರ ವೃಂದಕ್ಕೆ ಪ್ರಾಮುಖ್ಯತೆ. ನಮ್ಮ ಸಂಗೀತಕ್ಕೆ ಸ್ವರ ಸಪ್ತಕವೇ ಆಧಾರ. ಪಾಶ್ಚಾತ್ಯರಲ್ಲಿ ಅದು ಅಷ್ಟಕ. ಎರಡು ಸ್ವರಗಳ ಗುಂಪು ನಮ್ಮ ಸಂಗೀತ, ಜನ್ಯ ಜನಕ ರಾಗಗಳಲ್ಲಿ ರೂಪುಗೊಳ್ಳುತ್ತದೆ. 5-6-7 ಸ್ವರಗಳ ಗುಂಪಿನಿಂದ ಒಂದು ರಾಗ ಸಿದ್ಧವಾಗುತ್ತದೆ. ಪಾಶ್ಚಾತ್ಯ ಸಂಗೀತದ ಜೀವ ಘಟಕ ಕಾರ್ಡ್ (Chord) ಕೂಡಿಯೇ ನುಡಿಸುವ ಒಂದಕ್ಕಿಂತ ಹೆಚ್ಚು ಸ್ವರಗಳ ಗುಂಪು ಮತ್ತು ಅವುಗಳಿಂದ ಸಮ್ಮಿಶ್ರವಾಗಿ ಒಡಮೂಡುವ ಹಾರ್ಮನಿ.

ನಮ್ಮ ಸ್ವರ ವಿಭಜನೆ ಶ್ರುತಿ ಪ್ರಧಾನ. ಒಂದು ಆಧಾರ ಶ್ರುತಿ (Key Note)ಗೆ ಹೊಂದಿಕೊಂಡು ಅದರ ಸರಣಿ. ಇದಕ್ಕೆ ಮೂರು ಗ್ರಾಮಗಳಲ್ಲಿ ಸಂಚಾರ-ಮಂದ, ಮಧ್ಯ ಮತ್ತು ತಾರ. ಪಾಶ್ಚಾತ್ಯ ಸ್ವರ ವಿಂಗಡಣೆ ಅದರ ಉಚ್ಚ, ನಿಮ್ನ ಮಟ್ಟಗಳಿಂದ, ಮೇಜರ್ ಟೋನ್, ಮಾಯ್ನರ್ ಟೋನ್, ಸೆಮಿ ಟೋನ್, ಡಾಯ್ ಟೋನ್ ಇತ್ಯಾದಿ. ನಮ್ಮಲ್ಲಿ ಸ್ವರಗಳು ಶುದ್ಧ, ತೀವ್ರ ಮತ್ತು ಕೋಮಲವೆಂಬ ಭೇದವುಳ್ಳವು. ಶುದ್ಧ ಸ್ವರಗಳು (ಸ ಮತ್ತು ಪ - ಷಡ್ಜ ಮತ್ತು ಪಂಚಮ) ಒಂದೊಂದೆ. ಉಳಿದ ಐದು ಸ್ವರಗಳಿಗೆ ತೀವ್ರ ಕೋಮಲಗಳೆಂಬ

ಎರಡು ಪರ್ಯಾಯಗಳು.

ಮೇಲೆ ಹೇಳಿದ ಸ್ವರಗುಚ್ಛ (Chord)ಗಳ ಸಂರಚನೆಯಿಂದ ಆರ್ಕೆಸ್ಟ್ರಾದ ಸಂಘಟನೆ (Orchestration) ಆಗುತ್ತದೆ. ಅದು, ಕಲೆಯೂ ಸರಿ. ಶಾಸ್ತ್ರವೂ ಸರಿ - ಪಾಕಶಾಸ್ತ್ರದಂತೆ; ಎಲ್ಲ ಸ್ವರ ಮೇಳಗಳನ್ನು ಜೋಡಿಸುವುದು ಈ ಸಂಯೋಜನೆ (Combination) ಆರ್ಕೆಸ್ಟ್ರೀಕರಣದ ಮರ್ಮ. ವಿವಿಧ Chords ಗಳಂತೆಯೇ ಅದನ್ನು ಮೂಡಿಸುವ ವಿವಿಧ ವಾದ್ಯವೃಂದವೂ ಸರಿಯಾಗಿ ಹೊಂದಿಕೆಯಾಗಬೇಕು. ಇಂಥ ವಾದ್ಯವೃಂದ ಇಂತಿಷ್ಟೇ ದೊಡ್ಡದಿರಬೇಕೆಂತಿಲ್ಲ. ದೊಡ್ಡವಿದ್ದಷ್ಟೂ ಅವುಗಳ ನಾದಘೋಷ ದೊಡ್ಡದು.

ಇಂಥ ಆರ್ಕೆಸ್ಟ್ರಾ ಅಂದರೆ ಗಾಯಕರ ಕಂಠವನ್ನು ರಾಗಾಲಾಪನೆಯನ್ನು ಅನುಕರಿಸುವ ಸಾಥಿ ಅಲ್ಲ. ನಮ್ಮಲ್ಲಿ ಕಲಾವಿದ(ದೆ) ಕೈಯಲ್ಲಿ ಮೈಕ್ ಹಿಡಿದು ಹಾಡುವಾಗ ಅವರ ಬೆನ್ನಿಗೆ ಹತ್ತಿಪ್ಪತ್ತು ವಾದ್ಯಗಳ ಮೇಳವಿರುತ್ತದೆ. ನಮ್ಮಲ್ಲಿ ಆರ್ಕೆಸ್ಟ್ರಾ ಅಂದರೆ ಇಂಥ ಸಮೂಹ ವಾದನ. ನಡುನಡುವೆ ಒಂದೊಂದೇ ವಾದ್ಯಗಾರ ಮುಂದಾಗಿ ತನ್ನ ವಾದನ ಪ್ರಾವೀಣ್ಯವನ್ನು ಪ್ರದರ್ಶಿಸುವುದು. ಆಮೇಲೆ ಒಟ್ಟಾಗಿ ಹಾಡಿನ ಜಾಡನ್ನು ಹಿಡಿದು ಸಾಥಿ ಮಾಡುವುದು. ನಮ್ಮ ಪ್ರಾಚೀನ ಶಿಲ್ಪದಲ್ಲಿಯೂ ಇಂಥ ವಾದಕವೃಂದದ ಆಕೃತಿಗಳು ಕಾಣಸಿಗುತ್ತವೆ. ಇವೆಲ್ಲ ಬಿಡಿಯಾಗಿಯೋ, ಒಟ್ಟಾಗಿಯೋ ಪಕ್ಕವಾದ್ಯ (ಮೃದಂಗದಂಥ ಒಂದು ವಾದ್ಯಕ್ಕೆ ಮಹಾರಾಷ್ಟ್ರದಲ್ಲಿ ಪಕ್ವಾಜ ಎಂದೇ ಹೆಸರಿದೆ.) ಇದು ಆಧುನಿಕ ರೂಪದ ಆರ್ಕೆಸ್ಟ್ರಾ ಅಲ್ಲ.

ಆದರೆ ಕಳೆದ ಕಾಲು ಶತಮಾನದಲ್ಲಿ ನಮ್ಮ ಸಂಗೀತಕ್ಕೆ ಪೂರಕವಾಗಿಯೋ ಪ್ರತ್ಯೇಕವಾಗಿಯೋ ಆರ್ಕೆಸ್ಟ್ರಾ ಹಿಂಬಾಗಿಲಿನಿಂದ ಪ್ರವೇಶ ಮಾಡಿದೆ, ತಳವೂರಿದೆ. ನಮ್ಮ ಸಿನೇ ಸಂಗೀತ ದಿಗ್ದರ್ಶಕರೂ, ಪಂಡಿತ ರವಿಶಂಕರರಂಥ ಶ್ರೇಷ್ಠ ಸಂಗೀತಜ್ಞರೂ ಭಾರತೀಯ ರಾಗಗಳ ಸ್ವರ ರಚನೆಗಳನ್ನು ಆರ್ಕೆಸ್ಟ್ರಾ ರೂಪದಲ್ಲಿ ಯಶಸ್ವಿಯಾಗಿ ಪ್ರಯೋಗಿಸಿದ್ದಾರೆ. ನಮ್ಮಲ್ಲಿ ಆರ್ಕೆಸ್ಟ್ರಾ ಕಲಾವಿದನ ಹಾಡಿಕೆಗೆ ಒಂದು ಕುಂದಣ ಪ್ರಭಾವಳಿಯಂತೆ. ಆದರೂ ಈಚೆಗೆ ಹೀಗೆ ಭಾರತೀಕರಣ ಮಾಡದೇ ಇದ್ದಕ್ಕಿದ್ದಂತೆ ಪಾಶ್ಚಾತ್ಯ ಆರ್ಕೆಸ್ಟ್ರಾದ ಖಂಡಗಳನ್ನು ನಮ್ಮ ಸಂಗೀತದಲ್ಲಿ ಸೇರಿಸಿ, ಮೃದು ಮಧುರ ಝೇಂಕಾರದ ಬದಲು ಕರ್ಣಕರ್ಕಶ ಚೀತ್ಕಾರ, ಅರ್ಭಟಗಳನ್ನು, ಅಸಹ್ಯ ಕೋಲಾಹಲವನ್ನು ಉಂಟುಮಾಡುವುದರಲ್ಲಿ ಕೆಲವು ಸಂಗೀತ ದಿಗ್ದರ್ಶಕರು ಯಶಸ್ವಿಯಾಗಿದ್ದಾರೆ. ಇಂಥ ನಿರ್ದೇಶಕರಿಗೆ ಔಚಿತ್ಯಪ್ರಜ್ಞೆ ಇರುವುದು ಕಡಿಮೆ. ಉತ್ತಾನ, ಉದ್ರೇಕ, ಕೆರಳಿಸುವ ನಾದ ಕೋಲಾಹಲ ಅದಕ್ಕೆ ತಕ್ಕ ಉದ್ದೀಪಕ ಮದ್ದಳೆ ಗದ್ದಲ ಆಫ್ರಿಕನ್, ಝಾಜ್ (Jazz) ದಂಥ ಆರ್ಭಟ, ಉತ್ತೇಜಕ, ತಾಳ-ಲಯಗಳ ಸಂಗೀತದ ನಾವೀನ್ಯವೇ ಲಾವಣ್ಯವೆಂಬ ಒಂದು ಅಪಭ್ರಂಶ ತಿಳುವಳಿಕೆ ಇದಕ್ಕೆಲ್ಲ ಕಾರಣವಿರಬಹುದು.

* * *

ಇಂದು ಪ್ರಪಂಚದಲ್ಲಿ ಆರ್ಕೆಸ್ಟ್ರಾ ಬಿಟ್ಟರೆ ಸಂಗೀತವೇ ಇಲ್ಲ. ಭಾರತೀಯ ಶಾಸ್ತ್ರೀಯ ಸಂಗೀತವೇ ಒಂದು ವಿಶಿಷ್ಟ ಪದ್ಧತಿ. ಇದಕ್ಕೆ ಆರ್ಕೆಸ್ಟ್ರಾ ಬೇಕಿಲ್ಲ. ಇದು ಕೇವಲ ಮೆಲಡಿ, ಹಾರ್ಮೊನಿ ಅಲ್ಲ - ಎಂದೆಲ್ಲ ನಾವು ಹೇಳುತ್ತೇವೆ. ಇದು ಬರೀ ಬೊಗಳೆಯೇ ಅಲ್ಲ. ಆದರೆ

ಇದು ಪೂರ್ತಿ ನಿಜವೂ ಅಲ್ಲ!

ಹಾರ್ಮನಿಯ ಪದ್ಧತಿಯಲ್ಲಿ ಸ್ವರಗಳ ನಿಶ್ಚಿತೀಕರಣ ಅತ್ಯಗತ್ಯ. ನಮ್ಮ ಸಂಗೀತದಲ್ಲಿ ಒಂದು ರಾಗದ ವಿಶಿಷ್ಟ ಸ್ವರಗಳ ಮಟ್ಟಿಗೆ ಬಂಧನ ಅವಶ್ಯವಿದ್ದರೂ ಆ ಬಂಧನದೊಳಗೆ ಕಲಾವಿದನ ರಾಗಾಲಾಪನೆಗೆ ಸ್ವರಗಳ ವಿಲಂಬನ-ವಿಸ್ತಾರಕ್ಕೆ ಕಲ್ಪನಾ ಸಂಗೀತ ರೂಪಕಕ್ಕೆ (Improvisation) ತಾಳದ ಮಿತಿಯೊಳಗೆ ತುಂಬ ಹಾಗೂ ಸ್ವರವಿಕಾಸಾವಕಾಶವಿತ್ತದೆ.

ಆರ್ಕೆಸ್ಟ್ರಾದಲ್ಲಿ ಕಾರ್ಡ್ (Chord) ಸ್ವರ ರಚನೆಯ ಘಟಕ. ಅದರಲ್ಲಿಯ 2-3 ಸ್ವರಗಳು ಸಂವಾದಿಯಾಗಿಯೇ ಇರಬೇಕೆಂದಿಲ್ಲ. (ಸ-ಗ-ಪ, ಇದೊಂದು ಕಾರ್ಡ್, ಆದರೆ ಇದರಲ್ಲಿ ಸ-ಗ ಗಳು ಸಂವಾಗಿಯಾಗುವುದಿಲ್ಲ.) ಆದರೆ ಹಾರ್ಮನಿಯಲ್ಲಿ ವಿವಾದಿ ಸ್ವರಗಳಿಗೂ ಸ್ಥಾನವಿರುತ್ತದೆ. ನಮ್ಮ ಸಂಗೀತದಲ್ಲಿಯಾದರೋ ಕಲಾವಿದನ ದನಿಗೆ ಪುಷ್ಟಿ ಕೊಡಲು ಅದರೊಂದಿಗೆ ಸೇರಿ ಸ್ಪಷ್ಟತೆಯನ್ನು ಸತತವಾಗಿ ಕಾಪಾಡಿಕೊಳ್ಳಲು ತಂಬೂರಿ (ತಾನ-ಪೂರಾ?-) ಅವರ ಕಿವಿಯ ಬಳಿ ಮೊರೆಯುತ್ತಲೇ ಬರುತ್ತದೆ. ಈ ತಂಬೂರಿಯ ಶ್ರುತಿ ಗಾಯಕನಿಗೆ, ತನ್ನ ಸಮ್ಮಿಶ್ರ ಸ್ವರಗಳು ಕಂಠ ಧ್ವನಿಯೊಂದಿಗೆ ಬೆರೆಯುವಾಗ, ಅಭಾವಿತವಾಗಿಯೇ Chord ನಿರ್ಮಾಣ ಮಾಡುತ್ತದೆ. ಆದ್ದರಿಂದಲೇ ಸ್ವರಸಮೃದ್ಧಿ ಸಂಪನ್ನವಾಗುತ್ತದೆ. ನಿರಂತರವಾದ ಷಡ್ಜ - ಪಂಚಮಗಳ ಪೂರೈಕೆಯಿಂದ ಹಾಡುಗಾರನಿಗೆ ಸಪ್ತಕದ ಯಾವುದೇ ಸ್ವರದ ಎತ್ತರವನ್ನು ಸತತವಾಗಿ ಕಾಪಾಡಿಕೊಳ್ಳಲು ಸಾಧ್ಯವಾಗುತ್ತದೆ.

ತಂಬೂರಿಯ ಒಂದು ತಂತಿ ಮಧ್ಯ ಸಪ್ತಕದ ಪಂಚಮವನ್ನು, ನಡುವಿನ ಎರಡು ತಂತಿಗಳು ಅದೇ ಸಪ್ತಕದ ಷಡ್ಜವನ್ನು ಕೊನೆಯ (ನಾಲ್ಕನೆಯ) ತಂತಿ ಮಂದ್ರ ಸಪ್ತಕದಷಡ್ಜ - ಈ ಕ್ರಮದಲ್ಲಿ ಜೋಡಿಸಲಾಗುತ್ತದೆ. (ಪಂಚಮವೇ ವರ್ಜ್ಯವಿರುವ ರಾಗಗಳಿಗಾಗಿ ಪಂಚಮದ ತಂತಿ ಮಧ್ಯಮಕ್ಕೆ ಹಚ್ಚಲಾಗುತ್ತದೆ) ನಮ್ಮ ಸಂಗೀತ ಪದ್ಧತಿಯಲ್ಲಿ ಷಡ್ಜ-ಪಂಚಮಗಳೆರಡು ಶುದ್ಧ-ಅಚಲ. ಅವುಗಳಿಗೆ ತೀವ್ರ ಕೋಮಲಗಳೆಂಬ ಪರ್ಯಾಯಗಳಿಲ್ಲ. ಸಪ್ತಕದಲ್ಲಿ ಪ್ರತಿಯೊಂದು ಸ್ವರವೂ ಇನ್ನೊಂದು ಸ್ವರದೊಂದಿಗೆ ಷಡ್ಜ - ಪಂಚಮ, ಇಲ್ಲವೇ ಷಡ್ಜ - ಮಧ್ಯಮ ಈ ಸಂವಾದದಿಂದ ಸಂಬದ್ಧವಾಗಿರುತ್ತದೆ. ಈ ಸ್ವರ ಸಂವಾದಕ್ಕೆ ವಿಶೇಷ ಮಹತ್ವವಿದೆ.

ಗಾಯಕನಿಗೆ ಸ್ವರಗಳ ಆಧಾರಪೂರಕವಾಗಿ ಸಿಗಬೇಕೆಂಬುದು ಪ್ರಾಚೀನ ಸಾಮಗಾನದ ಕಾಲದಿಂದಲೂ ಕಡ್ಡಾಯವಾಗಿದೆ. ಆಗ ಮುಖ್ಯ ಗಾಯಕನಿಗೆ ಇಬ್ಬರು ಜೊತೆಗಾರರಿರುತ್ತಿದ್ದರು. ಮುಂದೆ ಆ ಇಬ್ಬರ ಸ್ಥಾನವನ್ನು ತಂಬೂರಿ ಆಕ್ರಮಿಸಿತು. ಇಂದಿಗೂ ಎರಡು ತಂಬೂರಿಗಳು ಮಸ್ತ ಆಗಿ ಗಾಯಕನಿಗೆ ದನಿಗೂಡಿದರೆ, ಗಾಯಕ ಅದರೊಂದಿಗೆ ತಾದಾತ್ಮ್ಯ ಹೊಂದಿ ಶ್ರೋತೃ ಸಮುದಾಯವೂ ಆ ನಾದತ್ವ ತಂಡದಲ್ಲಿ ತನ್ಮಯವಾಗುತ್ತದೆ. ಹೀಗೆ ಆರ್ಕೆಸ್ಟ್ರಾದ ಹಾರ್ಮನಿಯ Chord ವನ್ನು ತಂಬೂರಿಯ ಸ್ವರಪುಂಜ ಹೋಲುತ್ತದೆ.

ಇಲ್ಲಿ ಒಂದು ಮೋಜಿನ ಸಂಗತಿಯೆಂದರೆ ಆರ್ಕೆಸ್ಟ್ರಾ ಅಂದರೆ ವೃಂದವಾದನ ಅಥವಾ ಹಾರ್ಮನಿ ಅಲ್ಲ. ಆರ್ಕೆಸ್ಟ್ರಾ (Orchestra) ಅಂದರೆ ರಂಗಮಂಚದ ಇದುರಿನ ವಾದ್ಯವೃಂದಕ್ಕಾಗಿ ವೃಂದಗಾನ (Chorus) ಮೀಸಲಾದ ಕಲಾವಿದರು ಕೂಡಬೇಕಾದ ಸ್ಥಳ. ಕ್ರಮೇಣ ಆ ಕಲಾವಿದರ

ಗುಂಪಿಗೆ ಅವರ ಕಲಾಕೃತಿಗೆ ಆ ಹೆಸರು ಸಂದಿತು. ಮೂಲದಲ್ಲಿ ಇದು ನೃತ್ಯ ಪ್ರದರ್ಶನಕ್ಕೆ ಹೊಂದಿಕೊಂಡ ವೃಂದವಾದನ ಇಲ್ಲವೇ ಗಾಯನ.

ಈ ಶಬ್ದದ ಗ್ರೀಕ್ ಮೂಲ Orkheoman ಅಂದರೆ ನೃತ್ಯ.

ಈ ಹಾರ್ಮನಿ ಇಲ್ಲವೇ ಸ್ವರ ಸಾಮರಸ್ಯ ಸಾಧಿಸದಿದ್ದರೆ, ಆಗ ಅಂಬಿಕಾತನಯದತ್ತರು ತಮ್ಮ ಶಾಂತಿ ಕವನದಲ್ಲಿ ಚಿತ್ರಿಸಿದ ಅವಸ್ಥೆ ನಮ್ಮದಾಗುತ್ತದೆ:-

ತಂಬೂರಿ ತುಂಬೆಲ್ಲ
ಕೇಸರ ಬಾಸರ
ಬೇಸರ ಬಂದೈತಿ
ಆಸರ ಈಸರ
ತಲೆಗೊಂದು ತರ ತರ
ಬಾಯ್ಬಿಡತಾವ ತಂತಿ;
- ಎಂದು ಶಾಂತಿಗೆ ಗೊಣಗುತ್ತಾರೆ-
ಹೋದಲ್ಲೇ, ನೀನಿಂತಿ;

# 'ಕಲೌತತ್ ಹರಿಕೀರ್ತನಂ'

" ಮೀ ಕೇಸರೀ ಚಾ ಸಂಪಾದಕ ನಸತೋತರ ಕೀರ್ತನಕಾರ ಝಾಲೋ ಅಸತಾ" ಅಂದಿದ್ದರು ಲೋಕಮಾನ್ಯತಿಲಕರು ಒಂದು ಸಂದರ್ಭದಲ್ಲಿ. ಈ ಒಂದು ಮಾತಿನಲ್ಲಿ ಹರಿಕೀರ್ತನೆಯ ಮಹತ್ವ ಮತ್ತು ಜೀವಾಳದ ಮೌಲ್ಯ ವ್ಯಕ್ತವಾಗಿದೆ, ಲೋಕ ಜಾಗೃತಿಯ ಅನನ್ಯ ಸಾಧನೆಗಾಗಿ, ಹೃದಯ ಸಂಸ್ಕಾರಕ್ಕೆ ಸಾಧಕವಾಗಿ, ತತ್ವ, ಧರ್ಮ, ನೀತಿ ಲೌಕಿಕ ವ್ಯವಹಾರ ಇತ್ಯಾದಿ ನಮ್ಮ ಬದುಕಿನ ಹಿತಕ್ಕೂ ಸುಖಕ್ಕೂ ಸ್ವಾಸ್ಥ್ಯಕ್ಕೂ ಅಗತ್ಯವಾದ ವಿಚಾರಗಳ ಪ್ರಚಾರಕ್ಕಾಗಿ ಮನಃಶಾಂತಿ ಮನಃಶುದ್ಧಿಗಳಿಂದ ಬರಬಹುದಾದ ಸತ್ವಸಿದ್ಧಿಗಾಗಿ ಸುಗಮವೂ ಸುಂದರವೂ ಸಾರ್ವಜನಿಕ ಮೆಚ್ಚುಗೆಯ ಪ್ರಭಾವಿಯಾದ ಅಷ್ಟೇ ಪ್ರಚುರವಾದ ಭಾವ ಬೋಧನೆಯ ಮಾರ್ಗವು ಬೇರೊಂದಿಲ್ಲ.

ಭಾಷ್ಯವು ಬೋರು. ವ್ಯಾಖ್ಯಾನವು ವಾಗಾಡಂಬರ, ಭಜನೆ ಯಾಂತ್ರಿಕ. ಸಂವಾದ ಒಣಚರ್ಚೆ ಆಗಿ ಮುಗಿಯುವ ಇಂದಿನ ಪ್ರಪಂಚದಲ್ಲಿ ಪಟ್ನ ಪಟ್ಟಣಗಳಲ್ಲಿಯೂ ಹರಿಕೀರ್ತನೆ ಅಥವಾ "ಕಥಾ ಕಾಲಕ್ಷೇಪ"ವೆಂಬ ರೋಚಕವೂ ರಂಜಕವೂ ಆದ ವಾಗ್ವಿಲಾಸವು ಇಂದಿನ ರೇಡಿಯೋ, ಟಿ.ವಿ. ಕ್ಯಾಸೆಟ್ ಮುಂತಾದ ಸಮೂಹ ಮಾಧ್ಯಮಗಳ ಜಾಲದಲ್ಲಿಯೂ ತನ್ನ ವೈಶಿಷ್ಟ್ಯವನ್ನೂ ಸತ್ವವನ್ನೂ ಚಿತ್ತಾಕರ್ಷಣೆಯ ಶಕ್ತಿಯನ್ನೂ ಉಳಿಸಿಕೊಂಡು ಬಂದಿದೆ. ಅದನ್ನು ಬೆಳೆಸಿಕೊಳ್ಳಬೇಕಾಗಿದೆ.

ಆಕಾಶವಾಣಿ ದೂರದರ್ಶನ ಕ್ಯಾಸೆಟ್ ಬಿತ್ತರಣೆ ಇವುಗಳಿಂದ ಪ್ರಚಂಡ ಜನ ಸಮುದಾಯಗಳನ್ನು ದೇಶದಾದ್ಯಂತ ಒಮ್ಮೆಲೇ ನಿಲುಕಬಹುದು ನಿಜ. ಆದರೆ ಅದರಲ್ಲಿ ಮಾತುಗಾರನ ಧ್ವನಿಯೊಂದೇ ಅಶರೀರವಾಣಿಯಂತೆ ಕೆಲಸ ಮಾಡುವುದು. ಕೇಳುಗರಿಗೂ ಹೇಳುವವನಿಗೂ ಒಂದು ಜೀವಂತ ಸಂಪರ್ಕದ ಸಾನ್ನಿಧ್ಯದ ಸಾಧ್ಯತೆ ಇರುವುದಿಲ್ಲ.

ಆದರೆ ಹರಿಕೀರ್ತನೆಯ ಕಥಾಪ್ರಸಂಗದಲ್ಲಿ ಹಾಗಾಗುವುದಿಲ್ಲ. ಕೀರ್ತನಕಾರನ ಹರಿದಾಸನ

ವ್ಯಕ್ತಿತ್ವದ ಒಂದು ಪ್ರಬಲ ಪ್ರಭಾವವು ಇಲ್ಲಿ ಸೂಕ್ಷ್ಮವಾಗಿ ಕೆಲಸಮಾಡುತ್ತಿರುತ್ತದೆ. ಒಂದು ಉತ್ತಮ ವ್ಯಕ್ತಿ ಚಿತ್ರವನ್ನು ನಾವು ಎಲ್ಲಿ ನಿಂತು ನೋಡಿದರೂ ಅವರ ಕಣ್ಣು ನಮ್ಮನ್ನು ದಿಟ್ಟಿಸುವಂತೆ ತೋರುವುದಿಲ್ಲವೇ? ಅದೇ ಅನುಭವ, ಅಭಿನಯ ಹಾಡು, ಮಾತು, ಹಾಸ್ಯ ವಿನೋದಗಳಿಂದ ನಮ್ಮ ಇದಿರು ನಡೆದಾಡುವ ಹರಿದಾಸರ ಮೂಲಕ ನಮಗೆ ಆಗುತದೆ. ಇದೊಂದು Personal magnetism ದ ಪ್ರಭಾವ. ಆಬಾಲ, ವೃದ್ಧರಿಂದ ಪಂಡಿತ ಪಾಮರರವರೆಗೂ ಹರಿಕಥಾ ಕಾಲಕ್ಷೇಪವು ಕೇಳಲು ಕೋಪವೆನಿಸದೆ ಅದೊಂದು ಅಪರೋಕ್ಷಾನುಭೂತಿಯ ನಿಕ್ಷೇಪವಾಗಿ ಪರಿಣಮಿಸುತ್ತದೆ. ನನ್ನ ಪಾಲಿಗಂತೂ ಬೇಲೂರ ಕೇಶವದಾಸ, ಸಂತ ಭದ್ರಗಿರಿ ಕೇಶವದಾಸ, ಅಚ್ಯುತದಾಸರಂಥ ಕೆಲವು ಹರಿದಾಸರ ಪರಿಣಾಮ ಇಂತಹದೇ ಆಗಿದೆ. ಕಾಳಿದಾಸನು ನಾಟ್ಯದ ಕುರಿತು ಹೇಳಿದ "ತ್ರೈಗುಣ್ಯೋದ್ಭವಂ ಅತ್ರಲೋಕಚರಿತಂ ನಾನಾವಿಧಂ ದೃಶ್ಯತೆ" ಆದ್ದರಿಂದ ಇದು "ಭಿನ್ನರುಚೇಃ ಜನಸ್ಯ ಬಹುಧಾ ಅಪಿ ಏಕಂ ಸಮಾರಾಧನಂ" ಎಂಬುದು ಹರಿಕೀರ್ತನೆಗೆ ಮೂಲತಃ ಸಮರ್ಪಕವಾಗಿ ಅನ್ವಯಿಸುವಂತಿದೆ.

ನಿಜವಾಗಿಯೂ ಕೀರ್ತನಕಾರನು ಯಶಸ್ವಿಯಾಗಬೇಕಾದರೆ ಅವನು ಬಹುಮಟ್ಟಿಗೆ "ಬಹುರೂಪಿ"ಯಾಗಿರಬೇಕು. ಏಕಪಾತ್ರಾಭಿನಯವು ಅವನಲ್ಲಿ ಒಡೆದೆದ್ದು ಕಾಣುವಂತೆ ಇರಬೇಕು. ಉದಾತ್ತ, ಉದ್ದಟ ಇತ್ಯಾದಿ ಧೀರನಾಯಕನ ಗುಣಗಳೊಂದಿಗೆ ಸಾಮಾನ್ಯ ಜಾನಪದ ಪಾತ್ರಗಳ ಗುಣಚರ್ಯೆಗಳನ್ನು ನಡೆನುಡಿ ನಿಲುವು ನೋಟಗಳಲ್ಲಿ ವ್ಯಕ್ತಪಡಿಸುವ ನಾಟ್ಯಸತ್ವ ಅವನಲ್ಲಿ (ಅವಳಲ್ಲಿ) ಧಾರಾಳವಾಗಿ ಇರಬೇಕು. ಹೆಣ್ಣು ಗಂಡು, ಲಲಿತ ಗಂಭೀರ ವಿವಿಧ ಭಾವಗಳನ್ನು ಆತ(ಆಕೆ) ಲೀಲೆಯಿಂದ ಪ್ರಕಾಶಿಸಿದರೇನೇ ಕಥಾವಸ್ತುವಿಗೆ ಕಳೆ ತುಂಬಿ ಕಥೆಯಲ್ಲಿ ಬರುವ ಪಾತ್ರಗಳು ಜೀವಂತವಾಗಿ ಆಖ್ಯಾನವು ಚಿತ್ತಾಕರ್ಷಕವಾಗುವುದು. ಬೋಧನೆಯೊಂದಿಗೆ ರಂಜನೆಯನ್ನು ಹಾಲಲ್ಲಿ ಸಕ್ಕರೆ ಬೆರೆಯುವಂತೆ ಸೇರಿಸಿ, ಸಾಂಪ್ರದಾಯಿಕ ವಿಚಾರಧಾರೆಯೊಂದಿಗೆ ಆಧುನಿಕರ ಜ್ಞೇಯ ಬಹುಶ್ರುತ ಪಾಂಡಿತ್ಯವನ್ನೂ ಲೋಕಾನುಭವಗಳನ್ನೂ ಹಿತಮಿತವಾಗಿ ಬೆರೆಸಿ ಸಾಹಿತ್ಯ ಲಾಲಿತ್ಯಗಳ ಸಮನ್ವಯವನ್ನು ಸಾಧಿಸುವ ಪ್ರಭುದತ್ತೆ, ಪ್ರವಾಹಿ ಭಾಷಾಪ್ರಭುತ್ವ, ಪ್ರಸನ್ನ ವ್ಯಕ್ತಿತ್ವವನ್ನು ಕೀರ್ತನಕಾರನು ಸತತ ಪರಿಶ್ರಮದಿಂದ ರೂಪಿಸಿಕೊಳ್ಳಬೇಕು. ಹಿಂದಿಗಿಂತ ಇಂದಿನ ಸಭಿಕರು ಶ್ರಾವಕರು. ಹಳ್ಳಿಯವರಿರಲಿ, ಪಟ್ಟಣಿಗರಿರಲಿ,-ಹೆಚ್ಚು Sophisticated (ಪ್ರಗಲ್ಭ) ಮತ್ತು ವಿಚಕ್ಷಣರಾಗಿರುತ್ತಾರೆ, ತನ್ನ ಶ್ರಾವಕ ಸಮುದಾಯವನ್ನು ಹರಿದಾಸನು ಅವಮೂಲ್ಯನಕ್ಕೆ ಗುರಿಮಾಡುವಂತಿಲ್ಲ.

ಆದ್ದರಿಂದ ಕೀರ್ತನಕಾರನಿಗೆ ಎಂದಿಗಿಂತ ಇಂದ್ದು ಪ್ರತ್ಯುತ್ಪನ್ನ ಮತಿ (Ready wit) ಮತ್ತು ಪ್ರಸಂಗಾವಧಾನ ಅತ್ಯಗತ್ಯ. ಹಳೆಯ ರೂಪಕವನ್ನು ಹೊಸ ಸೀಸೆಗಳಲ್ಲಿ ಹೊಸ ಪ್ಯಾಕಿಂಗ್‌ನಲ್ಲಿ ಆತ (ಆಕೆ) ಪೂರೈಸಬೇಕಾಗುತ್ತದೆ. ಹಾಗೆಯೇ ಹೊಸದನ್ನು ಹಳೆಯದೊಂದಿಗೆ ಹೊಂದಿಸಿ ಹೇಳಬೇಕಾಗುತ್ತದೆ. ಕಾಳಿದಾಸ ಹೇಳಿದಂತೆ "ಪುರಾಣಂ ಇತಿ ಏವ ನಸಾಧು ಸರ್ವಂ। ನಚ ಅಪಿನೂತಂ ನವಭೂತಿ ಅವಜ್ಞಂ॥" ಎಂಬ ಎಚ್ಚರ ಕೀರ್ತನಕಾರನು ನಿರಂತರವಾಗಿ ನೆನಪಿನಲ್ಲಿಡಬೇಕು. ಕಥಾಕಾಲಕ್ಷೇಪದಲ್ಲಿ ಸಭಿಕರ ಚಿತ್ತವನ್ನು ಸೆರೆಹಿಡಿದಿಡುವ ಚಾತುರ್ಯ ಚಾಕಚಕ್ಯತೆ ಹರಿದಾಸರಲ್ಲಿ ಜಾಗೃತವಾಗಿರಬೇಕು. ಒಂದು ನಿಮಿಷವೂ ನೀರಸ, ಬೋರು ಆಗಗೊಡಬಾರದು. ಹಾಡುಗಾರಿಕೆ, ಧ್ವನಿಯ ಏರಿಳಿತ, ಭಾವಾಭಿನಯ, ಅಸ್ಖಲಿತ ವಾಣಿ, ಕಥನ ನಿರೂಪಣೆಗಳಲ್ಲಿ

ಪ್ರತಿಪಾದನೆಯ ಪಟುತ್ವ, ಕಥೆಯ ಪಾತ್ರ, ಪ್ರಸಂಗಗಳಲ್ಲಿ ಯೋಗ್ಯ ತನ್ಮಯತೆ, ಜತೆಗೆ ಸಭೆಯ ನಾಡಿಮಿಡಿತದ ಹಿಡಿತಕ್ಕಾಗಿ ತಕ್ಕ ತಾಟಸ್ಥ್ಯ. ಇವೆಲ್ಲ ಗುಣಗಳನ್ನು ಕೀರ್ತನ ಕಲಾವಿದನು ಸಾವಧಾನವಾಗಿ ತನ್ನದಾಗಿ ಮಾಡಿಕೊಳ್ಳಬೇಕು.

ಇದೊಂದು ರಂಗಪ್ರದರ್ಶನದಂತೆಯೇ ಒಂದು ಕಲೆ - ಅದು ಬಹು ಮುಖ್ಯವಾದ ಕಲೆ. ಇತರ ಕಲೆಗಳಂತೆ ಕೀರ್ತನ ಕಲೆಯೂ ಕ್ರಮೇಣ ವಿಕಾಸಗೊಂಡು ಬಂದಿದೆ. ಈ ವಿಕಾಸವು ಸ್ಥೂಲವಾಗಿ ಎರಡು, ಒಂದು ನಿರೂಪಣೆ. ಇನ್ನೊಂದು ಹರಿಕಥೆ. ನಿರೂಪಣೆ ಕೀರ್ತನೆಯ ಆರಂಭಿಕ ಸ್ವರೂಪ. ಮೂಲತಃ ಸಾಧು ಸಂತರು, ಹರಿಭಕ್ತರು, ದಾಸರು ನಾಮಸಂಕೀರ್ತನೆಯಲ್ಲಿ ತಲ್ಲೀನರಾಗಿ ಕುಣಿದಾಡುತ್ತಿದ್ದರು. ಕೀರ್ತಿಸು ಅಂದರೆ ಗುಣಗಳನ್ನು ಕೊಂಡಾಡುವುದು. ಇದರೊಳಗಿಂದ ದೇವರ ನಾಮಗಳನ್ನು ಎತ್ತಿ ಹಾಡುತ್ತಾ ಅವುಗಳ ವಿವರಣೆ ವ್ಯಾಖ್ಯಾ, ಆರಂಭವಾಯಿತು. ನಾಮದೇವ, ತುಕಾರಾಮ, ಪುರಂದರ, ಕನಕರಂತಹ ಸಂತರು ತಮ್ಮ ಕೃತಿಗಳ ನುಡಿಗಳನ್ನು ಎತ್ತಿಹಾಡಿ ಅದನ್ನು ಸೂತ್ರವಾಗಿ ಇಟ್ಟುಕೊಂಡು ಸ್ವಾರಸ್ಯವಾಗಿ ದೇವರ ಭಜನೆಗಳ ಲೀಲೆಗಳ ವಿವಿಧ ಕಥೆಗಳನ್ನು ಉದಾಹರಿಸಿ, ತಮ್ಮ ಪ್ರತಿಪಾದನೆಗೆ ಪೋಷಕವಾದ ಇವರ ಭಕ್ತಿ ಭಜನೆಗಳ ಪಾಠಾಂತರಗಳನ್ನು ಎತ್ತಿ ವಿವೇಚಿಸಿ ನಡುನಡುವೆ ನಾಮಸಂಕೀರ್ತನೆ ಮಾಡುತ್ತ ನಡೆಯಿಸುವ ಪ್ರವಚನ ಪ್ರಸಂಗಗಳೇ ಈ “ನಿರೂಪಣ”ಗಳು. ಗಾಡಗೆ ಬುವಾ, ಗೋದಡೀ ಬುವಾ, ವಾರಕರಿ ಮೇಳಗಳ ಮುಖ್ಯರು ಇಂಥ ನಿರೂಪಣೆಗಳಿಂದ ಭಗವದ್ಭಕ್ತಿ, ಗೋರಕ್ಷಣೆ ಮುಂತಾದ ವಿಷಯಗಳ ಪ್ರಚಾರ ಮಾಡಹತ್ತಿದರು.

ಆದರೆ ಈ ಬಗೆಯ ತತ್ವವಿವೇಚನೆಯ ಅಧಿಕಾರ ಸಂಪತ್ತು ಎಲ್ಲ ಹರಿದಾಸರಿಗೂ ಸಾಧ್ಯವಿದ್ದಿಲ್ಲ. ಈಗ ಕ್ರಮೇಣ ಈ ನಿರೂಪಣೆಯ ತಾತ್ವಿಕ ಭಾಗ ಮೊಟಕಾಗಿ ಕಥನದ ಭಾಗ ಬೆಳೆದು ಕೀರ್ತನೆ “ಕಥಾ ಕಾಲಕ್ಷೇಪ”ವಾಯಿತು.“ಹರಿ-ಕಥೆ” ಆಯಿತು! ಅಂದಿನಿಂದ ನಿರೂಪಣೆ ಹರಿಕಥೆಯ “ಪೂರ್ವರಂಗ”ವಾಯಿತು. ಒಂದು ಸಂತರ ವಚನವನ್ನು ಮೂಲವಾಗಿ ಇಟ್ಟುಕೊಂಡು ಅದರ ವ್ಯಾಖ್ಯಾನ ಕೆಲಕಾಲ ಮಾಡಿ ಸಭೆಯ ಸಂಚಾಲಕರಿಂದ ಹಾರ ಹಾಕಿಸಿಕೊಂಡು ಕೆಲನಿಮಿಷ ಭಜನೆ ನಡೆಯಿಸಿ ಅದೇ ಮೂಲವಚನವದ ವ್ಯಾಖ್ಯಾನಕ್ಕೆ ಉದಾಹರಣೆ ಎಂಬಂತೆ ಒಂದು ಆಖ್ಯಾನವನ್ನು ಹರಿದಾಸರು ಆರಂಭಿಸಿ ಒಂದೆರಡು ತಾಸು ರಂಜಕವಾಗಿ ರಸಭರಿತವಾಗಿ ಕಥನ ಮಾಡುವನು. ಕೊನೆಗೆ ತನ್ನ ಮೂಲದ ಪೀಠಿಕಾ ಸೂಕ್ತಿಯೊಂದಿಗೆ ಪ್ರಚಲಿತವಿದ್ದ ಹರಿಕಥೆಯ ಮಾದರಿ.

ನಾನು ತಿಳಿದ ಮಟ್ಟಿಗೆ ನಮ್ಮ ಕನ್ನಡ ನಾಡಿಗಿಂತ ನೆರೆಯ ಮಹಾರಾಷ್ಟ್ರದಲ್ಲಿ ಹರಿಕೀರ್ತನೆ ತುಂಬ ಸಮೃದ್ಧವಾಗಿ ಜನಪ್ರಿಯವಾಗಿ ವೃದ್ಧಿಗೊಂಡಿತು. ಅದಕ್ಕೆ ಔರಧ ಸಂಸ್ಥಾನದ ಸಂತ ಪ್ರತಿನಿಧಿ ದೊರೆಯಿಂದ ಭಾರಿ ಪ್ರೋತ್ಸಾಹ ದೊರೆಯಿತು. ಅವರು ಸ್ವಯಂ ಹರಿಕೀರ್ತನಕಾರರಾಗಿದ್ದರು. ಉತ್ತಮ ಚಿತ್ರಕಾರರಾಗಿದ್ದರು-ರವಿವರ್ಮನಂತೆ. ಸೂರ್ಯನಮಸ್ಕಾರದ ಪ್ರಚಾರ ಬಿರುಸಿನಿಂದ ಮಾಡಿದ ವ್ಯಾಯಾಮಪಟುಗಳಾಗಿದ್ದರು. ಹರಿಕೀರ್ತನೆ ಪರಿಪುಷ್ಟವಾಗಿ ವಿಕಾಸಗೊಳ್ಳಲು ಇಂಥ ಸಮಾಜ ಶ್ರೇಷ್ಠರ ಸಕ್ರಿಯ ಉತ್ತೇಜನೆ ಮಹಾರಾಷ್ಟ್ರದಲ್ಲಿ ಲಭಿಸಿತು. ಹಾಗೆಯೇ ಡಾ॥ ಪಟವರ್ಧನ ಎಂಬುವರು ರಾಷ್ಟ್ರೀಯ ಹರಿಕೀರ್ತನೆಯ ಒಂದು ಪ್ರಬಲ ಪ್ರಭಾವಿ ಹೊಸಶೈಲಿಯನ್ನೇ ಪ್ರಚಾರದಲ್ಲಿ

ತಂದರು. ರಾಷ್ಟ್ರದ ಬಲ ಸಂವರ್ಧನೆಗೆ ದೇಶಭಕ್ತಿಯನ್ನು ಸೇರಿಸಲಿಕ್ಕೆ.

ಆದರೆ ಹರಿಕಥೆ ಒಂದು ನವಿರಾದ ಕಲೆ. ಯಕ್ಷಗಾನದಂತೆ. ಅದರಲ್ಲಿ ಶೀಘ್ರ ಆಧುನೀಕರಣ ಶೋಭಿಸುವುದಿಲ್ಲ. ಆಧುನಿಕ ಕಥಾವಸ್ತು ಯಕ್ಷಗಾನದ ಆಖ್ಯಾನವಾಗಿ ಪ್ರೇಕ್ಷಕರಿಗೆ ಹಿಡಿಸುವುದಿಲ್ಲ. ಬ್ರಯಲಾಟದ ಭಾವಕೋಶವೇ ಪೌರಾಣಿಕ ಅದ್ಭುತ ರಮ್ಯ ಕಥಾಪ್ರಸಂಗದ್ದು. ಅದರಲ್ಲಿ 'ಸಂಗ್ಯಾಬಾಳ್ಯಾ' ಅಥವಾ 'ಕಡ್ಲೆ ಮಟ್ಟಿ ಸ್ಟೇಶನಮಾಸ್ತರ' ಒಗ್ಗುವದಿಲ್ಲ. ಒಪ್ಪುವುದಿಲ್ಲ. ಹಾಗೆಯೇ ಹರಿಕಥೆಯಲ್ಲಿ ಅಫ್‌ಜುಲ್‌ಖಾನನು ಅಟಾಣ ರಾಗದಲ್ಲಿ ಹಾಡಿದರೆ, ಸರ್‌ದಾರ್ ಪಟೇಲ ಸಾರ್ ದಿಂಡಿ ಹಾಡಿದರೆ, ಆ ಗಾಂಧೀಜೀ ಸುಭಾಷಿತ ಉದುರಿಸಿದರೆ ಅಷ್ಟು ಶೋಭಿಸುವುದಿಲ್ಲ.

ಹಾಗೆಯೇ ಪೌರಾಣಿಕ ವಸ್ತುವಿನಲ್ಲಿ ಆಧುನಿಕ ಆಶಯವನ್ನು ರಾಷ್ಟ್ರೀಯ ಚಳುವಳಿಯ ಸನ್ನಿವೇಶಗಳನ್ನು ನೇರವಾಗಿ ಅಥವಾ ಸ್ಥೂಲವಾಗಿ "ಮಿಸಳ" ಮಾಡುವುದು ಅಷ್ಟೊಂದು ರಂಜನೀಯವೆನಿಸಲಾರದು. ಸದ್ಯದ ಸಮಸ್ಯೆಗಳಿಗೆ ಸಮರಸ್ಯ ಪ್ರಸಂಗಗಳಿಗೆ ಹರಿಕಥೆಯ ಆಖ್ಯಾನ ಸಮಾನಾಂತರವಾಗಿ ರೂಪಾಂತರವಾಗಿಸಿರಬೇಕು. ಆದರೆ ಈ ಔಚಿತ್ಯ ಪ್ರಜ್ಞೆ ಅನೇಕ ಹರಿದಾಸರಲ್ಲಿ ಕಡಿಮೆ ಇದ್ದುದನ್ನು ಕಂಡಿದ್ದೇನೆ. ನನ್ನ ಎಳೆಹರಯದಲ್ಲಿ ಅಖಿಲ ಕರ್ನಾಟಕ ಕೀರ್ತನೆಯ ಕೀರ್ತನ ಕೇಸರಿ ಜಯರಾಮಾಚಾರ್ಯರನ್ನು ನಮ್ಮ ಜಿಲ್ಲೆಯಲ್ಲಿ ಪ್ರಸಿದ್ಧರಾದ ಹರಿದಾಸ ಶ್ರೀ ರಾಮಪ್ಪೈ ಅವರನ್ನು ನಾನು ಕೇಳಿದ್ದೆ, ಮೆಚ್ಚಿದೆ. ಇವರು ಯಶಸ್ವೀ ರಾಷ್ಟ್ರೀಯ ಹರಿಕೀರ್ತನಕಾರರಾಗಿದ್ದರು. ಆದರೂ ಅವರ ಕಥನದಲ್ಲಿ "ರಾಷ್ಟ್ರೀಕರಣ"ದ ಹದ ಒಮ್ಮೆಲೇ ಸಾಧಿಸುವುದಿಲ್ಲ. ಇರಲಿ, ಆ ಕುರಿತು ಇನ್ನೊಮ್ಮೆ ನೋಡೋಣ.

•

(ದಾಸವಾಣಿ ಜುಲೈ, ೧೯೯೨)

# ಒಂದು 'ಯಕ್ಷ' ಪ್ರಶ್ನೆ

ಯಕ್ಷಗಾನ, ಪ್ರಸಂಗ, ಬಯಲಾಟ, ದಶಾವತಾರದ ಆಟ, ತಾಳಮದ್ದಳೆ-ಇವೇ ಮುಂತಾದ ನಾಮ ಹಲವು. ಆದರೆ ಅವುಗಳಿಂದ ಗುರುತಿಸುವ ದೇವರು ಒಬ್ಬನೇ. ಯಕ್ಷಗಾನ ಅಥವಾ ಬಯಲಾಟ. ದೇಶ, ಕಾಲ, ರೀತಿಗಳ ಭೇದದಿಂದ ಇವುಗಳ ನಾಮರೂಪಗಳಲ್ಲಿ ಬದಲಾವಣೆ, ಸುಧಾರಣೆಗಳಾಗಿವೆ. ಮೂಲತಃ ಇದೊಂದು ಆಖ್ಯಾನ. ಅದು 'ಆಟ'ವಾಯಿತು. ಭರತಮುನಿಯೇ ತನ್ನ ನಾಟ್ಯ ಶಾಸ್ತ್ರದ ಮೂಲದಲ್ಲಿ ದೇವತೆಗಳು ಬ್ರಹ್ಮನಲ್ಲಿ ತಮ್ಮ ಮನೋವಿನೋದಕ್ಕೆ 'ಕ್ರೀಡಾನಕ' (ಆಟ ?)ವನ್ನೇ ಬೇಡಿಕೊಳ್ಳುತ್ತಾರೆಂದು ಬಣ್ಣಿಸಿದ್ದಾನೆ. ಆಡಲಿಕ್ಕೆ ಒಂದು ಕಥೆ ಬೇಕಾಯಿತು. ಅದೇ 'ಆಖ್ಯಾನ'. ಆಡಿ ತೋರಿಸುವದಕ್ಕೂ ಮೊದಲಿನ ಕಥಾಕಥನ. ('ಆಡು ಅಂದಾಗ 'ಕ್ರಿಯೆ' ಮತ್ತು 'ಹೇಳಿಕೆ' ಎರಡೂ ಅರ್ಥಗಳನ್ನು ಕೊಡುತ್ತದೆ.)

ಈ ಕಥಾಕಥನದ ಸ್ವಾರಸ್ಯ ಹೆಚ್ಚಿಸಲು ಅದು ಸರಾಗವಾಯಿತು. ಗಾನ ಸೇರಿ ಕೊಂಡಿತು. ಗಾನ ಮಾತ್ರದಿಂದ ಕಥಾಕಥನವು 'ಗಮಕ'ವೆನಿಸಿಕೊಂಡಿತು. ಆದರೆ ಯಕ್ಷಗಾನವು ಕುಣಿತಕ್ಕೆ 'ಯಕ್ಷಗಾನ' ವಾಗಿರಬೇಕು. ಕುಣಿತಕ್ಕೆ ಪ್ರಾಶಸ್ತ್ಯ ಸಂದಂತೆ ಅದಕ್ಕೆ ಆಧಾರಭೂತವಾದ ತಾಳಕ್ಕೆ, ಹೆಜ್ಜೆಗೆ ಹೊಂದಿಕೊಳ್ಳುವ ಗತ್ತಿಗೆ ಮಹತ್ವ ಬಂದಿತು. ಇದರಿಂದ ಗಂಧರ್ವ ಗಾನದಿಂದ ಈ ಯಕ್ಷಗಾನ ತುಸು ಭಿನ್ನವಾಗಿರಬೇಕು.

ಈಗಲೂ ಆಟದಲ್ಲಿ ಎರಡು ಭಾಗಗಳು. ಆರಂಭದ ಸಭಾಲಕ್ಷಣದ ಪೂರ್ವರಂಗ, ಆಮೇಲೆ ಆಖ್ಯಾನ-ಮುಖ್ಯ ಭಾಗ. ಎರಡೂ ಅಂಗಗಳಿಗೆ ಇಬ್ಬರು ಬೇರೆ ಬೇರೆ ಭಾಗವತರು. ಈ ಆಖ್ಯಾನದ ಭಾಗದಲ್ಲಿ ಭಾಗವತ ಕೇವಲ ಹಾಡುಗಾರನಲ್ಲ. ಆತ ಆಟಕ ನಿರ್ದೇಶಕ. ವೇಷಧಾರಿಗಳ ಸೂತ್ರಧಾರ. ಒಟ್ಟು ರಂಗ ಪ್ರದರ್ಶನಕ್ಕೆ ಹೊಣೆಗಾರ. ವೇಷಧಾರಿಗಳ ಮಾತುಗಾರಿಕೆ, ಕುಣಿತಗಳಿಗೆ ಪ್ರೇಕ್ಷಕರ ದೃಷ್ಟಿಯಲ್ಲಿ ಮಹತ್ವ ಮಿಗಿಲಾದದ್ದು. ಅದರಿಂದಾಗಿ ಭಾಗವತನ ಸಂಗೀತದ ಅಂಶಕ್ಕೆ ಪ್ರಾಶಸ್ತ್ಯ ಕಡಿಮೆ ಆಗುವುದು, ತಾಳ, ಲಯಕ್ಕೆ ಮಹತ್ವ ಬರುವುದೂ ಕ್ರಮ ಪ್ರಾಪ್ತವಾಯಿತು. ವೇಷಧಾರಿಯ

ಹೆಜ್ಜೆಯ ಮೇಲೆ ಕಣ್ಣಿಟ್ಟು ಹಾಡುವ ಭಾಗವತನಿಗೆ ತಾಳ, ಮದ್ದಲೆ, ಚೆಂಡೆಗಳ ಗತ್ತಿಗೆ ಹೆಚ್ಚಿನ ಗಮನ ಕೊಡುವಂತಾಗಿ ತನ್ನ ಹಾಡುಗಾರಿಕೆಯನ್ನು ಆ ಮಟ್ಟಿಗೆ ಅಲಕ್ಷಿಸುವಂತೆ ಶ್ರುತಿ-ಶುದ್ಧತೆ, ರಾಗ-ರಂಜನೆ ಉಪೇಕ್ಷಿಸುವಂತೆ ಆದರೆ ಅದು ಸ್ವಾಭಾವಿಕ. ಸ್ವಂತದ ಗಾಯನ ಕಲಾಭಿಜ್ಞತೆಗೆ ಅಭಾವಿಕವೆನ್ನಬೇಕು.

ಹೀಗಾಗಿ ಸಾಮಾನ್ಯವಾಗಿ ಭಾಗವತರಲ್ಲಿ ಬಹುಶಃ ಕರ್ಣಕಠೋರ (ಕುಠಾರರೂ ಅಹುದು!) ರೇ ಹೆಚ್ಚು! ಅವರ ಕಂಠದ ಇಂಪು ಸೊಂಪಿನ ಕಡೆಗೆ ಸಾಮಾನ್ಯ ವೇಷಧಾರಿಯ, ಅದಕ್ಕೂ ಸಾಮಾನ್ಯ ಪ್ರೇಕ್ಷಕನ ಲಕ್ಷ್ಯವೇ ಇರುವುದಿಲ್ಲ. ಅವನ ಕಂಠ ತ್ರಾಣದ ಕೊರತೆಯನ್ನು ವೇಷಧಾರಿಯ 'ಸೊಂಟ ತ್ರಾಣ' ತುಂಬಿಕೊಡುವುದು! ಯಕ್ಷಗಾನ ಒಂದು Composite ಕಲೆ. ಹಾಡು, ಕುಣಿತ ಮಾತು, ಅಭಿನಯ, ರಂಗಚಾತುರ್ಯ, ನೇಪಥ್ಯ, ಮುಖವರ್ಣಿಕೆ ಇವೆಲ್ಲ ಅಲ್ಲಿ ಹಿತಮಿತವಾಗಿ ಸಲ್ಲಬೇಕು. ಆದರೆ ಹಾಗೆ ಆಗುತ್ತಿಲ್ಲ. ಕುಣಿತವಿಲ್ಲದ ಮಾತುಗಾರರು, ಹಾಡಬಲ್ಲವರೆಲ್ಲ ಭಾಗವತರು, ಪಾತ್ರ ಪರಿಪೋಷಣೆಗೆ ಒಗ್ಗದ ವೇಷ ಭೂಷೆ-ಇದೇ ಇಂದಿನ ಯಕ್ಷಗಾನ ರಂಗದ ಕಲೆಗಾರಿಕೆಯ ಅಂಗವಾಗಿವೆ!

ಹಿಂದೊಮ್ಮೆ ಈ ಬಯಲಾಟಗಳಿಗೆ ದುರ್ದಿನಗಳು ಕಾಡಿದ್ದವು. ಆಗ ವಾಗ್ಮಿಗಳಾದ ಚತುರ ಹರಿದಾಸರು ಕೆಲವರು ಅದನ್ನು ಉದ್ಧರಿಸಿ ಉಚ್ಛ್ರಾಯ ಗೊಳಿಸಿದರು. ಅಂದಿನಿಂದ ನಿಂತ ಮೆಟ್ಟಿಗೆ ಅಖಂಡ ಅಸ್ಖಲಿತ ಮಾತನಾಡುವ ವಾಚಾಳೀ ವೇಷಧಾರಿಗಳಿಗೆ ಎಂದಿಲ್ಲದ ಬೇಡಿಕೆ ಬಂದಿತು. (ಇದೀಗ ನಾಟ್ಯ ನರ್ತನಗಳ ಮಹತ್ವ ಮಂದಿಗೆ ಅರಿವಾಗಹತ್ತಿದೆ. ಆ ಮಾತು ಬೇರೆ.) ಕುಣಿತ ಕಡಿಮೆಯಾಗುತ್ತ ಹಾಡುಗಾರಿಕೆ ಕ್ಷೀಣವಾಗುತ್ತ ಹೋಗಲು ಇದೂ ಒಂದು ಕಾರಣವಾಯಿತು. ಆದರೆ ಇಂದಿಗೂ ಎಂದೆಂದಿಗೂ ನುರಿತ ನಿಪುಣ ಸುಶ್ರಾವ್ಯ ಭಾಗವತನ ಹಾಡುಗಾರಿಕೆ ವೇಷಧಾರಿಗೆ ಉತ್ಸಾಹ, ಉತ್ತೇಜನೆ ಕೊಡುತ್ತದೆ. ಮುಖ್ಯತಃ ತಾಳ ಹಿಡಿದು ಭಾಗವತನೇ ವೇಷಧಾರಿಯನ್ನು ಕುಣಿಸುತ್ತಾನೆ. ಅದಕ್ಕೆ ಆತನಿಗೆ ಮೊದಲನೆಯ ವೇಷಧಾರಿ ಎನ್ನುವರು. ನಾಯಕ ವೇಷ ಎರಡನೆಯದು! ಆದರೆ ಇಂದು ಕೆಲ ಸಲ ಭಾಗವತನ ಕಸುಬು ದುರ್ಬಲವಾಗಿ, ಗಾಯನ ಬಲ್ಲ ಮಧುರ ಕಂಠದ ವೇಷಧಾರಿಯು ತಾನೇ ಆತನೊಂದಿಗೆ ತನ್ನ ಪದ್ಯಭಾಗವನ್ನು ಹಾಡಿ ತುಂಬಿಕೊಳ್ಳುವಂತಾಗಿದೆ!

ಯಕ್ಷಗಾನದ ರಸಿಕರ ದುರ್ದೈವದಿಂದ ಭಾಗವತಿಕೆಗೆ ಈ ಆಳಿಗಾಲ ಬರಲು ಕಾರಣವೇನು? ಮೊದಲಿಗೆ ಯಕ್ಷಗಾನದ ಹಾಡುಗಾರಿಕೆ 'ಗಮಕ'ದಂತೆ ಅಲ್ಲ. ಯಕ್ಷಗಾನ ಪ್ರಾಸಂಗಿಕ. ಅಲ್ಲಿ ಕಥಾನಿರ್ವಹಣೆಗಾಗಿ ಕುಣಿತದ ಅನುಕೂಲತೆಗಾಗಿ ಹಾಡುಗಾರಿಕೆ. ಅದಕ್ಕೆ ಸ್ವತಂತ್ರ, ಸ್ವಚ್ಛಂದ ಅವಕಾಶವಿಲ್ಲ. ನಾನು ಹಲವಾರು ಭಾಗವತರ 'ಕ್ಯಾಸೆಟ್' ಕೇಳಿದ್ದೇನೆ, ಅವು 'ಗಮಕ'ದ ಬಿಡಿ ಗಾಯನದಷ್ಟು ರಂಜಕವೆನಿಸುವುದಿಲ್ಲ. ರಂಗದಲ್ಲಿ ಕುಣಿತದೊಂದಿಗೆ ಕೇಳಿದಾಗಲೇ ಅದರ ಸ್ವಾರಸ್ಯ. ಇನ್ನೊಂದು ಮೂಲಭೂತ ದೋಷವೆಂದರೆ ಅನೇಕರ ಕಂಠ ಮಧುರ ಸುಶ್ರಾವ್ಯ ಇರುವುದಿಲ್ಲ. ಆರಂಭದಲ್ಲಿದ್ದರೂ ಆಟ ಸಾಗಿದಂತೆ, ರಭಸ ಹೆಚ್ಚಿದಂತೆ ಭಾಗವತರ ದನಿ ಸೀರಾಗುತ್ತದೆ. ಬಿರಿಯುತ್ತದೆ, ಕರ್ಕಶವಾಗುತ್ತದೆ.

ಹಿಂದಿನಿಂದಲೂ ತಾರಸ್ವರದಲ್ಲಿ ಕೂಗಿಕೊಳ್ಳುವ ಚಟ ನಮ್ಮ ಭಾಗವತರಿಗೆ

ಸಂಪ್ರದಾಯವಾಗಿಬಿಟ್ಟಿದೆ. ಹಿಂದೆಲ್ಲ ಧ್ವನಿವರ್ಧಕಗಳಿದ್ದಿಲ್ಲ. ಕಂಠ ಬಲವೇ ಬಲ. ಆದರೆ ಈಗ ಹಾಗಿಲ್ಲ. ಮೈಕುಗಳಿವೆ. ಲೌಡುಸ್ಪೀಕರುಗಳಿವೆ. ಅಂದಾಗ ಅಂಥ 'ಟಂಕಾರೋತ್ತರ ಪಾಠ' ಅವಶ್ಯವೇ ಇಲ್ಲ. ಈ ಧ್ವನಿವರ್ಧಕಗಳಿಂದ ಕಂಠಕ್ಕೆ ವಿರಾಮ. ವಿಶ್ರಾಂತಿ ಸಿಗುವ ಬದಲು ಹಾಡುಗಾರನ ಅಪಸ್ವರವನ್ನೇ ಬಿತ್ತರಿಸುವಂತೆ ಆಗುತ್ತದೆ. ಯಾವ ಕಿವುಡನಿಗೂ ಕೇಳಿಸಬೇಕು. ಕೇಳಿಸುವ ಯಾರೂ ಕಿವುಡನಾಗಬೇಕು!

### ಪರಿಷ್ಕಾರದ ಅಗತ್ಯ

ನಮ್ಮ ಯಕ್ಷಗಾನದ ಈ ದೋಷ ಪೂರ್ತಿ ತಿದ್ದಬೇಕು. ಅದರ 'ಗಾನ'ದ ಅಂಗ ಪುಷ್ಟವಾಗಬೇಕು. ನಮ್ಮ ಹಿಮ್ಮೇಳಗಳಲ್ಲಿ ಬಹಳ ಪರಿಷ್ಕಾರವಾಗಬೇಕು. ಡಾ। ಶಿವರಾಮ ಕಾರಂತರು ಇದೆಲ್ಲ ಗಮನಿಸಿ "ಯಕ್ಷಗಾನ ಬ್ಯಾಲೆ" ತಯಾರಿಸಿದರು. ಅವರು ಪರಿಚಯಿಸಿದ ವೇಷ, ಭೂಷೆ ಕೆಲಮಟ್ಟಿಗೆ ರಂಗದಲ್ಲಿ ರೂಢವಾಗಿದೆ. ಆದರೆ ಹಿಮ್ಮೇಳದ ಸುಧಾರಣೆಗೆ ನಮ್ಮ ಮೇಳಗಳು ಮೈಗೂಡಿಸಿಕೊಂಡಂತಿಲ್ಲ. ಮುಖ್ಯವಾಗಿ ವಾದ್ಯಗಳಲ್ಲಿ ಸುಧಾರಣೆಗೆ ಆಗಬೇಕು. ಕಂಠದ ಕೊರತೆ ತುಂಬಲು ಪಿಟೀಲು, ಕ್ಲಾರೊನೆಟ್ ಮತ್ತು ಮಂದ್ರದಲ್ಲಿ ಸೆಕ್ಸೋಫೋನ್ ಬೇಕು. ಇವುಗಳಿಂದ ರಾಗ-ರಸ ಪರಿಪೋಷಣೆಗೂ ತುಂಬ ಅನುಕೂಲ. ಹಾಗೆಯೇ ಚೆಂಡೆಯ ಉಪಯೋಗ ಚೆನ್ನಾಗಿ, ಸರಿಯಾಗಿ ಆಗಬೇಕು. ನಾನು ಒಂದು ರೌದ್ರ ದುರಂತ ಗ್ರೀಕ್ ನಾಟಕ 'ಮಿಡಿಯಾ'ಳ ಮರಾಠಿ ಭಾಷೆಯಲ್ಲಿ ನೋಡಿದ್ದೆ. 'ಮಿಡಿಯಾ'ಳ ಪಾತ್ರ ರೋಹಿಣಿ ಹಟ್ಟಂಗಡಿ ಉತ್ತಮವಾಗಿ ನಿರ್ವಹಿಸಿದ್ದರು. ಆದರೆ ನಾಟಕದ ಒಟ್ಟು ಪ್ರಭಾವಕ್ಕೆ ರೋಹಿಣಿಯವರ ಪತಿ ಜಯದೇವ ಹಟ್ಟಂಗಡಿಯವರು ಒದಗಿಸಿದ ಹಿಮ್ಮೇಳ. ಈ ಹಿಮ್ಮೇಳ ಅವರೇ ಉದ್ದಕ್ಕೂ ನುಡಿಸಿದ ಚೆಂಡೆ. ಬೇರೆ ಯಾವುದೇ ವಾದ್ಯವಿರಲಿಲ್ಲ.

ನಮ್ಮಲ್ಲಿ ಯಕ್ಷಗಾನದಲ್ಲಿ ಚೆಂಡೆ ಎಂದೋ ಬಂದಿದೆ. ಕೇವಲ ಕಾಳಗಗಳಲ್ಲಿ ಬೇಟೆಯಂಥ ಪ್ರಸಂಗಗಳಲ್ಲಿ ಅದರ ಅಬ್ಬರ! ಅಥವಾ ಆಟದ ಆರಂಭಕ್ಕೆ ಮಂದಿಯನ್ನು ಮೇಳವಿಸುವಲ್ಲಿ! ("ಆಟಕ್ಕೆ ಅಬ್ಬರ, ಗದ್ದೆಗೆ ಗೊಬ್ಬರ!" ಎಂಬ ಗಾದೆಯೇ ಪ್ರಚಲಿತವಿದೆ.) ಆದರೆ ಆಟದಲ್ಲಿ ಚೆಂಡೆಯ ಸಹೇತುಕ ಪ್ರಯೋಗ ಹೆಚ್ಚು ಹೆಚ್ಚು ನಡೆಯಬೇಕು. (ಚೆಂಡೆ ಯಕ್ಷಗಾನ ರಂಗಕ್ಕೆ ಹಿಂದಿನಿಂದ ಬಂದದ್ದೇ? ಏಕೆಂದರೆ ನಮ್ಮಲ್ಲಿ 'ತಾಳ-ಮದ್ದಳೆ'ಯಂತೆ ಚೆಂಡೆಯ ಹೆಸರು ಬಳಕೆಯಲ್ಲಿ ಇದ್ದಿಲ್ಲ. ಈಚೆಗೆ ಬಂದಿದೆ.)

ಇಂಥ ಪರಿಕರಗಳಿಂದ ಒಟ್ಟು ಆಟದ ಪ್ರಯೋಗಕ್ಕೆ ಕಳೆಕಟ್ಟುವುದರ ಹೊರತಾಗಿ ಭಾಗವತಿಕೆಯ ಗುಣಮಟ್ಟ ಹೆಚ್ಚುವುದರಲ್ಲಿ ಸಂಶಯವಿಲ್ಲ. ಇಂಥ ಹಿಮ್ಮೇಳದ ಬಲದಿಂದ ಹಾಡುವವರಿಗೂ ಹುರುಪು. ಕೇಳುವವರಿಗೂ ಬೇಸರವಿಲ್ಲ.

ಇದಲ್ಲದೆ ಭಾಗವತಿಕೆಯ ಬೇಸರಕ್ಕೆ ಇನ್ನೂ ಒಂದು ಪ್ರಬಲ ಕಾರಣವಿದೆ. ರಾತ್ರಿ ಇಡೀ ಒಂದೇ (ಒರಟು) ಕಂಠ ಬೆಳಗಿನವರೆಗೆ ಹಾಡುವುದು. ಅದೂ ರಾತ್ರಿ ಕಳೆದಂತೆ ಉತ್ತರೋತ್ತರ ತಾರಸ್ವರದಲ್ಲಿಯೇ ಹಾಡುವ ಹಟದ ಹವ್ಯಾಸ! ಇನ್ನು ಶಾಸ್ತ್ರೀಯ ಸಂಗೀತ ವಿದ್ವಾಂಸರೂ ಬೆಳಗಿನವರೆಗೆ ತುಂಬ ರಂಜನೀಯವಾಗಿ ಹಾಡುತ್ತಾರೆ. ಅವರಲ್ಲಿ ಅಗಾಧ ಪಾಂಡಿತ್ಯ, ಅಪಾರವಾದ

ಸಂಪತ್ತು, ರಾಗ ವೈವಿಧ್ಯ ಎಲ್ಲ ಸಿದ್ಧವಿರುತ್ತದೆ. ಆದರೆ ಈ ಭಾಗವತರಲ್ಲಿ? ಅದೆಲ್ಲವೂ ಕೊರತೆಯ ಕೊರತೆ! ತಮಗೆ ಗೊತ್ತಿದ್ದ ಕೆಲವೇ ರಾಗ (?) ಧಾಟಿಗಳು. ಪ್ರಸಂಗದ ಪಟ್ಟಿಯಲ್ಲಿ ಕಾಣಿಸಿದ ರಾಗಗಳೇ ಬೇರೆ. ಇವರು ದನಿಗೈಯವ ಮಟ್ಟುಗಳೇ ಬೇರೆ. ಇಲ್ಲಿಯೂ ಇನ್ನೊಂದು ವಿರಸ. ಬೆಳಗಿನವರೆಗೆ ಹಾಡುವಾಗ ಆಯಾ ಸಮಯಕ್ಕೆ ಉಚಿತವಾಗಿ ಹಾಡಬೇಕು. ಆದರೆ ಈ 'ಸಮಯ ಯಾವುದು? ಆಖ್ಯಾನದಲ್ಲಿ ಆಗ ಕಂಡು ಬರುವ ಸಮಯವೋ, ಹೊರಗೆ ಭಾಗವತರು ಹಾಡುವಾಗಿನ ಕಾಲದ ಸಂದರ್ಭವೋ? ಕಥೆಯಲ್ಲಿ ಮಧ್ಯಾಹ್ನವೋ, ಸಂಧ್ಯಾಕಾಲವೋ ನಡೆಯುತ್ತಿರುವಾಗ ಹೊರಗೆ ನಸುಕು ಹರಿಯುವ ಉದಯರಾಗದ ಸಮಯ ಬಂದಿರಬಹುದು. ಆದರೆ ಎಲ್ಲರ ಪುಣ್ಯಕ್ಕೆ ಈ ರಾಗ-ಕಾಲಗಳ 'ಪ್ರಸಂಗವಧಾನ' ಗುರುತಿಸುವ ಭಾಗವತರಾಗಲಿ, ಪ್ರೇಕ್ಷಕರಾಗಲಿ ಸದ್ಯ ಸಿಗುವುದಿಲ್ಲ.

ರಾತ್ರಿಯಿಡೀ ಒದರುವುದರಿಂದ ಭಾಗವತನ ಕಂಠದ ದಶೆ ದಶಕಂಠನದಾಗುವುದು ಸಹಜ. ಆದ್ದರಿಂದ ಒಬ್ಬರಿಗಿಂತ ಹೆಚ್ಚು ಭಾಗವತರಿರಬೇಕು. ಗಾಯನಕ್ಕೂ ಒಟ್ಟು ಆಟಕ್ಕೂ ಕಳೆ ತುಂಬುವಂತೆ, (ದೀರ್ಘ ಪ್ರವಾಸದಲ್ಲಿ ಚಾಲಕರನ್ನು ಬದಲಿಸುವುದಿಲ್ಲವೇ, ಹಾಗೆ.) ರಭಸದ ಹಾಡುಗಾರಿಕೆಗೆ ಒಬ್ಬ, ನಯ ಲಾಲಿತ್ಯದ ಗಾಯನಕ್ಕೆ ಒಬ್ಬ. ಅದೇ ರೀತಿ ಹೆಣ್ಣು ವೇಷಗಳ ಹಾಡುಗಳಿಗೆ ಹೆಣ್ಣು ಕಂಠವೇ ಇರಬೇಕು. ಮುದಿ ಭಾಗವತರು, ಕರ್ಣಕಠೋರ ಗಾಯಕರು, ಸೀತೆ, ಕನಕಾಂಗಿ, ಸತ್ಯಭಾಮೆ, ಸೈರಂಧ್ರಿ ಮುಂತಾದವರಿಗೆ ದನಿ ನೀಡುವುದೊಂದು ಅಪಸ್ಮಾರವೇ ಸರಿ. ಆದರೆ ಇದೆಲ್ಲ ಹಿಮ್ಮೇಳದ ಹೊಂದಾಣಿಕೆ ತುಂಬ ತೊಡಕಿನದು, ತೊಂದರೆಯದು. ಆದರೆ ಇದಕ್ಕೆ ಒಂದು ಉಪಾಯ ಕಂಡುಹಿಡಿಯಬೇಕು. ಸಾಧ್ಯವಾದರೆ ಉತ್ತಮ ಗಂಡು, ಹೆಣ್ಣು ದನಿಗಳಿಂದ ಆಯಾ ಕಥಾಭಾಗಗಳನ್ನು ಹಾಡಿಸಿ ಸ್ಪಷ್ಟವಾಗಿ, ವ್ಯವಸ್ಥಿತವಾಗಿ ಅವುಗಳನ್ನು 'ಟೇಪಿ'ನಲ್ಲಿ ರಿಕಾರ್ಡು ಮಾಡಿ ಅವನ್ನೇ ಅಲ್ಲಲ್ಲಿ ಅಚ್ಚು ಕಟ್ಟಾಗಿ ಬಳಸಬೇಕು.

ಭಾಗವತಿಕೆ ಉಳಿಸಿಕೊಳ್ಳಲು 'ಅನ್ಯಥಾ ಶರಣಂ ನಾಸ್ತಿ'

•

# ಯಕ್ಷಗಾನವು ಜಾನಪದ ಕಲೆಯೇ ?

ಯಕ್ಷಗಾನ ನಮ್ಮ ದಕ್ಷಿಣೋತ್ತರ ಕನ್ನಡಗಳ ಪ್ರಾದೇಶಿಕ ಸಂಸ್ಕೃತಿಯ ಒಂದು ಕಲಾ ವೈಶಿಷ್ಟ್ಯ. ಈಗಂತೂ ಡಾ॥ ಕೋ. ಶಿವರಾಮ ಕಾರಂತರ ಅವಿಶ್ರಾಂತ ಪರಿಶ್ರಮ ಪ್ರಯತ್ನಗಳ ಫಲವಾಗಿ ಈ ಬಯಲಾಟಕ್ಕೆ "ಯಕ್ಷರಂಗ"ದ ಪರಿಷ್ಕೃತ ರೂಪ ಬಂದು ಅದು ಅಖಿಲ ಭಾರತೀಯ ಮಾತ್ರವಲ್ಲ, ಅಂತರಾಷ್ಟ್ರೀಯ ಆಸಕ್ತಿಯನ್ನು ಕೆರಳಿಸಿ ಖ್ಯಾತಿಯನ್ನು ಗಳಿಸುವ ಭರವಸೆ ತೋರಿಸುತ್ತದೆ. ನಮ್ಮ ಕನ್ನಡ ಜನಪದ ವಿಶ್ವ ಸಂಸ್ಕೃತಿಗೆ, ಪ್ರಪಂಚದ ರಂಗ ಪ್ರದರ್ಶನದ ಪ್ರಾಯೋಗಿಕ ಕಲಾ ವೈಭವಕ್ಕೆ ಹೆಮ್ಮೆಯಿಂದ ಕೈಯೆತ್ತಿಕೊಡುವ ಕಾಣಿಕೆ ಇದು.

ಆದರೆ ಯಕ್ಷ-ರಂಗದ-ತಾಳ ಮದ್ದಳೆ ಪ್ರಸಂಗಗಳನ್ನು ವೇಷ ಕಟ್ಟಿ ಕುಣಿದ ಬಯಲಾಟವನ್ನು - ಬಯಲೊಳಗಿನ Tent ಆಟವನ್ನು ನೋಡಿದಾಗಲೆಲ್ಲ ನನಗೆ ಮತ್ತೆ ಮತ್ತೆ ಕಾಡುತ್ತಿರುವ ಪ್ರಶ್ನೆಯೊಂದನ್ನು ಇಲ್ಲಿ ಈ ಕಲೆಗೆ ಸಂಬಂಧಪಟ್ಟ ರಸಿಕರ ಮುಂದೆ ಸಾದರ ಪಡಿಸುತ್ತಿದ್ದೇನೆ. ಇದನ್ನು ಹಿಂದೆಂದೋ ಎತ್ತ ಬೇಕಾದದ್ದು; ಆದರೆ ಧೈರ್ಯ ಸಾಲಲಿಲ್ಲ. ಈಗಲೂ ಧೈರ್ಯಕ್ಕಿಂತ ಹೆಚ್ಚು ಹುಚ್ಚು-ಸಾಹಸ ಈ ದುಡುಕಿಗೆ ಕಾರಣವೆಂದರೂ ಅಡ್ಡಿ ಇಲ್ಲ!

ನಮ್ಮ ಸರ್ವಶ್ರೀ ಮಹಾಬಲ ಹೆಗಡೆ, ಪಿ. ವಿ. ಹಾಸ್ಯಗಾರ, ಶಂಭು ಹೆಗಡೆ, ರಾಮಚಂದ್ರ ಚಿಟ್ಟಾಣಿ, ಕುಂಬಳೆ ಸುಂದರರಾಯರೇ ಮೊದಲಾದ ಇಂದಿನ ಯಕ್ಷರಂಗದ ಉದ್ಧಾಮ ನಟರನ್ನು (ವೇಷಧಾರಿಗಳನ್ನು) ಕಂಡಾಗಲೆಲ್ಲ ನನ್ನನ್ನು ಪೀಡಿಸುವ ಪ್ರಶ್ನೆಯೆಂದರೆ ಈ ಯಕ್ಷಗಾನ ಒಂದು ಜಾನಪದ ಕಲೆಯೇ? ಇದೇ ಸಂದೇಹ ಸ್ತ್ರೀ ವೇಷಧಾರಿಗಳಾದ ಸರ್ವಶ್ರೀ ಕೋಟ ವೈಕುಂಠ, ಗಜಾನನ ಭಂಡಾರಿ, ಗಜಾನನ ಹೆಗಡೆ, ಅಣ್ಣಪ್ಪ ಪ್ರಭೃತಿಗಳನ್ನು ಮತ್ತೆ ಮತ್ತೆ ಕಂಡಾಗಲೂ ನನ್ನಲ್ಲಿ ತಲೆ ಎತ್ತುತ್ತದೆ.

ಯಕ್ಷಗಾನ ಕಲಾ ಸಂಪತ್ತಿಗೆ ಆಯಾ ಮೇಳಗಳ ಮಾತಿನ ಚಾತುರ್ಯ, ವಾದಗಳ ಮಹತ್ವ

ವಾಗ್ವಿಲಾಸದ ಅರ್ಥ ಗೌರವ, ಶಬ್ದ ಸೌಂದರ್ಯದ ಬೆರಗುಗೊಳಿಸುವ ಪ್ರಪಂಚವನ್ನು ನಾನು ಸೇರಿಸಿಲ್ಲ. ಹಾಗೆಯೇ "ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿ"ಗಳಾದ ಆಖ್ಯಾನ ರಚಿಸಿದ ಆ ಅನೇಕಾನೇಕ ಹಳೆ-ಹೊಸ ಕವಿಗಳ ಕವನಶಕ್ತಿ ವಾಕ್ ಪ್ರೌಢಿಮೆ ಛಂದೋಲಂಕಾರ ಗುಣಗಳ ಸಮೃದ್ಧಿಯ ಗಣನೆಯನ್ನು ಮಾಡಿಲ್ಲ.

ಅದಕ್ಕೂ ಮಿಗಿಲಾಗಿ ಈ ನೃತ್ಯ ಪ್ರಧಾನವಾದ ರಂಗ ಪ್ರಯೋಗದ ಜೀವಾಳವಾದ ಭಾಗವತಿಕೆ-ಯಕ್ಷಗಾನಕ್ಕೇ ಮೀಸಲಾದ ಆ ನೂರಾರು ರಾಗಗಳೂ ಮಟ್ಟುಗಳೂ (ಅವುಗಳಲ್ಲಿ ನಮ್ಮ ಡಾ। ಕಾರಂತರು ಈಚೆಗೆ ಸಂಶೋಧನ ಮಾಡಿ ಎಷ್ಟೆಲ್ಲ ನಷ್ಟ ಭ್ರಷ್ಟವಾಗುತ್ತಿರುವ "ಹೊಸ" ಹಳೆಯ ರಾಗಗಳನ್ನು ಕಂಡು ಗುರುತಿಸಿ ಪ್ರಸ್ತಾರ ಬದ್ಧ ಮಾಡಿ ಕೊಟ್ಟಿದ್ದಾರೆ.) ಆಯಾ ಭಾಗವತರು ತಮ್ಮ ಗುರು ಪರಂಪರೆಯ ವಿಶಿಷ್ಟ ಹಾಡುಗಾರಿಕೆಯ ಶೈಲಿ ಸ್ವರ ಸಂಚಾರ-ವಿಸ್ತಾರಗಳನ್ನು ಕಾಪಾಡಿಕೊಂಡು ಬಂದ ನಿಷ್ಠೆ ಇತ್ಯಾದಿಯನ್ನು ನಾನು ಇಲ್ಲಿ ವಿಸ್ತರಿಸುವುದಿಲ್ಲ. ಹಿರಿಯ ನಾರಾಯಣ; ಉಪ್ಪೂರ ಭಾಗವತರನ್ನು ಜನಪ್ರಿಯ ಮಂಜ ಭಾಗವತರನ್ನು ಮಾತನಾಡಿಸಿದರೆ ಗೊತ್ತಾಗುತ್ತದೆ. ಈ ನಾದ ಸಮುದ್ರದ ತಳ ಅಗಲ. ಇದು ಜನಪದ ಸಂಗೀತವೇ ಅಲ್ಲ!

ಆದರೆ ಇದೆಲ್ಲ ಕಲಾ ಪ್ರೌಢಿಮೆ, ಕರ್ಮ ಕೌಶಲ್ಯ, ತಂತ್ರ ಶುದ್ಧಿ, ಹಸ್ತ (ಪಾದ) ಸಿದ್ಧಿ, ಇವುಗಳ ಒಂದು ಸಂಕೀರ್ಣ ಸಂವಿಧಾನವು ಲಾಸ್ಯ ತಾಂಡವ, ಸುಕುಮಾರ ಅವಿದ್ಧ ನೃತ್ಯ-ನಾಟ್ಯ ಹಾವಭಾವ ಅಂಗಾಂಗ ವಿಕ್ಷೇಪಗಳ ಪ್ರಜ್ಞಾ ಜಾಲವು ಒಂದು ಹಳ್ಳಿಗಾಡು ಮೂಲದ ಗ್ರಾಮೀಣ ರಸಿಕತೆಯ ಮಟ್ಟದ ಪಾಮರ ಪ್ರಪಂಚಕ್ಕೇ ಪರಿಮಿತವಾದ ಒಂದು "ಪ್ರಯೋಗ ವಿಜ್ಞಾನ" (Performing art) ವೆಂದು ಸಹಸಾ ಹೇಳಬಹುದೇ?

ಯುದ್ಧ, ರಥಾರೋಹಣ, ಪ್ರಸ್ಥಾನ, ಒಡ್ಡೋಲಗ, ರಾಕ್ಷಸ ವೇಷದ ಪ್ರವೇಶ, ಜಲಕ್ರೀಡೆ-ಇಂಥ ಹಲವಾರು ಮಾದರಿಯ ನೃತ್ಯ - ನಾಟ್ಯ, ಗತಿ ಜತಿಗಳ ಸಂಮಿಶ್ರರಂಗ ಪ್ರದರ್ಶನವಾದ ಇಂದಿನ ಯಕ್ಷಗಾನ "ಆಟ"ವು ಜಾನಪದ ಕಲೆಯೆಂದು ಹೇಳಲು ಸಾಧಿಸಲು ನನಗಂತೂ ಧೈರ್ಯವಾಗುವುದಿಲ್ಲ.

ಹಾಲಕ್ಕಿ ಒಕ್ಕಲ ಸುಗ್ಗಿ, ಸಿದ್ಧಿಯರ ಅಲೇಕುಂ ನೃತ್ಯ, ಖಾರ್ವಿಗಳ ಫುಗಡಿ ಕೋಲಾಟ, ಲಂಬಾಣಿಗಳ ಜೋಗವ್ವರ ಕುಣಿತ, ಕರಡಿ ಮಜಲು, ನಂದಿ ಕೋಲು ಇಂಥವನ್ನು ನಾವು ನಿರ್ಣಯವಾಗಿ ಜಾನಪದ ಕಲೆಗಳೆನ್ನಬಹುದು. ಅದೇ ರೀತಿ "ಸಂಗ್ಯಾ - ಬಾಳ್ಯಾ", ಸೋಮಯ್ಯ - ಭೀಮಯ್ಯ ಮುಂತಾದ ರೂಪಕಗಳನ್ನು ವಿಶೇಷ ಅನುಮಾನವಿಲ್ಲದೇ ಜಾನಪದ ನಾಟಕ (ಲೋಕ ನಾಟ್ಯ)ವೆನ್ನಬಹುದು, (ಇವುಗಳಲ್ಲಿಯೂ ಅಲ್ಲಲ್ಲಿ ಯಕ್ಷಗಾನದ ಇಲ್ಲವೇ ಕಂಪನಿ ನಾಟಕಗಳ ಭ್ರಷ್ಟ ಅನುಕರಣೆ ಕಂಡು ಬರುತ್ತದೆ. "ಭಾಣ"ದ ಭಂಗಿಯಲ್ಲಿ.)

ಆದರೆ ಈ ದೃಷ್ಟಿಯಿಂದ ಯಕ್ಷಗಾನ- ಅದು ತಾಳಮದ್ದಳೆಯೇ ಇರಲಿ-ಬಯಲಾಟವೇ ಆಗಲಿ ಜಾನಪದ ಕಲೆಯೆಂಬ ಹೆಸರಿಗೆ ತಕ್ಕುದಲ್ಲ. ಹಿಂದೊಮ್ಮೆ ಒಂದೆರಡು ಶತಮಾನಗಳಾಚೆಗೆ ಅದು ಹಳ್ಳಿಯ ಹೈದರು, ಗುಡಿಗಳ ಆವಾರದಲ್ಲಿ, ಬೀದಿ ಚೌಕದಲ್ಲಿ, ಗದ್ದೆ ಬಯಲಲ್ಲಿ ತಾತ್ಕಾಲಿಕ ಸ್ವಯಂಸ್ಫೂರ್ತಿ ವೈಖರಿಯಲ್ಲಿ ಕುಣಿದು ನಡೆ-ನುಡಿದು ಆಡಿ ತೋರಿಸುವ ನಾಟ್ಯ

ಪ್ರಕಾರವಾಗಿದ್ದಿರಬಹುದು. ಆ ಮಾತ್ರಕ್ಕೆ ಆ ಕಲೆ ಇನ್ನೂ ಜಾನಪದವೆಂದೇ ನಾವು ಆತ್ಮವಂಚನೆ ಮಾಡಿಕೊಳ್ಳಬೇಕೇ? (ಅಂದಿನ ವರ್ಣಿಕೆ ವೇಷಭೂಷ ತಿಟ್ಟು ಮಟ್ಟ ಮಾತ್ರ ಇಂದೂ ಇವೆ.)

ಕಲಾನಿಧಿ ಶಿವರಾಮ ಹೆಗಡೆ, ಕೆರೆಮನೆ; ದೇವರು ಹೆಗಡೆ ಮುರೂರು; ಅ್ಯಕ್ಟರ ಜೋಶಿ, ಗೋಕರ್ಣ; ಕೊಂಡದಕುಳಿ ರಾಮ ಹೆಗಡೆ (ಮತ್ತು ಅವರ ದಿ. ಬಂಧುಗಳು) ದಿ. ಮೂರ್ಡ್ಕಣಿ ನಾರಾಯಣ ಹೆಗಡೆ; ದಿ. ಕಾಮೇಶ್ವರ ಮಾಸ್ತರ; ದಿ. ಮೋನಪ್ಪ ನಾಯ್ಕ; ದಿ. ಪರಮಯ್ಯ ಹಾಸ್ಯಗಾರ ಮುಂತಾದ ಕಳೆದ ತಲೆಮಾರಿನ ಹಿರಿಯ ಕಲಾವಿದರನ್ನು ನೆನಪಿಸಿಕೊಂಡರೂ ಅವರೆಲ್ಲರೂ ಸುಸಂಸ್ಕೃತ ಪ್ರಜ್ಞೆ ಅಭಿರುಚಿ ಮತ್ತು ಕಲಾವಂತಿಕೆಯ ನಟರಾಗಿರುವದನ್ನು ನಾವು ಮರೆಯುವಂತಿಲ್ಲ. ಹಾಗೆಯೇ ದಕ್ಷಿಣ ಕನ್ನಡದ ಹಿರಿಯ ನಾಟ್ಯಾಚಾರ್ಯ ಗುರು ವೀರಭದ್ರ ನಾಯಕ ದಿ. ವಿಠಲ ಶಾಸ್ತ್ರಿ ಪ್ರಭೃತಿಗಳು.

೧೮೪೨ರ ಸುಮಾರಿಗೆ ನಮ್ಮಲ್ಲಿಯ ಕರ್ಕಿ ದಶಾವತಾರ ಮೇಳ ಸಾಂಗಲಿ ಬಡೋದೆಯ ತನಕ ಹೋಗಿ ಅಲ್ಲಿಯ ಸಂಸ್ಥಾನಿಕರ ಅರಮನೆಗಳಲ್ಲಿ ತಮ್ಮ ಪ್ರೌಢ ಪ್ರಯೋಗಗಳನ್ನು ಮಾಡಿ ವಿಖ್ಯಾತರಾಗಿ ಪ್ರಶಸ್ತಿ ಗಳಿಸಿ ಬಂದರಲ್ಲದೇ ಇಂದಿನ ಮರಾಠಿ ರಂಗ ಭೂಮಿಗೆ ಮೂಲ ಪ್ರೇರಣೆ ಕೊಟ್ಟು ಬಂದರು. ಆದರೆ ಆಗಿನ ಅವರ ಮೇಳಗಳಲ್ಲಿಯ ಗಣ್ಯ ವೇಷಧಾರಿಗಳನ್ನು ಗಮನಿಸಿದರೆ ಅವರೆಲ್ಲರೂ ಬಹುತೇಕ ಸಂಸ್ಕಾರ - ಪರಿಷ್ಕಾರವುಳ್ಳವರೇ ಆಗಿರಬೇಕೆಂದು ತೋರುತ್ತದೆ. ಅವರೇನು ಸದ್ಯದಂತೆ ಮಾಧ್ಯಮಿಕ ಇಲ್ಲವೇ ಉಚ್ಚ ಶಿಕ್ಷಣ ಪಡೆದಿರಲಿಕ್ಕಿಲ್ಲ. ಆದರೆ ಅವರು ಪಾಮರರಲ್ಲ. ಗ್ರಾಮೀಣರಿದ್ದರೂ ಗ್ರಾಮ್ಯರಿದ್ದಿಲ್ಲ. ತಕ್ಕಮಟ್ಟಿಗೆ ಓದಿಕೊಂಡವರು, ಸಂಪ್ರದಾಯ ಸಂಸ್ಕಾರ ಹೊಂದಿದ ಕಲಾಪ್ರಜ್ಞರು.

ರತ್ನಾಕರ ವರ್ಣಿಯು ಮೊತ್ತ ಮೊದಲು ಯಕ್ಷಗಾನ ನಾಟ್ಯರಂಗದ ಒಂದು ದೃಶ್ಯವನ್ನು ಬಣ್ಣಿಸಿದ್ದೆಂದು ಒಪ್ಪಿಕೊಂಡಿದ್ದಾರೆ. ಅಲ್ಲಿಯೂ ಭರತ ಚಕ್ರೇಶನ ಇದಿರು ನಡೆದ ಆ ಪ್ರಯೋಗದಲ್ಲಿ ಹೆಣ್ಣು ವೇಷ ಒಬ್ಬ ನಟಿಯೇ ಮಾಡಿದ್ದು. ಒಟ್ಟೂ ಆ ಪ್ರಯೋಗ ಒಂದು ದುಂಡುಬಿಯ ಬೀದಿ ನಾಟಕವಾಗಿರಲಿಲ್ಲ. ವಿದ್ವತ್ಪರಿತೋಷದ ಪ್ರಯೋಗವೇ ಆಗಿದ್ದಿರಬೇಕು.

ಕಡಿಮೆ ಕಲಿತವರು ಇಲ್ಲವೇ ಕಲಿತವರೇ ಕಡಿಮೆ ಇದ್ದ ಗುಂಪಿನ ಕಲಾಪ್ರದರ್ಶನ ಜಾನಪದವೆಂದಾದರೆ ಇಂದಿಗೂ ಹಲವಾರು ವೃತ್ತಿ ರಂಗ ಭೂಮಿಯ ನಾಟಕ ಕಂಪೆನಿಯ ನಟರು ವಿಶೇಷ ಕಲಿತವರಿರುವುದಿಲ್ಲ. ಹಿಂದೆ ಗರುಡ ಸದಾಶಿವರಾಯರ, ಹಲಗೇರಿ, ಅಣ್ಣಿಗೇರಿ ಮುಂತಾದ ನಾಟಕ ಕಂಪೆನಿಗಳಲ್ಲಿಯಂತೂ ಬರೆ ಅಕ್ಷರಸ್ಥರೂ ಅನೇಕ ಅನಕ್ಷರಸ್ಥರೂ ಒಳ್ಳೆಯ ನಟರೇ ಆಗಿರುತ್ತಿದ್ದರು. ಅಂದ ಮಾತ್ರಕ್ಕೆ ಆ ರಂಗಭೂಮಿ ಆ ನಾಟಕಗಳು ಜಾನಪದವೆನಿಸಿಕೊಳ್ಳಬಹುದೇ?

ಜಾನಪದವೆಂದರೇನು? ಶಿಕ್ಷಣ ಸಂಸ್ಕಾರವಿಲ್ಲದ ಪಾಮರ ಜನ ತಮ್ಮ ಮನೋವಿನೋದಕ್ಕಾಗಿ ತಾವೇ ಸ್ವೋಪಜ್ಞತೆಯಿಂದ ರೂಪಿಸಿಕೊಂಡ ಕಲಾ ಪ್ರಕಾರ, (ಇದೊಂದು ಶಾಸ್ತ್ರೀಯ ವ್ಯಾಖ್ಯೆಯೆಂದು ನಾನು ಕೊಟ್ಟಿಲ್ಲ.) ಹಿಂದೊಮ್ಮೆ ಜಾನಪದವೆಂಬ ಕಲೆಗಳಲ್ಲಿ ಸ್ಥೂಲವಾಗಿ ಎರಡು ವಿಧಗಳಿದ್ದಿರಬೇಕು. ಒಂದು ಕೇವಲ ಪಾಮರರೇ ಪಾಮರರಿಗಾಗಿ ತಮ್ಮ ಪಾತಾಳಿಯಲ್ಲಿಯೇ

ರೂಪಿಸಿಕೊಂಡ ಕಲಾವಿಧಾನ. ಇನ್ನೊಂದು ಅವರಲ್ಲಿಯೇ ತುಸು ಓದು ಕಲಿತ ಮೇಲ್ವರ್ಗದವರು ತಮ್ಮ ತಲಬಿಗಾಗಿಯೂ ಉಳಿದ ಗ್ರಾಮೀಣ ಜನರ ರಂಜನೆ ಹಾಗೂ ಬೋಧನೆಗಾಗಿ ರೂಪಿಸಿ ಪ್ರಯೋಗಿಸಿದ ಕಲಾ ವಿಧಾನ. ಯಕ್ಷಗಾನ ಈ ಎರಡನೆಯ ಮಾದರಿ. ಇಲ್ಲಿ ಮುಂದೆ ಕ್ರಮೇಣ ದೇಸಿಯು ಮಾರ್ಗದ ದಾರಿ ಧಾಟಿ ಹಿಡಿದು-ಇಂದು ಗ್ರಾಮಾಂತರ ನಾಗರೀಕರಣವಾಗುವಂತೆ! ಒಂದು ರೀತಿ ಪ್ರೌಢಿಮೆಯ ಮಟ್ಟವನ್ನು ಪಡೆದು ಮೆರೆಯಿತು. ಇಂದು ಉನ್ನತ ಪದವೀಧರರೂ ನಿಸ್ಸಂಕೋಚವಾಗಿ ಯಕ್ಷಗಾನದಲ್ಲಿ ವೇಷ ಕಟ್ಟುವರು. ಅರ್ಥ ಹೇಳುವರು. (ಅಂಥವರು ಸುಗ್ಗಿ ಕಟ್ಟುವದಿಲ್ಲ. ಕರಡಿ ಮಜಲು ಹಾಕುವದಿಲ್ಲ. -ಸದ್ಯವಂತೂ ಇಲ್ಲ!)

ಹಳ್ಳಿಯ ಅಮ್ಮನವರ ಪೂಜೆ ಕುಂಬಾರ ಗುನಗನ ಕೈಯಿಂದ ತಪ್ಪಿ ಬ್ರಾಹ್ಮಣರ ಪಾಲಾಗಿ ಅದು ಉತ್ತರೋತ್ತರ ಆಗಮೋಕ್ತವಾದಂತೆಯೇ, ಈ ಭೂತಪೂರ್ವ ಜಾನಪದ ಕಲೆಯ ಗುಣೋತ್ಕರ್ಷದ ಬಗೆ. ಕೆಲವೆಡೆ ಚಂಡೀ ಹವನ, ಬಂಡಿ ಹಬ್ಬ ಎರಡೂ ಸಹಜೀವನ ನಡೆಸುತ್ತಿವೆ. ಯಕ್ಷಗಾನದಲ್ಲಿಯೂ ಇಂದು ಅದೇ ಪರಿ.

ಅದೇನೇ ಇದ್ದರೂ ಸಭಾ ಲಕ್ಷಣ ಪುರಾಣ ಪುಣ್ಯ ಕಥೆಗಳ ಕಥಾ ಸಂದರ್ಭ, ತಕ್ಕ ಮಟ್ಟಿಗಿನ ಬಹುಶ್ರುತತ್ವ, ತನ್ನದೇ ಆದ ರಾಗ- ತಾಳ-ಲಯ- ಪದ-ವಿನ್ಯಾಸ-ಮುದ್ರೆ- ಭಂಗಿ-ರಂಗ-ವ್ಯವಹಾರಗಳ ಕಟ್ಟುನಿಟ್ಟುಗಳನ್ನು ಗಟ್ಟುಮುಟ್ಟಾಗಿ ಬಾಳಿ ಬೆಳೆದು ಬಂದ ಈ ಯಕ್ಷಗಾನ ಕಲೆಯು ಜಾನಪದವೆಂದು ಹೇಳಲು ಬರುವಂತಿಲ್ಲ.

•

[ಶಿರಸಿ ಸಮಾಚಾರ ಪ್ರಜಾರಾಜ್ಯೋತ್ಸವದ ವಿಶೇಷಾಂಕ ೧೯೭೭]

# ಯಕ್ಷಗಾನ ಮತ್ತು ಮರಾಠಿ ರಂಗ ಭೂಮಿ

ಉತ್ಸವ ಪ್ರಸಂಗಗಳಲ್ಲಿ ನಾಟಕಗಳನ್ನು ಪ್ರದರ್ಶಿಸುವುದು ಎಂದಿನಿಂದಲೂ ಬಂದ ರೂಢಿ. (ನಡೆದು ಬಂದ ಎಂದೆನ್ನಬೇಕು ಆದರೆ ನಡೆಯದೆ ಬರಲು ಬರುವುದೇ? ಇರಲಿ) ಈ ಸ್ವಾತಂತ್ರ್ಯೋತ್ಸವದ ದಿನ ನಾಟಕ ಪ್ರಸಂಗದ ಬಗೆಗೇ ಪ್ರಸ್ತಾಪಿಸೋಣವೆಂದು ಕೊಂಡೆ.

ನಮ್ಮ ಕನ್ನಡ ರಂಗ ಭೂಮಿಯಲ್ಲಿ ಉತ್ತರ ಕರ್ನಾಟಕದಲ್ಲೆಲ್ಲ ನಾಟ್ಯ-ನಾಟಕ ನೇಪಥ್ಯ ಇತ್ಯಾದಿಗಳ ಮೇಲೆ ದಟ್ಟವಾದ ಪ್ರಭಾವ ಬೀರಿದ್ದು ಸ್ಪಷ್ಟವಾಗಿಯೇ ಮರಾಠಿ ನಾಟಕ ಕಂಪೆನಿಗಳು. ಶ್ರೀ ನಾರಾಯಣ ರಾಜಹಂಸ (ಬಾಲಗಂಧರ್ವ) ಇವರ ಗಂಧರ್ವ ನಾಟಕ ಮಂಡಳಿಯೂ ದಿ. ಶ್ರೀ ಬಾಬುರಾವ್ ಪೆಂಢಾರ್‌ಕರ್ ಇವರ "ಲಲಿತ ಕಲಾದರ್ಶನ" ನಾಟಕ ಮಂಡಳಿಯೂ, ಮಂಗೇಶಕರ ಗಾಯಕಿಯ ತಂದೆ ದಿ. ಮಾಷ್ಟರ್ ದೀನಾನಾಥರ "ಬಲವಂತ ಸಂಗೀತ" ನಾಟಕ ಕಂಪೆನಿ, ಮತ್ತು ಶ್ರೀ ಶಂಕರರಾಮ ಸರ್‌ನಾಯಕ (ಮಹಾರಾಷ್ಟ್ರ ಕೊಂಕಣ) "ಯಶವಂತ ಸಂಗೀತ ಕಂಪೆನಿ" ಶ್ರೀಮತಿ ಹೀರಾಬಾಯಿ ಬಡೊದೇಕರರೂ ನಮ್ಮ ಸುಪ್ರಸಿದ್ಧ ಸಂಗೀತಾ ಚಾರ್ಯ ದಿ. ಶ್ರೀರಾಮಭಾವೂ ಕುಂದಗೋಳ (ಸಹಾಯ ಗಂಧರ್ವ) ಇವರ ನಾಟಕ ಮಂಡಳಿ-ಇವೆಲ್ಲ ಹುಬ್ಬಳ್ಳಿಯವರೆಗೂ ಮುಂದೆ ಕಾರವಾರ ಕುಮಟೆಯವರೆಗೂ ಬಂದು ತಮ್ಮ ಜನಪ್ರಿಯ ನಾಟಕಗಳನ್ನು ಪ್ರದರ್ಶಿಸಿದವು. ಈ ನಾಟಕ ಪದ್ಧತಿಯನ್ನು ಪ್ರಸಾರಗೊಳಿಸುವುದಕ್ಕೂ ಮೊದಲು ಮೂಲದಲ್ಲಿ ಸಾಂಗಲಿಯ ಶ್ರೀ ವಿಷ್ಣುಪಂತಭಾವೆ, ಬೆಳಗಾಂವಿಯ ಗುರ್ಲಹೊಸೂರು ಶ್ರೀ ಅಣ್ಣಾಸಾಹೇಬ ಕಿರ್ಲೋಸ್ಕರ ಕೊಲ್ಹಾಪುರದ ಶ್ರೀ ಗಣಪತಿ ರಾವ್ ಜ್ಯೋಶಿ ಪಭೃತಿಗಳ ನಾಟಕ ಕಂಪೆನಿಗಳು ಕರ್ನಾಟಕದ ಈ "ಸದರ್ನ ಮರಾಠಾ" ಸೀಮೆಯಲ್ಲಿ ಮರಾಠಿ ನಾಟಕಗಳ ಪ್ರಭಾವ ಸಾಕಷ್ಟು ಪ್ರಚಾರ ಗೊಳಿಸಿದ್ದವು.

ಆದರೆ ಇದು ಅರ್ಧಸತ್ಯ, ಅದೂ ಉತ್ತರಾರ್ಧ. ಈ ಸತ್ಯದ ಪೂರ್ವಾರ್ಧವೆಂದರೆ ಈ

ಮರಾಠೀ ರಂಗಭೂಮಿ ಹುಟ್ಟಿದ್ದು ಮೂಲದಲ್ಲಿ ನಮ್ಮ ಕನ್ನಡದ ಅದೂ ಉತ್ತರ ಕನ್ನಡದ ವಿಶಿಷ್ಟ ನಾಟ್ಯ ರಂಗದಿಂದಲೇ. ನಮ್ಮೆಲ್ಲರಿಗೂ ಗೊತ್ತಿರುವಂತೆ ಈ ಹೆಮ್ಮೆ ಹಿರಿಮೆಗಳ ಮೂಲ ನಮ್ಮ ಕರ್ಕಿಯ ಹಾಸ್ಯಗಾರ ಮನೆತನದ ಯಕ್ಷಗಾನಮೇಳ. ಇದನ್ನು ನಾವು ಅಟ್ಟಹಾಸದಿಂದ ಹೇಳಬಹುದು. ಮರಾಠಿ ರಂಗ ಭೂಮಿಯ ಇತಿಹಾಸಗಾರರೇ ಈ ಸತ್ಯವನ್ನು ಅಸಂದಿಗ್ಧವಾಗಿ ಒಪ್ಪಿಕೊಳ್ಳುತ್ತಾರೆ. ಈ ವಿಷಯ ನಮ್ಮ ತಲೆಮಾರಿನವರಿಗೆಲ್ಲ ಗೊತ್ತು. ಆದರೆ ಹೊಸ ಪೀಳಿಗೆಯ ರಸಿಕರಿಗಾಗಿ ಈ ಚರ್ವಿತ ಚರ್ವಣ ಮಾಡುತ್ತಿದ್ದೇನೆ. - ನಾಟಕದ್ದೇ ಮಾತಿನಂತೆ, ಆಟದ ಪ್ರಯೋಗದಂತೆ!

ಈ ಯೋಗಾಯೋಗ ಕೂಡಿ ಬಂದದ್ದು ೧೮೪೨ರಲ್ಲಿ. ಆ ವರ್ಷ ಯಾವ ಸಂದರ್ಭದಲ್ಲಿಯೋ ಗೊತ್ತಿಲ್ಲ. ಹೊನ್ನಾವರ ತಾಲೂಕಿನ ಕರ್ಕಿಯ ಯಕ್ಷಗಾನ ಮೇಳವು ಸಾಂಗಲಿಗೆ ಹೋಯಿತು ಮತ್ತು ಮರಾಠೀ ರಂಗಭೂಮಿಯ ಬೀಜಾರೋಪಣೆಮಾಡಿ ಬಂದಿತು. ನೃತ್ಯ-ಗೀತೆ ಪ್ರಧಾನವಾದ ಯಕ್ಷಗಾನ ಬಯಲಾಟದ ಪ್ರಯೋಗವನ್ನು ಕಂಡು ಮೆಚ್ಚಿ ಕೊಂಡಾಡಿ ಸಾಂಗಲಿ ಸಂಸ್ಥಾನದ ಮಹಾರಾಜರು ಈ ಮೇಳಕ್ಕೆ ಒಂದು ಕೃಷ್ಣನ ಮೂರ್ತಿಯನ್ನು ಉಡುಗೊರೆಯಾಗಿ ಇತ್ತರು. ಅದು ಇಂದಿಗೂ ಕರ್ಕಿಯ ಹಾಸ್ಯಗಾರರ ಮನೆಯಲ್ಲಿ ಇದೆಯೆಂದು ನಂಬಲಾಗುತ್ತದೆ. (ಈ ಪ್ರತಿಮೆ ಸಾಂಗಲಿಯಲ್ಲಿ ಅಲ್ಲ. ಬಡೋದೆಯಲ್ಲಿ ಅಲ್ಲಿಯ ಸಂಸ್ಥಾನಿಕರು ಕೊಟ್ಟದ್ದು - ಎಂದು ಒಂದು ಹೇಳಿಕೆ ಇದೆ.)

ಯಕ್ಷಗಾನ ಆಟಕ್ಕೆ ಮೆಚ್ಚಿದ ಸಾಂಗಲಿಯ ಸಂಸ್ಥಾನಿಕರ ಈ ಪ್ರೋತ್ಸಾಹದಿಂದ ಶ್ರೀ ವಿಷ್ಣುದಾಸಭಾವೆ ಎಂಬವರು ಮರಾಠಿಯಲ್ಲಿ ಪ್ರಪ್ರಥಮ ಸಾಗ್ರ ಸಂಗೀತ ನಾಟಕ ರಚಿಸಿದರು. ಅವರು ತಮ್ಮ ರಚನೆಗೆ ಇಟ್ಟ ಹೆಸರೇ "ನಾಟ್ಯ ಕವಿತೆ" ಎಂದು ತಮ್ಮ "ನಾಟ್ಯ ಕವಿತಾ ಸಂಗ್ರಹ"ದ ಪ್ರಸ್ತಾಪನೆಯಲ್ಲಿ ಅವರು ಬರೆದಿದ್ದಾರೆ:- ಮಹಾರಾಷ್ಟ್ರಕ್ಕೆ ನೃತ್ಯನಾಟಕಗಳ ಪರಂಪರೆ ಇಲ್ಲವಾದ್ದರಿಂದ ಎಲ್ಲ ಪಾತ್ರಗಳು ಹಾಡುವುದು, ಕುಣಿಯುವುದು ಅವರಿಗೆ ಸೇರಲಿಲ್ಲ "ಇಂಥ ಬೀಭತ್ಸ ಮತ್ತು ಒಂದು ಆಸಡ್ಡಾಳ ಕೃತಿಯಿಂದ ಶ್ರೀಮಂತರ (ದೊರೆಗಳ) ಮನಸ್ಸು ಸೊಗಸು ಕಾಣಲಿಲ್ಲ".

ಶ್ರೀ ಭಾವೆ ಹೀಗೆ ಹೇಳಲು ಕಾರಣ. ಅವರಿಗೆ ಯಕ್ಷಗಾನದ ನಾಟ್ಯ-ಸಂಕೇತಗಳ ಹಸ್ತ-ಮುದ್ರೆ ಇತ್ಯಾದಿಗಳ ಮರ್ಮ ತಿಳಿದಿರಲಿಕ್ಕಿಲ್ಲ. ಅವರು ಯಕ್ಷಗಾನದ ಕುಣಿತ ಮತ್ತು ಬಣ್ಣ ಬೆಡಗು ಬಿಟ್ಟು ಇತರ ಸಂಗತಿಗಳನ್ನು ಎತ್ತಿಕೊಂಡರು. ಮರಾಠೀ ನಾಟ್ಯ ಸಂಗೀತದ ಇತಿಹಾಸ ಬರೆದ ದಿ। ಹ.ರಾ. ಮಹಾಜನಿಯುವರು ವಿಷ್ಣುದಾಸ ಭಾವೆಯುವರ ಕೆಲವು ರಚನೆಗಳನ್ನು ಉದಾಹರಿಸಿದ್ದಾರೆ. ಅವನ್ನು ಓದಿದಾಗ ಯಕ್ಷಗಾನ ಪ್ರಸಂಗಗಳ ಮರಾಠೀಕರಣವೇ ಅಲ್ಲಿ ಕಂಡುಬರುತ್ತವೆ. ಈ ಕೃತಿಗಳಲ್ಲಿ ಗದ್ಯ ಸಂವಾದಗಳೇ ಇಲ್ಲ ಎಲ್ಲ ಪದ್ಯ-ಗೀತಗಳೇ. ಅಂದಿನಿಂದ ಮುಂದೆ ಒಂದು ಶತಮಾನ ಮರಾಠೀ ರಂಗಭೂಮಿಯು ಸಂಗೀತ ನಾಟಕಗಳಲ್ಲಿ ಒಂದೊಂದರಲ್ಲಿಯೂ ನೂರಾರು ಪದ್ಯಗಳು ಇರುವ ರೂಢಿಬಿದ್ದಿದ್ದು ಈ ಮೂಲದ ಯಕ್ಷಗಾನ ಗೀತಾವಳಿಯದೇ ಪ್ರಭಾವ. ಹಿಂದಿನ ಮೂಲದ ಪದ್ಯಗಳು ನಿಜವಾಗಿಯೂ ನಾಟ್ಯ ಸಂಗೀತವಾಗಿದ್ದವು. ಅಂದರೆ ಸಂಗೀತಮಯ ಅಭಿನಯಕ್ಕೆ ಅನುಕೂಲ ಗೀತಗಳಾಗಿದ್ದವು. ಮುಂದೆಲ್ಲ ನಾಟ್ಯದ ನಡುವೆ ನಾಟಕದ ಗೈಮೆಯ ಓಘತಡೆದು ಸಂಗೀತದ ಪ್ರವಾಹ ಹರಿಯ ಹತ್ತಿತ್ತು! ಅಂದಿನ ಭಾವೆ ಅಣ್ಣಾ ಸಾಹೇಬ ಕಿರ್ಲೋಸ್ಕರ ಮುಂತಾದವರ ರಂಗಗೀತಗಳ ಅನೇಕಾನೇಕ

ಧಾಟಿಗಳು ಕನ್ನಡ ಮೂಲದವೇ ಆಗಿದ್ದವು.

ಯಕ್ಷಗಾನ ವೇಷ ಭೂಷೆಯ ಪ್ರಭಾವ ವಿಷ್ಣುದಾಸ ಭಾವೆಯವರ ಪರಂಪರೆಯ ನಾಟಕ ಮಂಡಳಿಗಳ ಮೇಲೆ ಬಲಿಷ್ಠವಾಗಿತ್ತು. ಇದಕ್ಕೆ ಸಾಕ್ಷಿ ಅಂದಿನ ಈ ಮಂಡಳಿಗಳ ಕೆಲವು ಛಾಯ ಚಿತ್ರಗಳು ಸಿಗುತ್ತವೆ. ಅದೇ ರೀತಿ ಅಂದಿನ ಕೆಲವು ನಾಟಕ ಪ್ರಯೋಗಗಳ ವರ್ಣನೆಯಿಂದ ಅವು ನಾಟಕಗಳೋ ಯಕ್ಷಗಾನ ಆಟಗಳೋ ಎಂಬ ಶಂಕೆ ಉಂಟಾಗುತ್ತದೆ. ೧೯ನೇಯ ಶತಮಾನದ ಪೂರ್ವಾರ್ಧದಲ್ಲಿ ಆಗಿ ಹೋದ ನಮ್ಮ ಶಾಂತಕವಿಗಳು ಬರೆದಿಟ್ಟಂತೆ ಪರದೆ, ಸೀನರಿ, ತಬಲೆ, ತಾಳ ಈ ವಾದ್ಯಗಳೂ ಗಣಪತಿ, ಶಾರದೆ ಈ ದೇವತಾ ಪಾತ್ರಗಳು ಕಟ್ಟಿದ ಥಿಯೇಟರು ಹೆಂಗಸರ ಪಾತ್ರ ಇತ್ಯಾದಿಗಳನ್ನು ತಂದು ಮರಾಠಿ ಕಂಪನಿಗಳು ಬಹಳಷ್ಟು ಹಣ ಗಿಟ್ಟಿಸಿದವು. ಆದರೆ ಇವು ಮೂಲಭೂತ ಸ್ವರೂಪದ ವ್ಯತ್ಯಾಸಗಳಿದ್ದಿಲ್ಲ. ಈ ಮಾತಿನಿಂದ ಕನ್ನಡದ ಯಕ್ಷಗಾನ ಮತ್ತು ಭಾವೆ ಪರಂಪರೆಯ ನಾಟಕ - ಇವೆರಡರಲ್ಲಿ ಮೂಲಭೂತ ಭೇದವಿದ್ದಿಲ್ಲ. ಯಕ್ಷಗಾನದ ಗಣಪತಿ ಪೂಜೆ ಅಲ್ಲಿಯೂ ಇತ್ತು. ಪರದೆ ಸೀನರಿ ಕೆಲವೆಡೆ ಸ್ತ್ರೀಯರೇ ಸ್ತ್ರೀವೇಷ ಮಾಡುವದು-ಇತ್ಯಾದಿ ಹೊಸತು. ಒಟ್ಟಾರೆ ಒಂದೇ ನಾಟ್ಯ ಪರಂಪರೆಯ ಈ ಎರಡು ಪ್ರಾದೇಶಿಕ ಭೇದಗಳಾಗಿ ಅವು ತೋರಿದವು.

ಇನ್ನೂ ಒಂದು ನಿಟ್ಟಿನಿಂದ ಯಕ್ಷಗಾನದ ಗಂಗೋತ್ರಿಯಿಂದಲೇ ಮರಾಠಿ ನಾಟಕ ಸಂಪ್ರದಾಯ ಹರಿದು ಬಂದಿತು. ವಿಷ್ಣುದಾಸರಿಗಿಂತಲೂ ಕೆಲವು ವರ್ಷ ಹಿಂದೆಯೇ ತಂಜಾವರದ ಮರಾಠಿ ರಾಜರೂ ಯಕ್ಷಗಾನ ಪರಂಪರೆಯ ಮರಾಠಿ ನಾಟಕಗಳನ್ನು ರಚಿಸಿದರು. ತಂಜಾವರದಲ್ಲಿ ಶಿವಾಜಿಯ ತಮ್ಮ ವ್ಯಂಕೋಜಿಯ ರಾಜವಂಶ ಆಳುತ್ತ ಬಂದಿತ್ತು. ಆ ವಂಶದ ಶಾಹರಾಜ ಭೋಸಿಲೆ (1684-1771) ಇವನು ಹರಿಹರ ವಿಲಾಸ, ಸುಭದ್ರಾ ಪರಿಣಯ, ಗಂಗಾ - ಕಾವೇರಿ ಸಂವಾದ ಮುಂತಾದ ಯಕ್ಷಗಾನ ಶೈಲಿಯ ನಾಟಕಗಳನ್ನು ಬರೆದನು.

ಗೋವೆ-ಕೊಂಕಣ ಪಟ್ಟಿಯಲ್ಲಿಯೂ "ದಶಾವತಾರ" ನಾಟಕಗಳು ರೂಢಿಯಲ್ಲಿ ಬಂದವು. ಅವು ವಿಷ್ಣುದಾಸ ಪರಂಪರೆಯ ನಾಟಕಗಳನ್ನು ಹೋಲುವಂತಹವು. ಯಾರನ್ನು ಯಾರು ಅನುಕರಿಸಿದರೆಂಬ ಬಗೆಗೆ ಮರಾಠಿ ವಿದ್ವಾಂಸರ ನಡುವೆ ದೊಡ್ಡ ವಾದವೇ ಎದ್ದಿತ್ತು. ಆದರೆ ಈ ಗೋಮಾಂತಕ - ಕೊಂಕಣಿಗಳಲ್ಲಿಯ ನಾಟಕ ಪರಂಪರೆಗೆ ಯಕ್ಷಗಾನವೇ ಮೂಲ 'ದಶಾವತಾರ' ಎಂಬ ಅದರ ಹೆಸರೇ ಅದಕ್ಕೆ ನಿದರ್ಶನ. ಕನ್ನಡ ನಾಡಿನಿಂದಲೇ ಈ ಪರಂಪರೆ ಅಲ್ಲಿ ಹೋಗಿ ಬೇರೂರಿ ಬೇರೆಯಾಗಿ ಬೆಳೆಯಿತು.

1728ರಲ್ಲಿ ಅಡಿವರ್ಸ್ಯಾ ಎಂಬಲ್ಲಿ ಶ್ಯಾಮಜಿ ನಾಯಕಕಾಳಿ ಎಂಬುವರು ಕರ್ನಾಟಕದಿಂದ 'ದಶಾವತಾರ' ತಂದರು ಎಂದು ಅಲ್ಲಿಯ ಸ್ಥಳೀಯ ವೃತಾಂತ (ಇನ್ನು ಈ ದಶಾವತಾರ ಮಂಡಳಿ ಎಲ್ಲಿಯದು? ಹತ್ತಿರದ ಗಂಗಾವಳಿಯ ಈಚೆಯ ಉತ್ತರ ಕನ್ನಡದಿಂದಲೇ ಹೋದದ್ದಿರಬೇಕು. ಅಂದು ಗೋವೆಯ ವಿಜಯನಗರದ ಅಧೀನವಿತ್ತು. ಮುಂದೆ ಸ್ವಾದಿಯ ಅರಸರು ಆಳಿದರು). ಶ್ರೀ ಜನಾರ್ದನ ವಿಷ್ಣು ಕಾಮತರೆಂಬ ವಿದ್ವಾಂಸರ ಅಭಿಪ್ರಾಯದಂತೆ, ಗೋಮಾಂತಕದ ಹಳೆಯ ನಾಟಕಗಳ ಪ್ರಯೋಗಗಳನ್ನು ನೋಡಿದವರಿಗೆ ಒಂದು ಸಂಗತಿ ಗೊತ್ತಾಗುವದು; ಸೂತ್ರಧಾರನ ಬಾಯಿಯ ಗಣಪತಿ ಸುತ್ತಿಯ ಪದ್ಯಗಳೂ ಕಾಳಗ ಅಥವಾ ಪಾತ್ರಗಳ ಆಗಮನ-ನಿರ್ಗಮನಗಳ

ಸಂದರ್ಭದಲ್ಲಿ ವಾದ್ಯಾನುಕೂಲವಾಗಿ ಇಟ್ಟ ಪದಗಳ ತತ್ಕಾರ ಶಬ್ದಗಳು ಕನ್ನಡ ಭಾಷೆಯಿಂದ ಇಲ್ಲವೆ ಪದ್ಧತಿಯಿಂದ ಬಂದಿರುತ್ತವೆ.

ಅರ್ಥಾತ್ ಸಾಂಗಲಿಗೆ ಹೋದ ಯಕ್ಷಗಾನವೇನು ಗೋವೆಗೆ ಹೋದ ದಶಾವತಾರವೇನು ಎರಡೂ ಒಂದೇ ಬಯಲಾಟ. ಅಂದು ಶತಮಾನಗಳ ಹಿಂದೆ ನಡೆದ ಈ ಸಾಂಸ್ಕೃತಿಕ ಆದಾನ - ಪ್ರದಾನದ ಋಣ. ಇಂದು ಮರಾಠಿ ರಂಗಭೂಮಿಯು ಕನ್ನಡ ರಂಗಭೂಮಿಗೆ ಪ್ರೇರಣೆ ನೀಡಿ ತೀರಿಸಿತೆನ್ನಬಹುದು.

ಆದರೆ ಒಂದು ವಿಚಿತ್ರವೆಂದರೆ ಯಕ್ಷಗಾನದಿಂದ ಉಗಮ ಹೊಂದಿದ ಮರಾಠೀ ರಂಗಭೂಮಿ ಮುಂದೆ ಸಂಸ್ಕೃತ, ಮತ್ತು ಇಂಗ್ಲೀಷ್ ನಾಟಕಗಳಿಂದಲೂ ಪ್ರೇರಣೆ ಪಡೆಯಿತು. ಶಾಕುಂತಲ, ಮೃಚ್ಛಕಟಕ, ಹ್ಯಾಮ್ಲೆಟ, ಒಥೆಲೊ, ವೇಣಿ ಸಂಹಾರ ಮುಂತಾದವು ಒಂದು ಶತಮಾನ ಹಿಂದೆಯೇ ಮರಾಠಿ ರಂಗದಲ್ಲಿ ಪ್ರಭಾವಿಯಾಗಿ ಮೆರೆದವು. ಆದರೆ ಈ ಬಗೆಯ ದಾಖಲೆ ಕನ್ನಡ ರಂಗಭೂಮಿ ಕಾಣಿಸಿದ್ದು ಉತ್ತರ ಕರ್ನಾಟಕದಲ್ಲಿ ಅಲ್ಲ, ಹಳೇ ಮೈಸೂರಿನಲ್ಲಿ ದಿ. ವರದಾಚಾರ್ಯರು ಶಾಕುಂತಲ, ರತ್ನಾವಳಿ, ರೋಮಿಯೋ-ಜ್ಯುಲಿಯೆತ್ (ರಾಮವರ್ಮ ಲೀಲಾವತಿ) ಮುಂತಾದವನ್ನು ರಂಗದಲ್ಲಿ ಮೆರೆಯಿಸಿದರು. ಆದರೆ ಮರಾಠಿ ರಂಗಭೂಮಿ ಪ್ರೇರಕವಿದ್ದಿಲ್ಲ.

•

(ಸಹಚರ: ಸ್ವಾತಂತ್ರ್ಯದಿನೋತ್ಸವಾಂಕ ౧೭-೮-೭೬)

# ಸ್ವರ-ಲಯ-ಭಾವ-ಗತಿ ಮತ್ತು ಡಾ। ಕಾರಂತರು

"ಕನ್ನಡಿಯಲ್ಲಿ ಕಂಡಾತ" ನೋಡುವಾತನಂತೆಯೇ ಕಾಣುತ್ತಾನೆ. ಆದರೂ ಸ್ವಲ್ಪ ವ್ಯತ್ಯಾಸ ಎಡ ಬಲವಾಗಿರುತ್ತದೆ. ಆದರೆ ಕಲೆಯ ಕನ್ನಡಿಯಲ್ಲಿ ಒಂದು ಅದ್ಭುತ ವ್ಯಕ್ತಿತ್ವವನ್ನು ಹೊಸತಾಗಿ ಕಂಡಾಗ? ಅದೊಂದು ಬೇರೆಯೇ ಅನುಭವ. ಒಂದು ಅಭೂತಪೂರ್ವ ಅಷ್ಟೇ ಅವಿಸ್ಮರಣೀಯ ಅನುಭೂತಿ.

ಅಂಥ ಅನುಭೂತಿ ನನ್ನದಾಯಿತು, ೨೦ನೆಯ ದಿನಾಂಕದ ಸಂಜೆಗೆ ಅಂಕೋಲೆಯ ಗೋಖಲೆ ಸೆಂಟಿನರಿ ಕಾಲೇಜಿನ ಪ್ರಾಧ್ಯಾಪಕರ ಪ್ರಶಸ್ತವಾದ ಕೋಣೆಯಲ್ಲಿ ಡಾ. ಶಿವರಾಮ ಕಾರಂತರ ಆ ಅಮೋಘ ಉಪನ್ಯಾಸವನ್ನು ಕೇಳಿದಾಗ ಕಂಡಾಗ. ಸಂಸ್ಕೃತ ಶಬ್ದ 'ಚಕ್ಷು' ಹಾಗೂ ಧಾತು ಚಕ್ಷ್ ಒಂದೇ ಮೂಲವಂತೆ. ಆದರೆ 'ಚಕ್ಷು' ಅಂದರೆ ಕಣ್ಣು, ಚಕ್ಷ್ ಅಂದರೆ ಹೇಳು ಅನ್ನು ! ಅಂದು ಡಾ। ಕಾರಂತರ ಇದಿರು ಕೂತ ನಾವೆಲ್ಲ ಕಣ್ಣೆಲ್ಲ ಕಿವಿಯಾಗಿ, ಮೈಯೆಲ್ಲ ಅರಿವಾಗಿ ಒಂದುವರೆ ಗಂಟೆ ಕಾಲ ಪಡೆದ ಆ ಅನುಭವ ಆ 'ಚಕ್ಷ್-ಚಕ್ಷು'ಗಳ ಅದ್ವಿತೀಯ ಅದ್ವೈತವನ್ನು ಹಿಂದೆಂದೂ ತಿಳಿದಿರದಂತೆ ಮನಗಂಡೆವು.

ಡಾ। ಕಾರಂತರ ಆ ನ್ಯಾಸ-ವಿನ್ಯಾಸಗಳಿಂದ ಕೂಡಿದ ಉಪನ್ಯಾಸದ ವಿಷಯ 'ಸಂಗೀತ, ಭಾವ, ಮತ್ತು ಚಲನೆ' ('Music, Meaning and Movement'). ಇದು ಅವರಿಗೆ ಹೊಸ ವಿಷಯವೇ ಅಲ್ಲ. ಅವರ ಕಿನ್ನರ ನೃತ್ಯದ ಕಾಲದಿಂದಲೂ 'ಕಾಲನಟ'ನಾಗಿ ಕಾಲಿಗೆ ಗೆಜ್ಜೆ ಕಟ್ಟಿಯೋ ಬಿಟ್ಟೋ ಕುಣಿದಾಗಿನಿಂದಲೂ ಕಾರಂತರ ಕಲ್ಪನಾ ಲೋಕದ ಕಲಾದರ್ಶನದಬಿಂಬವಾಗಿ ಬಯಲಿಗೆ ಬೆಳಕಿಗೆ ಬಂದಿತ್ತು. ಅವರ ರಾಮ ಐತಾಳನ ಪಿಟೀಲಿನಲ್ಲಿ ಕಲ್ಪನಾ ಸಂಗೀತವಾಗಿ ಈ ಕಲೆಯು ಕಡಲ ಮೊರೆತವನ್ನು ಮೀಟಿತ್ತು - 'ಮರಳಿ ಮಣ್ಣಿಗೆ' ಕಾದಂಬರಿಯಷ್ಟು ಹಿಂದೆ. ಅವರ 'ಮೊಗ ಪಡೆದ ಮನ'ದಲ್ಲಿಯೂ ಅದೇ ರಾಮ ಐತಾಳನು ಪಿಟೀಲಿನೊಂದಿಗೆ ಪ್ರವೇಶಿಸಿ 'ನದೀ-ಸಾಗರ'

ನೃತ್ಯವಾಗಿ ರೂಪತಾಳಿತ್ತು.

ಹೀಗೆ ಹಲವಾರು ದಶಕಗಳಿಂದಲೂ ಅವರ ಹೃದ್ರಂಗದಲ್ಲಿ ಇಂದಿಗೂ ಜಾಗೃತವಾಗಿ ಊರ್ಜಿತವಾಗಿ ನಲಿದಾಡುತ್ತಿರುವ ಈ ಸ್ವರ-ಲಯ-ಗತಿಗಳ ಭಾವನಾತ್ಮಕ ಹಾಗೂ ಭಾವ (ಅರ್ಥ) ನಿರ್ಭರ ಸಮನ್ವಯದ ಅನ್ವಯಾರ್ಥವನ್ನು ಮೊನ್ನೆ ಅವರ ಚರ್ಯೆ-ಚಲನೆ-ಚೇಷ್ಟತೆಗಳಿಂದ ಕೂಡಿದ ಸಂಗೀತದ ಅವಿಷ್ಕಾರದಲ್ಲಿ ನಾವು ಸ್ವಲ್ಪದರದಲ್ಲಿ ಕಂಡುಕೊಂಡೆವು. ನಿಜವಾಗಿಯೂ ಈ ಕಲೆಯ ಕನ್ನಡಿಯಲ್ಲಿ ಕಂಡ ಕಾರಂತ ಚಿರ ತರುಣ. "ಅಮರ ನಿರ್ಜರ ದೇವ". ೭೦ ಎಂದೋ ದಾಟಿದ ಈ ಐನ್‌ಸ್ಟೈನ್ ಮುಖಮುದ್ರೆಯ ತುಸು ಉಗ್ರ ಗಂಭೀರವಾಗಿಯೇ ಕಾಣುವ ಕಲಾವಿದ ಅಹುದು ಡಾ। ಕಾರಂತರು ಮೂಲತಃ ಹಾಗೂ ಅಂತಹ ಕಲಾವಿದರೇ! ಆ ದಿನ ಆ ಪ್ರಾತ್ಯಕ್ಷಿಕದ ಭಾಷಣದ ಕನ್ನಡಿಯಲ್ಲಿ ಕಂಡಾತ ಕ್ಷಣಕ್ಷಣಕ್ಕೆ ಬೇರೆಯಾಗುತ್ತಿದ್ದನು.

ಸ್ವರ-ಲಯ-ಭಾವಗಳ ಜತಿ ಗತಿಗಳ ಸೂಕ್ಷ್ಮವನ್ನು ಅವರು ಅಂದು ಮಾರ್ಮಿಕವಾಗಿ ಹೃದಯಸ್ಪರ್ಶಿಯಾಗಿ ಪಾರದರ್ಶಿಯಾಗಿ ಪ್ರಕಟಿಸಿದರು. ಶತಮಾನಗಳಿಂದಲೂ ಸಂಗೀತ ಬೆಳೆದು ಬಂದ ಪರಿ. ಭರತನಾಟ್ಯದ, ಕಥಕ್ಕದ, ಕಥ್ಥಕ್ಕಳಿಯ ರೀತಿಗಳಂತೆಯೇ ಒಂದು ಶಾಸ್ತ್ರೀಯ, ಮಾರ್ಗೀಯ, ನಿತ್ಯಜೀವನದ ಸಂಸರ್ಗದಿಂದ ಬೇರೆಯಾಗಿ 'ಪರಿಶುದ್ಧ'ವಾಗಿ ಅತ್ಯಂತ ಶೈಲಿಬದ್ಧ (Stylised) ಆಗಿ ಅಚ್ಚುಗಟ್ಟಿ ಕೊಂಡು (Stereotyped) ತನ್ನದೇ ಆದ ಒಂದು ಸಂಕೀರ್ಣತೆಯನ್ನು ತೊಡಗಿಸಿಕೊಂಡು ಇಂದಿನ ವಿದಗ್ಧ (Sophisticated) ಶಿಷ್ಟ ವೈಶಾಲ್ಯವನ್ನು ಪಡೆದು ನಿಂತಿದೆ. ಆದರೆ ಮೂಲತಃ ಜೀವಾಳದಲ್ಲಿ ಭಾವ-ರಾಗ-ತಾಳಗಳ ಸಂಪೃಕ್ತಿ ಹಾಗೂ ಪ್ರತಿಪತ್ತಿ ಕಾಳಿದಾಸ ಹೇಳಿದ ವಾಗಾರ್ಥಗಳಂತೆ ಅನ್ಯೋನ್ಯ ಹಾಗೂ ಅನನ್ಯವಾದ ಎರಕವನ್ನು ಹೊಂದಿಯೇ ಆಕಾರ ಪಡೆದದ್ದು-ಇಂದೂ ಅದು ಜೈವಿಕ ನೈಜತೆಯನ್ನು ಪಳಗಿಸಿಕೊಳ್ಳಬೇಕಿದ್ದರೆ-ಹಾಗೆಯೇ ಪಡೆಯುತ್ತಿರಬೇಕಾದದ್ದು-ಎಂಬುದನ್ನು ಅಂದು ಡಾ. ಕಾರಂತರು ನಮ್ಮ ನಿದರ್ಶನಕ್ಕೆ ತಂದುಕೊಟ್ಟರು.

'ಹಿಮ್ಮೇಳ'ಕ್ಕೆ ಬರೆ ಹಾರ್ಮೋನಿಯಂ ವಾದಕರನ್ನು (ಅಂಕೋಲೆಯ ಪ್ರಸಿದ್ಧನುರಿತ ಹಾರ್ಮೋನಿಯಂ ಕಲಾವಿದ ಶ್ರೀ ಸುಬ್ರಹ್ಮಣ್ಯ ಶೆಟ್ಟರನ್ನು) ಇಟ್ಟುಕೊಂಡು ಅದೇ ಉದ್ದ ಮೇಜಿನ ಇನ್ನೊಂದು ತುದಿಗೆ ಕೂತು ಕಾರಂತರು ಈ ಹೊಸ ಕೌತುಕರಸವನ್ನು ಸಾಕ್ಷಾತ್ಕರಿಸಲು ಆರಂಭಿಸಿದರು.

ಅದೆಂಥ ಕಂಠಶ್ರೀ! ಎಂಥ ಅಲಾಪನೆಯ ಸೊಗಸು ! ಎಂಥ ನಿಖರವಾದ ಅಷ್ಟೇ ಪ್ರಖರವೂ ಅಷ್ಟೇ ಸಂದರ್ಭಾನುಸಾರಿಯಾಗಿ ದೃಢವೂ, ಮೃದುವೂ ಘನವೂ ವಿಲಂಬಿತವೂ ದ್ರುತವೂ ಕಂಪಿತವೂ ಅವಿದ್ಧವೂ ಸುಕುಮಾರವೂ ಲೀಲಾಜಾಲವಾಗಿ ಮಂದ್ರದಿಂದ ತಾರದವರೆಗೂ ಸಂಚರಿಸಿ ಅತ್ಯಂತ ಭಾವ ವ್ಯಂಜಕವಾಗಿ ಹೊಮ್ಮುವ ಹಬ್ಬುವ ಅವರ ದನಿಯ ಗಾತ್ರ ಗಹನತೆ ಮತ್ತು ಗತ್ತುಗಾರಿಕೆ!

"ನಾನು ೨೦ ವರ್ಷದವನಿದ್ದಾಗಲೇ ಹಾಡಿ ಕುಣಿಯಲು ಪ್ರಯೋಗಿಸಿದೆ. ಆಗ ಶಾಸ್ತ್ರೀಯ ಸಂಗೀತದ ಗಂಧವೇ ಇದ್ದಿಲ್ಲ. ೩೦ ವರ್ಷದವನಾದಾಗ ಆ ನಾದದ ಗತ್ತು ಗಮ್ಮತ್ತು ಅರ್ಥವಾಗಹತ್ತಿತ್ತು. ಅಬ್ದುಲ್ ಕರೀಂ ಖಾನರ ಒಬ್ಬ ನಿಕಟ ಶಿಷ್ಯ ಲಕಡೀ ಬುವಾ ಮಂಗಳೂರಿನಲ್ಲಿ ನೆಲೆಸಿದರು. ಅವರ ಸಂಪರ್ಕ ಬಂದಿತು. ಆದರೆ ಆಗ 'ಬಾಲಪ್ರಪಂಚ'ದ ಲೇಖನ ಮುದ್ರಣದ

ವ್ಯಾಪ್ತಿಯಲ್ಲಿ ಅವರಿಂದ ಕಲಿಯಲು ಆಗಲಿಲ್ಲ. ಆದರೆ ರಾಗ-ತಾಳ-ಲಯ ಸ್ವರಗಳ ಮರ್ಮದ ಅರಿವು ಆಗತೊಡಗಿತು"-ಅಂದರು. ಡಾ। ಕಾರಂತರು ಕಾರ್ಯಕ್ರಮ ಮುಗಿದ ಮೇಲೆ ನಮ್ಮೊಡನೆ ಕಾಫಿ ಕುಡಿಯುತ್ತ ಅನಂತರ ಅವರ ಪ್ರತಿಭೆಯ ವ್ಯಾಪಾರ, ವ್ಯಾಸಂಗ ವಿಸ್ತಾರ ಹುಚ್ಚು ಮನಸ್ಸಿನ ಹತ್ತು ಮುಖಗಳಾಗಿ ಹರಿಯಿತು. ಈಗ ಎಷ್ಟೋ ದಶಕಗಳ ನಂತರ ಅಂದಿನ ಆ ಸಂಗೀತಪ್ರಜ್ಞೆಯ ಪುನರುಜ್ಜೀವನದ ಒಂದು ಪರ್ವ ಅಂದು ನಮ್ಮ ಮುಂದೆ ಕಳೆಕಟ್ಟಿ ನಿಂತಿತ್ತು.

ಸಂಗೀತವು ಬದುಕಿನ ನಿತ್ಯದ ಗತಿ ಗತ್ತಿನೊಳಗಿಂದ ಶ್ರಮ ಪರಿಹಾರಕ್ಕೋ, ವಿನೋದಕ್ಕೋ ಸ್ಫೂರ್ತಿಗೋ ಲಯದ ವ್ಯಾಮೋಹಕ್ಕೋ ರೂಪಗೊಂಡ ಬಗೆಯನ್ನು ಕಾರಂತರು ಆರಂಭದಲ್ಲಿ ಎತ್ತಿ ತೋರಿಸಿದರು. ನಮ್ಮ ಜಾನಪದ ಹಾಡುಗಳಲ್ಲಿ ಅಂಬಿಗರ ದೋಣಿ ಹುಟ್ಟು ಹಾಕುವ, ಒಕ್ಕಲ ಹೆಣ್ಣುಗಳು ಭತ್ತ ಕುಟ್ಟುವ, ಮನೆಯ ಗರತಿ ರಾಟೆಯಲ್ಲಿ ನೂಲುವ ಮೂರು ಸಂದರ್ಭಗಳ ಮೂರು ತ್ರಿಪದಿಗಳನ್ನು ಅವರು ಆಯಾ ಚಟುವಟಿಕೆಯ ಚಲನವಲನದ ಲಯಕ್ಕ ಹೇಗೆ ಹೊಂದಿ ಮೂಡಿವೆಯೆಂಬುದನ್ನು ಹಾಡಿ ಕಾಣಿಸಿದರು. ತ್ರಿಪದಿಯ ಛಂದೋ ರಚನೆ, ಮಾತ್ರಾವೃತ್ತ ಒಂದೇ ಅದರೂ ಅವುಗಳ ಲಯ-ಗತಿ ಮೂರೂ ಬೇರೆ ಬೇರೆ. ಆಗ ಕಾರಂತರು ಡಾ। ಕಾರಂತರಲ್ಲ. ಹಳ್ಳಿಯ ಹೆಣ್ಣೇ ಆಗಿದ್ದರು. ಲಯಕ್ಕೆ ತಕ್ಕಂತೆ ಆಯಾ ಕಸುಬಿನ ಗೈಮೆಗೆ ಹೊಂದಿದಂತೆ ಅವರ ಮೈಕೈಗಳ ಜೋಲಿ, ಮಣಿತಗಳು ಹಾಡಿನ ಜಾಡಿಗೆ ಹೊಂದಿಕೊಂಡು ನಡೆದಿದ್ದವು.

ಅನಂತರ ಅವರು ಪುರಂದರದಾಸರ ಸುಪ್ರಸಿದ್ಧ ಪದ 'ನೀನ್ಯಾಕೋ? ನಿನ್ನ ಹಂಗ್ಯಾಕೋ?' ತೆಗೆದುಕೊಂಡರು. ಅದರ ಪಲ್ಲ ಒಂದನ್ನೆ ಅವರು ಆ ಭಕ್ತನ ಭಾವಕ್ಕೆ ಸರಿಯಾಗಿ ಎಷ್ಟೊಂದು ರೀತಿಯಲ್ಲಿ ಸ್ವರಾಲಾಪನೆಯ ರೂಪದಲ್ಲಿ ಒಡ ಮೂಡಿಸಿದರು! ಆಗ ಅವರ ಅವಿರ್ಭಾವ ನಮ್ಮ ಮೇಲೆ ಅದರ ಪ್ರಭಾವ-ಇಲ್ಲಿ ಬಿಡಿಸಿ ಬಣ್ಣಿಸುವುದು ಸಾಧ್ಯವಿಲ್ಲ. ದೇವರೊಂದಿಗೆ ಭಕ್ತನು ಅದೊಂದು ಸಲುಗೆಯ, ಸೊಕ್ಕಿನ ಅಷ್ಟೇ ಆರ್ತತೆಯ ಸೆಣಸಾಟಕ್ಕೆ ನಿಂತ ಭಾವ ಆ ಪಲ್ಲದಲ್ಲಿ ಪಲ್ಲವಿತವಾಗಿದೆ, ಅದೊಂದು ಸವಾಲು, ಆಹ್ವಾನ, ಆಶ್ವಾಸನ, ಸಾಂತ್ವನೆ ('ನಿನ್ನ ನಾಮದ ಬಲ ಒಂದಿದ್ದರೆ ಸಾಕೋ!') ಅದೆಲ್ಲ ಭಾವ ವಿನ್ಯಾಸವನ್ನು ಕಾರಂತರು ಕಾನಡಾ ರಾಗದ ಸ್ವರಾಲಾಪನೆಯಲ್ಲಿ ಆ ಪದ್ಯದ ಪಲ್ಲದಿಂದ ಸಲೀಸಾಗಿ ಸುಲಲಿತವಾಗಿ ಹೊರಡಿಸಿದರು.

ಕೂಡಲೇ ಅದೇ ದರಬಾರಿ ಕಾನಡಾದಲ್ಲಿ ಅವರು 'ಗಿರಿಧರ ಬ್ರಿಜಧರ ಮುರಲಿ ಅಧರಧರ'-ಎಂಬ ಜನಪ್ರಿಯ ಖ್ಯಾಲ್ ಗಾಯಕಿಯ ಚೀಸನ್ನು ಎತ್ತಿಕೊಂಡು ತೊಡೆ ಬಡಿದುಕೊಳ್ಳುತ್ತ ಸ್ವರ-ಮಾತ್ರೆಗಳ ತುಟಾಪಟಿಯನ್ನು ಕಾಣಿಸುತ್ತ ಸಭೆಯನ್ನು ನಗೆಗಡಲಲ್ಲಿ ತೇಲಿಸಿದರು. ಈ ಮಟ್ಟಕ್ಕೆ ಇಳಿದಿದೆ ನಮ್ಮಲ್ಲಿ ಸಂಗೀತ ಶಾಸ್ತ್ರವಾಗಿ! ಅದೇ ಜಾಡಿನಲ್ಲಿ 'ಲಂಬೋದರ ಲಕುಮಿಕರಾ' ಎತ್ತಿಕೊಂಡರು. ಅದರ ಯಥಾವತ್ತಾದ ದಕ್ಷಿಣಾದಿ ಗತ್ತಿನ ಕುಸ್ತಿಯ ಕರ್ಣಕರ್ಕಶ ಗದ್ದಲವನ್ನೂ ಹಾಡಿ ತೋರಿಸಿದರು. ಆಗ ತೊಡೆಯ ಪೆಟ್ಟು ಹೆಚ್ಚಿತ್ತು. 'ಇದು ತೊಡೆ ಮುರಿಯುವ ಸಂಗೀತ' - ಎಂದರು. ಹಾಡುಗಾರಿಕೆಯ ಆಲಾಪ ಸ್ವರ ಸಂಚಾರಗಳ ನಡುವೆ ಅಲ್ಲಲ್ಲಿ ಅವರ ಚಾಟೂಕ್ತಿ ಚತುರೊಕ್ತಿಗಳ ಹಾಸ್ಯ ಲಹರಿ ಏನೂ ಆಯಾಸವಿಲ್ಲದೆ ಸಹಜವಾಗಿ ಸೂಸುತ್ತಿದ್ದವು -ಜ್ವಾಲೆಗಳೊಂದಿಗೇ ಬಣ್ಣ ಬಣ್ಣದ ಕಿಡಿಗಳು ಹಾರಿದಂತೆ, ತಡಸಲಧಾರೆಗಳೊಡನೆ ತುಂತುರುಗಳ ಮಳೆಬಿಲ್ಲು ಮಣೆದಾಡಿದಂತೆ.

ನಮ್ಮಲ್ಲಿ ಸಂಗೀತ ರಾಗಪ್ರಧಾನ. ಪಾಶ್ಚಾತ್ಯ ಸಂಗೀತ ಸ್ವರ ಪ್ರಧಾನ. ಬೇರೆ ಬೇರೆ ಭಾವಗಳ ರೌದ್ರ ಕ್ರೌರ್ಯ, ಕಡಲ ಭೋರ್ಗರೆತ, ನದಿಯ ಪ್ರವಾಹ ಮೊರೆತ ಇತ್ಯಾದಿ ಒಡಮೂಡಿಸಲು ಪಾಶ್ಚಾತ್ಯರಲ್ಲಿ ಹಲವಾರು ಕೆಲಸಲ ನೂರಿನ್ನೂರು ವಿವಿಧ ವಾದ್ಯಗಳನ್ನು ಒಟ್ಟಾಗಿ ಬಿಡಿಯಾಗಿ ಆಯಕಟ್ಟಿನಲ್ಲಿ ಮಿಡಿದು ನುಡಿಸಿ ಸಂಗೀತ ಹೊಸೆಯುತ್ತಾರೆ. ನಮ್ಮ ಬಂಧಸ್ಥರಾಗ ಪರಿಮಿತಿಯಲ್ಲಿಯೂ ಸ್ವರ ಸಂಚಾರದ ಮಂದ್ರ, ಮಧ್ಯ, ತಾರಗಳಲ್ಲಿಯ ತೀವ್ರ - ಕೋಮಲ ಕಂಪನಗಳ ಸೂಕ್ತ ಪ್ರಯೋಗದಿಂದ ವಿಶಿಷ್ಟ ನಿರ್ದಿಷ್ಟ ಪರಿಣಾಮ ಸಾಧಿಸಬಹುದು. ಇದಕ್ಕೆ ನಿದರ್ಶನವೆಂದು ಕಾರಂತರು ಹಾರ್ಮೋನಿಯಂ ವಾದಕರಿಗೆ 'ಮುಲ್ತಾನಿ' ರಾಗವನ್ನು ಎತ್ತುಗಡೆ ಮಾಡಲು ಹೇಳಿ ಅದರೊಂದಿಗೆ ದನಿಗೂಡಿಸಿ ಆಲಾಪಿಸತೊಡಗಿದರು. ಆರಂಭದಲ್ಲಿ ಮಾಮೂಲಿ ಮೂರ್ಛನೆಗಳಲ್ಲಿ ಆಡಿ ಅವರ ಆಲಾಪನೆಯ ಆಕಾರ ವಿಚಿತ್ರ ವಿಶೇಷ ಗತ್ತು ಹಿಡಿಯಿತು. ಅದು ಆರೋಹಗೊಂಡು ತಾರ ಸಪ್ತಕದಲ್ಲಿ ಸಂಚರಿಸುತ್ತ ಅಲ್ಲಿಂದ ಮಂದ್ರಕ್ಕೆ ಧುಮುಕುತ್ತ ವಿಶಾಲ ಆಭೋಗ ಪಡೆಯುತ್ತಾ ಲಯ ಹೆಚ್ಚಿಸುತ್ತ ಕುಗ್ಗಿಸುತ್ತ ಅಪೂರ್ವ ಪ್ರಭಾವಿಯಾಗಿ ನಮಗೆಲ್ಲ (ಅಂದರೆ ಸಂಗೀತದ ಮರ್ಮಜ್ಞರಿಗೆ) ರೋಮಾಂಚನಗೊಳಿಸುತ್ತಾ ಕೆಲವು ಮಿನಿಟು ಹುಚ್ಚು ಹೊನಲಾಗಿ ಹರಿದಾಡಿತು. ಆಗ ಆ ಆಲಾಪನೆಯಲ್ಲಿ ಬಿರುಗಾಳಿ ಬೀಸಿದ ಒಂದು ಭವ್ಯ ಭಾಸವು ಆಕಾರಗೊಂಡಿತು! 'ತೆಂಕಣ ಗಾಳಿಯ ಭೂತ'ವನ್ನು ವರಕವಿ ಪಂಜೆ ಮಂಗೇಶರಾಯರು ನಮ್ಮ ಶಾಬ್ಧಿಕನಾದ ರೀತಿಯಲ್ಲಿ ಸೆರೆ ಹಿಡಿದಂತೆ ಡಾ। ಕಾರಂತರು ಅದನ್ನು ಅದರ ಹೆಚ್ಚು ರಭಸ ಉಬ್ಬರ ಅಬ್ಬರಗಳೊಂದಿಗೆ ಕೇವಲ ನಾದಲೀಲೆಯಲ್ಲಿ ಅದೂ ಒಂದು ಸಾಂಪ್ರದಾಯಿಕ ರಾಗದ ಆಲಾಪನೆಯಲ್ಲಿ-ಪ್ರಭಾವಿಯಾಗಿ ಸೂಚಿಸಿದರು.

ಈ ಸಂದರ್ಭದಲ್ಲಿ ಇದಕ್ಕೆ ಹಿನ್ನೆಲೆಯಾಗಿ ಅವರೆಂದರು. ತಾನು ಪಾಶ್ಚಾತ್ಯ ಸಂಗೀತದಲ್ಲಿ ಬೀಥೋವಿನ್‌ನ ಮೂನ್ ಲೈಟ್ ಸೊನಾಟ್ ನುಡಿಸಿದ್ದನ್ನು ಕೇಳಿದ್ದೇನೆ. ಸ್ಟ್ರಾಸ್ ಕೃತಿ ರಚನಾಕಾರನ 'ನೀಲಡಾನ್ಯೂಬ' ಸ್ವರರಚನೆಯನ್ನೂ ಕೇಳಿದ್ದೇನೆ. ಸ್ವರಗಳ ಗುಂಫನ ಹಾಗೂ ಸಂವಾದ-ವಿವಾದ ಸಂಘಟನೆಯಲ್ಲಿ ಈ ಮಹಾ ಕಲಾವಿದರು ಒಬ್ಬರು. ಬೆಳದಿಂಗಳ ಶಾಂತಿ ಸೌಂದರ್ಯ ಆನಂದಗಳನ್ನು ರೂಪಿಸಿದರೆ, ಇನ್ನೊಬ್ಬರು ಯುರೋಪಿನ ಒಂದು ಮಹಾ ನದಿ ಡಾನ್ಯೂಬದ ಆ ಸಡಗರ ಸಂಭ್ರಮ ವೇಗ ಒಯ್ಯಾರ ಮೊರೆತ ಸೆಳೆತಗಳ ಬೆಡಗನ್ನು ಸ್ವರ ರಚನೆಯಲ್ಲಿ ಮೂಡಿಸಿದ್ದಾರೆ. ನಮ್ಮಲ್ಲಿ ? ಕೇವಲ ಗತಾನುಗತಿಕ ತೊಡೆ ಬಡಿಯುವ ಸಂಗೀತವೇ ಮಾಮೂಲಾಗಿ ಬಂದಿದೆ. ಒಳಗೆ ಅಂಥ 'ಸಾಮಾನು' ಇದ್ದರಲ್ಲವೆ ಅದು ಹೊರ ತರುವ ಹವ್ಯಾಸ ಹತೋಟಿ ಹುಟ್ಟುವುದು!

ಅವರು ದಶಕಗಳ ಹಿಂದೆಯೇ ಋತು ಚಕ್ರದ ಸ್ಥಿತಿ ಗತಿಯನ್ನೂ ಮಳೆ-ಹನಿ ಹಳ್ಳ-ಹೊಳೆಗಳು ಒಂದಾಗಿ ಕಡಲು ಸೇರುವ ಚಲನೆಯ ಚೆಲುವಿನ ನೃತ್ಯವನ್ನೂ ರೂಪಿಸುವ ಸಂಗೀತ ನೃತ್ಯರೂಪಕಗಳನ್ನು ಕಲ್ಪಿಸಿ ಶಿಲ್ಪಿಸಿ ಪ್ರಯೋಗಿಸಿದ್ದರು. (ಇದರ ಉಲ್ಲೇಖ ಅವರ 'ಮೊಗ ಪಡೆದ ಮನ' ಕಾದಂಬರಿಯಲ್ಲಿ ಪಿಟೀಲುಗಾರ ರಾಮ ಐತಾಳನ ಚಟುವಟಿಕೆಯಾಗಿ ಚಿತ್ರಿತವಾಗಿದೆ. ಈ ರಾಮ ಐತಾಳನೂ 'ಮರಳಿ ಮಣ್ಣಿಗೆ'ಯೊಳಗಿನ ಹಿರಿಯ ಐತಾಳರ ಮೊಮ್ಮಗ ಪೀಟಿಲು ಪ್ರವೀಣ ಕಡಲ ಮೊರೆತ ಪಿಟೀಲಿನಲ್ಲಿ ಮಿಡಿಸುವ ನವ್ಯ ಸಂಗೀತಗಾರ!)

ಈ ಬಗೆಯ ಹೊಸ ಸಂಗೀತಕ್ಕೆ ನಮ್ಮ ಸಾಂಪ್ರದಾಯಿಕ ರಾಗಗಳ ಭಾವ ಬಿಂಬಗಳನ್ನು ಅಳವಡಿಸಿಕೊಂಡು ನಮ್ಮ ತಾಳ ಲಯಗಳನ್ನು ಬಳಸಿಕೊಂಡು ಜಡ ರೀತಿ ಬಂಧಗಳ ಕಟ್ಟು

ಸಡಿಲಿಸಿ ಇಲ್ಲವೆ ಒಡೆದು ಸೃಷ್ಟಿಯ, ಜೀವನದ ವಿಶಿಷ್ಟ ನಾದ ಲೀಲೆಗಳನ್ನು ಬಿಂಬಿಸುವ 'ನಾದರೂಪಕ'ಗಳನ್ನು ಸೃಷ್ಟಿಸಿಕೊಳ್ಳುವ ಅನಂತವಾದ ಅನರ್ಘ್ಯವಾದ ಸಾಧ್ಯತೆಗಳನ್ನು ಈ ಪ್ರಾತ್ಯಕ್ಷಿಕದಲ್ಲಿ ಡಾ। ಕಾರಂತರು ಸೂಚಿಸಿದರು.

Music ಮತ್ತು Meaning ದಿಂದ ಇನ್ನು Movementಗೆ ಸಾಗಿ ಬಂದರು ಈ ನಮ್ಮ 'ನಾಡೋಜರು'. ಅವರಿಗೆ ಇಲ್ಲಿ ವಯೋಮಾನವ ಫಲವಾದ ಮರೆವು ಕಾಡುತ್ತಿತ್ತು. ತಮ್ಮ ಹಳೆಯ ಗೀತಾನಾಟಕಗಳ, ಯಕ್ಷಗಾನ ಪ್ರಸಂಗಗಳ ಪದ್ಯಗಳು ಇಡಿಯಾಗಿ ನೆನಪಾಗುತ್ತಿರಲಿಲ್ಲ. ಅವನ್ನೆಲ್ಲ ಬರುವ ಅವಸರದಲ್ಲಿ ಸರಿಯಾಗಿ ಟಿಪ್ಪಣಿಸಿಯೂ ತರಲಾಗಲಿಲ್ಲ. (ಸಿರಸಿ, ಮಂಚಿಕೇರಿ ಸಭೆಗಳನ್ನು ಮುಗಿಸಿ ಅಂಕೋಲೆಗೆ ಅವರು ಬಂದಿದ್ದರು-ಬೇರೆಯೇ ವಿಷಯ ಪ್ರಪಂಚದಿಂದ) ಅದಾಗ್ಯೂ ಅಂಥ ಕೊರತೆಯ ಯಾವ ಕೊರೆತವೂ ಕೊರಗೂ ನಮಗೆ ಅನಿಸಲಿಲ್ಲ. ಅವರ ಜೀವಂತ ಜ್ವಲಂತ ನಾಟ್ಯಭಿನಯ - ನೃತ್ಯಮಯ ಸಂಗೀತದಲ್ಲಿ. ಆಂಗಿಕ ವಾಚಕ ರಾಗರಂಜಿತವಾದ ಆ ನಿರಾಡಂಬರ ನಿರಲಂಕೃತ ರಂಗಪ್ರದರ್ಶನದಲ್ಲಿ.

ಅವರು ತಮ್ಮದೊಂದು ಗೀತನಾಟಕದಿಂದ, ಸೀತಾಲಕ್ಷ್ಮಣರು ಅಡವಿಗೆ ಹೊರಟ ಸನ್ನಿವೇಶದ 2-3 ಸಾಲುಗಳನ್ನು ಎತ್ತಿಕೊಂಡರು "ಪೋಗುತಿಹೆವು ನಾವು ವಿಪಿನಕೆ. ಸಾಗುತಿಹೆವು ನಾವು". ಹಾಗೆಯೇ ಮುಂದೆ ಲಕ್ಷ್ಮಣನ ಮಾತು ರಾಮನ ಸಂದೇಶದ್ದು. ಆಗ ಸೀತೆ ವಿಸ್ಮೃತಳಾದದ್ದು. ಮುಂದೆ ಮುನಿ ಕುಮಾರರು ಬಂದು ನೋಡಿ ವಾಲ್ಮೀಕಿಯನ್ನು ಅಲ್ಲಿಗೆ ತಂದದ್ದು. ಇಲ್ಲಿ ವಿಪಿನಕೆ ಹೋಗುತಿಹೆವು ಸಾಗುತಿಹೆವು ಎಂಬ ಭಾಗ ಕರುಳು ಹಿಂಡುವಂತೆ ಅವರು ಹಾಡಿ ಅಭಿನಯಿಸಿ ತೋರಿಸಿದರು. ಮಾತುಗಳು ತೀರ ಸರಳ. ಅವುಗಳಲ್ಲಿ ಕಾವ್ಯದ ಸತ್ವ ಕಡಿಮೆ. ಆದರೆ ಅವುಗಳಿಗೆ ಜೀವಕಳೆ ತುಂಬುವದು ಸಂಗೀತ ಲಯಗಾರಿಕೆ ಹಾಗೂ ಅಭಿನಯ ಕಲೆಗಳ ಅದ್ಭುತ ಅವಿಷ್ಕಾರ. ಸೀತೆಯನ್ನು ಅಡವಿಗೆ ಒಯ್ದು ಬಿಡುವ ಬಡಪಾಯಿ ಲಕ್ಷ್ಮಣನ ಆ ಜೀವ ಎಳೆದುಕೊಂಡು ಹೋಗುವ "ಸಾsss ಗುತಿಹೆವು" ಕೇಳಿಯೇ ಕರಗಬೇಕು. ಹಾಗೆಯೇ ಸೀತೆ ಮೂರ್ಛಿತೆಯಾಗುವ ಸಂದರ್ಭದ ಅವಳ ಆ ಆರ್ತ ಉದ್ಗಾರಗಳು. ಕಾರಂತರು ಭಾವದ ಆವೇಶ, ಆಕ್ರೋಶ, ಆರ್ತತೆ, ದೈನ್ಯ, ಯಾತನೆ ಎಲ್ಲ ತುಂಬುವುದು 'ಆ' ಕಾರದ ಆಲಾಪನೆಯಲ್ಲಿ. ಹಾಡಿದ್ದು ಸಾಮಾನ್ಯ 'ಕಾಪಿ' ರಾಗದಲ್ಲಿ (ಪ್ರಯೋಗದ ನಿರ್ಭರದಲ್ಲಿ ಪಾಪ, ಕುಡಿಯಲು ಮೇಜಿನ ಮೇಲಿಟ್ಟ ಕಾಫಿಯೂ ತಣ್ಣಗಾಯಿತು. ಪ್ರಿನ್ಸಿಪಾಲ್ ನಾಯಕರು ನೆನಪಿಸಿದಾಗ, ಅಡ್ಡಿ ಇಲ್ಲ. I am warmed up. ನನಗೆ ಕಾವೇರಿದೆ. ಕಾಫಿ ಬಿಸಿಯಾಗುವುದು!- ಎಂದು ಹೇಳಿ ಕುಡಿದರು.)

ಈ ಭಾಗವನ್ನು ಸಾಮಾನ್ಯವಾಗಿ ಹಾಡಬಲ್ಲ ನಟರು ಹೇಗೆ ಅಭಿನಯಿಸಬಹುದೆಂಬುದನ್ನು ಅವರು ತೋರಿಸಿದರು. ಹಾಡಿನಲ್ಲಿ ಮಗ್ನರಾಗಿ 'ಮಾರಿ ದಿಬ್ಬಣ ಹೊರಡಿಸಿಕೊಂಡು ಹೋಗುವಂತೆ' ಚಲನೆ ತೋರಿಸಿದರು. ಸೀತೆಯ ಹಾಡು ಮುಗಿಯುವ ತನಕ ಕೈಕಟ್ಟಿಕೊಂಡು ನಿರ್ವಿಕಾರ ನಿಲ್ಲುವ ಲಕ್ಷ್ಮಣನನ್ನೂ ಮೂಡಿಸಿದರು -ಆತ ತನ್ನ ಹಾಡಿನ ಪಾಳಿ ಬರುವ ತನಕ ಪೂರ್ತಿ ಮರವಟ್ಟ ಮೂರ್ತಿ!

ಅನಂತರ ಅವರು 'ಜಗದೋದ್ಧಾರನಾss ಆಡಿಸಿದಳು ಯಶೋದಾss' ಈ ದಾಸರ ಸೊಲ್ಲನ್ನು ಹಾಡಿ ಬಾಲಕೃಷ್ಣನನ್ನು ಎತ್ತಿ ಆಡಿಸಿ ಮುದ್ದಾಡಿ ಯಶೋದೆಯಾಗಿ ಕಾಣಿಸಿದರು.

ಓ, ಆ ಮುದ್ದು, ವಾತ್ಸಲ್ಯ, ಮಮತೆ ಉತ್ಸಾಹ ಉಲ್ಲಾಸ ಅವರ ಮುಖ ಭಾವದ ಆ ನಿಮಿಷ ನಿಮಿಷದ ಛಾಯಾ ಪಲ್ಲಟ ಅವರ ಹರೆಯವನ್ನು ಗಂಡು ಗಾಡಿಯನ್ನೂ ಪೂರ್ತಿ ಮರೆಯಿಸಿತು. ಈ ಹಾಡುಗಳಲ್ಲಿ ಬರೆ ಶುದ್ಧ ಲಯ ಬದ್ಧ ಪಾಠ (Text) ಉಳಿದಿದ್ದಿಲ್ಲ. ಅವೆಲ್ಲ ಮಾತು ಧಾತು ಒಟ್ಟೆರಕದ ಒಟ್ಟಂದದಲ್ಲಿ ಹಾಸುಹೊಕ್ಕಾಗಿ ಹೆಣೆದ ಜಿನುಗಾದ ಇಂದಿನ ಜಾಡು ಆಗಿಬಿಟ್ಟಿತು.

ಮೀರಾ ಭಜನೆ 'ಹಳಿಗುಣಗಾವತ್ ನಾಚೂಂಗೀ' ಹಾಗೆಯೇ ಸೂರದಾಸರ ಒಂದು ಭಜನೆ (ಈಗ ನೆನಪಿಲ್ಲ!) ಭಾವಪೂರ್ಣವಾಗಿ ಹಾಡಿ ಆ ಭಕ್ತ ಕವಿಗಳ ಹಾರ್ದಿಕ ವೃತ್ತಿ (Spirit) ಯನ್ನೂ ಅರಳಿಸಿ ತೋರಿಸಿದರು. ನಮ್ಮಲ್ಲಿ ಪರಂಪರೆಯಿಂದ ದಾಸಕೂಟದ ಭಕ್ತಗಾಯಕರೆಲ್ಲ ಬಾಳಿನಲ್ಲಿ ಯಾವ ರಸವನ್ನೂ ಕಂಡವರಲ್ಲ. ವೈರಾಗ್ಯ ಜುಗುಪ್ಸೆಗಳಿಂದ ಹಾಡುತ್ತ ಬಂದವರು- ಎಂದರು ಕಾರಂತರು. ಆಗ ನನಗೆ ನೆನಪಾಯಿತು 'ಹರಿ ತಾಳನೋ ಹರಿ ಕೇಳನೋ! ತಾಳ-ಮೇಳಗಳಿದ್ದೂ ಪ್ರೇಮವಿಲ್ಲದ ಗಾನss!' ಎಂದಿದ್ದರು ದಾಸವರೇಣ್ಯರು. ಈ 'ಪ್ರೇಮ' ಗಾನದಲ್ಲಿಯೂ ಬೇಕು, ಹರಿಯಲ್ಲಿಯೂ ಬೇಕು.

ಯಕ್ಷಗಾನದ ೨೩ ಪದ್ಯಗಳನ್ನು ಹಾವಭಾವಗಳೊಂದಿಗೆ ಹಾಡಿ ಅವುಗಳ ಅರ್ಥ-ಲಯ-ಗತಿಗಳ ಸಮನ್ವಯವನ್ನು ಸಾಧಿಸಿ ಕೊಣಿಸಿದರು 'ಯಕ್ಷಗಾನ ಬಯಲಾಟ'ದ ಕಾರಂತರು ಮೊದಲಿಗೆ ಅಂಬೆ ಭೀಷ್ಮನಿಗೆ ಹೇಳಿದ "ಕೇಳು ಭೀಷ್ಮಾಚಾರ್ಯ ಬಿನ್ನಪವ ಸತ್ಕೀರ್ತಿ ಸದ್ಗುಣ ಶೀಲ, ಹೇಳುವೆ ಎನ್ನ ಮನದೊಲವ ॥ ಭೂಲಲಾಮರ ಜಯಿಸಿ ಮೆರೆದಿಹ। ತೋಲಿನೊಳು ಬಿಗಿದಪ್ಪಿ ಮನ್ಮಥ ಕೇಳಿಯೊಳು ನೀನೆನ್ನ ಮನವನು। ಕಾಲ ಕಾಲಕು ತೃಪ್ತಿಪಡಿಸದೆ...." (ಭೀಷ್ಮ ವಿಜಯ) ಇದರ ಬೆನ್ನಿಗೇ ಭೀಷ್ಮ ಅಂಬೆ ಅಂಬಿಕೆ-ಅಂಬಾಲಿಕೆಯರಿಗೆ ಹೇಳಿದ್ದು. "ಸರಸಿಜಾಂಬಕಿಯರೆ ಕೇಳಿ । ಕುರು ಪರಂಪರೆಯೊಳು ರಾಜ್ಯವಾಳಿ। ಹಿರಿಯರೇರಿದ ಸಿಂಹ ವಿಷ್ಟರದೊಳಗೆಮ್ಮ । ಅನುಜ ವಿಚಿತ್ರವೀರ್ಯಕನೇ। ಆಳುವ ॥" (ಅದೇ ಪ್ರಸಂಗ) ಇದನ್ನು ಹಾಡುವಾಗ ಇದರ ಮೂಲ ಧಾಟಿಯೆಂದು "ಅರಸಿಕ ಕಿತಿ ಹಾ ಶೇಲಾ! ತ್ಯಾ ಸುಂದರ ತನುಲಾ ಸೋಡುನಿ ಆಲಾ" - ಎಂಬ ಮರಾಠೀ ಮೃಚ್ಛಕಟಿಕದ ವಸಂತಸೇನೆಯ ಪದ್ಯವನ್ನು ಹೇಳಿದರು. (ಆದರೆ ಈ ಪದ್ಯಕ್ಕೆ ಒಂದು ಶತಮಾನ ಹಿಂದೆ ಕೈ ದೇವಲರು 'ಚಿಕ್ಕ ಮಕ್ಕಳೆ ಕೇಳಿರಯ್ಯಾ' ಎಂಬ ಕನ್ನಡ ಪದ್ಯದ ಧಾಟಿಯೆಂದೇ ಉದಾಹರಿಸಿದ್ದರು!) ಆರಂಭದಲ್ಲಿ ಕೈ ಅಣ್ಣಾ ಕಿರ್ಲೋಸ್ಕರ, ದೇವಲ ಪ್ರಭೃತಿ ಮರಾಠೀ ನಾಟಕಕಾರರ ಅನೇಕ ಧಾಟಿಗಳು ಕನ್ನಡ 'ಪ್ರಸಂಗ',ಗಳಿಂದಲೇ ಆಯ್ದುವಾಗಿದ್ದವು). ಆ ಮೇಲೆ ಅವರು ಕೌರವನ ಒಂದು ಪದ್ಯವೆತ್ತಿ ಪ್ರಭಾವಿಯಾದ ಭಾವಾಭಿನಯದೊಂದಿಗೆ ಹಾಡಿದರು. "ಏನು ಮಾಡಲಿ ನಾನು! ಪಾಂಡವರ ಸೋಲಿಪೊಡೆ। ದಾನವಾಂತಕನವಗೆ ಸಾರಥಿ ಆಗಿಹನು!, ಇಲ್ಲಿ ದಾನವಾಂತಕನು ಸಾರಥಿಯಾಗಿರುವನೆಂಬ ಆಶಯವನ್ನು ಅವರು ಕೌರವನ ಬೆರಗು, ಬೆದರಿಕೆ ಹಾಗೂ ತಿರಸ್ಕಾರ ಮೂರನ್ನೂ ವ್ಯಕ್ತಮಾಡುವಂತೆ ಮುಖ ಭಾವ ದನಿಯ, ಸ್ವರದ ವ್ಯತ್ಯಾಸಗಳೊಂದಿಗೆ ತುಂಬ ಸೊಗಸಾಗಿ ತೋರಿಸಿದರು. "ಏನು ಮಾಡಲಿ ನಾನು" ಎಂಬ ಅವನ ಅಸಹಾಯ ನಿರುಪಾಯ ಭಾವವೂ ತುಂಬ ಸ್ಫುಟವಾಗಿತ್ತು.

ಆಗ ನಡುವೆ ನಾನೊಂದು ಹೆಡ್ಡ ಪ್ರಶ್ನೆ ಹಾಕಿದೆನು. "ಇದೆಲ್ಲ ಭಾವಾಭಿನಯ ಸರಿ. ಆದರೆ ಇದರಿಂದ ನೃತ್ಯದ ಲಯಕ್ಕೆ ತೊಡಕಾಗುವುದಿಲ್ಲವೇ?" ಕೂಡಲೇ "ನೋಡಿ" ಎಂದು

ಕಾರಂತರು ಮೇಜಿನಿಂದ ಎದ್ದು ಇಳಿದು ಮುಂದೆ ಬಂದು ಅದೇ ರಾಗಾಲಾಪನೆ, ಭಾವಾಭಿನಯಗಳೊಂದಿಗೆ ಹೆಜ್ಜೆ ಹಾಕುತ್ತ ಉದ್ದಕ್ಕೂ ಕುಣಿದೇ ಕಾಣಿಸಿದರು. ಅದೊಂದು ಅದ್ಭುತ ನಿದರ್ಶನವಾಯಿತು. ಅವರೆಂದರು: ಪದ್ಯದ ಭಾವ-ರಾಗ-ಲಯಗಳ ವೃತ್ತಿ ಮೈಗೂಡಿಕೊಂಡಿದ್ದರೆ ನೃತ್ಯ ಅಂಗಾಗಗಳಿಂದ ಹೊಮ್ಮುವದು. ಅದು ಬರೇ ಕಾಲಿನ ಕಸರತ್ತು ಅಲ್ಲ. ಒಂದಕ್ಕಾಗಿ ಇನ್ನೊಂದು ಕಾಯಬೇಕಾಗಿಲ್ಲ. ಹೆಜ್ಜೆ ಹಾವ ಭಾವಕ್ಕೆ ಕೂಡಿಕೊಳ್ಳುತ್ತವೆ." (ಇದು ಅವರ ಮಾತಿನ ಆಶಯ. ನೇರ ಮಾತುಗಳಲ್ಲ.)

ಇದೆಲ್ಲ ಭಾವಾಭಿನಯ ಹಾಗೂ ನಾದ ಲೀಲೆಯ ಚಲನ, ಭೀಮಪಲಾಸ, ಕಾಫಿ ಬಿಭಾಸ. ಮುಲ್ತಾನಿ- ಮುಂತಾದ ಕೆಲವೇ ಸಾಂಪ್ರದಾಯಿಕ ಜನಪ್ರಿಯ ಪರಿಚಿತ ರಾಗಗಳ ಆಲಾಪನೆಯಲ್ಲಿಯೇ ಅಷ್ಟೊಂದು ಪರಿಣಾಮಕಾರಿಯಾಗಿ ನಡೆಯಿತು.

ಅನಂತರ ಅವರು ಕೇಳುಗರಿಂದ ಪ್ರಶ್ನೆಗಳನ್ನು ಕೋರಿದರು. ಯಕ್ಷಗಾನ ವೇಷಧಾರಿಗಳೂ ಭರತನಾಟ್ಯ ಬಲ್ಲವರೂ ರಂಗ-ನಟರೂ ಆಗಿದ್ದ ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ವಿ.ಜೆ. ನಾಯಕರು ಕೆಲವು ಪ್ರಶ್ನೆ ಕೇಳಿದರು. ಒಂದೂವರೆ ಗಂಟೆ ಕಾಲ ಈ ಸಂಗೀತದ ನವ್ಯ ಅವಿಷ್ಕಾರ ಕಂಡು ಕೇಳಿಯೂ ಒಬ್ಬ ಮಹನೀಯರು, ನಮ್ಮ ರಾಗಗಳಿಗೆ ಇಂಥಿಂಥ ಪ್ರಹರಗಳೆಂದು ಹಾಕಿಕೊಟ್ಟಿದ್ದಾರೆ ಏಕೆ?" ಎಂದರು. ಅದಕ್ಕೆ ಕಾರಂತರು ಅದೊಂದು ಸಾಂಪ್ರದಾಯಿಕ ಕಲ್ಪನೆ. ಹಾಗೆ ನೋಡಿದರೆ ೬ ತಿಂಗಳು ರಾತ್ರೆ ಇರುವ ಧ್ರುವಪ್ರದೇಶಗಳಲ್ಲಿ ಎಷ್ಟೋ ರಾಗಗಳನ್ನು ಹಾಡುವುದೇ ತಪ್ಪಾದೀತು!- ಎಂದರು.

ಕಾರಂತರ ಈ ನಾದಲೀಲೆ ನೋಡುತ್ತಿದ್ದಾಗ ನನಗೆ ಭರತ ಮುನಿಯ ಒಂದು ಮಾತು ಎಂದೋ ಓದಿದ್ದ ನೆನಪಾಯಿತು. "ಶಯ್ಯಾಂ ಹಿ ನಾಟ್ಯಸ್ಯ ವದಂತಿ ಗೀತಂ" "ಸಂಗೀತವನ್ನು ನಾಟ್ಯದ ಶಯ್ಯೆ ಹಿನ್ನೆಲೆಯ ಹಾಸು ಎಂದೆನ್ನುವರು" ಅಂದರೆ ಆ ನಾಟ್ಯಾಚಾರ್ಯನ ಕಾಲದಲ್ಲಿ ಈ ಅಭಿಪ್ರಾಯ ತಜ್ಞರು ಅಡಿ ಕೊಳ್ಳುತ್ತಿದ್ದರು. ಇದು ಕಾರಂತರದೇ ಏನೇನೋ 'ಪಾಖಂಡ'ವಲ್ಲ.

ಈ ಹಾವಭಾವ ಹಾಡು ಹೆಜ್ಜೆ ಭಾವಾಭಿನಯಗಳ ಅಖಂಡ ಸರಣಿಯ ನಡು ನಡುವೆ ಹಾಸ್ಯದ ಚತುರೋಕ್ತಿಗಳ ಚಟಾಕಿಗಳೂ ವಿದ್ವತ್‌ಪೂರ್ಣ ವಾಗ್ಮಿತೆಯೂ ನಡೆದೇ ಇದ್ದವು. ಆ ತಪೋವೃದ್ಧ ನಾಟ್ಯಾಚಾರ್ಯರಲ್ಲಿ ಯಾವ ದಣಿವೂ ತೋರಲಿಲ್ಲ. ನಡುವೆ ನಡುವೆ ಬರುವ ಅವರ ಭಾಷಣದ ಸಹಜ ದನಿ ನಿರಾಯಾಸದ ದನಿ ನಿಜವಾಗಿಯೂ ಸೋಜಿಗವಾಗಿತ್ತು. ಅದೊಂದು ದೇಹದ ಮೇಲೆ ಆತ್ಮದ ಗೆಲುವು ವಸ್ತುವಿನ ಮೇಲೆ ರೂಪದ ಗೆಲುವು- Triumph of spirit over flesh, of Form over Matter ! ಆ ಅಪೂರ್ವ ಕಲಾ ವಿಕಾಸಕ್ಕೆ ಕಾರಂತರ ಕಾಯ, ಅವರ ಕಂಠ, ಕಣ್ಣು ಕೈಕಾಲು ಎಲ್ಲ ಕೇವಲ ಒಂದು ಜೀವಂತ ಮಾಧ್ಯಮವಾಗಿದ್ದವು. ನನಗೆ ಅವರ ಕುರಿತು ದಿ। ರಾಜರತ್ನಂ ನಮ್ಮಲ್ಲಿ ಮಾತಾಡುವಾಗ ತೆಗೆದ ಉದ್ಗಾರ ಮತ್ತೆ ಮತ್ತೆ ನೆನಪಿಗೆ ಬಂತು. "Oh, What a man!" "ಕೇವಲ ಮನುಷ್ಯರು!"

•

(ಉದಯವಾಣಿ)

# ಗೋಮಾಂತಕದ ಲೋಕನಾಟ್ಯ-ದಶಾವತಾರಿ ನಾಟಕ

ನಲವತ್ತು ವರ್ಷಗಳ ಹಿಂದೆ ಮರಾಠಿಯ ಶ್ರೇಷ್ಠ ನಾಟಕಕಾರ ದಿ. ಶ್ರೀ ರಾಮ ಗಣೇಶ ಗಡಕರಿಯವರ (ಅವರ ಶತಸಾಂವತ್ಸರಿತ ವರ್ಷದ ಒಂದು ಸಮಾರಂಭ ಮಹಾರಾಷ್ಟ್ರದಲ್ಲಿ ಸಂಭ್ರಮದಿಂದ ನಡೆದಿದೆ.) - 'ಏಕಚ ಪ್ಯಾಲಾ' ನಾಟಕವನ್ನು ನನ್ನ ನಾಟ್ಯ ವಿಲಾಸಿ ಮಿತ್ರರಂಗಕ್ಕಾಗಿ ಕನ್ನಡಿಸುತ್ತಿದ್ದಾಗ ಈ ದುರಂತ ನಾಟಕದ ನಾಯಕ ಸುಧಾಕರನ ಒಂದು ಭಾವಾವೇಶದ ಸ್ವಗತ ಭಾಷಣದ ಆರಂಭದ ವಾಕ್ಯದ ಮೇಲೆ ನನ್ನ ಕೈ ತಡೆಯಿತು. ಆತ ಆಸ್ಫೋಟಿಸುತ್ತಾನೆ. "ದುರ್ದೈವದ ದಶಾವತಾರವನ್ನು ಮಾಡುವ ಕೂವತ್ತು ಇನ್ನು ನನ್ನಲ್ಲಿ ಉಳಿದಿಲ್ಲ!"

ಅಂದರೆ ಮರಾಠಿಯ ಈ ಹಿರಿಯ ಕವಿ-ನಾಟಕಕಾರರು "ದಶಾವತಾರ"ವೆಂಬುದನ್ನು ಕಂಡಿರಬೇಕು. ಅಲ್ಲದೆ ಒಂದೇ ದೃಶ್ಯರೂಪಕದಲ್ಲಿ ಹತ್ತೂ ಅವತಾರಗಳ ನಟನೆ ಆಗುವದನ್ನೂ ಅವರು ಅರಿತಿರಬೇಕು. ಆದರೆ ಇದು ನಮ್ಮ ಕನ್ನಡ ಕರಾವಳಿಯ "ದಶಾವತಾರ ಆಟ"ದ ಸ್ವರೂಪವಲ್ಲ.

ನಮ್ಮ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳ ಅತ್ಯಂತ ಜನನೀಯ ಜಾನಪದ ನೃತ್ಯನಾಟ್ಯ ಪ್ರಕಾರವಿದು. 'ಬಯಲಾಟ'ವೆಂದೇ ಇದರ ಲೋಕಪ್ರಸಿದ್ಧಿ ಯಕ್ಷಗಾನದಲ್ಲಿ "ತಾಳಮದ್ದಲೆ ಪ್ರಸಂಗ"ದಿಂದ ಬೇರೆಯಾದ ಬಹುಜನ ಸಮಾಜದ ರಂಗದರ್ಶನವಿದು. ಆದರೆ ಆ ಬಯಲಾಟಕ್ಕೆ "ದಶಾವತಾರದಾಟ"ವೆಂಬ ಹೆಸರು ಹಿಂದೆಲ್ಲ ರೂಢಿಯಲ್ಲಿ ಬಂದದ್ದೇಕೆ? ಇದನ್ನು ಇನ್ನೂ ದಕ್ಷಿಣದಲ್ಲಿ ತಂಜಾವರವ ಹಳೆಯ ಮರಾಠೀ ಸಂಸ್ಥಾನದ ಆಸ್ಥಾನದಲ್ಲಿ "ಭಾಗವತರಾಟ"ವೆಂದೂ ಕರೆಯುತ್ತಿದ್ದರು. ಬಯಲಾಟದ ಸೂತ್ರಧಾರನನ್ನು "ಭಾಗವತ'ನೆಂದೇ ಹೆಸರಿಸುತ್ತಾರೆ. ಭಾಗವತ ಪುರಾಣ ವಿಷ್ಣುವಿನ ಅವತಾರಗಳ ಗಾಥೆ. ಅರ್ಥಾತ್ ಯಕ್ಷಗಾನದ ಪ್ರಸಂಗ ಪಟ್ಟಿಗಳ ಆಖ್ಯಾನಗಳೆಲ್ಲ ಹೆಚ್ಚಾಗಿ ಈ ಅವತಾರಗಳ ಕಥೆಗಳನ್ನೇ ಒಳಗೊಂಡವು. ಭಾಗವತದಂತೆ ದೇವಿಭಾಗವತ, ಶಿವಪುರಾಣ ರಾಮಾಯಣ ಮಹಾಭಾರತಗಳಲ್ಲಿಯ ಆಖ್ಯಾನಗಳೂ ಈ ಬಯಲಾಟಗಳ ನಾಟ್ಯವಸ್ತು

ಅಲ್ಲಿ ರಾಕ್ಷಸ ವಧೆಗಳ ರೌದ್ರ ಭಯಾನಕ ಕಥಾ ಪ್ರಸಂಗಗಳೂ ಧಾರಾಳವಾಗಿ ಜನಪ್ರಿಯಗೊಂಡು ಬಂದಿವೆ.”

**ಮೂಲತಃ**

ಅಂದರೆ ಕೇವಲ ವೈಷ್ಣವ (ದಶಾವತಾರಗಳ) ಕಥೆಗಳನ್ನಷ್ಟೇ ಈ ಭಾಗವತರು ಹಾಡಿಕುಣಿದಾಡಿಸುವುದಿಲ್ಲ. (ಭಾಗವತ ಸಂಪ್ರದಾಯ ಹರಿಹರರನ್ನು ಅಭೇದದಿಂದ ಕಾಣುತ್ತ ಬಂದ ಉಪಾಸನೆಯ ಮಾರ್ಗ. ಅದೇಕೋ ನಮ್ಮಲ್ಲಿ “ಶೈವxವೈಷ್ಣವವೆಂಬುದಕ್ಕಿಂತ “ಸ್ಮಾರ್ತxವೈಷ್ಣವ” ಎಂಬ ಭೇದ ಸಾಂಪ್ರದಾಯಿಕವಾಗಿ ಪ್ರಚಲಿತ. ಇಲ್ಲಿ “ಸ್ಮಾರ್ತ”ವೆಂದರೆ ಕೇವಲ ಸ್ಮತಿ ಗ್ರಂಥಗಳನ್ನು ಅನುಸರಿಸುವ ಮಾರ್ಗವೆಂದಲ್ಲ. ನಮ್ಮ ಸನಾತನ ಧರ್ಮವೇ ವೇದಮೂಲವೆಂದರೂ ಸ್ಮತಿ ಪ್ರಣೀತ.)

ಆದರೆ ಯಕ್ಷಗಾನರಂಗದ ಮಟ್ಟಿಗೆ ಬಯಲಾಟದ ಸೂತ್ರಧಾರ ಭಾಗವತನೆಂದು ಹೆಸರು ಪಡೆದಾಗ ಆತ ಮೂಲತಃ ಭಾಗವತ (ವೈಷ್ಣವ) ಸಂಪ್ರದಾಯದ ಅಖ್ಯಾನಗಳನ್ನೇ ಆಡಿಸುತ್ತಿರಬೇಕು. ಶಿವ-ಶಕ್ತಿಯರ ಪುಣ್ಯ ಕಥೆಗಳ ಅಳವಡಿಕೆ ಹಿಂದಿನಿಂದ ಸೇರಿ ಕೊಂಡಿರಬೇಕು. ಅಂತೆಯೇ ಈ ಬಯಲಾಟದ ಒಂದು (ಒಂದನೆ?) ಹೆಸರು ದಶಾವತಾರದಾಟವೆಂದು ರೂಢಿಯಲ್ಲಿ ಬಂತು. ನನ್ನ ಬಾಲ್ಯದಲ್ಲಿ ನಮ್ಮೂರ ಮಹಾ ಶಿವರಾತ್ರಿಯ ಜಾತ್ರೆಗೆ ಬರುತ್ತಿದ್ದ “ತೆಂಕಲಾಗಿನ” ಆಟದ ಮೇಳಗಳು ದಶಾವತಾರ ಮೇಳಗಳೆಂದೇ ಹೆಸರುವಾಸಿಯಾಗಿದ್ದವು. “ಯಕ್ಷಗಾನ ಬಯಲಾಟ”ದ ಹೆಸರು ಈಚೆಗೆ- ಈ ಜಾನಪದ ರಂಗದ ಕಲಾಭಿಮಾನ ಹೊಸ ಪ್ರಜ್ಞೆಯುನ್ನು ಮೂಡಿಸಿದಂದಿನಿಂದ?-ಪ್ರಚಾರದಲ್ಲಿ ಬಂತು.

ಅದೇನೇ ಇದ್ದರೂ ಆ ಹಿಂದಿನ ಕಾಲದಲ್ಲಿಯೂ ಈ ಬಯಲಾಟಕ್ಕೆ “ದಶಾವ ತಾರದಾಟ”ವೆಂದು ಕರೆಯುತ್ತಿದ್ದುದು ಏಕೆ? ಈ ‘ಆಟ’ದ ಅಖ್ಯಾನಗಳು ವಿಷ್ಣುವಿನ ಯಾವದಾದರೊಂದು ಅವತಾರಕ್ಕೆ ಸಂಬಂಧಿಸಿದವೆಂದೋ? ಅಥವಾ ಪ್ರತಿಯೊಂದು ಬಯಲಾಟದ ಪ್ರದರ್ಶನದಲ್ಲಿಯೂ ಈ ಹತ್ತೂ ಅವತಾರಗಳನ್ನೂ ಆಡಿತೋರಿಸುತ್ತಿದ್ದರೆಂದೋ?

ಅಂದಿನಿಂದ ಇಂದಿಗೂ “ದಶಾವತಾರ”ವೆಂದ ಮಾತ್ರಕ್ಕೆ ನಮ್ಮ ಈ ಮೇಳಗಳು ಪತ್ತೂ ಅವತಾರಗಳ ಲೀಲೆಗಳನ್ನು ಆಡಿ ತೋರಿಸಿ ಈ ಹೆಸರನ್ನು ಸಾರ್ಥಕಗೊಳಿಸುವದಿಲ್ಲ. ಶ್ರೀರಾಮ ಶ್ರೀಕೃಷ್ಣರಷ್ಟೇ ಅಲ್ಲದೆ ನೃಸಿಂಹ, ವಾಮನ ಪರಶುರಾಮರಿಗೂ ಸಂಬಂಧಪಟ್ಟ ಆಖ್ಯಾನಗಳು ಆಡಲ್ಪಡುತ್ತವೆ. ಆದರೆ ಮತ್ಯ, ಕೂರ್ಮ, ವರಾಹ, ಬುದ್ಧ, ಕಲ್ಕಿ? ಇವರ ಅಖ್ಯಾನಗಳು ರಂಗಪ್ರಸಂಗಗಳು ಪ್ರಚಲಿತವಿಲ್ಲ. ಇದು ನಮ್ಮ ಕನ್ನಡ ಕರಾವಳಿಯ ಮಟ್ಟಗಿನ ಇತಿವೃತ್ತ.

ಹೀಗೆ ಹೇಳಲು ಕಾರಣವೇನೆಂದರೆ “ದಶಾವತಾರಿ ನಾಟಕ”ವೆಂಬ ಹೆಸರಿನಿದ ಇಂದಿಗೂ ಒಂದು ಲೋಕನಾಟ್ಯದ ಪ್ರಕಾರ ನಮ್ಮ ಜಿಲ್ಲೆಯ ಉತ್ತರಕ್ಕೆ ಗೋಮಂತಕದಲ್ಲಿ ಊರ್ಜಿತವಾಗಿಯೇ ಇದೆ. ಅಲ್ಲಿ ಗ್ರಾಮದೇವತೆಗಳ ಜಾತ್ರೆ ಉತ್ಸವಗಳಲ್ಲಿ ಪ್ರಾಕ್ಕಿನಿಂದಲೂ ಗುಡಿಗಳ ಇದಿರು ಒಳಮೈಲಿನಲ್ಲಿ ಇಲ್ಲವೆ ಹೊರಬಯಲಿನಲ್ಲಿ ಎತ್ತರದ ರಂಗಸ್ಥಳ ರಚಿಸಿ ಅದರ ಮೇಲೆ ಆಡಲಾಗುತ್ತದೆ- ಈ ದಶಾವತಾರ ನಾಟಕ.

"ಗೋಮಾಂತಕದ ನಾಟ್ಯ ಸ್ವರೂಪ"ದ ಬಗೆಗೆ ಈಚೆಗೆ ನಾನು ಓದಿದ ಒಂದು ಮರಾಠೀ ಗ್ರಂಥದಿಂದ ಈ ವಿಷಯದ ಅರಿವು ನನಗೆ ಆಯಿತು. ಅದನ್ನೆ ರಸಿಕ ಓದುಗರೊಡನೆ ಹಂಚಿಕೊಳ್ಳುತ್ತಿದ್ದೇನೆ.

ಗೋಮಾಂತಕದಲ್ಲಿ ಪ್ರಾಚೀನ ಕಾಲದಿಂದಲೂ ದೇವತೆಗಳ ಸಾನ್ನಿಧ್ಯದಲ್ಲಿ ರಾತ್ರಿ ಇಡೀ ಜಾಗರ ಮಾಡುವದೊಂದು ಪರಿಪಾಠ. ಇಂದಿಗೂ ಆಯಾ ಕುಲದೇವರ "ಕುಲಾವಿ"ಗಳು ನೇಮದಿಂದ ಈ 'ಜಾಗರ'ಗಳನ್ನು ನಡೆಯಿಸುತ್ತಾರೆ. ಈ 'ಜಾಗರ' ಒಂದು ಜಾನಪದ ನಾಟ್ಯ. ಇದರಲ್ಲಿ ಎರಡು ವಿಧ. ಗೋವೆಯ ಫ್ಲೇಂಡಾ ಮಹಲಿನಲ್ಲಿ ಖಾಂಡೇಪಾರ ಮತ್ತು ಸಾಂಗೇ ಮಹಲಿನಲ್ಲಿ ಮಲಕರ್ಣೆ ಊರುಗಳಲ್ಲಿ ಇದರ ಮೂಲ. ಅಲ್ಲಿಂದ ಮುಂದೆ ಇದೇ ಮಹಲುಗಳ ವಾಗುರ್ವೆ ಬಾಂದವಾಡಿ ಮುಂತಾದ ಗ್ರಾಮಗಳಿಗೆ ಈ ನಾಟ್ಯ ಹಬ್ಬಿತು. ಆದರೂ ಮಲಕರ್ಣೆ ವಾಗ್ವೇಕರ ಕುಲಗಳಿಗೇ ಈ ನಾಟ್ಯ ಪ್ರಕಾರದ "ಹಕ್ಕುದಾರ"ರೆಂದು ಇಂದಿಗೂ ಮನ್ನಣೆ. ಈ ನಾಟ್ಯಮಾಡುವ ಕುಲದವರು ಇಂದು ಹಲವಾರು ಕಡೆಗೆ ಚದರಿ ಹೋಗಿದ್ದರೂ ಈ ಮಂದಿ ತಮ್ಮವರ ಹೊರತು ಹೊರಗಿನವರನ್ನು ಈ ಆಟಗಳಲ್ಲಿ ಸೇರಿಸಿಕೊಳ್ಳುವದಿಲ್ಲ.

ಈ ದಶಾವತಾರಿ ನಾಟ್ಯದ ಒಂದು ವಿಶೇಷವೆಂದರೆ ಇದರಲ್ಲಿ ಹೆಣ್ಣು ಪಾತ್ರಗಳನ್ನು ಹೆಂಗಸರೇ ವಹಿಸುತ್ತಾರೆ (ಮುಂದೆ ಮಹಾರಾಷ್ಟ್ರದ 'ತಮಾಷಾ'ದಲ್ಲಿ ಇದೇ ರೂಢಿ ಮುಂದುವರಿಯಿತು.) ರಾಕ್ಷಸವಧೆಗಾಗಿ ಆವಿರ್ಭವಿಸುವ "ಆಧಿಮಾಯೆ"ಯ ಪಾತ್ರ "ಮ್ಹಾತಾರೊ" ಪುರುಷನೇ ವಹಿಸುತ್ತಾನೆ. ಇನ್ನೊಂದು ವಿಶೇಷವೆಂದರೆ ಈ 'ಜಾಗರ'ದಲ್ಲಿ ಪಾತ್ರವಾಡುವ ಹೆಣ್ಣುಗಳು ಪರಂಪರೆಯಿಂದಲೂ ಅವಿವಾಹಿತರೇ ಆಗಿರಬೇಕು. (ಬಹುಶಃ "ಪಾತರದವರು" ಎಂಬ ಹೆಸರಿಗೆ ಇದೇ ಮೂಲ. ಹಳೆಯ ಮರಾಠಿಯಲ್ಲಿಯೂ ದೇವದಾಸಿ "ಪಾತ್ರ" ಉದಾಹರಣೆ, "ಕಾನ್ಹೋಪಾತ್ರ").

**ಗಣಪನ ಸ್ತುತಿ**

'ಜಾಗರ'ದ ಒಂದು ಪ್ರಕಾರ 'ಪೀರಣೆ' (ಗದ್ದೆಬಿತ್ತಿದ ನಂತರ ಇದನ್ನು ಆಡುತ್ತಿದ್ದರು) ಇದೊಂದು ಹಾಡುಗಾರರ ಜಾತಿಯೇ ಆಗಿ ನಿಂತಿತು. ಇನ್ನೊಂದು ಪ್ರಕಾರ 'ಗಾವಡಿ' ಜಾತಿಯವರದು. ಇದು ಕ್ರಿಸ್ತ ಧರ್ಮಕ್ಕೆ ಸೇರಿದ್ದು 'ಪೀರಣೆ' ಪ್ರಕಾರದಲ್ಲಿ ಪೌರಾಣಿಕ ಕಥೆಗಳನ್ನು ಹಾಡಿ ಆಡುವರು. ಆರಂಭದಲ್ಲಿ ರಂಗದ ಪ್ರಮುಖ (ಹರಿದಾಸ) ಮತ್ತು ಗಣಪತಿ. ಸರಸ್ವತಿಯ ಮುಖವಾಡ ತೊಟ್ಟ ಪಾತ್ರಗಳು ರಂಗಕ್ಕೆ ಬಂದು ದೀಪದ ಗುಡ್ಡಕ್ಕೆ ಮಾಲೆ ಹಾಕಿ ಸರಸ್ವತಿ-ಗಣಪತಿಯರ ಸ್ತುತಿ ಮಾಡುವರು.

ಇಲ್ಲಿ ಒಂದು ಸ್ವಾರಸ್ಯವೆಂದರೆ, ಇವರು ಹಾಡುವ ಸರಸ್ವತಿ ಸ್ತವನ ಮರಾಠಿ, ಆದರೆ ಗಣಪತಿಯ ಸ್ತವನ ಕನ್ನಡ- "ಗಜಮುಖನೆ. ಗಣಪತಿ ಗಣನಾಥ ಶರಣು" ಇತ್ಯಾದಿ. ಆದರೆ ಬುನಾದಿಯಿಂದ ಇಂಥ ಪದ್ಯಗಳಲ್ಲಿ ಹಲವು ಶಬ್ದಗಳು ಅಪಭ್ರಂಶಗೊಂಡಿವೆ.

ಈ ಸ್ತುತಿ ಪದ್ಯಗಳು (ಗಣಪತಿ ಪೂಜೆ) ಮುಗಿದ ಬಳಿಕ ಹರಿದಾಸನು ರಂಗಸ್ಥಳ ಮತ್ತು ಪ್ರೇಕ್ಷಕರ ನಡುವೆ ಒಂದು ಬಿಳಿಯ ತೆರೆ ಹಿಡಿದಿರುತ್ತಾನೆ. ಸರಸ್ವತಿ ಗಣಪತಿ ವೇಷಗಳು ತೆರೆಯ

ಮರೆಗೆ ನಿಂತಿರುತ್ತವೆ. ಅನಂತರ ಮೊದಲು ಗಣಪತಿ ಅನಂತರ ಸರಸ್ವತಿ ತೆರೆಯಿಂದ ಹೊರಬಂದು ಕುಣಿದಾಡುತ್ತಾರೆ. ಗಣಪತಿಗೆ ಕೆಂಪು ಮುಖವಾಡ: ಸರಸ್ವತಿ ಸೊಂಟಕ್ಕೆ ಮರದ ನವಿಲು ಕಟ್ಟಿರುತ್ತದೆ. ಅವರು ಕುಣಿದು "ವರದಾನ" ಮಾಡಿ ಹೋದ ನಂತರ ವಿದೂಷಕನ ಪ್ರವೇಶ. ಆತ ಗ್ರಾಮ ವಿನೋದ ಒಗಟಿನ ಸವಾಲು ಜವಾಬು ಮತ್ತು ತನ್ನದೇ ಆದ ಕುಣಿತ ಮಾಡಿ ಮರೆಯಾಗುತ್ತಾನೆ. ಆ ಮೇಲೆ 'ಮ್ಹಾತಾರೊ' (ಆದಿಮಾಯೆ) ಮುಖವಾಡ ತೊಟ್ಟ ವೇಷದ ಕುಣಿತ ಆಕೆ(ತ) ಸರಿದ ಮೇಲೆ ಕೈಯಲ್ಲಿ ಕೃಷ್ಣನ ಗೊಂಬೆ ತೊಟ್ಟ ಹೆಣ್ಣು ವೇಷದ ಕುಣಿತ. ಅನಂತರ ಸೌದಾಗರ (ಶೆಟ್ಟಿ) ಮಹಾದೇವ (ಭಟ್ಟರ) ಪ್ರವೇಶ. ಅನಂತರ "ಮಧೂಭಾವು" ಕಿಟ್ಬೊ ಭಾವು (ಅಂದರೆ ಮಧು-ಕೈಟಭರು) ಬಂದು ಕುಣಿಯುತ್ತಾರೆ. ಇವರ ಪದ್ಯ ಹರಿದಾಸನೇ ಹಾಡುತ್ತಾನೆ. ಗದ್ಯದಲ್ಲಿ ಇವರು ಸಂವಾದ ಬೆಳೆಸುತ್ತಾರೆ. ಆ ಮೇಲೆ ಅಂಬಾದೇವಿ (ಸ್ತ್ರೀ ಪಾತ್ರ) ಈ ದೈತ್ಯರನ್ನು ಕೊಲ್ಲುತ್ತಾಳೆ. ಕೆಲವು ಪ್ರಯೋಗಗಳಲ್ಲಿ ಈ ವಧೆಯು ಮತ್ಸ್ಯಾವತಾರದಿಂದಲೇ ಆಗುತ್ತದೆ.

ಇಲ್ಲಿ ಇನ್ನೊಂದು ವಿಶೇಷ 'ಗಾಯತ್ರಿ' ದೇವಿಯ ವೇಷ. ಈ ಪಾತ್ರಧಾರಿಯಲ್ಲಿ ಆ ದೇವಿಯ 'ಸಂಚಾರ'ವಾಗುತ್ತದೆ. ಅವಳಿಂದ ಪ್ರಶ್ನೆ ಪ್ರಸಾದ ಕೇಳಿ ತೀರ್ಥ ಪಡೆದು ಈ ಜಾಗರ ಮುಗಿಯುತ್ತದೆ.

'ಜಾಗರ'ದ ಎರಡನೆಯ ಪ್ರಕಾರ ಗಾವಡೆ ಜಾತಿಯವರದು. ಇದರಲ್ಲಿ ಪೌರಾಣಿಕ ಧಾರ್ಮಿಕ ಕಥಾ ವಿಧಾನ ಕಡಿಮೆ ೧ನೆಯ ಪ್ರಕಾರದಲ್ಲಿ ಡೋಲು ವಾದ್ಯ. ಆದರೆ ಈ ಪ್ರಕಾರದಲ್ಲಿ ನಮ್ಮಲ್ಲಿ 'ಗುಮಟೆ'. ಆದರೆ ಇದು ಹಾಲಕ್ಕಿ ಒಕ್ಕಲ ಉದ್ದ ಗುಮಟೆ ಅಲ್ಲ. ನಮ್ಮಲ್ಲಿ ಚವತಿ ನವರಾತ್ರಿ ಹಬ್ಬಗಳಲ್ಲಿ ಬಾರಿಸುವ ದುಂಡಗಿನ ಕೊಡಗಳಂಥ ಗುಮಟೆ (ಅಲ್ಲಿಂದಲೇ ಅದು ಇಲ್ಲಿಗೆ ಬಂದಿರಬುಹುದೆ?). ೪-೬ ಮಂದಿ ಈ ಗುಮಟೆಗಳನ್ನು ಹಿಡಿದು ಹಿಮ್ಮೇಳಕ್ಕೆ ನಿಲ್ಲುತ್ತಾರೆ. (ಈ ವಾದ್ಯ ಮಹಾರಾಷ್ಟ್ರದಲ್ಲಿ ಇನ್ನೆಲ್ಲಿಯೂ ಕಾಣಸಿಗದು) ಈ 'ಸಾಥಿ'ಗೆ ವೇಷಗಳ ಹಾಡು ಕುಣಿತ. ಈ ಜಾಗರವಲ್ಲಿ ನಮ್ಮಲ್ಲಿಯ ಸುಗ್ಗಿಯ 'ಹಗರಣ'ದಂಥ ಹುಲಿ, ಕರಡಿ ವೇಷ, ಕಿರಾತ, ಮರಕಾಲು ಕಟ್ಟೆಕುಣಿತ ಎಲ್ಲ ಬರುತ್ತದೆ.

ಈ 'ಜಾಗರ'ಗಳಲ್ಲದೆ 'ತಾಟಕಿ' 'ಪೂತನಿ' 'ರಣಮಲೆ' ಮುಂತಾದ ಪುಟ್ಟ ಪೌರಾಣಿಕ ಆಖ್ಯಾನಗಳನ್ನೂ ಗೋವೆಯ ಆದಿವಾಸಿಗಳು ಕುಣಿದು ಆಡುತ್ತಾರೆ. ಕಾಣಕೋಣ ಕಡೆಯ ಹಾಡುಗಳಲ್ಲಿ ಕನ್ನಡ ಶಬ್ದಗಳು ಹೆಚ್ಚು. ಇಲ್ಲಿಯ ಪದ್ಯಗಳ ವೃತ್ತಗಳೂ ಕಲಬೆರಕೆ. ಇತರ ಮರಾಠೀ ಪದ್ಯಗಳು ಹೆಚ್ಚಾಗಿ ಓವಿ (ತ್ರಿಪದಿ)ಯಲ್ಲಿ ಯಾವ ಆಖ್ಯಾನವೇ ಇರಲಿ ಮೇಲೆ ಹೇಳಿದ ಗಣಪತಿ ಸರಸ್ವತಿ ಪೂಜೆಯ ಪ್ರವೇಶದಿಂದಲೇ ಪ್ರಾರಂಭ.

**ಗೋಪಾಳಕಾಲಾ**

'ಜಾಗರ' ದಂತೆಯೇ ಗೋಮಾಂತಕದ ಇನ್ನೊಂದು ಗ್ರಾಮೀಣ ನಾಟ್ಯ ಪ್ರಕಾರ "ಕಾಲಾ"-ಗೋಪಾಳ ಕಾಲಾ. ಅಂದರೆ ಗೋಪಬಾಲಕರ ಕಲಸನ್ನದಬುತ್ತಿ ಗೋಕುಲಾಷ್ಟಮಿಯ ಈ ಹಬ್ಬದ ಹಿನ್ನೆಲೆ ಹೀಗೆ:- ಬಲರಾಮ ಕೃಷ್ಣರೊಂದಿಗೆ ಗೋಪಬಾಲಕರು ಗೋವುಗಳನ್ನು ಮೇಯಲು ಬಿಟ್ಟು ತಮ್ಮ ಬುತ್ತಿಗಳನ್ನು ಕಲೆ ಹಾಕಿ ಒಟ್ಟಾಗಿ ಕಲಸಿ ಹಂಚಿಕೊಂಡು ತಿಂದು ಮೋಜು ಮಾಡುವುದು. ಇದರ ಸಂಕೇತವೆಂದು ಗುಡಿಗಳ ಇದಿರು ಬೀದಿ ಚೌಕಗಳಲ್ಲಿ ಹಗಲಲ್ಲೆ

ಎತ್ತರಕ್ಕೆ ತೋರಣದಲ್ಲಿ ತೂಗುಬಿಟ್ಟ ಮೊಸರಗಡಿಗೆಗಳನ್ನು ಹುಡುಗರು ಒಬ್ಬರ ಹೆಗಲಮೇಲೊಬ್ಬರು ನಿಂತು ಎಟಕಿ ಹೊಡೆದು ಒಡೆದು ಚೆಲ್ಲಾಡಿ ಕುಣಿದು ಕುಪ್ಪಳಿಸುವರು ಮತ್ತು ರಾತ್ರಿ ಕೃಷ್ಣಲೀಲೆಯ ನಾಟ್ಯ ರೂಪಕಗಳನ್ನು ಆಡುವರು.

ಇದರಲ್ಲಿ ಮೂರು ವಿಧ: ಗೋಪಾಳ ಕಾಲಾ. ಗೌಳಣಕಾಲಾ ಮತ್ತು ಬಾಲಲೀಲಾ ಕಾಲಾ. ಮೊದಲಿನ ಎರಡು ಗಾಯನವಾದನ ಪ್ರಧಾನ. ಮೂರನೆಯದು ಸಂಭಾಷಣೆಗಳಿಂದ ಕೂಡಿದ್ದು. ಕೃಷ್ಣ ಬಲರಾಮರ ಒಂದು ಪಕ್ಷ. ಪ್ರಲಂಬಾ ಸುರಾದಿ ರಾಕ್ಷಸರದು ಇದಿರು ಪಕ್ಷ. ಅವರ ನಡುವೆ ಸವಾಲು ಜವಾಬು, ಜತೆಜತೆ, ಕುಣಿತ ಕಾಳಗ ಅಸುರರ ವಧೆ.

**ಗೌಣಕಾಲಾ**

ಇದು ಪೂರ್ತಿ ಗೀತ ಸಂವಾದಗಳ ನಾಟ್ಯ ರೂಪಕ. ಪುಟ್ಟ ನಾಟಕದಂತೆಯೇ, ಇದರಲ್ಲಿ ಯಶೋದೆ, ರಾಧೆ, ಗೋಪ-ಗೋಪಿಯರ ವೇಷಗಳು, ಪೂರ್ವರಂಗ ಹರಿದಾಸನ ಕೀರ್ತನಾ ಸಂಪ್ರದಾಯದ ಶೈಲಿಯದು. ಉತ್ತರ ರಂಗದಲ್ಲಿ ಯಶೋದಾಕೃಷ್ಣ ರಾಧಾಕೃಷ್ಣರ ಸಂವಾದ ಗೀತೆಗಳು, ನೃತ್ಯಗಳು, ಹೆಚ್ಚಾಗಿ ಜಾನಪದ ಸಂಗೀತದಲ್ಲಿ ಇದುವೇ ಗೋಮಂತಕದ ಹಳೆಯ (ಮೂಲ) ನಾಟಕ ಪ್ರಕಾರ, ಇದರ ಮುಂದಿನ ಹಂತದಲ್ಲಿ "ದಶಾವತಾರಿ ನಾಟಕ"

**ಬಾಲಲೀಲಾ ಕಾಲಾ**

ಇದರ ಸ್ವರೂಪ ಬಹುತೇಕ ದಶಾವತಾರದಂತೆಯೇ. ಇದರಲ್ಲಿಯ ಪದ್ಯಭಾಗ ಪ್ರಾಚೀನ ಮರಾಠೀ (ಸಂತ) ಕವಿಗಳ ರಚನೆಗಳಿಂದ ಆಯ್ದದ್ದೂ ಸಂಗೀತ ಗೋಮಂತಕೀಯ ಜಾನಪದ, ತಾಳ ಧ್ರುಪದಮಟ್ಟ ಈಗ ಇವೆಲ್ಲ ಲುಪ್ತ ಪ್ರಾಯ ಮೃದಂಗ ತಾಳದ ಜತೆ ಭಾಗವತ (ಹರಿದಾಸ), ಅವನ ಹಿಮ್ಮೇಳಕ್ಕೆ ತಾಳ ಹಿಡಿದ ೨೦-೨೫ ಮಂದಿ. ಹಿನ್ನೆಲೆಯಲ್ಲಿ ಅರ್ಧ ಚಂದ್ರಾಕೃತಿಯಾಗಿ ನಿಲ್ಲುತ್ತಾರೆ. ಮೃದಂಗ ಎರಡು. ಒಂದು, ಪೂರ್ತಿ ತಾಳ ಪ್ರಸಾರಕ್ಕೆ ಇನ್ನೊಂದು ತಾಳ ಹಿಡಿದವರ ಜತೆ 'ಟೇಕಾ' ಹಿಡಿಯಲಿಕ್ಕೆ.

ಹರಿದಾಸನಿಂದ ಮಂಗಲಾ ಚರಣ. ಆಮೇಲೆ ಗಣಪತಿ, ಸರಸ್ವತಿ, ಶಿವ ಪಾರ್ವತಿ ಅನುಕ್ರಮವಾಗಿ ಪ್ರವೇಶಿಸಿ ಕುಣಿದು ಹೋಗುತ್ತಾರೆ. ಈ ಸಂದರ್ಭದಲ್ಲಿ ಹರಿದಾಸನ ಹಾಡುಗಾರಿಕೆ ಯಲ್ಲಿ ಕನ್ನಡ ಪದ್ಯಗಳು ವಿಶೇಷ. ಅದೂ ಗೋವೆಯ ದಕ್ಷಿಣ ಭಾಗದಲ್ಲಿ ಹೆಚ್ಚು: ಹರಿದಾಸನ ಉಡಿಗೆತೊಡಿಗೆ ಭರ್ಜರಿ,-ಜರೀಮುಂಡಾಸು. ಪೀತಾಂಬರ, ಸೊಂಟಕ್ಕೆ ಜರೀ ಶಾಲು, ಕೊರಳಿಗೆ ಕಂಠೀಹಾರ ಇತ್ಯಾದಿ. (ಅದಕ್ಕಾಗಿಯೇ ಆತ ನಮ್ಮ ಯಕ್ಷಗಾನದಲ್ಲಿ "ಮೊದಲನೆಯ ವೇಷ" ವೆನಿಸಿಕೊಂಡಿರಬಹುದೇ?)

ಆಖ್ಯಾನದ ಆರಂಭ ಎರಡು ಬಗೆ. ದಕ್ಷಿಣ ವಿಭಾಗದಲ್ಲಿ ಅಂಬರೀಶನ ಕತೆಯಿಂದ ಉತ್ತರವಿಭಾಗದಲ್ಲಿ "ಪರೀಕ್ಷಿತಿಯತೆಯಿಂದ. (ಕೇಳು ಜನಮೇಜಯ" ಎಂಬಂತೆಯೇ:) ಆಖ್ಯಾನದ ಕೊನೆ ಮತ್ಸ್ಯಾವತಾರದಲ್ಲಿ.

ನಮ್ಮ ಯಕ್ಷಗಾನದ ಬಯಲಾಟ ಇಡಿಯ ಆಖ್ಯಾನ ಕೃಷ್ಣಬಲರಾಮರು

ಗೋಪಬಾಲಕರೊಂದಿಗೆ ನಡೆಯಿಸಿದ ಕ್ರೀಡೆ ಎಂಬಂತೆ ಮುಗಿಯುವದಷ್ಟೇ "ರಾಮಕೃಷ್ಣರು ಮನೆಗೆ ಬಂದರು ಬಾಗಿಲ ತೆರೆಯರೋ!" ಎಂಬ ಹಾಡಿನೊಂದಿಗೆ ಈ ಗೋಮಂತಕದ "ಬಾಲಲೀಲಾ ಕಾಲಾ"ದ ಚೌಕಟ್ಟು ಅದೇ ಆಗಿದೆ.

ನಮ್ಮ ಮೇಳಗಳಲ್ಲಿಯಂತೆ ಇಲ್ಲಿಯೂ "ಚಿನ್ನದ ಪೆಟ್ಟಿಗೆ' (ಪೆಠಾರಿ) ಪೂಜ್ಯ. ಅದು ದೇವಸ್ಥಾನದ ಅರ್ಚಕರಲ್ಲಿ ಅಥವಾ ಗರ್ಭಗುಡಿಯಲ್ಲಿ ಇಟ್ಟಿರುವುದು ರೂಢಿ. ಆಟದ ಮುಂಚೆ ಹರಿದಾಸ ಈ 'ಪೆಠಾರಿ'ಯಿಂದ ಗಣಪತಿ ಮುಖವಾಡ, ಸರಸ್ವತಿ ಸೊಂಟದ ನವಿಲು, ಕೃಷ್ಣನ ಗೊಂಬೆ ಇತ್ಯಾದಿ ಹೊರತೆಗೆದು, ದೀವಿಗೆ ಇರಿಸಿ ಪೂಜೆ ಆರತಿ ಹಣ್ಣುಕಾಯಿ ಮಾಡಿ ರಂಗದೇವತೆಯ ಸ್ಥಾಪನೆ ಮುಗಿಸುತ್ತಾನೆ. (ಮುಖವಾಡಗಳು ಮರದಿಂದ ಅಥವಾ ಕಾಗದದ ಮುದ್ದೆಯಿಂದ ತಯಾರಿಸಿದವು) ಆಮೇಲೆ ವೇಷಗಳು ಬಣ್ಣದ ಕೆಲಸ ಮುಗಿದ ನಂತರ ಎಲ್ಲ ವೇಷಗಳೂ 'ಪೆಠಾರಿ'ಯ ಹಾಗೂ ಕೃಷ್ಣನ ಗೊಂಬೆಯ ಇದುರು ನಿಂತು ಪಂಚವಾದ್ಯಗಳ ಅಬ್ಬರದಲ್ಲಿ ಆರತಿ ಎತ್ತುತ್ತಾರೆ. ಈ ಆರತಿ ಹಾಡೂ ಕನ್ನಡದಲ್ಲಿಯೇ ಇರುತ್ತದೆ.

ಅನಂತರ 'ರಂಗಪಟ್ಟ' (ಬಣ್ಣದ ಚೌಕ)ದಿಂದ ಹರಿದಾಸ ಇಬ್ಬರು ಮೃದಂಗದವರು, ಮಶಾಲು ಹಿಡಿದವರು ೫-೧೦ ಮಂದಿ ತಾಳ ಬಡಿಯುವವರು, ಮುಂತಾದವರೊಂದಿಗೆ ಕೂಡಿಕೊಂಡು ಬಂದು ಪುಟ್ಟ ಮೆರವಣಿಗೆಯಲ್ಲಿಯೇ ರಂಗಸ್ಥಳಕ್ಕೆ ಬರುತ್ತಾನೆ. ಆಗ ಪಟಾಕಿ ಹಾರಿಸುವದೂ ಉಂಟು. ಕೆಲಸಲ ಹರಿದಾಸ ಕುಣಿಯುತ್ತಲೇ ಬರುವುದುಂಟು. ಇನ್ನು ದಶಾವತಾರ. ಹಿಂದೆ ಗೋವೆಯಲ್ಲಿ ಹತ್ತೂ ಅವತಾರಗಳ ಲೀಲೆ ಆಡಿತೋರಿಸುತ್ತಿದ್ದರೆಂದು ಹಳಬರು ಹೇಳುವುದುಂಟು. ಆದರೆ ಇಂದು ಮುಖ್ಯ ಅವತಾರಗಳ ಕಥಾ ಪ್ರಸಂಗಗಳನ್ನಷ್ಟೇ ರಂಗದಲ್ಲಿ ಆಡಿಸಿ ಮಿಕ್ಕ ಅವತಾರಗಳ ಲೀಲೆಗಳನ್ನು ಹರಿದಾಸ ತನ್ನ ಪದ್ಯಗಳಲ್ಲಿಯೇ ಉಲ್ಲೇಖಿಸುತ್ತಾನೆ -ಇದು ೧೮೪೩ನೇ ಇಸವಿಯ ಒಂದು ಪದ್ಯಪಾಠದ ಪಟ್ಟಿಯಿಂದ ಗೊತ್ತಾಗುತ್ತದೆ.

ಪೂರ್ವರಂಗದಲ್ಲಿ ಮತ್ಸ್ಯಾವತಾರದಿಂದ ಶಂಖಾಸುರ (ಸಂಕಾಸುರ)ನ ವಧೆ. (ಈ ಶಂಖಾಸುರ ನಮ್ಮ ಬಯಲಾಟಗಳಲ್ಲಿ ಇಲ್ಲ?) ಹಾಗೆಯೇ ಆಖ್ಯಾನದ ಕೊನೆಗೆ ಕೃಷ್ಣನಿಂದ ಪೂತನಿಯ ವಧೆ. ಅದೇ ರೀತಿ ನಡುವಿನ ಅವತಾರಗಳ ಹಾರಿಕೆಯ ಹೇಳಿಕೆ. ಈ ಶಂಖಾಸುರ ವಿಷ್ಣುವಿನೊಂದಿಗೆ ಹುಚ್ಚಾಪಟ್ಟೆ ಮಾತಾಡುವದುಂಟು. ಆದರೊಳಗಿಂದಲೇ ಈ ಹುಂಬ ದೈತ್ಯ ಮುಂದೆ ವಿಕಟ ವಿನೋದ ವಿಚಿತ್ರ ಚೇಷ್ಟೆಗಳ "ಕೋಡಂಗಿ" ಮಟ್ಟಕ್ಕೆ ಇಳಿಯುವದು ವಾಡಿಕೆ ಆಯಿತು. (ನಮ್ಮಲ್ಲಿ 'ಕೋಡಂಗಿ' ಹೇಗೆ ಬಂತು ? ಈ ಹಾಸ್ಯವೇಷ "ಕೋಡಗನ ಅಂಗಿ" ತೊಟ್ಟ ಹನುಮ ನಾಯಕನಾದ್ದರಿಂದಲೇ?)

ಮತ್ಸ್ಯನಿಂದ ಶಂಖಾಸುರನ ವಧೆ ಆದ ಮೇಲೆ ಕೂರ್ಮ ವರಾಹರ ಉಲ್ಲೇಖ ಅಥವಾ ಬರೇ ಬಣ್ಣದ ವೇಷಗಳು ಬಂದು ಕುಣಿದು ಹೋಗುತ್ತವೆ. ಆದರೆ ನರಸಿಂಹವತಾರ ಆಖ್ಯಾನ ರೂಪದಲ್ಲಿಯೇ ರಂಗದಲ್ಲಿ ಆಡಿಸಲಾಗುತ್ತದೆ.

ಮೇಲೆ ಹೇಳಿದ ಶಂಖಾಸುರನ ವೇಷಕ್ಕೆ ಉದ್ದ ಕೆಂಪು ನಾಲಿಗೆಯ ಮುಖವಾಡ, ತಲೆಗೆ ಮಾವಿನ 'ತುಮಕಿ' (ತಳಿರು) ಮೈತುಂಬ ಉದ್ದ ಕಪ್ಪು ನಿಲುವಂಗಿ. ರಾವಣನಿಗೆ ಹತ್ತು ಮುಖ

ಇಪ್ಪತ್ತು ಕೈ. ಗಣಪತಿ ವೇಷದೊಂದಿಗೆ ಕೆಲವೊಮ್ಮೆ ಬುದ್ಧಿಸಿದ್ಧಿಯರ ಪ್ರವೇಶ.

ಇದು ಗೋವೆಯಲ್ಲಿ ಪ್ರಾಚೀನದಿಂದಲೂ ಪ್ರಚಲಿತವಾಗಿ ಬಂದ ದಶಾವತಾರಿ ನಾಟಕ. ಈ ನಾಟಕವಾಡುವ ಮೇಳ ನಾಲ್ಕು ಗಾಲಿಗಳ ಒಂದು ಸಂಚಾರಿರಂಗ ಮಂಚವನ್ನು ಜತೆಗೆ ಒಯ್ಯುವುದುಂಟು. (ನಮ್ಮಲ್ಲಿ ಹಳೆಯ ಮೇಳಗಳು ರಂಗದಲ್ಲಿ ಭಾಗವತರ ಹಿಮ್ಮೇಳ ಹಾಗೂ ವೇಷಧಾರಿಗಳು ಕೊಡುವ ಮಂಚವನ್ನು "ರಥ"ವೆಂದೇ ಕರೆಯುತ್ತಿದ್ದರು. ಈ ಮಂಚಕ್ಕೆ ಕಳಚುವ ಜೋಡಿಸುವ ಗಾಲಿಗಳು ಇರುತ್ತಿದ್ದವು!)

ಈ 'ದಶಾವತಾರ'ದ ವೈಶಿಷ್ಟ್ಯವೆಂದರೆ ಒಂದೇ ರಾತ್ರೆಯಲ್ಲಿ ಹತ್ತೂ ಅವತಾರಗಳ ಮುಖ್ಯಾ ಮುಖ್ಯಾ ಸನ್ನಿವೇಶಗಳನ್ನು ರಂಗದಲ್ಲಿ ನಟಿಸಿ ನರ್ತಿಸಿ ಕಾಣಿಸುವದು. ಬಯಲಾಟದಂತೆಯೇ ಇಲ್ಲಿಯೂ ಆಖ್ಯಾನವನ್ನು ಹರಿದಾಸ (ಭಾಗವತ) ಹಾಡಿಯೇ ವೇಷಗಳನ್ನು ಕುಣಿಸುವನು. ಆದರೆ ಇಲ್ಲಿ ಗದ್ಯಸಂವಾದಗಳು ಪೂರ್ವಸಿದ್ಧ. ಕಂಠಪಾಠವಾದವು. ಯಕ್ಷಗಾನದಂತೆ ಆಶುಭಾಷಣಗಳಲ್ಲ ನಮ್ಮಲ್ಲಿಯ 'ಬಯಲಾಟ'ದಿಂದಲೇ ಮೂಲ ಹಾಗೂ ಸ್ಥೂಲ ಪ್ರೇರಣೆ ಪ್ರಭಾವ ಪಡೆದು ಗೋಮಂತಕರ ಈ ಗ್ರಾಮೀಣ ಬಯಲಾಟವು ನಾವು ಎಂದೋ ಬಿಟ್ಟುಕೊಟ್ಟ 'ದಶಾವತಾರ' ಆಟವೆಂಬ ಹೆಸರನ್ನು ಇಂದಿಗೂ ಇಟ್ಟುಕೊಂಡು ಊರ್ಜಿತವಾಗಿ ಉಳಿದು ಬಂದಿದೆ. ನಮ್ಮ ಯಕ್ಷಗಾನ ರಂಗದ ತಜ್ಞರೂ ಅಭ್ಯಾಸಿಗಳೂ ಗೋವೆಯಲ್ಲಿಯ ಕಲೆಯ ಈ ತತ್ಸಮ-ತದ್ಭವಗಳನ್ನು ಅವು ಲೋಪವಾಗುವ ಮುಂಚೆಯೇ ಹೋಗಿ ನೋಡಿ ವ್ಯಾಸಂಗಕ್ಕೆ ಒಳಪಡಿಸುವದು ಈ ರಂಗಸಂಪದವನ್ನು ಕಾಪಾಡಿಕೊಳ್ಳುವ ದೃಷ್ಟಿಯಿಂದ ಎಷ್ಟು ಅಗತ್ಯದ್ದು ಮತ್ತು ಮಹತ್ವದ್ದು ಎಂದು ಬೇರೆ ಹೇಳಬೇಕೆ?

●

(ಪ್ರಜಾವಾಣಿ ಜೂನ್ ೧೭,೧೯೮೪)

# ಸರ್. ನಾರಾಯಣ ಚಂದಾವರಕರ ಮತ್ತು ಬಯಲಾಟದ ಗೀಳು

ಬೆಟ್ಟದ ನೆಲ್ಲಿಯಲ್ಲಿ, ಕಡಲಿನ ಉಪ್ಪು ಎಲ್ಲಿ ? ಆದರೆ ಅವೆರಡು ಕೂಡಿದಲ್ಲಿ ಒಂದು ವಿಶೇಷ ರುಚಿ. ಅದೇಕೆ? ನೆಲ್ಲಿ ಒಗರು. ನೀರು ಸಪ್ಪಗೆ. ಆದರೆ ನೆಲ್ಲಿ ತಿಂದು ನೀರು ಕುಡಿದರೆ ನಾಲಿಗೆಗೆ ಅನಿಸುವದು ಸವಿ! ಇಂದೆಂಥ ರಾಸಾಯನಿಕ ಪವಾಡವೋ ! ರಸಿಕತೆಯ ಕ್ಷೇತ್ರದಲ್ಲಿಯೂ ಇಂಥ ಪವಾಡಗಳು ಆಗೊಮ್ಮೆ ಈಗೊಮ್ಮೆ ಕಂಡು ಬರುತ್ತವೆ. ದೂರ ದೂರ ಬೇರೆ ಬೇರೆ ಆಗಿ ನಡೆದಂತೆ ಕಾಣುವ ಸಂಗತಿಗಳ ಹಿಂದೆ ಏನೋ ಚಾರಿತ್ರಿಕ ಒಳಸುತ್ತ ಕೆಲಸ ಮಾಡುತ್ತದೆ. ಯಾವದೋ ಕಾರಣದಿಂದ ಏನೇನೋ ಉಂಟು ಮಾಡುತ್ತವೆ.

ಮರಾಠಿಯ ಶ್ರೇಷ್ಠ ಕವಿ ದಿವಂಗತ ಶ್ರೀರಾಮ ಗಣೇಶ ಗಡಕರಿ (ಗೋವಿಂದಾಗ್ರಜ) ಅವರು ತಮ್ಮ 'ಪುಣ್ಯ ಪ್ರಭಾವ' ನಾಟಕದ ಆರಂಭದಲ್ಲಿಯೇ ನಾಯಿಕೆ ವಸುಂಧರೆಯ ಬಾಯಿಯಲ್ಲಿ ಒಂದು ಹಾಡಿನ ಮಾತು ಹಾಕಿದ್ದು ಇಲ್ಲಿ ನೆನಪಾಗುತ್ತದೆ. "ನಚ ಸಂಭವ ಜ್ಯಾಕಾಹೀಂ ಘಡತ ಅಕಾರಣತೇಂಹಿಂ" (ಯಾವದು ಅಸಂಭವವೆನಿಸುವದೋ ಅದೂ ಅ ಕಾರಣವಾಗಿ ಘಟಿಸುವದು!) ಅಂದರೆ ದೂರದ ತೋರಿಕೆಗೆ ಮೇಲ್ನೋಟಕ್ಕೆ "ಅ ಪರಸ್ಪರ ಸಂಭೂತ"ವೆಂದು ಕಂಡು ಬರುವ ವಿಭಿನ್ನ ಪಾತಳಿಯ ಇಲ್ಲವೆ ಮಾದರಿಯ ಸಂಗತಿಗಳ ಹಿನ್ನೆಲೆಗೆ ಬೇರೆ ಯಾವುದೋ ಕಾರ್ಯಕಾರಣ ಸಂಬಂಧ ಹೊಂದಿಕೊಂಡಿರುತ್ತದೆ. ತೀರ ಅಲ್ಪವೂ ಆಗಂತುಕವೂ ಅನಿಸುವ ಒಂದು Chain reaction (ಪ್ರತಿಕ್ರಿಯೆಗಳ ಸರಪಳಿ) ಆರಂಭವಾಗಿ ದೊಡ್ಡದೊಂದು ಚಾರಿತ್ರಿಕ ಘಟನೆ ಸಂಪನ್ನವಾಗುತ್ತದೆ. ಈ ದೃಷ್ಟಿಯಿಂದ ನಮ್ಮ ಐತಿಹಾಸಿಕ ಪಾತ್ರ ಪ್ರಸಂಗಗಳ ಹಾಗೂ ಪ್ರಕರಣಗಳ ಹಿಂದೆ ಕೆಲಸ ಮಾಡಿದ ತೀರ ಅಲ್ಪ-ಕ್ಷುಲ್ಲಕ ಆಗುಂತುಕವೆನಿಸುವ ಘಟಕಗಳನ್ನು ಹೆಕ್ಕಿ ಹೊಂದಿಸಿ ಅರ್ಥೈಸುವ ಒಂದು ಪ್ರಯತ್ನ ನಡೆಯಬೇಕು. ಆಗ ಇತಿಹಾಸ ವಿನ್ಯಾಸದ ಪ್ರಣಾಲಿಯೂ ಮೂಲತಃ

ಹೇಗೆ ಒಂದು ಯೋಗಾಯೋಗಗಳ ಸಂಕೀರ್ಣ (Complex) ಸಂಘಟನೆ ಎಂಬುದು ವಿಶದವಾಗುವದು.

ಇಲ್ಲವಾದರೆ ಸರ್. ನಾರಾಯಣ ಚಂದಾವರಕರರೆಲ್ಲಿ? ನಮ್ಮ ಕರಾವಳಿಯ ಕನ್ನಡ ಜಿಲ್ಲೆಗಳ ಯಕ್ಷಗಾನ ಮೇಳಗಳೆಲ್ಲಿ ? ಎಲ್ಲಿಂದೆಲ್ಲಿಗೆ ಸಂಬಂಧ ? ಆದರೆ ಸರ್. ನಾರಾಯಣರ ಚರಿತ್ರೆ ಶಿಲ್ಪಕ್ಕೆ ಮೂಲದ ಒಂದು ನಿಮಿತ್ತ ಪ್ರೇರಣೆಯಾಗಿ ಈ ಮೇಳಗಳ ಬದುಕಿನ ಎಳೆಗಳು ಕೆಲಸ ಮಾಡಿದ್ದು ಕಂಡುಬರುತ್ತದೆ. ಇದನ್ನು ನಂಬುವುದಾದರೆ ನಂಬಿರಿ.

ಸರ್. ನಾರಾಯಣ ಚಂದಾವರಕರರು ತಮ್ಮ ಕಾಲದ ಅಖಿಲ ಭಾರತೀಯ ಕಾಂಗ್ರೆಸ್ಸಿನ ಅಧ್ಯಕ್ಷರಾದ, ಮುಂಬಯಿ ಹೈಕೋರ್ಟಿನ ಶ್ರೇಷ್ಠ ನ್ಯಾಯಮೂರ್ತಿ ಪ್ರಖ್ಯಾತ ವಾಗ್ಮಿಗಳು, ಜ್ಞಾನಿಗಳು, ಪಂಡಿತರು, ಮುಂಬಯಿಯ ಪ್ರಾರ್ಥನಾ ಸಮಾಜದ ಸಂಸ್ಥಾಪಕರಲ್ಲಿ ಒಬ್ಬರು. ರಾಷ್ಟ್ರೀಯ ಮಹತ್ವದ ವಿಭೂತಿಗಳಲ್ಲಿ ಒಬ್ಬರು. ಮೂಲತಃ ಉತ್ತರ ಕನ್ನಡ ಜಿಲ್ಲೆಯವರು. ಕುಮಟೆಯಿಂದ ಮೂರು - ನಾಲ್ಕು ಮೈಲು ದೂರದ ಚಂದಾವರದಲ್ಲಿಯ ಸಾರಸ್ವತ ಕುಟುಂಬ ಒಂದರಿಂದ ಬಂದವರು.

ಆದರೆ ಈ ಪ್ರತಿಭಾಶಾಲಿಯೂ ಪ್ರತ್ಯುತ್ಪನ್ನ ಮತಿಯೂ ಆದ ಹುಡುಗ ಹೀಗೆ ಮುಂದೆ ಬರಲಿಕ್ಕೆ ಅವರ ಸೋದರಮಾವ ದಿ. ಶ್ರೀ ಶ್ಯಾಮರಾವ್ ವಿಠ್ಠಲ ಕಾಯ್ಕಿಣಿಯವರ ಆಶ್ರಯ ಪ್ರೋತ್ಸಾಹ ಪಿತೃತುಲ್ಯ ಸಂಗೋಪನೆ ಸಂವರ್ಧನೆಗಳೇ ಕಾರಣವಾದವು. ಶ್ಯಾಮರಾವ್ ವಿಠ್ಠಲರ ಸೋದರಿಯೇ ಸರ್. ನಾರಾಯಣರ ತಾಯಿ.

ಎಳೆವಯಸಿನದಲ್ಲಿಯೇ ಶ್ಯಾಮರಾವ್ ವಿಠ್ಠಲರು ಬಾಲಕ ನಾರಾಯಣನನ್ನು ಅವನ ತಾಯಿಯೊಡನೆ ತಮ್ಮ ಆಶ್ರಯಕ್ಕೆ ಮುಂಬಯಿಯಲ್ಲಿ ತಂದಿಟ್ಟುಕೊಂಡು ಅವರಿಗೆ ಪಾಲಕರಾಗಿ ಉತ್ಕರ್ಷದ ಸೋಪಾನಗಳನ್ನು ಕಲ್ಪಿಸಿಕೊಟ್ಟರು. ಅಂದು ಶ್ಯಾಮರಾವ್ ವಿಠ್ಠಲರು ಮುಂಬಯಿ ಹೈಕೋರ್ಟಿನಲ್ಲಿ ವಕೀಲಿ ನಡೆಯಿಸಿ ಮುಂದೆ ಬಂದಿದ್ದರು. ಉತ್ತರ ಕನ್ನಡ ಜಿಲ್ಲೆಯ ತಮ್ಮ ಸಮಾಜದ ಹಾಗೂ ಇತರ ಸಮಾಜಗಳ ಅನೇಕ ಬಡ ಅನಾಥ ಅಸಹಾಯ ಮಕ್ಕಳನ್ನು ಮುಂಬಯಿಗೆ ತಂದು ಅವರಿಗೆ ಯೋಗ್ಯ ಶಿಕ್ಷಣ ಸೌಕರ್ಯಗಳನ್ನು ಕಲ್ಪಿಸಿಕೊಟ್ಟು ಅವರನ್ನು ಮಕ್ಕಳಂತೆ ನೋಡಿಕೊಂಡು ಅವರ ಕಣ್ಣು ತೆರೆಯಿಸಿ, ಹಣೆಬರಹವನ್ನೇ ಅಳಿಸಿ ಬೇರೆಯಾಗಿ ಬರೆಯಿಸಿ ತಮ್ಮ ಗೋತ್ರಋಷಿಯಂತೆ ಪ್ರತಿ ವಿಶ್ವಾಮಿತ್ರರಾದರು. ಮನೆಮಾರು ಬಿಟ್ಟು ಮುಂಬಯಿಯಲ್ಲಿ ಬಂದು ನೆಲೆಸಿದ ಮಕ್ಕಳಲ್ಲಿ ಶ್ಯಾಮರಾವ್ ದಂಪತಿಗಳಿಗೆ ಎಷ್ಟು ವಾತ್ಸಲ್ಯವಿತ್ತೆಂದರೆ, ಪ್ರತಿ ರವಿವಾರ ಈ ಮಕ್ಕಳ ಬೋರ್ಡಿಂಗುಗಳಿಗೆ ಹೋಗಿ ಅವರನ್ನು ಗುಂಪು ಗುಂಪಾಗಿ ತಮ್ಮ ಮನೆಗೆ ಕರೆತಂದು ಅವರಿಗೆ ಎಣ್ಣೆ ಪೂಸಿ ಬಿಸಿ ನೀರಿನ ಅಭ್ಯಂಜನ ಮಾಡಿಸಿ, ಸಾರಸ್ವತ ಸಮಾಜದವರ 'ರಾಷ್ಟ್ರೀಯ ಊಟ'ವೆನಿಸುವ ಕೊಚ್ಚಿಗೆ ಅಕ್ಕಿಯ ಗಂಜಿ ಮತ್ತು ಬಸಳೆಯ ಹುಳಿಯನ್ನು ಯಥೇಷ್ಟ ಉಣಬಡಿಸಿ ಆ ಮಕ್ಕಳ ಮನೆ ಹಂಬಲದ ಬೇನೆಗೆ ಪರಿಹಾರ ನೀಡಿ ಹರ್ಷ ಹುಟ್ಟಿಸಿ ತಾವೂ ಸಂತೋಷಪಡುತ್ತಿದ್ದರು. ಮಂದಿಯ ಮಕ್ಕಳನ್ನು ಇಷ್ಟು ಮುದ್ದಿನಿಂದ ಕಾಣುವ ಶ್ಯಾಮರಾವ್ ವಿಠ್ಠಲರು ತಮ್ಮ ಸೋದರಳಿಯ ನಾರಾಯಣನನ್ನು ಹೇಗೆ ನೋಡಿಕೊಂಡಿರಬೇಕು!

ಆದರೆ ಈ ಹುಡುಗ ಆ ಎಳೆಯ ವಯಸ್ಸಿನಲ್ಲಿಯೇ ತಾಯಿಯೊಂದಿಗೆ ಕೂಡಿ ತಂದೆಯಿಂದ

ಇಷ್ಟು ದೂರ ಪರಸ್ಥಳದಲ್ಲಿ ಎಷ್ಟೆಂದರೂ ಪರ ಗೃಹದಲ್ಲಿ ಹೇಗೆ ಉಳಿದು ಬೆಳೆಯುವಂತಾಯಿತು? ಶ್ಯಾಮರಾವ್ ವಿಠ್ಠಲ ಕಾಯ್ಕಿಣಿಯವರ ಸಂಕ್ಷಿಪ್ತ ಚರಿತ್ರವನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟಣೆಗಾಗಿ ಬರೆಯಲು ಕೈಗೊಂಡಾಗ ನನಗೆ ಈ ಪ್ರಶ್ನೆ ಕಾಡಿತು. (ಶ್ಯಾಮರಾವ್ ವಿಠ್ಠಲರು ನಮ್ಮ ಸಾಹಿತ್ಯ ಪರಿಷತ್ತಿನ ಹಾಗೂ ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನಾಚಾರ್ಯರಲ್ಲಿ ಒಬ್ಬರು!) ಈ ಕುರಿತು ಪರಿಶೀಲಿಸಿದಾಗ ನನಗೆ ಸಿಕ್ಕ ಮಾಹಿತಿಯ ಈ ಬರಹದ ಆರಂಭಕ್ಕೆ ನಿರೂಪಿಸಿದ ವಿಚಾರಗಳ ಚಿಂತನೆಗೆ ಚಾಲನೆ ಕೊಟ್ಟಿತು.

ಬಾಲಕ ನಾರಾಯಣನ ತಂದೆ ಗಣಪತರಾಯರು. ಅವರು ಸಿರಸಿಯಲ್ಲಿ ಸಣ್ಣ ವಕೀಲಿ ವ್ಯವಸಾಯದಲ್ಲಿದ್ದರು. ಆದರೆ ಆ ಗೃಹಸ್ಥರು ತುಂಬ ಲಹರಿಯವರು. ಇವರ ವಕೀಲಿ ವ್ಯವಸ್ಥಿತವಾಗಿ ಸಾಗುತ್ತಿದ್ದಿಲ್ಲ (ಅಂದಿನ ವಕೀಲಿ ಎಂದರೆ ಸ್ಕೂಲ್ ಫೈನಲ್ ಪರೀಕ್ಷೆ ಮುಗಿಸಿ 'ಹೈಕೋರ್ಟಪ್ಲೀಡರ' ಪರಿಕ್ಷೇಯನ್ನು ಕನ್ನಡದಲ್ಲಿಯೋ ಇಂಗ್ಲೀಷಿನಲ್ಲಿಯೋ ಕೊಟ್ಟು ವಕೀಲಿ ವ್ಯವಸಾಯ ನಡೆಸಲಾಗುತ್ತಿತ್ತು.)

ಆದರೆ ಈ ಗಣಪತರಾಯರಿಗೆ ಒಂದು ಅಸಾಧ್ಯ ಗೀಳು:- ಯಕ್ಷಗಾನ ಬಯಲಾಟದ್ದು. ದಶಾವತಾರ ಮೇಳ ಊರಿಗೆ ಬಂದರೆ ಅವರು ಅದರ ಬೆನ್ನಿಗೆ ಬೀಳುತ್ತಿದ್ದರು. ಊರಲ್ಲಿ ಇದ್ದಷ್ಟೂ ದಿನ ಆಟಗಳನ್ನು ನೋಡುವದಲ್ಲದೆ ಮೇಳ ಬೀಡು ಕಿತ್ತ ಮೇಲೆಯೂ ಬಯಲಾಟಗಳ ಹಂಗಾಮು ಮುಗಿಯುವ ತನಕವೂ ಮೇಳದ ಬೆನ್ನಿಗೇ ಊರಿಂದ ಊರಿಗೆ ಈ ರಾಯರು ಹಿಂಬಾಲಿಸಿ ಹೋಗುತ್ತಿದ್ದರು. ತಿಂಗಳು ಗಟ್ಟಲೆ ಹೀಗೆ ಆಟದ ಮೇಳಗಳೊಂದಿಗೇ ಅಲೆದಾಡುತ್ತ ಉಳಿಯುವ ಗಣಪತರಾಯರು ಮನೆಮಾರು, ಹೆಂಡತಿ ಮಕ್ಕಳ ಯೋಗಕ್ಷೇಮವನ್ನು ನಿರ್ಲಕ್ಷ್ಯ ಮಾಡಿ ತನ್ನ ಲಹರಿಯಲ್ಲಿಯೇ ಮೈಮರೆತು ಇರುತ್ತಿದ್ದರು.

ಇದರಿಂದ ಅವರ ಅಪ್ತೇಷ್ಟರೆಲ್ಲ ಗಣಪತರಾಯರನ್ನು 'ಪಿಸ್ಸೊಗಂಪ' (ಹುಚ್ಚಗಂಪ) ಎಂದು ಕರೆಯುತ್ತಿದ್ದರಂತೆ. ಈ ಹುಚ್ಚು ಇನ್ನೇನಲ್ಲ. ತಲೆಕೆಟ್ಟ ಭ್ರಾಂತಿಯಲ್ಲ. ಕೇವಲ ಯಕ್ಷಗಾನ ಬಯಲಾಟದ ಅಸಾಧ್ಯ ಗೀಳು. ಈ ಒಂದು ಗೀಳಿನಿಂದಾಗಿ ಕುಟುಂಬದ ನಿರ್ವಾಹ ಕಷ್ಟವಾಯಿತು. ಮಡದಿ ಮಕ್ಕಳು ಅಸಹಾಯರಾದರು. ಆದ್ದರಿಂದ ಆ ತಾಯಿ ಮಗನೊಂದಿಗೆ ಮುಂಬಯಿಯಲ್ಲಿ ಅಣ್ಣನ ಆಶ್ರಯಕ್ಕೆ ಹೋಗಿ ಉಳಿದಳು.

ಅಂದರೆ ಯಕ್ಷಗಾನದ ಆಸಾಧ್ಯಗೀಳು ಹಿಡಿದಿದ್ದರಿಂದ ಗಣಪತರಾಯರ ಈ ಸುಪುತ್ರ ತಂದೆಯಿಂದ ದೂರ ಸೋದರಮಾವನ ಆರೈಕೆಯಲ್ಲಿ ಬೆಳೆದು ಮುಂದೆ ಭಾರತದ ರಾಷ್ಟ್ರೀಯ ಆಕಾಶದ ದೇದೀಪ್ಯಮಾನ ತಾರೆಯಾಗಿ ಮೆರೆದನು. ತಂದೆಯ ಬಯಲಾಟದ "ಹುಚ್ಚು" ಒಂದು ರೀತಿ ಶಾಪವಾದರೂ ಇನ್ನೊಂದು ರೀತಿ ವರದಾನವೇ ಆಗಿ ಪರಿಣಮಿಸಿತು. ದಶಾವತಾರ ಆಟಗಳ ಬಗೆಗೆ ತಂದೆಯ ಈ ಹಾರೈಕೆ ಮಗನಿಗೆ ಒಂದು ಹರಕೆಯಾಗಿಯೇ ದಕ್ಕಿತು.

ಒಂದು ಶತಮಾನದ ಈಚೆಗೆ ನಮ್ಮ ಜಿಲ್ಲೆಯಲ್ಲಿಯ ಯಕ್ಷಗಾನ ಬಯಲಾಟಗಳ ಸ್ಥಿತಿಗತಿ ಹೇಗಿತ್ತೋ ಗೊತ್ತಾಗುವದಿಲ್ಲ. ಆದರೆ ಚಂದಾವರಕರ ಗಣಪತರಾಯರಂಥ ಒಂದು ವಿದ್ಯಾವಂತ ಸಂಸ್ಕಾರವಂತ ವ್ಯಕ್ತಿಗೆ ಹುಚ್ಚು ಹಿಡಿಸುವಂಥ ಗುಣಮಟ್ಟವನ್ನು ದಶಾವತಾರ ಆಟಗಳ ಅಂದಿನ ಕಲೆ ಪಡೆದಿತ್ತು. ಆ ಮಟ್ಟದ ಆಕರ್ಷಣೆಯಿಂದಾಗಿ ಒಂದು ಕುಟುಂಬದ ಬದುಕಿನಲ್ಲಿಯೇ ಚಾರಿತ್ರಿಕ

ಕ್ರಾಂತಿ ಒದಗಿಬಂದಿತು. ಇದು ನಮಗೆ ಇಲ್ಲಿ ಗಮನಾರ್ಹವಾದ ಸಂಗತಿ.

ಜತೆಗೆ ಇಲ್ಲಿ ನಮಗೆ ಹೆಚ್ಚಿನ ಸ್ವಾರಸ್ಯದ ಒಂದು ಅಂಶವೆಂದರೆ, ಯಕ್ಷಗಾನ ಬಯಲಾಟಗಳ ಅಂಥ ಒಂದು ಪ್ರಚಂಡ ಆಕರ್ಷಣೆ, ಮಾದಕ ವಸ್ತುಗಳ ಸೇವನೆಯು ಹೇಗೆ ಒಂದು ಅಭೇದ್ಯ ಅನಿವಾರ್ಯ ವ್ಯಸನವಾಗುವದೋ: ಅದೇ ರೀತಿ ಬಯಲಾಟಗಳ ಮೋಹ. ಅದಕ್ಕೆ ಒಲಿದವರಿಗೆ ಹುಚ್ಚು ಹಿಡಿಸಿ ಬಿಡಿಸಲಾರದ ಹವ್ಯಾಸವಾಗಿ ಬಿಡುತ್ತದೆ. ಅದಕ್ಕಾಗಿ ಮನೆಮಾರು ಬಿಟ್ಟು ಇಲ್ಲವೆ ಮಾರಿಕೊಂಡು ಆಟದ ಮೇಳಗಳಲ್ಲಿ ಯಾನ ಹೋರೆಗೂ ಪಟ್ಟಾಗಿ ನಿಂತು ತಮ್ಮ ಬಾಳು ಹಾಳು ಗೆಡಿಸಿಕೊಂಡು ಅದು ಧನ್ಯವಾಯಿತೆಂದು ಆಯುಷ್ಯ ಕಳೆಯುವವರು ಇಂದಿಗೂ ಇದ್ದಾರೆ. ಕ್ರೀಡಾರಂಗ, ಕಲಾರಂಗಗಳಲ್ಲಿ ಇಂಥ ಹವ್ಯಾಸಕ್ಕೆ ಬೀಳುವವರಿದ್ದಾರೆ. ಆದರೆ ಬಯಲಾಟದ ಈ ಹುಚ್ಚು ಜೂಜು, ಕುಡುಕತನಗಳ ಜೀವ ಸುಂಗುವ ಚಟದಂತೆ! ಸಂಗೀತ, ನರ್ತನ ಮುಂತಾದವುಗಳ ದುರ್ದಮ್ಯ ಮೋಹಕ್ಕೆ ಮಾರಿ ಹೋಗುವವರು ಈ ಮಾನದಲ್ಲಿ ಕೆಲವರೇ.

ಇಂಥ ಪ್ರಬಲ ಪ್ರಚಂಡ ಸೆಳೆತ ಈ ಜನಪದ ನಾಟ್ಯ ಕಲೆಯಲ್ಲಿ ಉಂಟಾದದ್ದು ಹೇಗೆ? ಏಕೆ?

ಇಂದಿಗೂ ಯಕ್ಷಗಾನ ಬಯಲಾಟಗಳನ್ನು ಮೆಚ್ಚುವ ಅನೇಕ ಜನ ಸುಶಿಕ್ಷಿತರೂ ಆಧುನಿಕರೂ ಎಂದೆನಿಸಿಕೊಂಡ ಪ್ರೌಢ ಹಾಗೂ ಯುವಜನರು ನಾಟಕ ಸಿನೇಮಾಗಳಲ್ಲಿ ಅಷ್ಟೊಂದು ಆಸಕ್ತಿ ವಹಿಸುವದಿಲ್ಲ. ನಿಜವಾಗಿಯೂ ಯಕ್ಷಗಾನದಲ್ಲಿ, ಆದರ ಗಾನದಲ್ಲಿ ಆಗಲಿ ನೃತ್ಯ ನಾಟ್ಯ ಕಥ ಪಾತ್ರ ಪ್ರಸಂಗಗಳ ಯಾವದೇ ಅಂಗದಲ್ಲಿ ಆಗಲಿ, ವಿಶೇಷ ವೈವಿಧ್ಯ, ನಾವಿನ್ಯ ಕಡಿಮೆಯೇ. ಯಾವ ಆಖ್ಯಾನ ತೆಗೆದು ಕೊಂಡರೂ ಅದು ಒಂದೇ ಅಚ್ಚಿನದೇ "ಎಕ್ಕಲಗಾಣ" (ಏಕಲಾ=ಒಂಟಿ) ವೇಷಗಳ ಮಾದರಿ ಅದೇನೇ ಕಿರೀಟದವೇಷ ಪೊಗಡೆಯವೇಷ, ಅಡ್ಡಪೊಗಡೆಯವೇಷ, ಬಣ್ಣದವೇಷ, ಕೋಡಂಗಿ - ಈ ವೇಷ ರೂಪಿಸುವ ಪಾತ್ರಗಳ ಪಡಿಯಚ್ಚು ಅದೇನೇ, ಕಥೆಯ ಸಂವಿಧಾನವೂ ಒಂದೇ ಪರಿ. ಭಾಗವತಿಕೆಯಲ್ಲಿ ಆಗಲಿ, ಹಿಮ್ಮೇಳದ ತಾಳ ಕಾಲ ಲಯಗಾರಿಕೆಯ ಗತ್ತು ಗಮ್ಮತ್ತುಗಳಲ್ಲಿ ಆಗಲಿ ಅಂಥ ಬೆರೆಗುಗೊಳಿಸುವ ಬೇರ್ಪಾಟಗಳೇ ಇರುವುದಿಲ್ಲ. ಆಟದಿಂದ ಆಟಕ್ಕೆ ಆಖ್ಯಾನದ ಹೆಸರು ಪಾತ್ರಗಳ ಅಂಕಿತನಾಮಗಳು ಮಾತ್ರ ಬೇರೆ ಇದ್ದಂತೆ ವಸ್ತು ವಿನ್ಯಾಸದ Pattern ಒಂದೇ ಬಗೆ. ವೇಷಧಾರಿಗಳ ಕುಣಿತದ ಮಾದರಿಗಳೂ ಹಾಗೆಯೇ. ಕೆಲವೇ ಗತಿಯವು. ಅವುಗಳ ಪದ ವಿನ್ಯಾಸದಲ್ಲಿ ವಿಶೇಷ ಸಂಕೀರ್ಣತೆ ಇಲ್ಲವೆ ಜಟಿಲ ಚಾತುರ್ಯ ಸೂಕ್ಷ್ಮ ಕಲಾವಂತಿಕೆ ಅಭಿನಯದ ವಿಸ್ಮಯಕಾರಿ ವೈಶಿಷ್ಟ್ಯ ಇರುವದೇ ಕಡಿಮೆ. ಇದೆಲ್ಲಕ್ಕೆ ಹೊಂದಿಕೊಂಡೇ ಇದರ ಗಾನ ಪ್ರಪಂಚ, ರಾಗಧಾಟಿ, ಮಟ್ಟುಗಳು ಪರಂಪರೆಯಿಂದ ಬಾಯಿಂದ ಕಿವಿಗೆ. ಕಿವಿಯಿಂದ ಬಾಯಿಗೆ ಸಾಗಿಬಂದವು. ಅವುಗಳ ಸ್ವರಸಂಚಾರಲಯಕಾರಿ ಭಾವ ಪರಿಪೋಷ ಎಲ್ಲವೂ ಅಸ್ವತಂತ್ರ. ಕೇವಲ ಕುಣಿತಕ್ಕೆ ಪರಿಪೋಷಕ ಒಟ್ಟೂ ಕಲಾಭಿವ್ಯಕ್ತಿ ಒಂದನ್ನೊಂದು ಒಂದು ಹೊಂದಿಕೊಂಡ ಒಂದು ಆಯಾ ಸನ್ನಿವೇಶ ನಿಷ್ಠ ರಸಾವಿರ್ಭಾವದ ಸಂಯುಕ್ತ ಸಿದ್ಧಿ.

ಹೀಗಿದ್ದೂ-ಅಥವಾ ಹೀಗಿದ್ದರಿಂದಲೇ ? ಗ್ರಾಮೀಣ ಇಲ್ಲವೇ ಪ್ರಾಕೃತ ಮನೋಧರ್ಮದ ನಾಗರ ಪ್ರೇಕ್ಷಕರು ಈ ನೃತ್ಯ ನಾಟ್ಯ ಕಲಾವಿಷ್ಕಾರಕ್ಕೆ ಪೂರ್ತಿ ತನ್ಮಯತೆಯಿಂದ ವಶವಾಗುತ್ತಿರಬೇಕು. ಇಲ್ಲಿಯ ಚಂಡೆ-ಮದ್ದಳೆಗಳ ಅವಿದ್ದ (ಸುಕುರತೆಯ ಅಂಶವೇ ಅಲ್ಲ) ಪ್ರಯೋಗಕ್ಕೆ ಅವರ

ರಕ್ತಗತವಾದ ಲಯಕಾರಿಕೆಯ ಜೀವಾಳ ಅನನ್ಯವಾಗಿ ಒಗ್ಗೊಡುತ್ತಿರಬೇಕು. ವೀರರೌದ್ರ ಶೃಂಗಾರ ಕರುಣ ಮತ್ತು ಹಾಸ್ಯಗಳ ಮೂಲ ಪ್ರಾಕೃತ ಪ್ರವೃತ್ತಿಗಳ ಹಸಿವೆಗೆ ಈ ಯಕ್ಷಗಾನ ಕೇರಳದ ಕಥಕ್ಕಲಿಯಂತೆ-"ಏಕಂ ಸಮಾರಾಧಾನಂ" ಆಗುತ್ತಿರಬೇಕು. ಭಾಷೆ ಸಂಸ್ಕೃತಿ ಅದರ ಮೇಲೆ ನಿಂತ ಭಾವ ವಿನ್ಯಾಸ ನಾಗರಿಕ ಯುಗಕ್ಕಿಂತಲೂ ಪ್ರಾಚೀನ ಸಂಸ್ಕಾರವಿದು. ಜನಮನದ ತಳದಲ್ಲಿ ಆಳದಲ್ಲಿ ಬೇರು ಬಿಟ್ಟಿದ್ದ ತಾಳದ ಸೆಳೆತ.

ಈ ಪೂರ್ವ ಸಂಸ್ಕಾರ ಇಲ್ಲವೇ ನಮ್ಮ ವೇದಾಂತದ ಪರಿಭಾಷೆಯಲ್ಲಿ ಹೇಳುವದಾದರೆ ವಾಸನಾಬಲದ ಒಂದು ಪರಿಪಾಕವೇ ಯಕ್ಷಗಾನದಂಥ ದೊಡ್ಡಾಟದಂಥ ರಂಗ ಪ್ರಯೋಗಗಳಲ್ಲಿ ಒಲವುಳ್ಳವರಿಗೆ ಎಂದೂ ಹಳಸದ ಹಿಂಗದ ಹಚ್ಚ ಹಸಿಯಾದ ಹವ್ಯಾಸ. ಒಂದು ಬಗೆಯ "ನಶಾ"-ಹುಚ್ಚು.

ಬಯಲಾಟದ ಈ ಹುಚ್ಚು ಹಿಡಿಸುವ ಗೀಳಿಗೆ ಇನ್ನೂ ಮೂಲಗಾಮಿಯಾದ ವಿಶ್ಲೇಷಣೆ ಇರಲೂ ಸಾಕು. ಅದು ಈ ರಂಗದ ಕಲಾತಜ್ಞ ಸಂಶೋಧಕರು ಎತ್ತಿಕೊಳ್ಳಬೇಕಾದ ಸವಾಲು. ಸದ್ಯ ಇಷ್ಟೇ ವಿವೇಚನೆ ಸಾಕು.

●

(ತಾಯಿನುಡಿ)

# ರಾಮ ಗಣೇಶ ಗಡಕರಿ

ರಾಮ ಗಣೇಶ ಗಡಕರಿ ಮಹಾರಾಷ್ಟ್ರದ ಹಿರಿಯ ಜನಪ್ರಿಯ ಕವಿ. ನಾಟಕಕಾರ ಹಾಗೂ ವಿನೋದ ಲೇಖಕ. ಇಂದಿಗೆ ೧೦೦ವರ್ಷಗಳ ಹಿಂದೆ ಜನ್ಮವೆತ್ತಿದರು. ದಾರಿದ್ರ್ಯ ಹಾಗೂ ದುಸ್ಸಾಧ್ಯವಾದಂಥ ಕ್ಷಯ ರೋಗದಿಂದ ಬಳಲುತ್ತ ತನ್ನ ೩೪ರ ಪ್ರಾಯದಲ್ಲಿಯೇ ಅಪ್ರತಿಮ ಪ್ರತಿಭೆಯ ಸಮುಜ್ವಲ ಬದುಕನ್ನು ಮುಗಿಸಿದರು-ಇಂಗ್ಲೀಷ್ ಕವಿ ಕೀಟ್ಸ್‌ನಂತೆ, ನಮ್ಮ ಮುದ್ದಣನಂತೆ. "ಮುಹೂರ್ತಂ ಜ್ವಲತಂ ಶ್ರೇಯಃ ನಚ ಧೂಮಾಯಿತಂ ಚಿರಂ" ಎಂಬ ನುಡಿಗೆ ಇನ್ನೊಂದು ನಿದರ್ಶನವಾಗಿ ಚಿರ ವಿಖ್ಯಾತರಾದರು. ಅಂಥ ಅಲ್ಪಾಯುಷ್ಯದಲ್ಲಿಯೂ ತಮ್ಮ ಒಂದೇ ಒಂದು ಕವನ ಸಂಗ್ರಹ, ನಾಲ್ಕು ನಾಟಕಗಳು ಮತ್ತು ಒಂದು ವಿನೋದೀ ಲೇಖನಗಳ ಸಂಪುಟದಿಂದ ಮೃತ್ಯುಂಜಯರಾದರು. ಗಡಕರಿಯವರು ಇಂದಿಗೂ ಮರಾಠೀ ಕಾವ್ಯ ಹಾಗೂ ನಾಟ್ಯ ಪ್ರೇಮಿಗಳ ಅಚ್ಚುಮೆಚ್ಚಿನ ಕವಿಗಳಾಗಿದ್ದಾರೆ. ಮುಂಬಯಿ ಬಳಿಯ ಠಾಣೆಯಲ್ಲಿಯ 'ಗಡಕರಿ ರಂಗಾಯತನ'ವೆಂಬ ಭವ್ಯ ರಂಗ ಮಂದಿರವೇ ಇದಕ್ಕೆ ಸಾಕ್ಷಿ.

ಗಡಕರಿ (ಕವಿ 'ಗೋವಿಂದಾಗ್ರಜ) ಅವರ ಜನ್ಮಶತಾಬ್ಧಿಯನ್ನು ಇಂದು ಮಹಾರಾಷ್ಟ್ರದ ಆದ್ಯಂತ ಸರಕಾರ, ಸಾರ್ವಜನಿಕ ಸಂಸ್ಥೆಗಳು ಸಾಹಿತಿಗಳ ಕೂಟಗಳು ಕೂಡಿಯೇ ಉತ್ಸಾಹದಿಂದ ಆಚರಿಸುತ್ತಿವೆ. ಈ ಇಡಿ ವರ್ಷ ಗಡಕರಿಯವರ ವ್ಯಕ್ತಿತ್ವ ಮತ್ತು ವಾಙ್ಮಯಗಳ ಕುರಿತು ಆಕಾಶವಾಣಿ, ದೂರದರ್ಶನ ವಿದ್ವನ್ಮಂಡಲಗಳಲ್ಲಿ ವ್ಯಾಖ್ಯಾನ, ವಿಚಾರ ಸಂಕಿರಣ, ಕಾವ್ಯ ವಾಚನ, ನಾಟಕ ಪ್ರದರ್ಶನಗಳು ನಡೆಯುತ್ತಿವೆ.

ಅಪ್ರತಿಮ ಪ್ರತಿಭೆ, ಅಪ್ರತಿಮ ಭಾಷಾ ವೈಭವ, ಅಪ್ರತಿಮ ಕಲ್ಪನಾ ವಿಲಾಸ, ಅಪ್ರತಿಮ ಹಾಸ್ಯ ಹಾಗೂ ಕರುಣಾರಸಾವಿಷ್ಕಾರದ ಪ್ರಭುತ್ವ-ಇವುಗಳಿಂದಾಗಿ ಗಡಕರಿಯವರ ಪ್ರಭಾವ ಮಹಾರಾಷ್ಟ್ರದಲ್ಲಿ ಮಾತ್ರವಲ್ಲ ಅಂದು ದಕ್ಷಿಣ ಮಹಾರಾಷ್ಟ್ರವೆಂದೆನಿಸಿಕೊಂಡ ನಮ್ಮ ಉತ್ತರ

ಕರ್ನಾಟಕದಲ್ಲಿಯೂ ಅನೇಕ ಸಾಹಿತ್ಯೋಪಾಸಕರ ಮೇಲೆ ಆಳವಾಗಿಯೋ ಸೂಕ್ಷ್ಮವಾಗಿಯೋ ಬಿದ್ದಿದ್ದರೆ ಅದೇನು ಅಂಥ ಆಶ್ಚರ್ಯವಲ್ಲ.

ಉದಾಹರಣೆಯನ್ನು ಕೊಡುವದಾದರೆ ನಮ್ಮ ವರಕವಿ ಬೇಂದ್ರೆ ಪುಣೆಯಲ್ಲಿ ಕಾಲೇಜು ವಿದ್ಯಾರ್ಥಿಯಾಗಿದ್ದಾಗ ಕವಿ ಗೋವಿಂದಾಗ್ರಜರ ಕಾವ್ಯದ ಚಮತ್ಕಾರ ಮತ್ತು ಶ್ಲೇಷ ಪ್ರಚುರ ಭಾಷಾ ಶೈಲಿಗೆ ಅವರ ವಿಕಟ ವಿನೋದದ ಉತ್ಪ್ರೇಕ್ಷೆಯ ಸ್ವೈರ್ ಉಡ್ಡಾಣಕ್ಕೆ 'ವಾಗೀಂದ್ರ ಜಾಲಕ್ಕೆ' ಮನಸೋತಿದ್ದರು. ಗಡಕರಿಯವರ ವಾಗ್ವೈಜಯಂತಿ ಹೂವಿನ ಜೇನಿಗೆ ಗುಂಗುಗಾನವೆಸಗುವ ಭೃಂಗದ ಬೆನ್ನೇರಿ ಬೇಂದ್ರೆಯವರ ಕಲ್ಪನಾ ವಿಲಾಸ ಅಂದು ಬಂತು. "ಮಾತು ಮಾತು ಮಥಿಸಿ ಬಂದ ನಾದದ ನವನೀತದ ಹಿಂದೆ." ಗಡಕರಿಯವರ ವಾಙ್ಮಯಾಭ್ಯಾಸದ ಮಂಥನ ಕ್ರಿಯೆ ಮೂಲದಲ್ಲಿ ಇದೆ. ನಮ್ಮ ವೃತ್ತಿ ನಾಟಕ ಕಂಪೆನಿಗಳ ಬಹು ಬೇಡಿಕೆಯ ನಾಟಕಕಾರರಾಗಿದ್ದ ದಿ. ಕಂದಗಲ್ಲ ಹನುಮಂತರಾಯರು ಗಡಕರೀ ಸಂಪ್ರದಾಯದವರೇ ಆಗಿದ್ದರು. ಅದೇ ಸಂಪ್ರದಾಯದಲ್ಲಿ ಇನ್ನೂ ಕಂದಗಲ್ಲರ ಗೆರೆಯನ್ನೇ ಗೀರುವ ವ್ಯವಸಾಯಿಕ ನಾಟಕಕಾರರು ನಮ್ಮಲ್ಲಿ ಸಾಕಷ್ಟು ಮಂದಿ ಇದ್ದಾರೆ.

ಮಹಾರಾಷ್ಟ್ರದಲ್ಲಿಯೂ ಶುಕ್ಲ ಮತ್ತು ಕಮತ ನೂರಕರೆ ಎಂಬವರು ಗಡಕರೀ ಶೈಲಿಯ ನಾಟಕ ಕಾರರಾಗಿದ್ದರು. "ಗಡಕರೀ: ವ್ಯಕ್ತಿವ ವಾಙ್ಮಯ"ವೆಂಬ ಉತ್ಕೃಷ್ಟ ಚರಿತ್ರ ಗ್ರಂಥವನ್ನು ಬರೆದು ವಿ.ಸ. ಖಾಂಡೇಕರ, ಕವಿ ನಾಟಕಕಾರ ಆಚಾರ್ಯ ಅತ್ರೆ ಗಡಕರಿಯವರ ಶಿಷ್ಯರೇ. ಗಡಕರಿಯವರ 'ಪ್ರೇಮ ಸಂನ್ಯಾಸ' ನಾಟಕದ ವಸ್ತುವಾದ ಬಾಲವಿಧವೆಯ ಸಮಸ್ಯೆಯೇ ಶುಕ್ಲರ 'ಸೌಭಾಗ್ಯ ಲಕ್ಷ್ಮಿ' ನಾಟಕದ್ದು. ಈ ನಾಟಕವನ್ನು 'ಮಹಾರಾಷ್ಟ್ರ ಕೋಕಿಳ' ಶಂಕರರಾವ್ ಸರನಾಯಿಕರ 'ಶ್ರೀ' ಯಶವಂತ ಸಂಗೀತ ನಾಟಕ ಮಂಡಳಿ ಅತ್ಯಂತ ಜನಪ್ರಿಯಗೊಳಿಸಿತ್ತು. ಕಮತನೂರಕರರ ನಾಟಕವು ಗಡಕರಿಯವರ ಸುಪ್ರಸಿದ್ಧ 'ಏಕ ಚ ಪ್ಯಾಲಾ' ಎಂಬ ಮದ್ಯಪಾನದ ಕುರಿತ ನಾಟಕವನ್ನು ಅನುಕರಿಸಿ ಕುದುರೆ ಜೂಜಿನ ದುರ್ವ್ಯಸನದ ದುರಂತವನ್ನು ತೋರಿಸುವ ರೂಪಕ. ಬಾಬೂರಾವ್ ಪೆಂಢಾರಕರರ ಲಲಿತ ಕಲಾದರ್ಶ ನಾಟಕ ಮಂಡಳಿಯು ಇದರಿಂದ ಅಪಾರ ಯಶಸ್ಸುಗಳಿಸಿತ್ತು. ಪ್ರಹ್ಲಾದ ಕೇಶವ ಅತ್ರೆಯವರು ಗಡಕರಿಯವರ ವಿಕಟ ವಿನೋದದ ಪ್ರಚಂಡ ಹಾಸ್ಯ ಶೈಲಿಯನ್ನು ಪಳಗಿಸಿ ಕೊಂಡರೆ, ವಿಷ್ಣು ಸಖಾರಾಮ ಖಾಂಡೇಕರರು ಗುರುವಿನ ಚಾಟೂಕ್ತಿ ಚತುರೋಕ್ತಿಗಳ ಮಾರ್ಮಿಕ ಕಾವ್ಯಮಯ ಶೈಲಿಯ ಪ್ರಸಾದ ದೀಕ್ಷೆ ಪಡೆದರು. (ಮರಾಠಿಯಲ್ಲಿ ಇಂಥ witty epigramatic ಮಾತಿಗೆ 'ಕೋಟ' ಎನ್ನುತ್ತಾರೆ. ದರಿದ್ರ ಗಡಕರಿಯವರಂತೆ ಖಾಂಡೇಕರರೂ "ಕೋಟ್ಯಧೀಶ"ರಾಗಿ ಮೆರೆದರು.)

ಗಡಕರಿ ಯುಗದ ಆರಂಭದಲ್ಲಿ ಮರಾಠೀ ರಂಗಭೂಮಿಯಲ್ಲಿ ಪ್ರತಿಷ್ಠಾಪಿತರಾದ ಹಿರಿಯ ನಾಟಕಕಾರರೆಂದರೆ ಅಣ್ಣಾಸಾಹೇಬ ಕಿರ್ಲೋಸ್ಕರ, ಗೋವಿಂದ ಬಲ್ಲಾಳ ದೇವಲ, ಶ್ರೀಪಾದ ಕೃಷ್ಣ ಕೋಲ್ಹಟಕರ ಮತ್ತು ಪ್ರಭಾಕರ ಕೃಷ್ಣ ಖಾಡೀಲಕರ. ಗಡಕರಿಯವರು ಕಿರ್ಲೋಸ್ಕರ ಕಂಪೆನಿಯಲ್ಲಿ ಬಾಲನಟರಿಗೆ ಪಾಠ ಹೇಳುವ 'ಮಾಸ್ತರ'ರಾಗಿದ್ದರು. ನಾಟಕಗಳ ತಾಲೀಮುಗಳನ್ನು ನೋಡಿಕೊಳ್ಳುತ್ತಿದ್ದರು. ಅವರ ಕಣ್ಣೆದುರು ಇವರೆಲ್ಲ ನಾಟ್ಯ ಪಿತಾಮಹರ ಮಾದರಿಗಳು ಜೀವಂತವಾಗಿದ್ದವು. ಅವರಿಂದ ಪಾಠ ಕಲಿತು ಅವರಿಂದ ತೀರ ಭಿನ್ನವಾದ ನಾಟ್ಯ ಲೇಖನವನ್ನು

ಗಡಕರಿಯವರು ಆರಂಭಿಸಿದ್ದರು. ವಿಶೇಷತಃ ಕೋಲ್ಹಟಕರರನ್ನು ಅವರು ತಮ್ಮ ಗುರುಗಳೆಂದು ಭಾವಿಸಿದ್ದರು. ಆದರೆ ಏಕಲವ್ಯನಂತೆ ಇವರಿಗೂ ಗುರುವಿನ ಪ್ರತ್ಯಕ್ಷ ಸಮಾಗಮವಿರಲಿಲ್ಲ. ಸಾಮಾಜಿಕ ಆಶಯದ ನಾಟ್ಯವಸ್ತು ಮತ್ತು ಚತುರೋಕ್ತಿ ವಿನ್ಯಾಸ ಇವರು ಗುರುವಿನಿಂದ ಕಲಿತದ್ದು. ಜತೆಗೆ ಕೋಲ್ಹಟಕರರ ಹಾಸ್ಯ ಹರಟೆಯ ಪ್ರಕಾರ, ತಾವೂ 'ಬಾಳಕರಾಮ'ನೆಂಬ ಹೆಸರಿನಲ್ಲಿ ಗಡಕರಿಯವರು ಹಾಸ್ಯ ಪ್ರಬಂಧಗಳನ್ನು ಬರೆದರು. ಕೋಲ್ಹಟಕರರ 'ಸುದಾಮಾಚೇ ಪೋಹೆ' ('ಸುದಾಮನ ಅವಲಕ್ಕಿ')ಯಂತೆ ಗಡಕರಿಯವರ 'ರಿಕಾಮ ಪಣಾಚೀ ಕಾಮಗಿರಿ (ಕೆಲಸವಿಲ್ಲದಾಗಿನ ಕೆಲಸ) ಮರಾಠಿಯ ಹಾಸ್ಯಪ್ರಬಂಧ ಸಂಕಲನಗಳಲ್ಲಿ ಒಂದು ಪ್ರಸಿದ್ಧ ಮೈಲುಗಲ್ಲು.

ಗಡಕರಿಯವರ ಪ್ರಪ್ರಥಮ (ಗದ್ಯ) ನಾಟಕ 'ಪ್ರೇಮ ಸಂನ್ಯಾಸ', ಇದು ಒಂದು ಪ್ರೌಢ ಪಕ್ವ ಕೃತಿಯಾಗಿಯೇ ರಂಗವನ್ನು ಆಕ್ರಮಿಸಿತು. ಒಮ್ಮೆ ಗಂಧರ್ವ ಕಂಪೆನಿ ಆಡುತ್ತಿದ್ದ 'ಸ್ವಯಂವರ' ನಾಟಕವನ್ನು ವಿಂಗ್ಸಿನಲ್ಲಿ ನಿಂತು ಗಡಕರಿಯವರು ನೋಡುತ್ತಿದ್ದರು. ಕೃಷ್ಣನ ಪ್ರಥಮ ರಂಗಪ್ರವೇಶದಲ್ಲಿಯೇ ಆತ ಒಂದು ಕೈಯಲ್ಲಿ ರುಕ್ಮಿಣಿಯನ್ನು ಇನ್ನೊಂದು ಕೈಯಿಂದ ಶಿಶುಪಾಲನನ್ನು ಬಿಗಿದು ಹಿಡಿದು ತರುತ್ತಾನೆ. ಅದನ್ನು ನೋಡುತ್ತಾ, ಹತ್ತಿರ ನಿಂತವರಿಗೆ ಗಡಕರಿ ಉದ್ಗರಿಸಿದರು. "ನನ್ನ ನಾಟ್ಯ ಪ್ರತಿಭೆಯೂ ಹೀಗೆಯೇ. ಒಂದು ಕೈಯಲ್ಲಿ ಕೋಲ್ಹಟಕರ ಇನ್ನೊಂದು ಕೈಯಲ್ಲಿ ಖಾಡೀಲಕರ, ಇಬ್ಬರ ನಾಟ್ಯ ಗುಣಗಳನ್ನು ಹಿಡಿದುಕೊಂಡು ರಂಗಕ್ಕೆ ಬರುತ್ತದೆ." ಈ ಪ್ರತಿಭಾನ್ವಿತನ ಆತ್ಮ ವಿಶ್ವಾಸದ ಉದ್ಗಾರ ಅಷ್ಟೇ ಯಥಾರ್ಥವೂ ಆಗಿತ್ತು.

ಕಿರ್ಲೋಸ್ಕರ ಕಂಪೆನಿಯಲ್ಲಿ ಗಡಕರಿಯವರಿಗೆ ನಟ, ನಾಟಕಕಾರ, ನಾಟ್ಯರಂಗಗಳ ನಿಕಟ ಸಂಪರ್ಕ ಬಂತು. ಇದರಿಂದ ಅವರ ಕೈಯಿಂದ ಒಂದಕ್ಕಿಂತ ಒಂದು ತೇಜಸ್ವಿಯಾದ ನಾಟ್ಯ ಕೃತಿಯೇ ಹೊರಬಂದವು. 'ಪ್ರೇಮಸಂನ್ಯಾಸ' ನಂತರ ಅವರು 'ಪುಣ್ಯಪ್ರಭಾವ' 'ಭಾವಬಂಧನ' ಮತ್ತು 'ಏಕಃ ಚಃ ಪ್ಯಾಲಾ' ಎಂಬ ಯಶಸ್ವೀ ಪೂರ್ಣಕೃತಿಗಳನ್ನು ರಚಿಸಿದರು. ವಿಶೇಷತಃ ಭಾವ ಬಂಧನ ಮತ್ತು ಏಕಃಚ ಪ್ಯಾಲಾ ಮಹಾರಾಷ್ಟ್ರದ ಎರಡು ಪ್ರಸಿದ್ಧ ನಾಟಕ ಮಂಡಳಿಗಳನ್ನು ಮುಳುಗುವ ದುರವಸ್ಥೆಯಿಂದ ಮೇಲೆತ್ತಿ ಪೂರ್ತಿ ಚೇತರಿಸಿಕೊಳ್ಳುವಂತೆ ಮಾಡಿದವು.

ಕಿರ್ಲೋಸ್ಕರ ಕಂಪನಿಯೊಡೆದು ಗಂಧರ್ವ ನಾಟಕ ಕಂಪನಿ ಹುಟ್ಟಿತು. ಆಗ ಬಾಲ ಗಂಧರ್ವರಿಗೆ ನಾಟಕಗಳನ್ನು ಬರೆದು ಕೊಡುವವರು ಖಾಡೀಲಕರರು. ಗಂಧರ್ವ ಕಂಪೆನಿಯ ರಂಗ ಭೂಮಿಯನ್ನು ವೈಭವ ಸಂಪನ್ನಗೊಳಿಸಿದ್ದು ಖಾಡೀಲಕರರ 'ಸ್ವಯಂವರ', 'ದ್ರೌಪದಿ' 'ವಿದ್ಯಾಹರಣ' ಮತ್ತು 'ಮಾನಾಪಮಾನ' ನಾಟಕಗಳು. ಇವುಗಲ್ಲಿ ಜನತೆಯನ್ನು ಮರುಳುಗೊಳಿಸಿದ್ದು ಶ್ರೀಮಂತ ಸಾಲಂಕೃತ ಸುಂದರ ಸ್ತ್ರೀ ವೇಷದ ಬಾಲಗಂಧರ್ವರು. ಆಗ ಬಾಲಗಂಧರ್ವರು ಒಮ್ಮೆ ಗಡಕರಿಯವರಿಗೆ ಹೊಸ ನಾಟಕವೊಂದನ್ನು ಬರೆದುಕೊಡಲು ಕೇಳಿಕೊಂಡರು. ಆಗ ಗಡಕರಿ ಆಹ್ವಾನವಿತ್ತರು "ನೋಡಿ, ನಾರಾಯಣರಾವ್ ಖಾಡೀಲಕರರು ನಿಮ್ಮನ್ನು ಭಾರಿ ಜರತಾರಿ ಶಾಲುಗಳಲ್ಲಿ ಸಿಂಗರಿಸಿದರು. ಆದರೆ ನಾನು ಹಳೇ ಹರಕು ಸೀರೆಯುಡಿಸಿ ನಿಮ್ಮನ್ನು ಸ್ಟೇಜಿಗೆ ತರುತ್ತೇನೆ." ಹಾಗೆಯೇ ಆಯಿತು. ಅವರು ಮದ್ಯಪಾನದ ಘೋರ ದುಷ್ಪರಿಣಾಮವನ್ನು ಚಿತ್ರಿಸುವ 'ಏಕಃ ಚ ಪ್ಯಾಲಾ' (ಒಂದೇ ಲೋಟ) ನಾಟಕದಲ್ಲಿ ಸರ್ವಸ್ವ ಕಳೆದುಕೊಂಡು ಸತ್ಯಾನಾಶಕ್ಕೆ ಅಣಿಯಾದ ಸೆರೆಗುಡಕ ನಾಯಕನ ಹೆಂಡತಿ ಸಿಂಧೂಳ ಪಾತ್ರದಲ್ಲಿ ಬಾಲ ಗಂಧರ್ವರನ್ನು ಒಂದು

ಅಮರ ಭೂಮಿಕೆಯಲ್ಲಿ ಮರಾಠೀ ರಂಗಭೂಮಿಯಲ್ಲಿ ತಂದು ಆಡಿಸಿದರು. ಆ ನಾಟಕದಿಂದ ಬಾಲಗಂಧರ್ವ (ನಾರಾಯಣರಾವ್ ರಾಜಹಂಸ) ಹಾಗೂ ಗಡಕರಿಯವರ ಕೀರ್ತಿದಿಗಂತ ವ್ಯಾಪಿಸಿತು. ಇಂದಿಗೂ ಅದು ಮೊಳಗುತ್ತಿದೆ.

'ಭಾವಬಂಧನ' ನಾಟಕವನ್ನು ಅವರು ಮಾಸ್ತರ ದೀನಾನಾಥರ (ಹಿನ್ನೆಲೆ ಗಾಯಕಿ ಮಂಗೇಶಕರ ಭಗಿನಿಯರ ತಂದೆ) ಬಳವಂತ ಸಂಗೀತ ನಾಟಕ ಮಂಡಳಿಗಾಗಿ ರಚಿಸಿದರು. ಅದರಲ್ಲಿಯ ಹಾಸ್ಯ ಪ್ರವೇಶಗಳು 'ಕಾಮಣ್ಣಾ' ಎಂಬ ಪಾತ್ರದ ಚೇಷ್ಟಿತಗಳಿಂದ ಹೆಸರಾಗಿವೆ. ಈ ಪಾತ್ರಧಾರಿಯಾದ ದಿ. ದಿನಕರ ಎಂಬ ನಟ 'ದಿನಕರ ಕಾಮಣ್ಣಾ' ಎಂದೇ ಮುಂದೆ ಪ್ರಸಿದ್ಧಿ ಪಡೆದನು. ಆದರೆ ಆ ಹಾಸ್ಯದ ಧಬಧಬೆಯ ಮೂಲ ನಮ್ಮ ಕನ್ನಡದ್ದು - ಪಂಢರಪುರದ ವಿಠೋಬನಂತೆ ಅಥವಾ ಜೋಗದ ಜಲಪಾತದಂತೆ! ಈ 'ಕಾಮಣ್ಣ' ಒಬ್ಬ ಕನ್ನಡ ವ್ಯಕ್ತಿ. ಇಂದು ಬಿಂದು ಎಂಬ ಇಬ್ಬರು ಕಪ್ಪು ಕುರೂಪಿ ಹೆಣ್ಣು ಮಕ್ಕಳ ಕಾಟಕ್ಕೆ ಸಿಲುಕಿ ಪೇಚಾಡುವ ಪ್ರಾಣಿ.

ಗಡಕರಿಯವರಿಗೆ ನಿಜವಾಗಿಯೂ ಕನ್ನಡದ ಕಲ್ಪನೆ ಇಲ್ಲ. 'ಎಂಡು ಗುಂಡು' ಸದ್ದು ಮಾಡುವ ಶಬ್ದಗಳನ್ನು ಬಡಬಡಿಸಿದರೆ ಅದು ಕನ್ನಡ ಎಂಬ ಭಾವನೆ! ಕಾಮಣ್ಣ ಕನ್ನಡವೆಂದು ಏನೋ ಕಲಬೆರೆಕೆಯ ಭಾಷೆ ಮಾತಾಡುತ್ತಾನೆ. ಈ ಪ್ರವೇಶಗಳು ಮರಾಠೀ ಮಂದಿಯನ್ನು ಹೊಟ್ಟೆ ಹುಣ್ಣಾಗುವಂತೆ ನಗಿಸುತ್ತವೆ. ಗಡಕರೀ ಛಾಪು ಹಾಸ್ಯದ ಇತರ ನಾಟಕಗಳಲ್ಲಿಯ ಪ್ರವೇಶಗಳಂತೆಯೇ. ಆದರೆ ಇಲ್ಲಿ ಕಾಮಣ್ಣನ ಮಾತಿಗೆ ಇನ್ನೊಂದು ಪಾತ್ರ ಹೀಗೆ ಟೀಕಿಸುತ್ತದೆ. "ಮಡಕೆಯಲ್ಲಿ ಕಲ್ಲುಗಳನ್ನು ಇಟ್ಟು ಅಲುಗಾಡಿಸಿದಾಗ ಆಗುವ ಸದ್ದಿನಂತೆ ಈ ಕನ್ನಡ." ಇಂಥ ಮಾತಿನಿಂದ ಕ್ರಮೇಣ ಬೆಳಗಾವಿ-ಹುಬ್ಬಳ್ಳಿಯ ಕಡೆಯ ಪ್ರೇಕ್ಷಕರು ಗಲಭೆ ಎಬ್ಬಿಸಿದ್ದರಿಂದ 'ಭಾವಬಂಧನ'ದ ಪ್ರಯೋಗಗಳಲ್ಲಿ ಈ ಮಾತು ತೆಗೆದುಹಾಕುವ ಆಶ್ವಾಸನೆ ಕೊಡಬೇಕಾಯಿತು ಬಳವಂತ ಕಂಪನಿಗೆ! ಆದರೆ ಇದೆಲ್ಲ ಗಡಕರಿಯವರ ಕಾಲ ಸಂದ ನಂತರ ಭಾಷಾಭಿಮಾನ ಜಾಗೃತವಾದ ಯುಗದಲ್ಲಿ.

ಇವೆಲ್ಲ ನಾಟಕಗಳು ಶೇಕ್ಸ್‌ಪಿಯರ್ ಶೈಲಿಯ Melodramatic ಮತ್ತು Romantic ಮಾದರಿಯವು. ಇಲ್ಲಿ ಬರುವ ಖಳನಾಯಕರೂ ಅದೇ ಭವ್ಯ ಅಥವಾ ಅತಿ ನೀಚ ಪರಿಮಾಣದವರು. ಹೊಟ್ಟೆ ಬಿರಿಯುವ ಹಾಸ್ಯದಂತೆ ಕರುಳು ಹಿಂಡುವ ಕರುಣೆಯೂ ಚಾರ್ಲಸ್ ಡಿಕನ್ಸನಂತೆ ಗಡಕರಿಯವರ ಹಸ್ತಸಿದ್ಧಿ. ಜತೆಗೆ ಇವೆರಡನ್ನೂ ಪ್ರಾಸಾನುಪ್ರಾಸಯುಕ್ತ ಉತ್ಪ್ರೇಕ್ಷಿತ ವರ್ಣರಂಜಿತ ಭಾಷೆಯಲ್ಲಿ ಭಟ್ಟಿ ಇಳಿಸುವ ಕಲೆ ಅನ್ಯಾದೃಶ್ಯ. ಉತ್ತಾನ ಹಾಸ್ಯದ ಹಿಂದಿನ ವೈಚಾರಿಕತೆಯೂ ಅಷ್ಟೇ ಆಕರ್ಷಕ. ಗಡಕರಿಯವರ ಈ ಪ್ರತಿಭಾ ವಿಲಾಸದ ವಿಲಕ್ಷಣ ಶಕ್ತಿಯ ಒಂದು ದೋಷವೆಂದರೆ ಇವರ ನಾಟಕಗಳಲ್ಲಿಯ ಎಲ್ಲ ಪಾತ್ರಗಳು ಶ್ರೀರಂಗರ ಪಾತ್ರಗಳಂತೆ ಮಾತಿನಮಲ್ಲರೇ, ಮರಿ ಗಡಕರಿಗಳೇ!

* * *

ಇವೂ ಅಲ್ಲದೆ ಗಡಕರಿಯವರ ಎರಡು ಅಪೂರ್ಣ ನಾಟಕಗಳೂ ಜನಪ್ರಿಯವಾಗಿವೆ: ಒಂದು ಐತಿಹಾಸಿಕ 'ರಾಜಸಂನ್ಯಾಸ'. ಇದು ಸಂಭಾಜಿಯ ಚರಿತ್ರದ ದುರಂತದ ವಸ್ತು. ಮೊದಲನೆಯ ಕೆಲವು ದೃಶ್ಯಗಳೂ ಕೊನೆಯ ಅಂಕದ ಭಾಗವೂ ಸಿದ್ಧ. ಅಷ್ಟನ್ನೆ ರಂಗದಲ್ಲಿ ಆಡುತ್ತಿದ್ದರು.

ಇಲ್ಲಿ ಮರಾಠರ ಐತಿಹಾಸಿಕ ಸಂಸ್ಕೃತಿಯನ್ನು ಅಂದಿನ 'ಶಾಹೀರ'ರ ಭಾಷೆಯ ಮೋಡಿಯಲ್ಲಿಯೇ ಜಾನಪದ ಭಾವ ಸಂಸ್ಕಾರವನ್ನು ಒಳಗೊಂಡು ಒಡಮೂಡಿಸಿದೆ. ಐತಿಹಾಸಿಕ ನಾಟ್ಯ ಕೃತಿಯ ಹೊಸ ಶೈಲಿಯಿದು. ಸಂಭಾಜಿಯ ಚಾರಿತ್ರ್ಯವನ್ನು ಇಲ್ಲಿ ಉದಾತ್ತೀಕರಿಸುವ ಯತ್ನವಿದೆ.

ಆರಂಭದ ದೃಶ್ಯವೇ ಒಂದು ಅಸಾಧ್ಯ ಅದ್ಭುತ ರಂಗಕಲ್ಪನೆ. ಸಂಭಾಜಿ ಸಿಂಧುದುರ್ಗ ಕೋಟೆಯ ವೀಕ್ಷಣೆಗೆ ಬಂದಿದ್ದಾನೆ. ಕಡಲಲ್ಲಿ ನಿಂತ ಈ ಕೋಟೆಯ ಕೊತ್ತಳ. ಅಲ್ಲಿ ಸಂಭಾಜಿ ಕಿಲ್ಲೇದಾರ ಇತ್ಯಾದಿ ಮಾತಾಡುತ್ತಿದ್ದಾರೆ. ದೂರದಲ್ಲಿ ಸಂಭಾಜಿಯ ಹಡಗ, ಕೋಟೆಯ ಹತ್ತಿರ ಕಡಲ ಚೆಲುವೆ ತುಳಸಿ, ಕಿಲ್ಲೇದಾರನ ಹೆಂಡತಿ, ನೌಕಾವಿಹಾರದಲ್ಲಿ ತೊಡಗಿದ್ದಾಳೆ. ಒಮ್ಮೆಲೆ ಅವಳ ದೋಣಿ ಮೊಗಚಿ ಆಕೆ ತೆರೆಗಳ ತೆಕ್ಕೆಗೆ ಸಿಲುಕಿ ಕೂಗಿಕೊಳ್ಳುತ್ತಾಳೆ. ಸಂಭಾಜಿ ನೋಡಿ ಅವಳ ಗಂಡನಿಗೆ ಹೆಂಡತಿಯ ರಕ್ಷಣೆಗೆ ಹೋಗೆನ್ನುತ್ತಾನೆ. ಆದರೆ ಆತ ಷಂಡ. ಅಲಕ್ಷಿಸುತ್ತಾನೆ. ಕೂಡಲೇ ಸಂಭಾಜಿ ಕಡಲಿಗೆ ಧುಮುಕುತ್ತಾನೆ. ಗಂಡನಿಗೆ ಹೆಂಡತಿಯ ಪರಿವೆ ಇಲ್ಲದಿದ್ದರೂ ರಾಜನಿಗೆ ಪ್ರಜೆಯ ಕಾಳಜಿ ಇದೆ; ಆತ ಈಜಿ ಮುನ್ನುಗ್ಗಿ ತುಳಸಿಯನ್ನು ಎತ್ತಿಕೊಂಡು ಅಲ್ಲಿಯೇ ಅಸ್ತಮಿಸುವ ಸೂರ್ಯನ ಅಗ್ನಿಸಾಕ್ಷಿಯಾಗಿ ಅವಳನ್ನು ಪರಿಗ್ರಹಿಸಿ ನೇರ ತನ್ನ ಹಡಗಕ್ಕೆ ಈಜಿ ಹೋಗುತ್ತಾನೆ. ಇಲ್ಲಿ ಕವಿ ನಾಟಕಕಾರನನ್ನು ಕೊಂದಂತೆಯೆ!

ಇನ್ನೊಂದು ಅಪೂರ್ಣ ನಾಟಕ 'ವೇಡ್ಯಾಂ ಚಾ ಬಾಜಾರ' (ಹುಚ್ಚರ ಸಂತೆ). ಇದು ಪೂರ್ತಿ ಹಾಸ್ಯ ಪ್ರಹಸನ. "ತುಕಾರಾಮ ಭಗವದ್ಗೀತೆಯಲ್ಲಿ ಅಂದಂತೆ" ಎಂದೆಲ್ಲ ಪಾಂಡಿತ್ಯ ಪ್ರದರ್ಶನ ಮಾಡುವ ಪಾತ್ರಗಳ ಸುಗ್ಗಿ. ತೀರ ಆರಂಭದಲ್ಲಿ ಪ್ರಲ್ಹಾದ ಚರಿತ್ರೆಯ ಮೇಲೆ ಅವರು 'ಗರ್ವನಿರ್ವಹಣ' ಎಂಬ ನಾಟಕ ಬರೆದಿದ್ದರು. ಅದು ಅಂದು ಬ್ರಿಟಿಷರ ವಿರುದ್ಧ ರಾಜದ್ರೋಹವಾದೀತೆಂದು ಹೆದರಿ ಗಡಕರಿಯವರು ನಾಶ ಮಾಡಿದರಂತೆ. (ಕಿರ್ಲೋಸ್ಕರ ರಂಗಮಂದಿರದಲ್ಲಿಯೇ ನಾಟಕ ನಡೆಯುತ್ತಿರುವಾಗ ಬ್ರಿಟಿಷ ಅಧಿಕಾರಿಯನ್ನು ಚಾಪೇಕರ ಬಂಧುಗಳು ಗುಂಡಿಕ್ಕಿ ಕೊಂದಿದ್ದರು!)

'ಭಾವ ಬಂಧನ'ದ ಕೊನೆಯ ದೃಶ್ಯವನ್ನೂ ಗಡಕರಿಯವರು ಸಾಯುವದಕ್ಕೆ ಕೆಲವು ಗಳಿಗೆ ಮುಂಚೆ ಬರೆದು ಮುಗಿಸಿದರು. 'ಏಕಚ ಪ್ಯಾಲಾ' ನಾಟಕದ ಪದ್ಯಗಳನ್ನು ಬರೆಯಲು ಅವರು ಬದುಕಿ ಉಳಿಯಲಿಲ್ಲ. ಅವರ ಮಿತ್ರ ಕಾದಂಬರಿಕಾರ ಶ್ರೀ ವಿಠ್ಠಲ ಸೀತಾರಾಮ ಗುರ್ಜರರು ಅವನ್ನು ರಚಿಸಿಕೊಟ್ಟರು-ಬಾಲಗಂಧರ್ವರಿಗೆ.

ಗಡಕರಿ ಇನ್ನೂ ಒಂದು ನಾಟಕವನ್ನು ಬರೆಯಲಿದ್ದರು. ಅದು 'ಮಾಧವರಾವ್ ಪೇಶ್ವೆ' ಅವರ ಕುರಿತು. ಅದರ ಆರಂಭದ ದೃಶ್ಯದ ಕಲ್ಪನೆಯೂ ಅಪೂರ್ವ. ಮಾಧವರಾಯರು ತಂದೆಯ 'ಶ್ರಾದ್ಧದ ಪಾಯಸ ಪಿಂಡ'ವನ್ನು ಕಾಗೆಗಳಿಗಾಗಿ ಇಟ್ಟು ಕಾಯುತ್ತಾ ನಿಂತಿದ್ದಾರೆ. ಮಡಿಯಲ್ಲಿ ಯಾವ ಕಾಗೆಯೂ ಹತ್ತಿರ ಸುಳಿಯುವದಿಲ್ಲ. ಸುಳಿದರೂ ಪಿಂಡ ಮುಟ್ಟುವದಿಲ್ಲ. ತಂದೆಯವರ ಇಚ್ಛೆ ಏನೋ ಅತೃಪ್ತಿ ಉಳಿದಿದೆ. ಅದನ್ನು ಪೂರೈಸುವೆನೆಂದು ಆಶ್ವಾಸನ ಕೊಡಲು ಪುರೋಹಿತರು ಹೇಳುತ್ತಾರೆ. ಆಗ ಮಾಧವರಾವ್ "ಪಾಣಿಪತ್ತದ ಯುದ್ಧದ ಸೇಡು ತೀರಿಸಿಕೊಳ್ಳುತ್ತೇನೆ. ನೀವು ನಿಶ್ಚಿಂತರಾಗಿರಿ." ಎಂದು ನೀರು ಬಿಡುತ್ತಾನೆ. ಕಾಗೆ ಪಿಂಡ ಕಚ್ಚುತ್ತದೆ. ಹೇಗಿದೆ ಈ ನಾಟ್ಯಮಯ ಸನ್ನಿವೇಶ?

ರಂಗಭೂಮಿ ನಾಟಕವನ್ನು ಹಿಂಬಾಲಿಸಬೇಕು. ಬರ್ನಾಡ್ ಶಾ 'ಸೀಝರ್ ಆ್ಯಂಡ ಕ್ಲಿಯೊಪಾತ್ರಾ' ನಾಟಕ ಆರಂಭದಲ್ಲಿ ಸೀಝರ್ ಈ ನಾಯಿಕೆಯನ್ನು ಭೆಟ್ಟಿಯಾಗುವ ಸಂದರ್ಭವನ್ನು ಆ ಸಂಭಾಜೀ-ತುಳಸಿ ಭೇಟಿಯ ಸನ್ನಿವೇಶದಂತೆಯೇ ಅಸಾಧ್ಯ. ಅಷ್ಟೇ ರೋಮಾಂಚಕಾರಿಯಾಗಿ ರೂಪಿಸಿದ್ದಾನೆ. ಅದು ಈಚಿನ ರಂಗ ನೇಪಥ್ಯ ವಿಧಾನ ವೈಚಿತ್ರ್ಯಗಳಿಗೆ ಸಾಧ್ಯ. ಆದರೆ ಗಡಕರಿಯವರು ನಾಟಕ ರಚಿಸುವಾಗ ಅಂಥ ಯಂತ್ರ-ತಂತ್ರ ವಿಧಾನ ರಂಗದಲ್ಲಿ ರೂಢವಾಗಿದ್ದಿಲ್ಲ. ಆದರೆ ಕವಿ ಕಲ್ಪನೆಯ ಇಂದ್ರಾಯಧಕ್ಕೆ ಕಡಿವಾಣವೆಲ್ಲಿ?

*   *   *

ಯಾವಾಗಲೂ ಚಾಟೂಕ್ತಿಯಾಡುವವನು 'ಹರಕುಬಾಯಿ' ಯವನೆನಸಿಕೊಳ್ಳುತ್ತಾನೆ-ಹರಿತ ನಾಲಿಗೆಯ ಚಾಟಿಏಟುಗಳಿಂದಾಗಿ ಆಚಾರ್ಯ ಕೃಪಲಾನಿಯ ಕುರಿತು ಡಾ. ಪಟ್ಟಾಭೀ ಸೀತಾರಾಮಯ್ಯ ಅಂದಿದ್ದುಂಟು. He would rather lose a friend than miss a joke at him! ಗಡಕರಿ ಅದೇ ರೀತಿ (ಕು) ಪ್ರಸಿದ್ಧ. ತನ್ನ ನಾಟಕಗಳಲ್ಲಿ ಹೇಗೋ ಹೊರಗೂ ಈ ಕವಿಯ ಜಾಣತನದ ಮಾತಿನಷ್ಟೇ ಮಾತಿನ ಜಾಣತನಕ್ಕಾಗಿಯೂ ಹೆಸರಾಗಿದ್ದರು. ಈ ಜಾಣತನ ಕಟುವಾಗಿಯೇ ಕೆಲಸ ಮಾಡುತ್ತಿತ್ತು. ಇದಕ್ಕೆ ಒಂದೆರಡು ಮಾದರಿ:

ಬಾಲಗಂಧರ್ವ, ಗಣಪತರಾವ್ ಬೋಡಸ, ಗೋವಿಂದರಾವ್ ಟೇಂಬೆ ಪ್ರಭೃತಿಗಳು ಕಿರ್ಲೋಸ್ಕರ ಕಂಪನಿ ಬಿಟ್ಟು ಹೊಸ ಕಂಪನಿ ಹೂಡಲು ಹೊರಟ ಸಮಯ. ಎಲ್ಲರೂ ಸಾಮಾನು ಸಹಿತ ಸಜ್ಜಾಗಿ ಹೊರಗೆ ಟಾಂಗಾ ಹತ್ತಲು ಹೋಗುವಾಗ ಬೋಡಸರು ಅತ್ತಿತ್ತ ಹುಡುಕಾಡ ಹತ್ತಿದರು. ಗಡಕರಿ ಮಾಸ್ತರರು ಬಾಗಿಲಲ್ಲಿಯೇ ನಿಂತಿದ್ದಾರೆ. (ಅವರಿಗೆ ಈ ಮಂದಿ ಬಿಟ್ಟು ಹೋಗುವುದು ಏನೂ ಇಷ್ಟವಿದ್ದಿಲ್ಲ. ಅವರು ಹಳೆಯ ಕಂಪನಿಗೆ ನಿಷ್ಠರು.) "ಏನು ಹುಡುಕುತ್ತೀರಿ?" ಎಂದು ಕೇಳಿದರು. ಬೋಡಸರು ಅಂದರು. "ಏನಿಲ್ಲ ಚಪ್ಪಲಿ." ಅದಕ್ಕೆ ಮಾಸ್ತರರ ಸಾಂತ್ವನೆ ಬಂತು; "ಅಷ್ಟೇ ತಾನೇ? ಹೋಗಲಿ ಬಿಡಿ. ಅವು ನಾಳೆ ನಿಮಗೆ ಬೇಕಷ್ಟು ಸಿಗ್ತಾವೆ!"

ಒಮ್ಮೆ ಕಂಪನಿಯ ಬಿಡಾರದಲ್ಲಿ ಗಡಕರಿಯವರಿಗೆ ಕೊಟ್ಟ ಕೋಣೆಯಲ್ಲಿ ಅಡಿಗೆಗಾಗಿ ಬಟಾಟೆಗಳನ್ನು ತಂದು ರಾಶಿ ಹಾಕಿದ್ದರು. ಒಳಗೆ ಹೊಕ್ಕೊಡನೆ ಗಡಕರಿಯವರು ಅದನ್ನು ಕಂಡರು. ರೇಗಿದರು. "ಇಕಾ ಯಾರೋ ಇಲ್ಲಿ ತಮ್ಮ ತಲೆ ಪೂರ್ತಿ ಖಾಲಿ ಮಾಡಿ ಇಟ್ಟಿದ್ದಾರೆ!" ಅಂದರು.

ಇನ್ನೊಮ್ಮೆ ಅವರೊಂದಿಗೆ ಒಬ್ಬ ವಿದ್ವಾಂಸರು ಏನೋ ವಾದ ಹಾಕುತ್ತಿದ್ದರು. ಗಡಕರಿ ಹಾಗೆಲ್ಲ ಸೋಲುವವರಲ್ಲ. ಆಗ ಈ ಇದಿರಾಳಿ ಸಿಟ್ಟಾಗಿ ಸಹನೆಮೀರಿ ಕೂಗಿದ; "ಛೇ ಹೋಗಲಿ ನಾವು ಮೂರ್ಖರೊಂದಿಗೆ ಮಾತಾಡುವದಿಲ್ಲ!" ಅದಕ್ಕೆ ಗಡಕರಿ ಅಷ್ಟೇ ಶಾಂತ ದನಿಯಲ್ಲಿ ನಗುತ್ತಾ ಅಂದರು, "ಆದರೆ ನಾವು ಮಾತಾಡುತ್ತೇವಲ್ಲ. ಸ್ವಾಮಿ!"

ಅವರ 'ಬಾಳಕರಾಂ' ಬರಹಗಳಲ್ಲಿ ಒಂದೆಡೆಗೆ ಬಂದ ವಾಕ್ಯವಿದು - "ಕವಿತೆ ಅನೇಕರನ್ನು ಹುಚ್ಚರನ್ನಾಗಿ ಮಾಡಿದೆ. ಅನೇಕ ಹುಚ್ಚರೂ ಕವಿತೆ ಮಾಡಿದ್ದಾರೆ!"

ಈ ಹಾಸ್ಯ ಹರಟೆಗಳಲ್ಲಿ ಒಂದು 'ಠಕೀ ಚೇ ಲಗಾ' (ಠಕೆಯ ಮದುವೆ). ಅದನ್ನು ಹಾಸ್ಯ

ಚಿತ್ರಪಟವನ್ನಾಗಿ ತಯಾರಿಸಲು ಹೋಗಿ ಮಾಸ್ತರ ದೀನಾನಾಥರು ತಮ್ಮ ನಾಟಕ ಕಂಪನಿಯ ದಿವಾಳಿ ತೆಗೆದರು.

'ಪುಣ್ಯ ಪ್ರಭಾವ' ನಾಟಕದಲ್ಲಿಯ ಹಾಸ್ಯ ಪ್ರಸಂಗಗಳು ತುಸು ಕೃತ್ರಿಮ. ಅದರಲ್ಲಿ ಒಂದು ಸನ್ನಿವೇಶ ಪ್ರಚಂಡ. ಕಿಂಕಿಣಿ ಎಂಬ ದಾಸಿಯನ್ನು ನೂಪುರನೆಂಬ ಪೋಲಿಯೂ ಕಂಕಣನೆಂಬ ಸಿಪಾಯಿಯೂ ವರಿಸಲು ಯತ್ನಿಸುತ್ತಿರುತ್ತಾರೆ. ಆಕೆ ಅವರೀರ್ವರಿಗೂ ತಮ್ಮ ತಮ್ಮ ಪ್ರತಿಭೆಯನ್ನು ಪ್ರದರ್ಶಿಸಲು ಹೇಳುತ್ತಾಳೆ, ಅದರಿಂದ ಅವಳು ಆಯ್ಕೆ ಮಾಡುವವಳು. ಆಗ ನೂಪುರ ಮೊದಲು ಅವಳ ಸೌಂದರ್ಯ ಪ್ರಶಂಸೆಗೆ ತೊಡಗುತ್ತಾನೆ. ಅದಕ್ಕಾಗಿ ಮೊದಲೇ ಒಬ್ಬ ಕವಿಯನ್ನ ಬಾಡಿಗೆಗೆ ಹಿಡಿದು ಹೆಣ್ಣಿನ ಅಂಗೋಪಾಂಗಗಳ ಉಪಮೆಗಳನ್ನೆಲ್ಲ ಕ್ರಮವಾಗಿ ಆತ ಬರೆದು ಪಟ್ಟಿ ಮಾಡಿಕೊಂಡು ಬಂದವನು. ಆದರೆ ಹೇಗೋ ಆ ಉಪಮೇಯ ಉಪಮಾನಗಳ ಜೋಡಣೆ ತಪ್ಪಿ ಹೋಗುತ್ತದೆ. ಅದೇನೂ ಅರಿಯದೇ ಆತ ಗಂಭೀರವಾಗಿ ಆರಂಭಿಸುತ್ತಾನೆ: "ಪ್ರಿಯತಮೇ, ನಿನ್ನ ಮುಖ ಶಂಖದಂತೆ, ನಿನ್ನ ಕಣ್ಣು ಸಂಪಿಗೆಯಂತೆ, ನಿನ್ನ ಕಣ್ಣು ತೊಂಡೆಯಂತೆ, ಕುತ್ತಿಗೆ ಚಂದ್ರನಂತೆ, ಸೊಂಟ ಆನೆಯಂತೆ, ನಡಿಗೆ ಸಿಂಹನಂತೆ" ಕಿಂಕಿಣಿ ಕೆರಳಿ ಸಿಂಹಿಣಿಯೇ ಆಗುತ್ತಾಳೆ. ಆಮೇಲೆ ಬಡಪಾಯಿ ಸಿಪಾಯಿ ಕಂಕಣ ತನ್ನ ಘಂಟಾಕಂಠದಿಂದ ಗುಡುಗುತ್ತಾನೆ. ಕತ್ತಿಯನ್ನು ಒರೆಯಿಂದೆಳೆದು. "ನೀನು ನನ್ನವಳಾಗುವಿಯೋ ಇಲ್ಲವೋ, ನಿನ್ನ ಹೊರತು ನಾನು ಬಾಳಲಾರೆ, ನೀನು, ಅನ್ನು. ನಿನ್ನನ್ನು ಕಡಿದು ಚಲ್ಲಿ ನಾನೂ ಆತ್ಮಹತ್ಯೆ ಮಾಡಿ ಕೋಳ್ಳುತ್ತೇನೆ!" ಸ್ವಾಭಾವಿಕವಾಗಿಯೇ ಕಿಂಕಿಣಿ ಈ ಮುಗ್ಧ ಸರಳ ಸಾಚಾ ಸಿಪಾಯಿಗೇ ಮಾಲೆ ಹಾಕುತ್ತಾಳೆ,

ಈ ನಾಟಕದಲ್ಲಿ ಇನ್ನೊಬ್ಬ ಕದೀಮ ಸುದಾಮ ಎಳೆ ಪ್ರಾಯದ ಹೆಣ್ಣಿನ ಮುದಿ ಗಂಡ, ಮಹಾಸಂಶಯಿ. ಅವಳ ಪಾತಿವ್ರತ್ಯವನ್ನು ಶಂಕಿಸಿ (ಏಕೆಂದರೆ ನೂಪುರ ಅವಳ ಭೆಟ್ಟಿಗೆ ಕದ್ದು ಬರುವದನ್ನು ಆತ ಕಂಡಿದ್ದ) ಅವಳನ್ನು ಅಗ್ನಿಪರೀಕ್ಷೆಗೆ ತಯಾರಾಗಲು ಒತ್ತಾಯ ಮಾಡುತ್ತಾನೆ. ರಾಮನೇ ಸೀತೆಯನ್ನು ಹಾಗೆ ಪರೀಕ್ಷಿಸಿದಾಗ ತಾನೇಕೆ ಹಾಗೆ ಮಾಡಬಾರದು? ಎಂದು ಅವನ ವಾದ.

'ಪ್ರೇಮಸಂನ್ಯಾಸ'ದಲ್ಲಿ ವಿನೋದದ ಕೇಂದ್ರ ಗೋಕುಳನೆಂಬ ಒಬ್ಬ ಮರೆಗುಳಿ ಮೂರ್ಖ. ಆತನಿಗೆ ನೆನಪೇ ಕಡಿಮೆ.

'ಏಕಚ ಪ್ಯಾಲಾ'ದಲ್ಲಿ ಖಳನಾಯಕ ಅಖಂಡ ಸೆರೆಗುಡುಕ ತಳೀರಾಮನೇ ತೀಕ್ಷ್ಣಬುದ್ಧಿಯ ಕಟು ವಿನೋದಿ. ಅವನ 'ಆರ್ಯ ಮದಿರಾ ಮಂಡಳ'ದ ಒಂದೊಂದು ಸಭೆಯೂ ಅದರ ಸದಸ್ಯರೂ ಹಾಸ್ಯದ ಹತ್ತು ಅವತಾರಗಳು. ಮಾತು ಮಾತಿಗೆ 'ಕೋಟ' ಹಾಸ್ಯ. ತಳೀರಾಮ ಸಾಯಲು ಬಿದ್ದಾಗ ಅವನ ಪರೀಕ್ಷೆಗೆ ಕರೆತಂದ ಡಾಕ್ಟರ ವೈದ್ಯ ಇಬ್ಬರ ಮಾತಿನ 'ಜುಗಲ ಬಂದಿ'ಯೇ ಸಾಕು ಪ್ರೇಕ್ಷಕರನ್ನು ನಗೆನಡಲಲ್ಲಿ ಮುಳುಗಿಸಲಿಕ್ಕೆ. ಉದಾರಹಣೆಗೆ "ರೋಗಿಯ ಬೇನೆ ಗುಣಪಡಿಸಲು ಸಾಧ್ಯ," ಎಂದು ಡಾಕ್ಟರನು ಹೇಳಿದರೆ, ತದ್ವಿರುದ್ಧ "ಅದು ಕೇವಲ ಅಸಾಧ್ಯ"ವೆಂದು ವೈದ್ಯ. ಅದಕ್ಕೆ ರೇಗಿ ಡಾಕ್ಟರನ ಘೋಷಣೆ "ಜೀವ ಹೋದರೂ ರೋಗಿ ಸಾಯೋದಿಲ್ಲ!" ಅದಕ್ಕೆ ವೈದ್ಯನ ಆಹ್ವಾನ "ಮೂರು ದಿನಗಳಲ್ಲಿ ರೋಗಿಯ ಹೆಣ ಹಾಕಿ ಕಾಣಿಸ್ತೇನೆ!"

ಕೊನೆಗೂ ತಳೀರಾಮ ಸಾಯುತ್ತಾನೆ. ಸಾಯುವ ಮುಂಚೆ ಅವನ ಸಂದೇಶ ತನ್ನ ಶ್ರಾದ್ಧದಲ್ಲಿ ಬಡಬ್ರಾಹ್ಮಣರಿಗೆ ಆಕಂಠ ಹೆಂಡ ಕುಡಿಸಿರಿ. ವೈತರಿಣಿ ನದಿಯನ್ನು ದಾಟಿಸಲು ಮದ್ಯದ ಸೀಸೆಗಳ ಬೂಚುಗಳ ತೆಪ್ಪಮಾಡಿ ಅರ್ಪಿಸಲಿ. ಒಂದು ನಿಧಿ ಕೂಡಿಸಿ 'ಯೋಗ್ಯ' ವಿದ್ಯಾರ್ಥಿಯನ್ನು ವಿಲಾಯತಿಗೆ ಕಳುಹಿಸಿ ದುರ್ವಾಸನೆ ಇಲ್ಲದ ಸರಾಯಿ ತಯಾರಿಸುವ ಸಂಶೋಧನೆ ಮಾಡಿ ತರಿಸಿರಿ" ಇತ್ಯಾದಿ.

ಆ ಮೇಲೆ ಮದಿರಾ ಮಂಡಳದ ಸಂತಾಪ ಸೂಚಕ ಸಭೆ,- ಸತ್ತತಾಳೀ ರಾಮನಿಗಾಗಿ. ಎಲ್ಲರೂ ಕುಡಿದು ಮತ್ತರು. ಬಾಯಿಬಿಡಲಾರರು. ಆಗ ಅಧ್ಯಕ್ಷ ಯಾರು? ಅಧ್ಯಕ್ಷ ಮಾತಾಡಬೇಕಿಲ್ಲ. ಹಾಗಾದರೆ ಸತ್ತ ತಳೀರಾಮನನ್ನೆ ಅಧ್ಯಕ್ಷನನ್ನಾಗಿ ಮಾಡುತ್ತಾರೆ. ಆಮೇಲೆ ಭಾಷಣಗಳು ತಳೀರಾಮ ನಿಜವಾದ ಮಹಾತ್ಮ ನುಡಿದಂತೆಯೇ ಜೀವಮಾನವೆಲ್ಲ ನಡೆದ-ತಡವರಿಸುತ್ತಾ! ಆದರೆ ಹೇಗೋ ಮಾತು ಅಡ್ಡ ಹಾಯ್ದು ಸತ್ತವರು ಯಾರು ಎಂಬ ಉಪಪ್ರಶ್ನೆ ಏಳುತ್ತದೆ. (ಹೆಣವೇ ಅಧ್ಯಕ್ಷನೆಂಬ ಸಂಗತಿ ಯಾರಿಗೆ ನೆನಪಿದೆ?) ಆಗ ಸತ್ತವನು ಕೈ ಮೇಲೆ ಮಾಡಬೇಕು-ಎಂದು ಸೂಚನೆ ಬರುತ್ತದೆ. ಯಾರೂ ಕೈಮೇಲೆ ಮಾಡುವದಿಲ್ಲ. ಅರ್ಥಾತ್ ಯಾರೂ ಸತ್ತಿಲ್ಲ. ಎಂದು ಸಭೆ ಮುಗಿಯುತ್ತದೆ. ನಮ್ಮ ಸಾರ್ವಜನಿಕ ಸಮಿತಿಗಳ ಸಭೆಗಳ ವಿಕಟ ವಿಡಂಬನೆ ಇದು.

ಇನ್ನು ಗಡಕರಿಯವರ ಭಾಷೆಯ ಬೆಡಗಿನ ಕೆಲವು ಮಾದರಿಗಳು-

"ಮಹಿಮೆಯ ಮಾರ್ಗವು ಮರಣದ ಮೈದಾನಿನೊಳಗಿಂದ ಹೋಗುತ್ತದೆ." (ರಾಜಸಂನ್ಯಾಸ)

"ಪತಿವ್ರತೆಯ ಪುಣ್ಯ ಪಾಪೀ ಪುರುಷನನ್ನು ಪರಮೇಶ್ವರನ ಪದವಿಗೆ ಮುಟ್ಟಿಸುತ್ತವೆ."

"ಪುರುಷನು ಪರಮೇಶ್ವರನ ಕೀರ್ತಿ, ಆದರೆ ಸ್ತ್ರೀ ಪರಮೇಶ್ವರನ ಮೂರ್ತಿ (ಪುಣ್ಯ ಪ್ರಭಾವ.)

"ಗುಣಗೇಡಿಯಾದ ಗಂಡ, ತಿಳಿಗೇಡಿಯಾದ ತಂದೆ, ಮರ್ಯಾದೆಗೇಡಿಯಾದ ಮನುಷ್ಯ ಮುಕ್ಕಾಸಿನ ಮದ್ಯಗುಡುಕ-ನನಗೆ ಧಿಕ್ಕಾರವಿರಲಿ." (ಏಕಃಚ ಪ್ಯಾಲಾ)

Dramatic Irony ಅಥವಾ ಪತಾಕಾ ಸ್ಥಾನದ ಒಂದು ಮಾದರಿ.

'ಏಕಃಚ ಪ್ಯಾಲಾ'ದ ಪ್ರಥಮ ಪ್ರವೇಶದಲ್ಲಿ ನಾಯಿಕೆ ಸಿಂಧೂ ತನ್ನ ಆಪ್ತ ಬಂಧು ರಾಮಲಾಲ ಇಂಗ್ಲಂಡಿಗೆ ಹೊರಟನೆಂದು ಕಣ್ಣೀರು ಬಿಡುತ್ತಾಳೆ. ಆಗ ನಾಯಕ ಸುಧಾಕರನ ಧೈರ್ಯದ ಮಾತು: "ದೈವ ರಕ್ಷಣೆ ಮುಖ್ಯ. ದೈವದ ರಕ್ಷೆ ಇದ್ದರೆ ಏಳು ಸಮುದ್ರಗಳಾಚೆಗೂ ನಿನ್ನ ರಾಮಲಾಲ ಕ್ಷೇಮದಿಂದಿರುತ್ತಾನೆ. ಆದರೆ ದೈವ ಪ್ರತಿಕೂಲವಾದರೆ, ರಾಮಲಾಲನೇಕೆ ನಿನ್ನ ಕಣ್ಣೆದುರಿಗೇ ನಿನ್ನ ಈ ಗಂಡನನ್ನು ಅದು ಸಮುದ್ರವೇಕೆ, ಒಂದೇ ಒಂದು ಲೋಟ ಮುಳುಗಿಸಿ ನಾಶಮಾಡಬಲ್ಲದು." ಮುಂದೆ ಆತ ಕುಡಿಯತೊಡಗಿದ. ಆ ಒಂದೇ ಒಂದು ಲೋಟವೇ ಅವನನ್ನು ಸರ್ವನಾಶ ಮಾಡುತ್ತದೆ.

'ಪುಣ್ಯ ಪ್ರಭಾವ' ಮತ್ತು 'ಏಕಃಚ ಪ್ಯಾಲಾ' ನಾಟಕಗಳಲ್ಲಿ ಈಶ್ವರ ಮತ್ತು ಭಗೀರಥ

ಎಂಬ ಎರಡು ಪಾತ್ರಗಳು ಬರುತ್ತವೆ. ಇಬ್ಬರೂ ಪ್ರೇಮ ಭಂಗದಿಂದ ದುಃಖಿಗಳು. ಈಶ್ವರ ವಿರಕ್ತನಾಗುತ್ತಾನೆ. ಭಗೀರಥ ಆರ್ಯ ಮದಿರಾ ಮಂಡಳದಲ್ಲಿ ಸೇರುತ್ತಾನೆ. ಆದರೆ ಮುಂದೆ ರಾಮಲಾಲನ ಉಪದೇಶದಿಂದ ಮದ್ಯ ಬಿಟ್ಟು ಸನ್ಮಾರ್ಗಿಯಾಗುತ್ತಾನೆ. ಈ ಪಾತ್ರಗಳು ಗಡಕರಿಯದೇ ಕೆಲವಂಶ ಪ್ರತಿಬಿಂಬಗಳು. ಗಡಕರಿಯೂ ಭಗ್ನ ಹೃದಯಿಯಾಗಿ ಮದ್ಯಸೇವನೆಗೆ ತೊಡಗಿದ್ದರು ಎಂದು ಹೇಳಲಾಗುತ್ತದೆ.

ಕವಿ 'ಗೋವಿಂದಾಗ್ರಜ'ರ ಏಕಮೇವ ಕವನ ಸಂಗ್ರಹ 'ವಾಗ್ವೈಜಯಂತಿ'. ಅದರ ಒಂದೊಂದು ಕವನವೂ ಪದಲಾಲಿತ್ಯ ಮತ್ತು ಅರ್ಥಗೌರವ ಎರಕವಾಗಿ ರಸಪಾಕಗೊಂಡಿದೆ. ಅವುಗಳಲ್ಲಿ ಅನೇಕ ಕವನಗಳು ಅತ್ಯಂತ ಜನಪ್ರಿಯವಾಗಿವೆ. "ರಾಜಹಂಸ ಮಾಝಾ ನಿಜಲಾ" ಕಂದನನ್ನು ಕಳಕೊಂಡ ಹತಭಾಗ್ಯ ವಿಧವೆಯ ಕರುಣಾಕ್ರಂದನ, "ಮುರಲಿ" ರಾಧೆಯ ಕಳವಳ-ತಳಮಳಗಳ ಬೇಡಿಕೆ. "ಈ ಒಂದೆ ಆಸೆ ಉಳಿದಿದೆ ಮನದಲಿ! ಕನ್ನಯ್ಯಾ, ಊದು ಮುರಲಿ॥" ಶೃಂಗಾರದಿಂದ ಅನುಭಾವಕ್ಕೆ ಏರುವ 'ರಾಧೆಯ ಪಾಡು'. ಲೋಕಮಾನ್ಯ ತಿಲಕರು ಇಂಗ್ಲಂಡಿಗೆ ಹೊರಟಾಗ ಅವರಿಗೆ ಮಾಡಿದ ಮನವಿ-ಇನ್ನೇನೂ ಬೇಡ ಶಿವ ಛತ್ರ ಪತಿಯ ಆ ಭವಾನೀ ಖಡ್ಗವನ್ನು ಪಡೆದು ಬನ್ನಿ! ಇನ್ನೊಂದು ಡಾ। ಸಿ.ಡಿ. ದೇಶಮುಖ ಅದಾಗಲೇ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಪ್ರಥಮರಾಗಿ ಸಂಸ್ಕೃತದ ಜಗನ್ನಾಥ ಶಂಕರ ಶೇಠ ಪಾರಿತೋಷಕ ಗೆದ್ದದ್ದನ್ನು ಅಭಿನಂದಿಸಿ. "ವಿರಾಮ ಚಿನ್ಹೆ" ಬಾಳಿನ ವಕ್ಕಣೆಯಲ್ಲಿ ವಾಕ್ಯದ ವಿರಾಮ ಚಿಹ್ನೆಗಳ ಸಾರ್ಥಕ ಸ್ಥಾನಗಳನ್ನು ಮಾರ್ಮಿಕವಾಗಿ ಬಣ್ಣಿಸುವ ಕವನ. ಇನ್ನೊಂದು "ಗೂಢ ಗುಂಜನಾತ್ಮಕ (Mystic) ಕವನ "ಘಟಕೀ ತಪಲಿ" (ಒಡಕು ತಪ್ಪೇಲಿ) ಹಾಗೆಯೇ "ಅವೇಳೀಂ ಓರಡಣಾಯಾನಾ ಕೋಕಿಲೇಸ" (ಆಕಾಲದಲ್ಲಿ ಒದರುವ ಕೋಕಿಲೆಗೆ) ಹಾಗೆಯೇ ಸುಪ್ರಸಿದ್ಧ "ಗುಲಾಬೀ ಕೋಟೆಂ" (ಗುಲಾಬಿ ಒಗಟು) ಈ ಸುನೀತದ ಸಾರಾಂಶ ಹೀಗೆ-

ನಲ್ಲೆ ನಲ್ಲನಿಗೆ ಕೇಳುತ್ತಾಳೆ, ಮೂಡಣದಲ್ಲಿ ಸೂರ್ಯ ಮೂಡಿದರೆ ಆಗ ಪಡುವಣವೂ ಏಕೆ ಕೆಂಪು? ಆದಕ್ಕೆ ನಲ್ಲನ ಉತ್ತರ, ನಿನ್ನ ಬಲ ಗಲ್ಲಕ್ಕೆ ಮುತ್ತು ಕೊಟ್ಟರೆ ಆಗ ಎಡ ಗಲ್ಲವೂ ಕೆಂಪೇರುತ್ತದೆ ಏಕೆ? ಪ್ರಶ್ನೆಗೆ ಪ್ರಶ್ನೆ ಉತ್ತರ. ನಲ್ಲೆ ನಾಚಿ ನಿರುತ್ತರ.

ಇಂಥ ರಸೋತ್ಕಟ ಕೃತಿಗಳು-ಕಾವ್ಯವಿರಲಿ ನಾಟಕವಿರಲಿ, ಹಾಸ್ಯ ಪ್ರಬಂಧವಿರಲಿ-ತಾವರೆಗಳಂತೆ ಅರಳಿದ್ದು ಗಡಕರಿಯವರ ಬಡತನ ಬಳಲಿಕೆಗಳ ಕೆಸರ ಮಡುವಿನಲ್ಲಿ. ಕಿರ್ಲೋಸ್ಕರ ಕಂಪನಿಯಲ್ಲಿ ಅವರಿಗೆ ತಿಂಗಳಿಗೆ ೧೨ ರೂಪಾಯಿ ಸಂಬಳ. ಅದರಲ್ಲಿ ೧೦ ರೂಪಾಯಿ ಮಾಲಕರು ನೇರ ಇವರ ತಾಯಿಗೆ ಮನೆ ಖರ್ಚಿಗಾಗಿ ರವಾನಿಸಿ ಬರಿ ೨ ರೂಪಾಯಿ ಗಡಕರಿಯವರ ಬೀಡಿ ವೆಚ್ಚಕ್ಕಾಗಿ ಕೈಗೆ ಇಡುತ್ತಿದ್ದರು. ಸದಾ ಬಿಚ್ಚಿಟ್ಟ ಹಾಸಿಗೆಯಲ್ಲಿ ಹಿಮ್ಮಡಗಳ ಮೇಲೆ ಕೂತು ಬಲಗೈಯಲ್ಲಿ ತೆರೆದ ಪುಸ್ತಕ ಎಡಗೈಯಲ್ಲಿ ಉರಿಯವ ಬೀಡಿ-ಇದು ಗಡಕರಿಯವರ ನಿತ್ಯ ಭೋಗಾಸನ. ಧೂಮಪಾನಕ್ಕೂ ವಾಚನಕ್ಕೂ ಇತಿಮಿತಿಯೇ ಇಲ್ಲ. ಅಖಂಡ ಪ್ರಚಂಡ ಗ್ರಂಥ ವ್ಯಾಸಂಗ ಶೇಕ್ಸ್‌ಪಿಯರ, ಶೆರ್ಡಾನ್, ಬೆನ್ ಜಾನ್‌ಸನ್, ಶೆಲ್ಲಿ, ಕೀಟ್ಸ್, ಡಿಕನ್ಸ್, ಇಬ್ಸೆನ್, ಬಾಯ್‌ರನ್, ಬ್ರಾವ್ನಿಂಗ್, ಮಾರ್ಕ್‌ಟ್ವೇನ್ ಇತ್ಯಾದಿ ಅವರ ನಿತ್ಯಪಾಠದ ಕೃತಿಕಾರರು. ಹಾಗೆಯೇ ತುಕರಾಮ ಜ್ಞಾನೇಶ್ವರ ನಾಮದೇವರಾದಿಯಾಗಿ

ಸಂತವಾಙ್ಮಯ ಜತೆಗೆ ಮರಾಠಾ ಇತಿಹಾಸದ 'ಬಖರ'ಗಳು ಶಾಹೀರರ ಪೊವಾಡಾಗಳು-ರಾಮ ಜೋಶಿ, ಹೋನಾಜೀ ಬಾಳ ಪ್ರಭೃತಿಗಳ ಲಾವಣಿಗಳು. ಮರಾಠೀ ಭಾಷೆ ಸಂಸ್ಕೃತಿಗಳ ಮರ್ಮ ಅವರಿಗೆ ಹೀಗೆ ರಕ್ತಗತವಾಯಿತು. ಅರೆಹೊಟ್ಟೆ ಉಳಿದೂ ಅವರು ಪುಸ್ತಕಗಳನ್ನು ಸಂಗ್ರಹಿಸುತ್ತಿದ್ದರು. ಓದಿ ಅವುಗಳ ಮಗ್ಗುಲಲ್ಲಿ ಟಿಪ್ಪಣಿ ಬರೆದಿಡುತ್ತಿದ್ದರು. ತಲೆದಿಂಬಿನ ಬಳಿ ಈ ಪುಸ್ತಕಗಳ ಹಾಗೂ ಹಸ್ತಲಿಖಿತದ ನೋಟ್‌ಬುಕ್ಕುಗಳ ಅಸ್ತವ್ಯಸ್ತ ರಾಶಿ.

೩೪ ವರ್ಷದ ಬಾಳಿನ ಕೊನೆಯ ೧೦-೧೫ ವರ್ಷಗಳಲ್ಲಿಯೇ ಇವರ ಪ್ರತಿಭೆಯ ಬತ್ತಿ ಎರಡೂ ತುದಿಯಿಂದ ಉರಿದು ರೋಗ ಜರ್ಜರ ಬಡಕಲು ದೇಹ ಸೋತು ಸುಣ್ಣವಾಯಿತು. ಪ್ರತಿಭೆಯ ಪ್ರಖರ ಸ್ಫೋಟ ಪ್ರಕೃತಿಯನ್ನು ಸುಟ್ಟು ಬೂದಿ ಮಾಡಿತು. ಉಳಿದಿದ್ದು ದಿವ್ಯ ಸ್ಮೃತಿ.

●

('ಕಸ್ತೂರಿ' ಆಗಸ್ಟ್, ೮೪)

# 'ಏಕಚ ಪ್ಯಾಲಾ' ಬಗೆಗೆ ಬೇಂದ್ರೆ ಉವಾಚ

ದಿವಂಗತ ರಾಮಗಣೇಶ ಗಡಕರಿ ಮರಾಠಿಯ ಉಜ್ವಲ ಕವಿ, ನಾಟಕಕಾರ ಹಾಗೂ ಹಾಸ್ಯ ಲೇಖಕರು. ಅವರ ಒಂದೇ ಒಂದು ಕವನ ಸಂಗ್ರಹ 'ಭಾಷ್ ವೈಜಯಂತಿ' ಇನ್ನೂ ಮರಾಠೀ ಜನತಾ ಜನಾರ್ದನನ ಎದೆಯಲ್ಲಿ ಮಾಸದೆ ನಲಿದಾಡುತ್ತಿದೆ. ಅವರು ಬರೆದ ಅಮೋಘ ನಾಟಕಗಳು ೪-೬, ಅವುಗಳಲ್ಲಿ 'ಪ್ರೇಮ ಸಂನ್ಯಾಸ', 'ಪುಣ್ಯ ಪ್ರಭಾವ', 'ಏಕಚ ಪ್ಯಾಲಾ' ಮತ್ತು 'ಭಾವಬಂಧನ' ಇವು ಪೂರ್ಣ-ಇಂದಿಗೂ ರಂಗಭೂಮಿಯಲ್ಲಿ ಯಶಸ್ವಿ ಮತ್ತು ಜನಪ್ರಿಯ. ಉಳಿದೆರಡು 'ರಾಜಸಂನ್ಯಾಸ' ಮತ್ತು 'ವೀಡ್ಯಾಂಚಾ ಬಾಜಾರ' (ಹುಚ್ಚರ ಸಂತೆ) ಅಪೂರ್ಣ. 'ಭಾವಬಂಧನ'ದ ಕೊನೆಯ ದೃಶ್ಯ ಕವಿ ಮರಣಶಯ್ಯೆಯಲ್ಲಿ ಇರುವಾಗ ಕೆಲವು ತಾಸು ಮುಂಚೆ ಬರೆದು ಮುಗಿಸಿದ್ದು. 'ಏಕಚ ಪ್ಯಾಲಾ'ದ ಪದ್ಯಭಾಗವನ್ನು ಅನಂತರ ಅವರ ಮಿತ್ರ ಸಾಹಿತಿ ವಿಠ್ಠಲ ಸೀತಾರಾಂ ಗುರ್ಜರರು ಬರೆದು ಕೊಟ್ಟರು.

'ಗಡಕರಿ ಮಾಸ್ತರ'ರು ಕಿರ್ಲೋಸ್ಕರ್ ನಾಟಕ ಕಂಪನಿಯಲ್ಲಿ ಬಾಲನಟರಿಗೆ ಮರಾಠೀ ಪಾಠ ಕಲಿಸುತ್ತಿದ್ದರು. ಜೀವಮಾನವೆಲ್ಲ ಕಡು ಬಡತನ ಮತ್ತು ಬಡವರ ಬಲಿತೆಗೆದುಕೊಳ್ಳುವ ಕ್ಷಯದ ಬಾಧೆಯಲ್ಲಿಯೇ ಕಳೆದು ೩೪ನೆಯ ವಯಸ್ಸಿಗೇ ಅಸ್ತಂಗತರಾದರು. ಆದರೆ ಆ ಅಲ್ಪ ಆಯುಷ್ಯದಲ್ಲಿಯೇ ಅವರು ಸಾಹಿತ್ಯ ಲೋಕದಲ್ಲಿ ಅಕ್ಷಯ ಶ್ರೇಯಸ್ಸನ್ನು ಗಳಿಸಿದರು. ಅವರ ನಾಟಕಗಳಲ್ಲಿ 'ಏಕಚ ಪ್ಯಾಲಾ' ಗಂಧರ್ವ ಕಂಪನಿಯನ್ನೂ 'ಭಾವಬಂಧನ' ಮಾಸ್ತರ ದಿನಾನಾಥ ಮಂಗೇಶಕರರ ಬಲವಂತ ನಾಟಕ ಮಂಡಳಿಯನ್ನೂ ಮುಳುಗಡೆಯ ಮಡುವಿನಿಂದ ಸಾಂಪತ್ತಿಕವಾಗಿ ಎತ್ತಿ ನಿಲ್ಲಿಸಿದವು. ನಾಟ್ಯ ಲೇಖನ, ಪಾತ್ರ ಸೃಷ್ಟಿಯಲ್ಲಿ ಗಡಕರಿ ಮರಾಠಿಯ ಶೇಕ್ಸ್‌ಪಿಯರ್ ಎನಿಸಿಕೊಂಡರು.

ಇಲ್ಲಿ ನಾನು ಪ್ರಸ್ತಾಪಿಸಲು ಹೊರಟಿದ್ದು ನಮ್ಮ 'ಬೇಂದ್ರೆ ಮಾಸ್ತರ'ರು ಈ ಗಡಕರಿ ಮಾಸ್ತರರ ವಿಷಯವಾಗಿ ಸಲ್ಲಿಸಿದ ಕಾಣಿಕೆಯ ಕುರಿತು. ನಮ್ಮ ವರಕವಿ ಪುಣೆಯಲ್ಲಿ ಕಾಲೇಜು ವಿದ್ಯಾರ್ಥಿಯಾಗಿದ್ದಾಗ ಕವಿ 'ಗೋವಿಂದಾಗ್ರಜ'ರಿಂದ ತುಂಬ ಪ್ರಭಾವಿತರಾಗಿದ್ದರು. ಬೇಂದ್ರೆಯವರ

ಕಾವ್ಯಮಯ ಶೈಲಿಯ ಭಾಷಾ ಸಂಪತ್ತು ಚತುರೋಕ್ತಿಚಾತುರ್ಯ. ಊಹೆ ಉತ್ಪ್ರೇಕ್ಷೆಗಳ ದಿಗಂತ ಉಡ್ಡಾಣ, ಹರಟೆ-ಹುಚ್ಚಾಟಗಳಲ್ಲಿಯ ವಿಕಟ ವಿನೋದ ಇವುಗಳಲ್ಲಿ ಗಡಕರಿಯವರ ಪ್ರಭಾವ ಕಾಣಿಸಿಕೊಳ್ಳುತ್ತದೆ. ಡಾ. ಬೇಂದ್ರೆಯವರು ೫೦ರ ದಶಕದಲ್ಲಿ ಒಮ್ಮೆ ನಮ್ಮಲ್ಲಿ ಬಂದಾಗ ಗಡಕರಿಯವರ 'ಏಕಚ ಪ್ಯಾಲಾ' ನಾಟಕದ ವಿಷಯ ಚರ್ಚಿಸಿದರು. ವರಕವಿಗಳ ಅಪಾರ-ದರ್ಶಕ ಪ್ರತಿಭೆ ಅಂದು ನನ್ನೆದುರು ಒಡಮೂಡಿಸಿದ 'ಏಕಚ ಪ್ಯಾಲಾ' ದುರಂತ ನಾಟಕದ ಈ ರುದ್ರ ರಹಸ್ಯದ ಸ್ಫೋಟಕ್ಕೆ ನಾನಂತೂ ಪೂರ್ತಿ 'ಬೌಲ್ಡ್ ಓವರ್'ನಾಗಿ ಹೋದೆ.

'ಏಕಚ ಪ್ಯಾಲಾ' (ಒಂದೇ ಗ್ಲಾಸು) ಮದ್ಯಪಾನದಿಂದೊದಗುವ ಮಾನವನ ಅಧಃಪಾತದ ಬಗೆಗೆ ಒಂದು ಘೋರ ಪರಿಣಾಮಕಾರಿ ರೌದ್ರ ನಾಟಕ. ಅದರಲ್ಲಿಯ ನಾಯಕ ಸುಧಾಕರ ಸುಶಿಕ್ಷಿತ ಸುಸಂಸ್ಕೃತ ಕುಟುಂಬ ವತ್ಸಲ ಮತ್ತು ಅತ್ಯಂತ ಸ್ವಾಭಿಮಾನಿ ಸದ್‌ಗೃಹಸ್ಥ. ತರುಣ ವಕೀಲ. ಹೆಂಡತಿ ಪರಮ ಸಾಧ್ವಿ ಸಿಂಧೂ. ಹೆರಿಗೆಗಾಗಿ ತವರಿಗೆ ಹೋದಾಗ ತನ್ನ ಒಂಟಿತನದ ವಿವ್ಹಲತೆಯ ಒಂದು ದೌರ್ಬಲ್ಯದ ಗಳಿಗೆಯಲ್ಲಿ ಅವನ ಕಾರಕೂನ ಖದೀಮ 'ತಳೀರಾಮ'ನೆಂಬ ಹೆಂಡಗುಡುಕನ ಒತ್ತಾಯಕ್ಕೆ ಬಲಿಬಿದ್ದು ಸೆರೆ ಕುಡಿಯತೊಡಗುತ್ತಾನೆ. ಶೇಕ್ಸಪಿಯರನ 'ಇಯಾಗೋ' ನನ್ನೂ ಮೀರಿಸುವ ಈ ದುಷ್ಟ ತಳೀರಾಮ ಸುಧಾಕರನ ದುರಭ್ಯಾಸವನ್ನು ಬೆಳೆಯಿಸುತ್ತಾನೆ. ಸಿಂಧೂ ಮಗುವೊಂದಿಗೆ ಮನೆಗೆ ಮರಳಿದ ಮೇಲೂ ಈ ದುಶ್ಚಟ ಮುಂದುವರಿಯುತ್ತದೆ. ಅದನ್ನು ಬಿಟ್ಟುಕೊಡದಷ್ಟು ದುರಹಂಕಾರಿ ಸುಧಾಕರ. ಮೇಲೆ ಮತ್ತೆ ಅವನನ್ನು ಅವನ ಹಿತೈಷಿ ಆಪ್ತಬಂಧು ರಾಮಲಾಲನಿಂದ ದೂರ ಮಾಡುವಲ್ಲಿ ತಳೀರಾಮ ಯಶಸ್ವಿ. ಒಮ್ಮೆ ಥಲವಾದಿಯಾದ ಸುಧಾಕರ ತುಂಬ ಸೆರೆ ಕುಡಿದು ಕೋರ್ಟಿಗೆ ಹೋಗಿ ಅಲ್ಲೆ ರಂಭಾಟವೆಬ್ಬಿಸಿ ವಕೀಲಿಯ ಸನದನ್ನ ರದ್ದುಗೊಳಿಸಿಕೊಂಡು ಬರುತ್ತಾನೆ. ಅಲ್ಲಿಂದ ಮುಂದೆ ಅವನ ಪ್ರಳಯಾವಸ್ಥೆ. ತಂಗಿ ಬಾಲವಿಧವೆ ಶರದ್‌ಳನ್ನೂ ಆಪ್ತಮಿತ್ರ ರಾಮಲಾಲನನ್ನೂ ಹೊರಗಟ್ಟಿ, ಹೆಂಡತಿ ಮಗುವನ್ನು ಅನ್ನಾನ್ನಗತಿಗೆ ತಂದು ಕೊನೆಗೂ ಅವರನ್ನು ಮದ್ಯದ ಅಮಲಿನಲ್ಲಿ ಹೊಡೆದು ಕೊಲ್ಲುತ್ತಾನೆ-ಹೆಂಡಕ್ಕಾಗಿ ಹಣ ಬೇಕೆಂದು ಸಿಂಧೂಳ ತಾಳಿಮಣಿಗೆ ಕೈಹಾಕಿ. ಆದರೆ ಸಾಯುವ ಗಳಿಗೆಯಲ್ಲೂ ಆ ಸಾಧ್ವಿ ಸಿಂಧೂ, ತಾನು ಕಾಲು ಜಾರಿ ಬಿದ್ದು ಸತ್ತೆ, ಗಂಡ ಹೊಡೆದು ಕೊಂದಿಲ್ಲವೆಂದು ಪೊಲೀಸರಿಗೆ ಹೇಳಿ ಸುಧಾಕರರನ್ನು ಉಳಿಸಲು ನೋಡುತ್ತಾಳೆ. ಆದರೆ ಆತ ವಿಷ ಕುಡಿದು ಕುಸಿಯುತ್ತಾನೆ.

ಈ ದುರಂತ ರೌದ್ರಕ್ಕೆ ಧುಮ್ಮಿಕ್ಕುವ ಘಟನಾ ಸರಣಿಯಲ್ಲಿ ನಮ್ಮನ್ನು ಕಾಡುವ ಪ್ರಶ್ನೆ-ಸುಧಾಕರನ ಈ ಮದ್ಯದ ರಾಕ್ಷಸೀ ಪಿಪಾಸೆ ಹೀಗೆ ಉಲ್ಬಣಗೊಳ್ಳಲು, ಅನರ್ಥ ಪರಂಪರೆಗೆ ಸುಗ್ಗುವಂತೆ ಮಾಡಲು ಒಳ ಪ್ರೇರಣೆ ಏನು? ಮನಮೆಚ್ಚಿನ ಮಡದಿ, ಮುದ್ದು ಮಗು, ವ್ಯವಸಾಯದಲ್ಲಿ ಯಶಸ್ಸು ಇಷ್ಟೆಲ್ಲ ಇದ್ದೂ ಆತ ಹೀಗೆ ಅತಿರೇಕದ ಸೆರೆಕುಡುಕತನಕ್ಕೆ ಬಲಿಯಾದದ್ದು ಏಕೆ? ಇಲ್ಲಿ ಅತಿ ಸ್ವಾಭಿಮಾನಿಯಾದ ಸುಧಾಕರನ ನೊಂದ ಅಹಂಕಾರವೂ ಒಂದು ಬಲವಾದ ಪ್ರಚೋದನೆ. ಆದರೆ ಅದೊಂದೇ ಸಾಲದು. ಸುಧಾಕರನೇ ತನಗೆ ಉಪದೇಶ ಮಾಡಲು ಬಂದ ರಾಮಲಾಲನಿಗೆ ವಿಶ್ಲೇಷಣೆ ಮಾಡಿ ಹೇಳುವಂತೆ ಇಂಥ ಯಾವುದೇ ಮೋಹಕ್ಕೆ ಮೂರು ಹಂತಗಳು; ಸಂಮೋಹಾವಸ್ಥೆ, ಉನ್ಮಾದಾವಸ್ಥೆ ಮತ್ತು ಪ್ರಲಯಾವಸ್ಥೆ. ಇಲ್ಲಿ ಸುಧಾಕರನನ್ನು ಉನ್ಮಾದಾವಸ್ಥೆಯ ತನಕ ಒಯ್ಯಲು ನೊಂದ ಅಹಂಕಾರ ಪ್ರಬಲ ಕಾರಣ.

ಆದರೂ ಅವನ ಪ್ರಲಯಾವಸ್ಥೆಗೆ ಇನ್ನೂ ಬಲಿಷ್ಠವಾದ, ರಹಸ್ಯವಾದ, ಪ್ರೇರಣೆ ಬೇಕು. ಅದನ್ನು ಕವಿವರ್ಯ ಬೇಂದ್ರೆ ಕಂಡು ಹಿಡಿದರು. ಅದೆಂದರೆ ಸುಧಾಕರನನ್ನು ಈ ಹಂತದಲ್ಲಿ

ಒಮ್ಮೆಲೆ ಕಾಡಿದ ಪಾಪಪ್ರಜ್ಞೆಯ ತೀವ್ರ ಪೀಡೆ. ಅಹುದು. ಆದಕಾರಣ ಆತ ಅದೇ ಸಂದರ್ಭದಲ್ಲಿ ಮದ್ಯದ ಮಿತಿ ಮೀರಿದ ಅಮಲಿನಲ್ಲಿ ತನ್ನ ತಂಗಿ ಶರದಳ ಮೇಲೆಯೇ ಕೈಮಾಡಲು ದುಡುಕಿದ್ದು ಇದಕ್ಕೆ ಪ್ರಮಾಣ? ರಾಮಲಾಲನು ಉಪದೇಶ ಮಾಡಲು ಬಂದಾಗ ಸುಧಾಕರ ತನ್ನ ಸುದೀರ್ಘ ಭಾಷಣದ ಕೊನೆಗೆ ರಾಮಲಾಲನಿಗೇ ಎಚ್ಚರಿಸುತ್ತಾನೆ; "ಮೋಹದ ಮೊದಲ ಸ್ಪರ್ಶದಿಂದಲೇ ದೂರವಿರಬೇಕು. ಉದಾಹರಣೆಗೆ ನೀನು ಶರದ್‌ಳನ್ನು ವಾತ್ಸಲ್ಯದಿಂದ, ಮರುಕದಿಂದ ನೂರು ಸಲ ನೋಡುವಿ. ಆದರೆ ಒಮ್ಮೆ ಅವಳ ಮೈಮೇಲೆ ಕೈಹಾಕು-ಜನ್ಮಕ್ಕೂ ಹಾಳಾಗಿ ಹೋಗುವಿ!" ಆಗ ರಾಮಲಾಲ ನಿರುತ್ತರ. "ಮಾತಿನ ಜಾಣತನ ಕಲಿಸಲು ಬಂದೆ. ಜಾಣತನದ ಮಾತು ಕಲಿತು ಮರಳುತ್ತಿದ್ದೇನೆ" ಎಂದು ಹಿಂದಿರುಗುತ್ತಾನೆ. ಇದಕ್ಕೆ ತೋರಿಕೆಗೆ ಇನ್ನೊಂದು ಪ್ರಬಲ ಕಾರಣವೂ ಇದೆ. ಆ ದೃಶ್ಯದ ಹಿಂದಿನ ಒಂದು ದೃಶ್ಯದಲ್ಲಿ ಅವನಲ್ಲಿ ಆಶ್ರಯಕ್ಕೆ ಬಂದುಳಿದ ಶರದ್‌ಳಿಗೆ ರಾಮಲಾಲ "ರಘುವಂಶ"ದ ಆನೆಯ ಸರ್ಗವನ್ನು ಓದಿಹೇಳುತ್ತಾ ಇಂದುಮತಿಯ ಸಾವಿನ ಸಂದರ್ಭ ವಿವರಿಸುವಾಗ ಸಮಾಜ ವಿಧವೆಯರನ್ನು ಗೋಳಾಡಿಸುವುದರ ಕುರಿತು ಪ್ರಸ್ತಾಪಿಸಿ ನಡುವೆಯೇ ಶರದ್‌ಳ ಹೆಗಲ ಮೇಲೆ ಸಲಿಗೆಯಿಂದ ಕೈಇಟ್ಟು ಆಕೆ ಹೆದರಿ ನೋಡಿದೊಡನೆ ಪೆಚ್ಚಾಗಿ ಹಿಂದೆಗೆದುಕೊಳ್ಳುತ್ತಾನೆ.

ಬೇಂದ್ರೆಯವರ ಅಭಿಪ್ರಾಯವೇನೆಂದರೆ ರಾಮಲಾಲನನ್ನು ಎಚ್ಚರಿಸುವಾಗ ಸುಧಾಕರನಿಗೆ ಆ ಮದ್ಯದುನ್ಮಾದದಲ್ಲಿಯೂ ನೆನಪಾದದ್ದು ಶರದ್‌ಳ ಮೇಲೆ-ಕೈ ಮಾಡಿದ ಉದಾಹರಣೆ! ಅದು ಅವನದೇ ಎದೆಯಾಳದಲ್ಲಿ ಕೊರೆಯುತ್ತಿರುವ ಉರಿಯುತ್ತಿರುವ ನೆನಪು. ಹೇಳುವಾಗ ರಾಮಲಾಲನ ಮೇಲೆ ಆರೋಪಿಸಿ ಹೇಳುತ್ತಾನೆ. ಇದಕ್ಕೆ ಪ್ರೇರಕವಾಗಿ ಶರದ್‌ಳ ಒಂದು ಮಾತು ಬೇಂದ್ರೆಯವರ ಊಹೆಯನ್ನು ಘಾಯೆಗಾಣಿಸುವಂತಿದೆ. ಮೇಲೆ ಹೇಳಿದ ರಾಮಲಾಲನ ಪ್ರಸಂಗದಲ್ಲಿ ಶರದ್ ವ್ಯಾಕುಲಳಾಗಿ ಹೇಳುತ್ತಾಳೆ: "ಅಲ್ಲಿ ಅಣ್ಣನಲ್ಲಿ ಹಾಗಾಯಿತು. ಇಲ್ಲಿ ಬಂದೆ. ಈಗ ಹೀಗೆ ನೀವು-" "ಹಾಗಾಯಿತು" ಎಂಬ ತೇಲುಮಾತಿನಲ್ಲಿಯೇ ಸುಧಾಕರನ ಆ ಪಾಪದ ಘೋರ ಪ್ರಸಂಗ ಅಡಗಿದೆ ಅಂದರು. "ಅಂದತ್ತರು" ತಂಗಿಯ ಮೇಲೆ ಅಣ್ಣ (ನಾಟಕದ ನಾಯಕ) ಎರಗಿದನೆಂಬ ದುರ್ಧರ ಸಂಗತಿಯನ್ನು ರಂಗದಲ್ಲಿ ಕಾಣಿಸುವದಿರಲಿ, ಅದನ್ನು ಹೆಸರಿಸುವದೂ ಗಡಕರಿಯುವರ ಅಂತಃಕರಣಕ್ಕೆ ಅಸಹ್ಯ ಅಸಾಧ್ಯವಾಯಿತು.

ಬೇಂದ್ರೆಯವರ ದೃಷ್ಟಿಯಲ್ಲಿ "ಏಕಚ ಪ್ಯಾಲಾ" ಕೇವಲ ಮದ್ಯಪಾನದ ದುಷ್ಪರಿಣಾಮದ ಚಿತ್ರಣವಲ್ಲ. ಅದು ಗಡಕರಿಯ ಸಮಕಾಲೀನ ಸಾಮಾಜಿಕ ಜೀವನದ ಮೇಲೆಯೇ ಒಂದು ದಟ್ಟರೂಪಕ. ನಾಯಕ ಸುಧಾಕರ ನಿಜವಾಗಿಯೂ ಅಂದಿನ ಸುಧಾರಕರ ಪ್ರತಿನಿಧಿ. ನಾಯಿಕೆ ಸಿಂಧೂ ಹಿಂದೂ ಸಾಧ್ವಿ ಹೆಂಡತಿಯ ಮಾದರಿ. ರಾಮಲಾಲ ಅಂದಿನ ಡಾಂಭಿಕ ಪರೋಪದೇಶ ಪಂಡಿತ ಹಾಗೂ ಆತ್ಮಸಂಭಾವಿತ ಸದ್‌ಗೃಹಸ್ಥ. ಹಾಗೆಯೇ ತಳೀರಾಮನ 'ಆರ್ಯ ಮಂದಿರ ಮಂಡಳ!' ಅಲ್ಲಿ ರಾಜಕಾರಣ ಸಮಾಜ ಸುಧಾರಣೆಗಳನ್ನೂ ಚರ್ಚಿಸುವ ಸದಸ್ಯರು. ತಳೀರಾಮ ಸತ್ತಾಗ ಅವನ ಕುರಿತು ಅವರ ಸಂತಾಪಸೂಚಕ ಸಭೆ. ತಳೀರಾಮ ಖಳನಾಯಕ. ಆದರೂ ಇದೆಲ್ಲ ಸಾಮಾಜಿಕ ಭಂಡಾಟವನ್ನೂ ಭೇದಿಸಿ ನೋಡಬಲ್ಲ ನಗ್ನಸತ್ಯದ ದೃಷ್ಟಿಯ ಅತ್ಯಂತ ನಿರ್ಲಜ್ಜ ಪ್ರಾಮಾಣಿಕತೆಯ ದುಷ್ಟ ಪಾತ್ರ-ಅತಿ ವಾಸ್ತವವಾದಿ.

(ಸುಧಾ

# ನಟ ಸಮ್ರಾಟ ಬಾಲಗಂಧರ್ವ

ನಟ ಸಮ್ರಾಟ್ ಬಾಲಗಂಧರ್ವ-ಶ್ರೀ ನಾರಾಯಣ್ ರಾವ್ ರಾಜಹಂಸ ಇವರ ಜನ್ಮಶತಾಬ್ದವನ್ನು ಈ ವರ್ಷ ಮಹಾರಾಷ್ಟ್ರದಲ್ಲಿ ಭಾರೀ ಉತ್ಸಾಹ ಉಲ್ಲಾಸಗಳಿಂದ ಎಲ್ಲೆಡೆಯಲ್ಲಿಯೂ ಆಚರಿಸಲಾಗುತ್ತಿದೆ. ಉತ್ತರ ಕರ್ನಾಟಕವೂ ದಕ್ಷಿಣ ಮಹಾರಾಷ್ಟ್ರವೆಂಬ ಹೆಸರಿನಿಂದ ಹಳೆಯ ಮುಂಬಯಿ ಇಲಾಖೆಯ ಭಾಗವಾಗಿದ್ದಾಗ ಈ ಮಹಾ ನಟನ ಗಂಧರ್ವ ನಾಟಕ ಮಂಡಳಿಯು ಬೆಳಗಾಂವ, ಹುಬ್ಬಳ್ಳಿಯವರೆಗೆ ಅನೇಕ ಸಲ ದಿಗ್ವಿಜಯ ಮಾಡಿ ಹೋದದ್ದುಂಟು. ಆಗ ಮಹಾರಾಷ್ಟ್ರದಂತೆ ಉತ್ತರ ಕರ್ನಾಟಕದಲ್ಲಿಯೂ ಬಾಲಗಂಧರ್ವರು ಜನತೆಯ ಮುದ್ದು ನಟರಾಗಿದ್ದರು. ಅವರ ಈ ರೂಪ ಸೌಂದರ್ಯ, ಹಾಡುಗಾರಿಕೆ, ಅಭಿನಯ ಕಿನ್ನರ ಕಂಠ - ಎಲ್ಲವೂ ಮರಾಠೀ ಹಾಗೂ ಕನ್ನಡ ರಸಿಕರನ್ನು ಮುಗ್ಧಗೊಳಿಸಿದ್ದುಂಟು.

೪೦ರ ದಶಕದಲ್ಲಿ ಗಂಧರ್ವ ನಾಟಕ ಮಂಡಳಿಯು ಕಾರವಾರಕ್ಕೂ ಬಂದಿತು. ಆಗ ತುಸು ಮೀರಿದ ವಯೋಮಾನದಿಂದಾಗಿ ಬಾಲಗಂಧರ್ವರು ನಡುನಡುವೆ ಪುರುಷ ಪಾತ್ರಗಳನ್ನೂ ವಹಿಸತೊಡಗಿದ್ದರು. ಅವರ ಪ್ರಸಿದ್ಧ ಸ್ತ್ರೀ ಭೂಮಿಕೆಗಳನ್ನು (ಬಿಜಾಪುರದ) ಗೋಹರ ಕರ್ನಾಟಕೀ ನಿರ್ವಹಿಸುತ್ತಿದ್ದರು. (ಇದೇ ರೀತಿ ೨೦ರ ದಶಕದಲ್ಲಿ ಮಾಸ್ಟರ್ ದೀನಾನಾಥ ಮಂಗೇಶಕರರು ತಮ್ಮ ಬಳವಂತ ಸಂಗೀತ ಮಂಡಳಿಯೊಂದಿಗೆ "ಮಹಾರಾಷ್ಟ್ರ ಕೋಕಿಲ" ಶಂಕರರಾವ್ ಸರ್ ನಾಯಕ ತಮ್ಮ ಯಶವಂತ ಸಂಗೀತ ಮಂಡಳಿಯೊಂದಿಗೆ ಕುಮಟೆಗೂ ಬಂಧು ತಳವೂರಿದ್ದರು!)

ಬಾಲಗಂಧರ್ವರಿಗೆ ಈ ಹೆಸರು ಸಂದದ್ದೂ ಶ್ರೀ ಲೋಕಮಾನ್ಯ ತಿಲಕರಿಂದ-ಅದೇನು ಸಭೆ ಸಮಾರಂಭಗಳಲ್ಲಿ ಅರ್ಪಿಸಿದ ಬಿರುದಾಗಿಯೂ ಅಲ್ಲ. ಕಿರ್ಲೋಸ್ಕರ್ ಕಂಪೆನಿಗೆ ಸಲಹೆಗಾರರೂ ಹಿತೈಷಿಗಳೂ ಆದ ಲೋಕಮಾನ್ಯರ ಇದುರಿಗೆ ಈ ಬಾಲನಟನನ್ನು ಒಯ್ದು ಕಂಪೆನಿಯ

ವ್ಯವಸ್ಥಾಪಕರು (ಶ್ರೀ ಮುಜುಮದಾರರು) ಹಾಡಿಸಿದರು. ಆಗ ಈ ಹುಡುಗನ ಕೊರಳಿನ ಇಂಪಿನಿಂದ ಹಾಡುಗಾರಿಕೆಯ ಪೆಂಪಿಂದ ತಿಲಕರು ನಿಬ್ಬೆರಗಾಗಿ ತಲೆದೂಗಿ ಉದ್ಗರಿಸಿದರು. "ಹಾತರ ಬಾಲ ಗಂಧರ್ವಚ ಆಹೆ!" (ಈತ ಬಾಲ ಗಂಧರ್ವನೇ ಸರಿ.) ಅಂದಿನಿಂದ ನಾರಾಯಣರಾವ್ ರಾಜಹಂಸರಿಗೆ ಬಾಲಗಂಧರ್ವರೆಂದೇ ಪ್ರಸಿದ್ಧಿ ಅಂಟಿಗೊಂಡಿತು. ಮುದಿ ವಯಸ್ಸಿನಲ್ಲಿಯೂ ಅವರು ಬಾಲಗಂಧರ್ವರೇ.

ಮರಾಠೀ ರಂಗಭೂಮಿಯಲ್ಲಿ ಅಪ್ರತಿಮ ಸ್ತ್ರೀ ಅಭಿನಯಕ್ಕಾಗಿ ಖ್ಯಾತಿವೆತ್ತವರು ಇನ್ನೂ ಕೆಲವರಿದ್ದಾರೆ-ಶ್ರೀ ರಘುವೀರ ಸಾಹುಕಾರ, ಶ್ರೀ ಮಾಶೇಲಕರು, ಶ್ರೀ ಬಾಪೂರಾವ್ ಮಾನೆ ಇತ್ಯಾದಿ. ಆದರೆ ಅವರೆಲ್ಲ ಬಾಲಗಂಧರ್ವರ ನಂತರ ಮುಂದೆ ಬಂದವರು. ಬಾಲಗಂಧರ್ವರಿಗೆ ಸರಿಸಾಟಿಯಾಗಿ ಮುಂದೆ ನಿಂತವರಲ್ಲ. ಬಾಲಗಂಧರ್ವರು ೫೦ ವರ್ಷ ಕಾಲ ಮರಾಠೀ ರಂಗಭೂಮಿಯ ಮೇಲೆ ಅದ್ವಿತೀಯ ಸ್ತ್ರೀ ಪಾತ್ರಾಭಿನಯದ ನಟ ಸಮ್ರಾಟರಾಗಿ ಮೆರೆದರು. ವಯಸ್ಸಾದರೂ ಅವರ ಅಂಗ ಶೈಥಿಲ್ಯವನ್ನು ಲೆಕ್ಕಿಸದೆ (ಕ್ಷಮಿಸಿ) ಮಹಾರಾಷ್ಟ್ರದ ರಸಿಕ ಪ್ರೇಕ್ಷಕರು ಬಾಲಗಂಧರ್ವರ ರುಕ್ಮಿಣಿ, ಸುಭದ್ರೆ, ಸಾವಿತ್ರಿಯಂಥ ಕುಮಾರಿಯರ ಭೂಮಿಕೆಗಳನ್ನು ಕೌತುಕದಿಂದ ಕಾಣುತ್ತಿದ್ದರು.

ಕಿರ್ಲೋಸ್ಕರ್ ಕಂಪೆನಿಯಲ್ಲಿ ಅವರಿಗೂ ಮುಂಚೆ ಶ್ರೀ ಭಾವೂರಾವ್ ಕೊಲ್ಹಟಕರ ಎಂಬ ಸ್ತ್ರೀ ಪಾರ್ಟಿನಟರು ಹೆಸರಾಗಿದ್ದರು. ಭಾವೂರಾವ್ ಲೋಕಮಾನ್ಯರ ಲಾ ಕ್ಲಾಸಿಸ್ ಸೇರಿದ ಕಾನೂನಿನ ವಿದ್ಯಾರ್ಥಿ. ಅವನನ್ನು ತಿಲಕರೇ ಮನವೊಲಿಸಿ ಕಿರ್ಲೋಸ್ಕರ ಕಂಪನಿಗೆ ನಟನಾಗಿ ಸೇರಿಸಿದ್ದರು. ಆದರೆ ಭಾವೂರಾವ್ ಅಕಾಲಿಕವಾಗಿ ಮರಣಹೊಂದಿದರು. ಅವರಿಂದ ತೆರವಾದ ರಂಗವನ್ನು ಬಾಲಗಂಧರ್ವರು ಯಶಸ್ವಿಯಾಗಿ ತುಂಬಿದರು. ಶಕುಂತಲೆ, ಶಾರದೆ, ಸುಭದ್ರೆ, ವಸಂತಸೇನೆ ಮತ್ತು ಶ್ರೀಪಾದ ಕೃಷ್ಣಕೋಲ್ಹಟಕರರ ನಾಟಕಗಳಲ್ಲಿಯ ನಾಯಿಕೆಯರು. ಅವರನ್ನು ನೋಡಲು ಅವರ ಹಾಡನ್ನು ಕೇಳಲು ಕಿರ್ಲೋಸ್ಕರ್ ಕಂಪೆನಿಯ ನಾಟಕಗಳಿಗೆ ಪ್ರೇಕ್ಷಕರ ಸಂದಣಿ ಬೆಳೆಯ ಹತ್ತಿತ್ತು. ಮುಂದೆ ಕಂಪೆನಿ ಒಡೆಯಿತು. ಸರ್ವಶ್ರೀ ಗೋವಿಂದ ರಾವ್ ಟೇಂಬೆ, ಗಣಪತರಾವ್ ಬೋಡಸ ಮುಂತಾದ ಪ್ರಮುಖ ನಟರ ಗುಂಪು ಬಾಲಗಂಧರ್ವರನ್ನು ಮುಂದಿಟ್ಟುಕೊಂಡು "ಗಂಧರ್ವ ನಾಟಕ ಮಂಡಳಿ'ಯನ್ನು ಸ್ಥಾಪಿಸಿತು. ಮುಂದೆ ಲೋಕಮಾನ್ಯರ ಪಟ್ಟ ಶಿಷ್ಯರೂ ಪ್ರಸಿದ್ಧ 'ಕೇಸರಿ'ಯ ಸಂಪಾದಕರಲ್ಲಿ ಒಬ್ಬರೂ ಆದ ಶ್ರೀಕೃಷ್ಣಪ್ರಭಾಕರ ಖಾಡಿಲಕರರು ಕಂಪೆನಿಯ ಮುಖ್ಯ ನಾಟಕಕಾರರಾದರು. ಮಾನಾಪಮಾನ. ವಿದ್ಯಾಹರಣ, ದ್ರೌಪದಿ ಸ್ವಯಂವರ, ಮೇನಕಾ, ಸಾವಿತ್ರೀ ಮುಂತಾದವು. ಬಾಲಗಂಧರ್ವರ ಭಾಮಿನೀ, ರುಕ್ಮಿಣೀ, ದ್ರೌಪದೀ ಪಾತ್ರಗಳು ಸುಪ್ರಸಿದ್ಧ. ಇವೆಲ್ಲ ನಾಯಿಕಾ ಪ್ರಧಾನ ನಾಟಕಗಳು ಬಾಲಗಂಧರ್ವರನ್ನು ಕಣ್ಣೆದುರಿಗಿಟ್ಟುಕೊಂಡು ಬರೆದುವು. ಇವುಗಳಲ್ಲಿ ಹಲವೆಡೆಗೆ ಬರುವ ನಾಯಿಕೆಯರ ವರ್ಣನೆ ಬಾಲಗಂಧರ್ವರ ಅಂಗ ಸೌಷ್ಠವ, ರೂಪ ಸೌಂದರ್ಯವನ್ನು ಲಕ್ಷಿಸಿಯೇ ನಿರೂಪಿಸಿದಂತಿವೆ. "ಚಂದ್ರಿಕಾ ಹೀಜಣು", "ರೂಪಬಲೀ ನರ ಶಾರ್ದುಲ", "ನಯನೀ ಲಾಜವಿತ", "ಮಲಾಮದನ ಭಾಷೆ", "ನಯನೀ ಲಾಜವಿತ" ಇತ್ಯಾದಿ ಹಾಡುಗಳಲ್ಲಿ ಪರ್ಯಾಯವಾಗಿ ಬಾಲಗಂಧರ್ವರದೇ ಪ್ರಶಂಸೆ!

ಶ್ರೀರಾಮ ಗಣೇಶ ಗಡಕರಿ (ಕವಿ "ಗೋವಿಂದಾಗ್ರಜ") ಬಾಲಗಂಧರ್ವರಿಗಾಗಿ "ಏಕಚ ಪ್ಯಾಲಾ" ನಾಟಕ ಬರೆದರು. ಆ ತನಕ ರಾಜಕನ್ನೆಯರ ಶ್ರೀಮಂತ ರಂಗಸಜ್ಜಿಕೆಯಲ್ಲಿ ಶೋಭಿಸುತ್ತಿದ್ದ ಬಾಲಗಂಧರ್ವರಿಗಾಗಿ ಅವರು ಒಬ್ಬ ಸೆರೆಕುಡುಕ ನಾಯಕನ ದುರ್ದಶೆಗೆ ಬಲಿಯಾದ ಹೆಂಡತಿ ಸಿಂಧೂಳ ಪಾತ್ರವನ್ನು ನಿರ್ಮಿಸಿದರು. ಬಾಲಗಂಧರ್ವರು ನಾಟಕವನ್ನು ಬೇಡಿದಾಗಲೇ ಗಡಕರಿ ಅವರಿಗೆ ಅಂದಿದ್ದರು. "ನಾರಾಯಣ ರಾವ್" ಖಾಡಿಲಕರರು ನಿಮ್ಮನ್ನು ಜರತಾರೀ ಸೀರೆ ಶಾಲು ಹಾಗೂ ರತ್ನಾಭರಣಗಳಲ್ಲಿ ಮೆರೆಯಿಸಿದರು. ನಾನು ನಿಮ್ಮನ್ನು ಹರಕು ಹಳೆ ಸೀರೆಯಲ್ಲಿ ಸ್ಟೇಜಿಗೆ ತರಲಿದ್ದೇನೆ! ಬಾಲಗಂಧರ್ವರು ಅಸಲು ಕಸಬಿನ ನಟರು. ಆಹ್ವಾನ ಸ್ವೀಕರಿಸಿದರು. ಅವರ ಭಾಮಿನೀ, ರುಕ್ಮಿಣಿ ಸುಭದ್ರೆಯರಿಗಿಂತ ಸಿಂಧೂ ಮರಾಠೀ ರಂಗಭೂಮಿಯಲ್ಲಿ ಅಜರಾಮರಳಾದಳು,- ಹಿಂದೂ ಹೆಣ್ಣಿನ ಆದರ್ಶವಾಗಿ! ಅದು ಸಂಗೀತ-ನಾಟಕಗಳ ಸ್ವರ್ಣಯುಗ. ಒಂದೊಂದು ನಾಟಕದಲ್ಲಿ ೩೦-೪೦ ಹಾಡುಗಳ ಬಾಲಗಂಧರ್ವರ ಹಾಡಿಗಾಗಿಯೇ ನಾದಲುಬ್ಧರ ದಟ್ಟಣೆ. ಅವರು ಗಂಧರ್ವರ ಹಾಡು ಮುಗಿದೊಡನೆ ಥಿಯೇಟರ ಹೊರಗೆ - ಮುಂದಿನ ಹಾಡಿಗೆ ಒಳಗೆ ಬರುವವರು! ಒಂದೊಂದು ಹಾಡಿಗೆ ೪-೫ ಸಲ ಒನ್ಸ್ ಮೋರ್. ಬಾಲಗಂಧರ್ವರು ರಂಗದಲ್ಲಿ ಹಾಡಲು ನಿಂತರೆ ಗಂಟೆಗಟ್ಟಲೆ ನಾಟಕ ಸ್ಥಗಿತ-ಮಾಸ್ತರ್ ಹಿರಣ್ಣಯ್ಯನವರ ನಾಟಕಗಳಂತೆ! ಹೀಗಾಗಿ ಅವರ ನಾಟಕಗಳೆಲ್ಲ ನಾಯಿಕಾ ಪ್ರಧಾನ ಕೃತಿಗಳೇ.

ಅವರ ರಂಗಪರ್ವ ಮರಾಠೀ ನಾಟಕಗಳ ಒಂದು ವೈಭವಶಾಲಿಯಾದ ಐಶ್ವರ್ಯ ಯುಗವಾಯಿತು. ಅವರು ತಮ್ಮ ರಂಗಭೂಮಿಗಾಗಿ ನಾಟಕಗಳಿಗಾಗಿ ಇತಿ ಮಿತಿ ಎಣಿಸದೆ ವೆಚ್ಚ ಮಾಡಿ ಭಾರಿ ಸಾಲ ಮಾಡಿಕೊಂಡರು. ಪೌರಾಣಿಕ ನಾಟಕಗಳಲ್ಲಿ ಕಿರೀಟ ಕುಂಡಲಾದಿ ರೋಲ್ಡಗೋಲ್ಡ ರಚಿತ. ಅವರಿಗೆ ಅತ್ತರುಗಳ ವಿಪರೀತ ಹವ್ಯಾಸ. ಒಮ್ಮೊಮ್ಮೆ ೫೦೦-೬೦೦ ರೂ. ಅತ್ತರುಗಳ ಖರೀದಿ. ಬಾಲಗಂಧರ್ವರು ರಂಗಪ್ರವೇಶ ಮಾಡಿದರೆಂದರೆ ಥಿಯೇಟರ ತುಂಬ ಅತ್ತರ್ ಪರಿಮಳ ತೂರಿಬರುತ್ತಿತ್ತು. ಸೌಂದರ್ಯ-ಸಂಗೀತ ಅಭಿನಯ ಸುಗಂಧ ಇವುಗಳ ಅದ್ಭುತ ಸಂಯೋಗ ಬಾಲಗಂಧರ್ವರ ರಂಗಭೂಮಿ. ಸುಪ್ರಸಿದ್ಧ ತಬಲಾ ಪಟು ತಿರಖ್ವಾ ಅವರ ತಬಲಜೀ. ಅಲ್ಲಾದಿಯಾಖಾನ್‌ರಂಥ ಶ್ರೇಷ್ಠ ಗಾಯಕರೂ ಬಾಲಗಂಧರ್ವರ ಸ್ವರ ಮಾಧುರ್ಯಕ್ಕೆ ಸ್ವರ ಶುದ್ಧಿಯ ಸಾಧನೆಗೆ ಲುಬ್ಧರು! ಬಾಲಗಂಧರ್ವರ ಗದ್ಯವೂ ಅಷ್ಟೇ ಮಧುರ-ಮೋಹಕ.

ಬಾಲಗಂಧರ್ವರಿಗೂ ಬಡೋದೆಯ ಗಾಯಕವಾಡರ ಆಶ್ರಯವಿತ್ತು. ವರ್ಷಕ್ಕೆ ಒಮ್ಮೆ ಅವರು ಬಡೋದೆಯಲ್ಲಿ ಕ್ಯಾಂಪು ಮಾಡಿದಾಗ ಅರಮನೆಯಲ್ಲಿ ನಾಟಕಗಳನ್ನು ಆಡಬೇಕಿತ್ತು. ಒಮ್ಮೆ ಅರಮನೆಯಲ್ಲಿ ಅರಸಿನ ಕುಂಕುಮ. ರಾಣಿವಾಸದಲ್ಲಿ ಸಂಭ್ರಮ. ಸರದಾರ ಕುಲದ ಗರತಿಯರೆಲ್ಲ ಅಭ್ಯಾಗತರು. ಅವರಿಗೆ ಹೊರಟು ಹೋಗುವ ಮುನ್ನ ಮಹಾರಾಜರಿಂದಲೇ ಉಡುಗೊರೆ. ಹಾಗೆ ಉಡುಗೊರೆಯನ್ನು ಮಹಾರಾಜರು ಕೈಯೆತ್ತಿ ಕೊಡುವಾಗ ಅದು ಜಾರಿ ಕೆಳಗೆ ಬಿತ್ತು. ಆಗ ಆ ಕುಲೀನ ರೂಪವತಿಯಾದ ತರುಣಿ ಅದನ್ನೆತ್ತಿಕೊಂಡು-ಬಾಗುವಾಗ ಅವಳ ಎದೆ ಸೆರಗೂ ಜಾರಿ ಬಿತ್ತು ! ಅದನ್ನು ಸಾವರಿಸಿಕೊಂಡು ನಾಚಿ ನಕ್ಕು ಬಳಕುತ್ತ ಹೊರಟು ಹೋದಳು. ಮಹಾರಾಜರಿಗೆ ತುಂಬ ಕುತೂಹಲ. "ಅವಳು ಯಾರು?" ಮಹಾರಾಣಿ ಹೇಳಿದಳು.

"ಅರೇ! ಗೊತ್ತಾಗಲಿಲ್ಲವೇ? ಅವರು ಬಾಲಗಂಧರ್ವರು!" ಅಂದು ಬಾಲಗಂಧರ್ವರು ಒಡ್ಡ ಗೆದ್ದಿದ್ದರು. ರಂಗದ ಹೊರಗೂ ಉಚ್ಚವರ್ಗದ ಸುಂದರಿಯರ ನಡುವೆ ಹೋಗಿ ಒಡನಾಡಿ ತಾನೂ ಅಂಥ ಹೆಣ್ಣೆಂದು ಎಣಿಸಿಕೊಂಡು ಬರುವೆನೆಂದು!

ಒಮ್ಮೆ ಹೈದರಾಬಾದಿನಲ್ಲಿ ಗಂಧರ್ವ ಕಂಪೆನಿಯ ನಾಟಕ. ನಾಟಕಕ್ಕೆ ನಿಜಾಮರೇ ಬರುವವರಿದ್ದರು. ನಾಟಕ ಆರಂಭವಾಗಿ ಮುಂದುವರಿಯಿತು. ನಡುವೆಯೇ ನಿಜಾಮರು ರಂಗಮಂದಿರದಲ್ಲಿ ಬಂದರು. ಆಗ ರಂಗದಲ್ಲಿ ಬಾಲಗಂಧರ್ವರ ಪಾತ್ರನಿಂತು ಹಾಡುತ್ತಿತ್ತು. ನಿಜಾಮರು ಸಂಗೀತ ಪ್ರೇಮಿಗಳು (ಉರ್ದು ಕವಿಗಳೂ ಆಗಿದ್ದರು). ಅವರು ಗಂಧರ್ವರ ಹಾಡು ಕೇಳುತ್ತ ನಿಂತೇ ಬಿಟ್ಟರು. ಕೂತುಕೊಳ್ಳಲು ಮರೆತೇಬಿಟ್ಟರು. ನಿಜಾಮರು ಒಳಗೆ ಬರುವಾಗ ಗೌರವ ತೋರಿಸಲು ಎದ್ದುನಿಂತ ಪ್ರೇಕ್ಷಕ ಸ್ತೋಮವೂ ನಿಂತೇ ಉಳಿಯಿತು-ಬಾಲಗಂಧರ್ವರ ಹಾಡು ಮುಗಿಯುವ ತನಕ!

ಮಹಾರಾಷ್ಟ್ರದ ರಸಿಕ ಜನತೆ ಬಾಲಗಂಧರ್ವರನ್ನು ಕೊನೆತನಕವೂ ಹೆಗಲ ಮೇಲೆ ತಲೆಯ ಮೇಲೆ ಎತ್ತಿಕೊಂಡು ಕುಣಿದಾಡಿತು. ಇಂದು ಸಿನೇಮಾ ತಾರೆಯರಂತೆ ಬಾಲಗಂಧರ್ವರೇ ಅಂದಿನ ಶಾಲಾ ಕಾಲೇಜು ಯುವಕ ಯುವತಿಯರಿಗೆ ಫ್ಯಾಶನ್ನಿನ ಮೋಡಲು. ಅವರ ಕೇಶ ರಚನೆ, ಅವರ ನಡೆ ನುಡಿಯ ವಯ್ಯಾರ, ಒನಪು. ಅವರ ಸೀರೆ ಕುಪ್ಪಸಗಳ ಮಾದರಿ. ಅವರ ಫರಕ್ಯಾಪ್ ಲಂಡಚಣ್ಣ. ಅರ್ಧ ಶರ್ಟು-ಎಲ್ಲದರ ಅನುಕರಣದೊಂದಿಗೆ ತರುಣ ಪ್ರಪಂಚದ ಕೋಣೆ ಕೋಣೆಯಲ್ಲಿ ಅವರ ವಿವಿಧ ಭಂಗಿಗಳ ಫೋಟೋ!

ಆದರೆ ಬಾಲಗಂಧರ್ವರ ಜನಪ್ರಿಯತೆ, ಸಂಗೀತಾಭಿನಯಗಳ ಖ್ಯಾತಿ ಹೆಚ್ಚಿದಂತೆ ಅವರ ವಯೋಮಾನವೂ ಹೆಚ್ಚುತ್ತಿತ್ತು. ಮೈಯೂ ಸ್ಥೂಲವಾಗತೊಡಗಿತ್ತು. ಹಾಡುವಾಗ ತೀವ್ರ ಕೆಮ್ಮು ಬರುತ್ತಿತ್ತು. ಆದಾಗ್ಯೂ ಜನ ಅದನ್ನೆಲ್ಲ ಕ್ಷಮಿಸಿ ಅದರಲ್ಲಿ ಹಿಂದಿನ ಹಳೆಯ ಬಾಲಗಂಧರ್ವರನ್ನೆ ನೋಡುತ್ತಿದ್ದರು. ಅವರ ದಿವ್ಯ ಕಂಠಕ್ಕೆ ಯಾವ ಕಂದೂ ಇದ್ದಿಲ್ಲ. ತುಸು ಪ್ರೌಢರಾಗಿ ಕಂಡರೂ ರೂಪ ಸುಂದರಿಯಾಗಿಯೇ ಅವರ ಸ್ತ್ರೀ ಪಾತ್ರ ಒಪ್ಪುತ್ತಿತ್ತು.

ಇತ್ತ ದುಂದುವೆಚ್ಚದಿಂದ ಕಂಪೆನಿಯ ಸಾಲದ ಭಾರ ಹೆಚ್ಚಾಯಿತು. ಅವರ ತಮ್ಮನೇ ವ್ಯವಸ್ಥಾಪಕರು. ಬಾಲಗಂಧರ್ವರು ತುಂಬ ಸರಳ, ಭಾವ ಪರವಶ. ಖಾಸಗಿಯಲ್ಲಿ ನಿರಾಡಂಬರ. ಆದರೆ ಕಂಪೆನಿಯ ರಂಗಸಜ್ಜಿಕೆಯ, ನಟವರ್ಗದ ವ್ಯವಸ್ಥೆ ಸುಖ ಸೌಕರ್ಯವೆಲ್ಲ ಯಾವಾಗಲೂ ಮೇಲ್ಮಟ್ಟದ್ದು. ಅದಕ್ಕಾಗಿ ದುಂದು ವೆಚ್ಚ ಸಾಲಿಸಿಟರ್ ಲಾಡ್ ಅವರ ಕಾಯಿದೆಯ ಸಲಹೆಗಾರರು ಮತ್ತು ಭಕ್ತರು ಹಾಗೆಯೇ ನ್ಯಾಯಾಧೀಶ ವಸಂತ ದೇಸಾಯಿ (ಇವರ ನಾಟಕಗಳನ್ನು ಗಂಧರ್ವರು ಆಡುತ್ತಿದ್ದರು. ಗಂಧರ್ವರ ಚರಿತ್ರೆಯನ್ನೂ "ಮುಖಮಲೀ ಚಾಪಡದಾ" ಎಂಬ ರಂಗ ಭೂಮಿಯ ಚರಿತ್ರೆಯನ್ನೂ ಇವರು ಬರೆದಿದ್ದಾರೆ). ಕಂಪೆನಿಯ ಸಾಲ ತೀರಿಸುವ ತನಕ ಅದರ ಚಾಲನೆ ಲಾಡರ ವಶಕ್ಕೆ ಒಪ್ಪಿಸಬೇಕಾಯಿತು-ಬಾಲಗಂಧರ್ವರ ಪ್ರತಿಷ್ಠೆಗೆ ಏನೂ ಕುಂದುಬರದಂತೆ! (ನಾರಾಯಣ ರಾವ್‌ರು ತುಂಬ ಲಹರಿ ಮತ್ತು ಸ್ವಾಭಿಮಾನಿ ಆಗಿದ್ದರು).

ಇದೇ ಸುಮಾರಿಗೆ ಸ್ವರಾಜ್ಯ ಫಂಡಿಗಾಗಿ ಬಾಲಗಂಧರ್ವ ಮತ್ತು ಕೇಶವ ರಾವ್ ಭೋಸಲೆ ಇವರ ಸಂಯುಕ್ತ "ಮಾನಾಪಮಾನ"ದ ೨ ಪ್ರಯೋಗಗಳು ಅತ್ಯಂತ ಯಶಸ್ವಿಯಾದವು. ಆಗ ಕೇಶವ ರಾವ್ ಭೋಸಲೆ ಲಲಿತಕಲಾದರ್ಶ ಕಂಪೆನಿಯ ಒಡೆಯ ಮತ್ತು ಖ್ಯಾತ ಗಾಯಕ ನಟ ಬಾಲಗಂಧರ್ವರಿಗೆ ಅಭಯವಿತ್ತರು. "ಹೆದರಬೇಡಿ, ನಾರಾಯಣ ರಾವ್, ಹೀಗೆ ಇನ್ನು ಕೆಲವು ಸಂಯುಕ್ತ ಆಟಗಳನ್ನು ಆಡೋಣ. ನಿಮ್ಮ ಸಾಲ ತೀರಿಸೋಣ!" ಆದರೆ ಕೇಶವರಾವ್ ತೀರಿಕೊಂಡರು. ಮುಂದೆ ಗಂಧರ್ವ ಕಂಪೆನಿಯನ್ನು ನಿಲ್ಲಿಸಿ ಬಾಲಗಂಧರ್ವರನ್ನು ನಾಯಕ(ಕಿ)ರನ್ನಾಗಿ ಮಾಡಿ ಕೆಲವು ಸಂತ ಚಿತ್ರಪಟಗಳನ್ನು ನಿರ್ಮಿಸುವ ಯೋಜನೆಯನ್ನು ಪ್ರಭಾತ ಫಿಲ್ಮ್ ಕಂಪೆನಿಯ ವಿ. ಶಾಂತರಾಮರು ಹೂಡಿದರು. (ಬಾಲಗಂಧರ್ವರು ಅತ್ಯಂತ ಭಾವಿಕರು. ಕಂಪೆನಿಯಲ್ಲಿ ಯಾವಾಗಲೂ ಭಜನೆ ನಡೆಯುತ್ತಿತ್ತು. ಅಲ್ಲದೆ ಮೀರಾಬಾಯಿಯ ಕುರಿತು "ಅಮೃತ ಸಿದ್ಧಿ" ಮತ್ತು "ಸಂತ ಕಾನ್ಹೋಪಾತ್ರಾ" ನಾಟಕಗಳು ಅವುಗಳಲ್ಲಿಯ ಭಕ್ತಿಗೀತೆಗಳಿಂದಲೇ ಖ್ಯಾತಿವೆತ್ತಿದ್ದವು.) ಏಕನಾಥರ ಬಗೆಗೆ "ಧರ್ಮಾತ್ಮಾ" ಚಿತ್ರ ಹೊರ ಬಂತು. ಅಷ್ಟು ಯಶಸ್ವಿಯಾಗಲಿಲ್ಲ. ಬಾಲಗಂಧರ್ವರು ಗಂಡು ಪಾತ್ರ ಮಾಡಿದ್ದೇ ಇದ್ದಿಲ್ಲ. ಜನ ಅವರನ್ನು ಒಪ್ಪಿ ಕೊಳ್ಳಲಿಲ್ಲ. ಅಲ್ಲದೆ ಸಾವಿರಾರು ಪ್ರೇಕ್ಷಕರ ಇದಿರು ಅಭಿನಯಿಸುವ ಈ ಹಿರಿಯ ನಟನಿಗೆ ನಿರ್ಜೀವ ಕ್ಯಾಮರಾದ ಮುಂದೆ ನಟಿಸುವುದು ಸೇರಲಿಲ್ಲ. ಸಾಧಿಸಲೂ ಇಲ್ಲ. ವಿ. ಶಾಂತರಾಮರ ಯೋಜನೆ ಕುಸಿದು ಬಿತ್ತು.

ಅತ್ತ ಬಾಲಗಂಧರ್ವರ ವೈಯಕ್ತಿಕ ಜೀವನವೂ ಕುಸಿಯಿತು. ಆಗಲೆ ಅವರು ತಮ್ಮ ತರುಣ ಸ್ತ್ರೀ ಭೂಮಿಕೆಗಳನ್ನು ವಹಿಸಲಿಕ್ಕೆ ಬಿಜಾಪುರದ ಶ್ರೀಮತಿ ಗೋಹರ ಕರ್ನಾಟಕಿಯನ್ನು ಕಂಪೆನಿಯಲ್ಲಿ ತಂದಿದ್ದರು. (ಗೋಹರಬಾಯಿಯುವರ ಒಂದು ಕನ್ನಡ ರೆಕಾರ್ಡ್ "ನಾ ಪೇಳುವೇ ನಿನಗೊಂದುಪಾಯಾ" ಕರ್ನಾಟಕದಲ್ಲಿ ಬಹಳ ಜನಪ್ರಿಯವಾಗಿತ್ತು. ಇದರ ಮೂಲ ಧಾಟಿ ಗಂಧರ್ವರ "ಸಾವಿತ್ರಿ" ನಾಟಕದ್ದು. "ತೇಜಾ ನಭೀಯಾ ಸಾಹವೇನಾ" ಲೋಂಢೇ ಹಾಡಿದ್ದು). ಕ್ರಮೇಣ ಗೋಹರಬಾಯಿ ನಾರಾಯಣ ರಾವ್‌ರ ವಿಶ್ವಾಸಕ್ಕೆ, ಪ್ರೇಮಕ್ಕೆ ಪಾತ್ರಳಾದಳು. ಕಂಪೆನಿಯ ಪಾಲುಗಾರ್ತಿಯೂ ಆಗಿರಬೇಕು. ಅವರೀರ್ವರ ವಿವಾಹವೂ ಆಯಿತು. ಇದರಿಂದ ಅವರ ಕುಟುಂಬದವರು-ಹೆಂಡತಿ ಹೆಣ್ಮು ಮಕ್ಕಳು ಅವರಿಂದ ದೂರವಾದರು.

ಅವರ ಕೊನೆಯ ಬದುಕು ಗೋಹರ ಬಾಯಿಯ ಆರೈಕೆಯಲ್ಲಿಯೇ ಕಳೆಯಿತು. ಕಂಪೆನಿಯ ಕತೆ ಎಂದೋ ಮುಗಿಯಿತು. ದಿನಾಲೂ ಗಂಟೆಗಟ್ಟಲೆ ವರ್ಷಗಟ್ಟಲೆ ನಿಂತೇ ಹಾಡುತ್ತ ಮುದುಕರಾಗುತ್ತಿದ್ದ ಬಾಲಗಂಧರ್ವರ ಕಾಲುಗಳು ಸತ್ವವನ್ನು ಕಳೆದುಕೊಂಡವು. ಅಲ್ಲಲ್ಲಿ, ನಡೆಯುವ ಅವರ ರಂಗಗೀತಗಳ ಹಾಗೂ ಭಜನೆಗಳ ಕಾರ್ಯಕ್ರಮಕ್ಕೆ ಅವರನ್ನು ಎತ್ತಿ ಒಯ್ದು ಕೂಡ್ರಿಸ ಬೇಕಾಗುತ್ತಿತ್ತು. (ಕಂಪೆನಿ ನಡೆಯುತ್ತಿದ್ದಾಗಲೂ ಅವರ ಭಜನೆ ಕಾರ್ಯಕ್ರಮಗಳು ಹೆಸರಾಗಿದ್ದವು. ಕಾರವಾರಕ್ಕೆ ಬಂದಾಗ ಅಂಥ ಒಂದು ಭಜನಾ ಪ್ರಸಂಗ ಗೋಕರ್ಣದ ಮಹಾಬಲೇಶ್ವರ ದೇವಸ್ಥಾನದಲ್ಲಿ ಅವರು ನೀಡಿದ್ದರು. ಅವರು ಅಂದು ೨೦ ವರ್ಷಗಳ ಹಿಂದೆ ಹಾಡಿದ "ಅವಘಾಚಿ ಸಂಸಾರ ಸುಖಾಚಾಕರೀನ" ಅಭಂಗವು ಇಂದಿಗೂ ನನ್ನ ಕಿವಿಯಲ್ಲಿ ಸ್ವರಾಲಯ ಮಾಧುರ್ಯಸಂಪನ್ನವಾಗಿ ಮೊಳಗುತ್ತಿದೆ!)

ಸಾಯುವ ಮುನ್ನ ಅವರು ೧೦೦ ದಿನ ಪ್ರಜ್ಞೆ ಇಲ್ಲದೆ ಬಿದ್ದಿದ್ದರು. ಮಹಾರಾಷ್ಟ್ರದ ಈ ಅಚ್ಚುಮೆಚ್ಚಿನ ಮುದ್ದಿನ ನಟ ಸಮ್ರಾಟನ ಎಂಥ ಬಾಳಿಗೆ ಎಂಥ ಕೊನೆ! ಸಂಪ್ರದಾಯ ಬದ್ಧವಾದ ಅವರ ಬ್ರಾಹ್ಮಣ ಸಮಾಜದ ಕಣ್ಣಿನಲ್ಲಿ ಅವರ ಒಂದೇ ಒಂದು ಘೋರ ಅಪರಾದ - ಗೋಪರ ಕರ್ನಾಟಕಿಯನ್ನು ಮದುವೆಯಾದದ್ದು. ಆಕೆ ಮುಸ್ಲಿಂ ಹೆಂಗಸು!.... ಆದರೆ ಅದೆಲ್ಲ ಇಂದು ಮಣ್ಣುಪಾಲು. ಮರವಿನ ಹುಳು. ಇಂದು ಅವರಿಗೆ ಸ್ಮಾರಕ ಪೂಣೆಯಲ್ಲಿ ನಿಂತ ಬಾಲಗಂಧರ್ವ ರಂಗಮಂದಿರ ಮತ್ತು ಸದ್ಯ ಮಹಾರಾಷ್ಟ್ರದಾದ್ಯಂತ ರಾಜ ಶಾಸನದ ಪುರಸ್ಕಾರದಿಂದ ವಿಜೃಂಭಣೆಗೊಳ್ಳುತ್ತಿರುವ ಅವರ ಜನ್ಮಶತಾಬ್ಧದ ಉತ್ಸವ. ನಮಗೆ ಅವರ ಮರಣಕ್ಕಿಂತ ಜೀವನ ಮುಖ್ಯ. ಉತ್ತರಕರ್ನಾಟಕದ ರಂಗಭೂಮಿಯಲ್ಲಿ ಸ್ತ್ರೀ ಭೂಮಿಕೆಗಳಿಗೂ ಅವುಗಳ ರಂಗಗೀತಗಳಿಗೂ ಬಾಲಗಂಧರ್ವರೇ ಜೀವದುಸಿರು. ಅವರ ಹಾಡಿನ ಆಶ್ವಾಸನೆ ಇದು. "ಅವಘಾಚಿ ಸಂಸಾರ ಸುಖಾಚಾಕರೀನ ಆನಂದೇ ಭರೀನ ತೀನ್ಹೀ ಲೋಕ!"

●

(ಉದಯವಾಣಿ, ೨೫-೯-೧೯೮೮)

# ಯಕ್ಷಗಾನ ಬಯಲಾಟದ ಮೂಲ ಗೊಂಬೆಯಾಟ?

ಈ ವಿಷಯವನ್ನು ಕುರಿತು ನಾನು ಅರವತ್ತರ ದಶಕದಲ್ಲಿ ಹೊನ್ನಾವರದ 'ಶೃಂಗಾರ" ಮಾಸಿಕದ ಒಂದು ಸಂಚಿಕೆಯಲ್ಲಿ ಒಮ್ಮೆ ಬರೆದಿದ್ದೆ. ಆಗಲೂ ನನ್ನ ಈ ಪ್ರಮೇಯವನ್ನು ಈ ಕಲಾಕ್ಷೇತ್ರದ ತಜ್ಞರು ಯಾರೂ ಹೆಚ್ಚಾಗಿ ಗಮನಿಸಿದಂತೆ ಅನಿಸಿದ್ದಿಲ್ಲ. ಈಗಲೂ ಅದೇ ಬಗೆಯ 'ಸ್ವಾಗತ' ಈ ಪ್ರಬಂಧಕ್ಕೂ ಸಿಗುವ ಸಾಧ್ಯತೆ ಇದೆ. ಆದಾಗ್ಯೂ ಈ ಒಂದು ಸಂದರ್ಭವನ್ನು ಸಾಧಿಸಿ ಈ ಪ್ರಮೇಯವನ್ನು, ಅಂದಿನಿಂದ ಹೆಚ್ಚು ವಿಶಾಲವಾದ ವಾಚಕವಲಯದ ಕಣ್ಣಿಗೆ ಬೀಳಬಹುದೆಂಬ ಹಾರೈಕೆಯಿಂದ ಇಲ್ಲಿ ಇನ್ನೊಮ್ಮೆ ಪ್ರಸ್ತಾಪಿಸುತ್ತಿದ್ದೇನೆ.

ಯಕ್ಷಗಾನ ಬಯಲಾಟ ಒಂದನ್ನು ಒಂದೊಂದು ಸಲ ಹೊರಗಿನಿಂದ ಹೊಸತಾಗಿ, ಹೆರವನಾಗಿ ನೋಡಿದಾಗ ನನಗೆ ತಟಕ್ಕನೆ ಹೊಳೆದ ಪ್ರಶ್ನೆಯಿದು: ಯಕ್ಷಗಾನ ವೇಷ, ಭಾಷೆ, ಹಾವ-ಭಾವ, ಆರಂಭದಲ್ಲಿ ಆಡುವ ಈ ಆಖ್ಯಾನಗಳ ಒಟ್ಟಂದದ ಸ್ವರೂಪ, ಆ ಪಾತ್ರಗಳ, ಅಲ್ಲ ವೇಷಧಾರಿಗಳ ರಂಗಪ್ರವೇಶ, ನಿಷ್ಕ್ರಮಣ, ಕಾಳಗ, ಕುಣಿದಾಟ, 'ಪೀಠಿಕಾಸಂಧಿ'ಗಳು, ನೇಪಥ್ಯವಿಧಾನದ ಕೆಲವೊಂದು ಕೊರತೆಗಳು, ಅಲಂಕಾರಗಳ ಕೆಲವೊಂದು ವೈಶಿಷ್ಟ್ಯಗಳು-ಇವೇ ಮುಂತಾದ ಅಂಶಗಳನ್ನು ಮತ್ತೆ ಮತ್ತೆ ಮಾರ್ಮಿಕವಾಗಿ ನೋಡಿ ಮನಗಂಡಾಗ ನನ್ನ ಮಟ್ಟಿಗೆ ಪ್ರಮೇಯದ ಇತ್ಯರ್ಥ ಇನ್ನಿಷ್ಟು ಮನದಟ್ಟಾಗುತ್ತಲೇ ಹೋಯಿತು. ಈ ಪ್ರಮೇಯ (Hypothesis) ಅಂದರೆ, ಯಕ್ಷಗಾನ ಬಯಲಾಟವು ಮೂಲತಃ ಗೊಂಬೆಯಾಟದಿಂದ ಎತ್ತಿಕೊಂಡ ಒಂದು ನೃತ್ಯನಾಟ್ಯ ರೂಪಕ ವಿಧಾನ. ಅಲ್ಲಿ ತೆರೆಯ ಮರೆಯಿಂದ 'ಸೂತ್ರಧಾರ'ನು ಕುಣಿದಾಡಿಸುವ ನಿರ್ಜೀವ ಗೊಂಬೆಗಳೇ ಇಲ್ಲಿ ಭಾಗವತನ ಸಂಚಾಲನೆಯಲ್ಲಿ ಸಜೀವವಾಗಿ ಕುಣಿದಾಡುತ್ತವೆ.

(ನಮ್ಮ ಸಂಸ್ಕೃತ ನಾಟಕಗಳಲ್ಲಿಯಂತೂ ತೆರೆಯ ಮರೆಯ 'ಸೂತ್ರಧಾರ' 'ನಾಂದ್ಯಂತ'ದಲ್ಲಿ ರಂಗದಲ್ಲಿಯೇ ಬಂದು ನಾಟಕದ ಪ್ರಸ್ತಾವನೆಯನ್ನು ಆಡುತ್ತಾನೆ.) ಯಕ್ಷಗಾನ ಬಯಲಾಟದಲ್ಲಿ ತೆರೆಯ ಮರೆಯ ವೇಷಗಳೇ ಒಂದೊಂದಾಗಿ ತೆರೆಯ ಮುಂದೆ ಬಂದು ಕುಣಿಯುತ್ತವೆ. ಈ ರಂಗಪ್ರವೇಶವೂ ಈ ಜೀವಂತ ಗೊಂಬೆಗಳ ಮಟ್ಟಿಗೆ 'ತೆರೆಮರೆಯ ಕುಣಿತ'ವೆಂಬ ವಿಶಿಷ್ಟ ನೃತ್ಯಪ್ರಕಾರವೇ ಆಗಿ ರೂಢಿಗೊಂಡಿದೆ.

ಡಾ। ಶಿವರಾಮ ಕಾರಂತರು ಯಕ್ಷಗಾನ ಬಯಲಾಟಕ್ಕೆ ದೇಶ-ವಿದೇಶಗಳ ರಂಗಪ್ರದರ್ಶನದ ಕಲಾಪ್ರಪಂಚದ ನಕಾಶೆಯಲ್ಲಿ ಒಂದು ಶಾಶ್ವತ ಸ್ಥಾನವನ್ನು ಕಲ್ಪಿಸಿ ಕೊಟ್ಟ ಆಚಾರ್ಯ ಪುರುಷರು. ಕಥಕ್ಕಲಿಗೆ ವಲ್ಲೊಥೊಲ್ ಇದ್ದಂತೆ ಯಕ್ಷಗಾನ ಬಯಲಾಟಕ್ಕೆ ನಮ್ಮ ಡಾ। ಕಾರಂತರು. ಅವರು ಈ ಕಲೆಯ ಕುರಿತು ಪ್ರಕಟಿಸಿದ ಉದ್ಗ್ರಂಥದಲ್ಲಿ, ಗೊಂಬೆಯಾಟ ಬಯಲಾಟದ ಅನುಕರಣವೆಂದೇ ಹೇಳಿದ್ದಾರೆ. ಆದರೆ ನನ್ನ ಅಲ್ಪ ಅನಭಿಜ್ಞಮತಿಗೆ ಇದು ಏಕೋ ಹಿಡಿಸದು. ಈ ನಾಟ್ಯರೂಪದ ವಿಕಾಸಕ್ರಮದಲ್ಲಿ ವಸ್ತುಸ್ಥಿತಿಯು ತದ್ವಿರುದ್ಧವೇ ಇದ್ದಿರಬೇಕೆಂದು ನನ್ನ ಗ್ರಹಿಕೆ.

ಈ ಬಯಲಾಟಗಳು ಹಿಂದೊಮ್ಮೆ 'ದಶಾವತಾರ'ದ ಆಟಗಳೆಂದು ಪ್ರಸಿದ್ಧವಿದ್ದವು. ನಮ್ಮ ಬಾಲ್ಯದಲ್ಲಿ ನಮ್ಮ ಊರಿನಲ್ಲಿ ಶಿವರಾತ್ರಿಯ ಜಾತ್ರೆಗೆ 'ತೆಂಕಲಾಗಿನ' ದಶಾವತಾರ ಮೇಳಗಳು ಆಟ ಆಡಲು ಬರುತ್ತಿದ್ದವು. ಗೊಂಬೆಯಾಟಗಳಿಗೂ ಇದೇ 'ದಶಾವತಾರ'ಗಳ ಕಥೆಗಳೇ ನಾಟ್ಯವಸ್ತು. ನಮ್ಮಲ್ಲಿ ಹಿಂದಿನಿಂದಲೂ ಇಂದು 'ತಾಳಮದ್ದಳೆ' ಎಂಬ ವಾಚಿಕ ಪ್ರಯೋಗಕ್ಕೆ 'ಯಕ್ಷಗಾನ ಪ್ರಸಂಗ'ವೆಂದೂ ಬಯಲಾಟಗಳಿಗೆ 'ದಶಾವತಾರದಾಟ'ವೆಂದೂ ಕರೆಯುವ ವಾಡಿಕೆ ಇತ್ತು. (ದಕ್ಷಿಣ ಕನ್ನಡದಲ್ಲಿ ಈ ದಶಾವತಾರ ಆಟಕ್ಕೇ 'ಯಕ್ಷಗಾನ ಬಯಲಾಟ'ವೆಂದು ಕರೆಯುವ ಸಂಪ್ರದಾಯ ಎಂದಿನಿಂದ ಇತ್ತೋ ಗೊತ್ತಿಲ್ಲ.) ನಮ್ಮಂಥ ಪರಿಷ್ಕೃತ ನಾಟ್ಯರಸಿಕರ ಚಿತ್ತವನ್ನು ಈ ದಶಾವತಾರ ಮೇಳಗಳ ರಂಗಪ್ರದರ್ಶನಗಳು ಸೆಳೆದದ್ದು ಡಾ।.ಕಾರಂತರ ಸುಪ್ರಸಿದ್ಧ ಗ್ರಂಥ 'ಯಕ್ಷಗಾನ ಬಯಲಾಟ' ಎಂಬ ಹೆಸರನ್ನು ತಾಳಿಯೇ. ಆದರೆ ದಕ್ಷಿಣ ಕನ್ನಡದಲ್ಲಿ 'ಬಯಲಾಟ' ಶಬ್ದ ಪ್ರಾಕ್ಕಿನಿಂದಲೂ ಪ್ರಚಲಿತವಿರಬೇಕು. ಈ ಹೆಸರನ್ನು ಸ್ವಲ್ಪ ಸಮೀಕ್ಷಿಸೋಣ: 'ಬಯಲಾಟ'ವೆಂದರೆ ಬಯಲಲ್ಲಿ ನಡೆಯುವ ಆಟ, ಆಡುವ ರೂಪಕ, ಅಂದರೆ ಬಯಲಲ್ಲದೆ ಅಂಗಳದಲ್ಲಿಯೋ ಪೌಳಿಯಲ್ಲಿಯೋ! ಮುಚ್ಚಿಸ, ಮರೆಯುಳ್ಳ ಸ್ಥಳದಲ್ಲಿಯೋ ಆಟ ನಡೆಯುತ್ತಿತ್ತು. ಅದು ಬಯಲಿಗೆ ಬಂದಿತು-ಎಂಬರ್ಥ ಇಲ್ಲಿ ಸೂಚಿತವಿದೆ. ಈ ಒಳಗೆ, ಪರಿಮಿತ ಸ್ಥಳದಲ್ಲಿ ನಡೆಯುತ್ತಿದ್ದ ಆಟ ಯಾವದು? ಆಡಿಸುವವರಾರು? ಆಟಿಗ (ಆಟಿಗೆ?) ಯಾರು? ಏನು?

ಅಕಬರನು ಫತ್ತೇಪುರ ಸಿಕ್ರಿ ಎಂಬ ಭವ್ಯ ರಾಜಧಾನಿ ನಗರ ಕಟ್ಟಿಸಿ ಮುಂದೆ ಅದನ್ನು ಹಾಗೆಯೇ ಬಯಲಿಗೆ ಬಿಟ್ಟನು. ಆ ರಾಜಧಾನಿಯಲ್ಲಿ ಒಂದು ವಿಶಾಲ ಸಭಾಮಂಟಪವಿದೆ. ಅಲ್ಲಿಯ ನೆಲವೆಂದರೆ ಆ ಮುಗಲ್ ದೊರೆ ಆಡಲು ಸಿದ್ಧ ಮಾಡಿದ ಚದುರಂಗದ ವಿಸ್ತೀರ್ಣವಾದ ಪಟ. ಅಂದರೆ ಅಲ್ಲಿ ದೊರೆ ಮೇಲೆ ಅಟ್ಟಲಿಕೆಯಲ್ಲಿ ಕುಳಿತು ಆ ಪಟದಲ್ಲಿ ಚದುರಂಗ ಆಡುವ ಏರ್ಪಾಟವಿತ್ತು. ಅದೆಂಥ ಚದುರಂಗ? ಈ ಆಟದ ದಂತದ ಇಲ್ಲವೇ ಲೋಹದ ಆನೆ, ಕುದುರೆ,

ಪೇದೆಗಳ ಬದಲು ನಿಜವಾದ ಜೀವಂತ ಆನೆ, ಕುದುರೆ, ಪೇದೆಗಳನ್ನೇ ಅಲ್ಲಲ್ಲಿ ನಿಲ್ಲಿಸಿ ಆತ ಆಟವಾಡುತ್ತಿದ್ದ! ಗೊಂಬೆಯಾಟ ಬಯಲಾಟದ ರೀತಿಯೂ ಬಹುಶಃ ಹೀಗೆಯೇ ಎಂದು ನನ್ನ ಊಹೆ.

ಬಯಲಾಟದ ಯಾವುದೇ ವೇಷವನ್ನು ಅದರ ಉಡಿಗೆ ತೊಡಿಗೆಗಳಿಂದ ಒಮ್ಮೆಲೇ ಅನಿಸುವದೇನು? ಅದರ ಕಿರೀಟ, ಪೂಗಡೆ (ಮುಂಡಾಸ), ಭುಜಕೀರ್ತಿ, ಎದೆಯ ಅಲಂಕಾರ ಇತ್ಯಾದಿ ಆಯಾ ದೇಹದ ಅಂಗಾಂಗಗಳಿಂದ ಪ್ರತ್ಯೇಕವಾಗಿ ಕಾಣುವದಿಲ್ಲ. ಆ ಒಡವೆಗಳೊಂದಿಗೇ ಆ ವೇಷ ಆಳೆತ್ತರದ ಪ್ರತಿಮೆಯನ್ನೇ ಕೊರೆದು ಕೆತ್ತಿ ನಿಲ್ಲಿಸಿದಂತೆ ಭಾಸವಾಗುವದು. ಅಂದರೆ ಮೂಲತಃ ಗೊಂಬೆಯಲ್ಲಿ ಕೆತ್ತಿದ ವಸ್ತ್ರ ಒಡವೆಗಳ ಪಡಿಯಚ್ಚನ್ನೇ ದೊಡ್ಡ ಆಯ ಆಕಾರದಲ್ಲಿ ಪುರುಷ ಪ್ರಮಾಣಕ್ಕೆ ಹೊಂದಿಸಿ ಸಜ್ಜು ಮಾಡಿಕೊಂಡಂತಯೇ ಅನಿಸುವದು. ಇದೂ ಸಾಲದಂತೆ ಇವೆಲ್ಲ ಭೂಷಣಗಳು ಮರದಿಂದ ತಯಾರಿಸಿದ ಚಿನ್ನ! ಮೈಗಂಟಿಕೊಂಡೇ ಇರುವಂತೆ ಬಟ್ಟೆಯ ಅಟ್ಟೆಗಳಿಂದ ಎದೆಕಟ್ಟುಗಳಿಂದ ರಚಿಸಿದ ಅಲಂಕಾರ, ಮುಡಿಯಿಂದ ಅಡಿಯ ವರೆಗೂ ಈ ವೇಷಭೂಷೆಯು ಒಂದು ಅಖಂಡ ರೇಖಾ ವಿನ್ಯಾಸವನ್ನು, ಆಕೃತಿಯ ಶಿಲ್ಪವನ್ನೇ ಕಣ್ಣೆದುರು ಕಟ್ಟಿ ನಿಲ್ಲಿಸುತ್ತವೆ. ಒಂದೊಂದು ವೇಷವೂ ಚಲಿಸುವ-ಸೂತ್ರವಿಲ್ಲದೆ ಸ್ವಯಂ ಚಲನ-ವಲನ ಮಾಡುವ ಜೀವಂತ ಗೊಂಬೆಯೇ.

ಇನ್ನು ಈ ಆಳೆತ್ತರದ ಗೊಂಬೆಗಳ ಹಾವಭಾವ-ವಿಶೇಷತಃ ಅವುಗಳ ತೋಳು-ಕೈಗಳು ಮಣದಾಡುವಾಗ ತೊನೆದಾಡುವಾಗ ಆ 'ತರಂಗಿತತೆ' ಯಾರೋ ಅದೃಶ್ಯದಾರಗಳಿಂದ ಅವುಗಳನ್ನು ಸೂತ್ರದ ಗೊಂಬೆಗಳ ಅಂಗಾಂಗಗಳಂತೆಯೇ ಎಳೆದಾಡಿ ಕುಣಿಸುವರೋ ಎಂಬಂತೆ ತೋರುತ್ತದೆ. ಇಲ್ಲಿ ಒಂದು ಅಂಶವನ್ನು ನಾವು ನೆನಪಿಸಿ ಕೊಳ್ಳಬೇಕು. ಇಂದಿಗೆ ಒಂದು ಶತಮಾನದಲ್ಲಿ-ಅದೂ ಈಚಿನ ದಶಕಗಳಲ್ಲಿ ಈ ಬಯಲಾಟದ ನಟ-ನರ್ತಕರ ಭಾವ ಭಂಗಿ ನೃತ್ಯನಾಟ್ಯಗಳಲ್ಲಿ ತುಂಬ ಪರಿಷ್ಕರಣವನ್ನೋ ಸಂಸ್ಕರಣವನ್ನೋ ಹೊಂದಿದೆ. ಭರತನಾಟ್ಯ, ಕಥಕ್ಕಲಿಯೇ ಮುಂತಾದ ಶಾಸ್ತ್ರೀಯ ನೃತ್ಯ ಮಾದರಿಗಳ ಅನುಕರಣವೂ ಬಹಳಷ್ಟು ಪದ್ಯಾರ್ಥಸೂಚಕವಾದ ಅಂಗವಿಕ್ಷೇಪ (Miming)ವೂ ಸೇರಿಕೊಳ್ಳುತ್ತ ಬಂದಿದೆ. ಆದರೆ ಹಿಂದೆಲ್ಲ ಈ ಮೈ ಕೈಗಳ ಕುಣಿತ ಮಣಿತಗಳಲ್ಲಿ ತಾಳಲಯದ ಅನುಸರಣದ ಹೊರಗೆ, ಅದಕ್ಕೆ ತಮ್ಮ ತೋಲ ಕಾಪಾಡಿಕೊಳ್ಳುವ ಚಲನವಲನಗಳ ಹೊರಗೆ ವಿಶೇಷ ಇಲ್ಲವೆ ವಿಶಿಷ್ಟ ನ್ಯಾಸ-ಮುದ್ರೆಗಳ ವಿನ್ಯಾಸವಿದ್ದಿಲ್ಲ. ಬಹಳಷ್ಟು ಅರ್ಥಶೂನ್ಯ ಹಾವಭಾವಗಳು ಗೊಂಬೆಗಳ ಅಂಗವಿಕ್ಷೇಪಗಳನ್ನೇ ಹೆಚ್ಚು ಬೀಸಾಗಿ ನಯವಾಗಿ ನವಿರಾಗಿ ಇಲ್ಲವೇ ಸ್ಫುಟವಾಗಿ ತೋರ್ಪಡಿಸುತ್ತಿದ್ದವು-ಇವು ಮಾನವ ಗೊಂಬೆಗಳಾಗಿದ್ದರಿಂದ ಪ್ರಸಂಗದ ಸಂದರ್ಭಕ್ಕೆ ಅನಿವಾರ್ಯವಾಗಿ ತನ್ಮಯತೆಯ ಭಾವೋದ್ರೇಕ ಹೊಂದುವದರಿಂದ. ನಟಿಕೆ, ಬೆರಳುಮುರಿ (ಮಕ್ಕಳ ದೃಷ್ಟಿಬಾಧೆ ನೀಗಿಸಲು ಮಾಡುವಂತೆ!) ಇಲ್ಲವೆ ಬೆರಳು ಕುಣಿಸು ಶಬ್ದ 'ನಟ' ಮೂಲದಿಂದಲೇ ಬಂದದ್ದು. ನಟನಿಗೆ ಸೋಗು ಮುಖ್ಯ ಆಮೇಲೆ ನರ್ತನ. 'ನಟ್ಟುವ' 'ನಟ್ಟವಿಗ' ನೋಡಿ ನಲಿಯಬೇಕಾದ ವೇಷ. ಸಾಂಪ್ರದಾಯಿಕವಾಗಿ ಯಕ್ಷಗಾನ ನಟರಿಗೆ 'ವೇಷಧಾರಿ'ಗಳೆಂದೇ ಕರೆಯುತ್ತಾರೆ-ಅವರು "ವೇಷ ಕಟ್ಟುತ್ತಾರೆ". ಅವರು ನಾಟಕದಲ್ಲಿಯಂತೆ ಪಾತ್ರಧಾರಿಗಳಲ್ಲ,

ಪಾತ್ರ ಅಭಿನಯಿಸುವವರಲ್ಲ; ಈ ಭಾವಾಭಿವ್ಯಂಜನೆಯ ಕಲಾಸಂಪತ್ತು ಕಾಲಕ್ರಮದಿಂದ ಪ್ರತಿಭೆ ಪ್ರಯತ್ನಗಳ ಫಲವಾಗಿ ಪಳಗಿಸಿಕೊಂಡದ್ದು-ಎಂಬುವದು ಸ್ಪಷ್ಟ. ಸೂತ್ರದ ಗೊಂಬೆಗಳನ್ನೇ ಮಾದರಿಯಾಗಿಟ್ಟು ಕೊಂಡ ನೇಪಥ್ಯವಿಧಾನದಿಂದಾಗಿ ಈ ರಂಗ ರೂಪಕದಲ್ಲಿ ಕೆಲವೊಂದು ಅನಿವಾರ್ಯ ಇತಿಮಿತಿ (limitations) ಉಳಿದುಬಂದಿದೆ.

ಮೊದಲನೆಯದಾಗಿ, ಪುರುಷಪಾತ್ರಗಳ ಬೆನ್ನಭಾಗ ಹೆಚ್ಚಾಗಿ ಅನಲಂಕೃತ. ಅದನ್ನು ಮುಚ್ಚಲು ಮುಡಿಯಿಂದ ಸೊಂಟದವರೆಗೂ ಬಣ್ಣದ ಬಟ್ಟೆಯನ್ನು ಕಟ್ಟಿ ಸೈಲಾಗಿ ಇಳಿಬಿಡುವರು.

ಎರಡನೆಯದಾಗಿ, ಸ್ತ್ರೀವೇಷಗಳ ಉಡಿಗೆ ತೊಡಿಗೆ ಪುರುಷವೇಷದಷ್ಟು ಖಚಿತವಾಗದಿರುವದು. ಶಿಲಾಬಾಲಿಕೆ ಇಲ್ಲವೆ ಅಜಂತಾ ಭಿತ್ತಿಚಿತ್ರದಂತೆ ಪೌರಾಣಿಕ ಕಾಲೀನ ಉಡಿಗೆ ಇದ್ದರೆ (ಭರತನಾಟ್ಯದ ನರ್ತಕಿಯಂತೆ) ಹೆಣ್ಣು ವೇಷದ ನೃತ್ಯವೂ ಕಾಲುಗಳ ಕಲಾತ್ಮಕ ಚಲನವಲನವೂ ಪದವಿನ್ಯಾಸವೂ ಸೊಗಸಾಗಿ ಕಾಣುತ್ತಿತ್ತು. ಆದರೆ ಈಗಿದ್ದಂತೆ ಎಂಥ ಭರ್ಜರಿ ಸೀರೆ ಉಟ್ಟರೂ ಅದರೊಳಗೆ ಕುಣಿಯುವ ಕಾಲುಗಳು ತಮ್ಮ ಅಂದವನ್ನು ಕಳೆದುಕೊಳ್ಳುತ್ತವೆ-ಹೇತುಪೂರ್ವಕರಾಗಿ ವೀರಗಾಸೆಯುಟ್ಟು ವೀರ ರೀತಿಯಲ್ಲಿ ಬರುವ ಕೆಲವೇ ಪಾತ್ರಗಳನ್ನು ಬಿಟ್ಟರೆ.

ಮೂರನೆಯದಾಗಿ, ಈ ವೇಷಗಳ ಕುಣಿತಕ್ಕೆ ಎಡಬಲಕ್ಕೆ ಮಣಿದು ಕುಣಿಯುವ ಹಾವಭಾವಗಳೇ ಸ್ಫುಟ. ಮುಂಬದಿಯಲ್ಲಿಯ ಹಸ್ತವಿನ್ಯಾಸ ಪದವಿನ್ಯಾಸ ಕಡಿಮೆ.

ನಾಲ್ಕನೆಯದಾಗಿ, ಗೊಂಬೆಗಳಂತೆ ಈ ಸಜೀವ ಗೊಂಬೆಗಳಿಗೆ ದೇಹದ ಇತರ ಅಂಗಾಂಗಗಳಿಂತ 'ಹೆಜ್ಜೆಗೆಲಸ'ವೇ ಹೆಚ್ಚು. ವಿವಿಧ ತಾಲಗಳಲ್ಲಿ ಲಯಗಳಲ್ಲಿ ಈ 'ಪದಗತಿ' (foot work) ಪ್ರೇಕ್ಷಕರ ನಾಡಿ ಮಿಡಿತದಲ್ಲಿಯೂ ಚಂಡೆ ಮದ್ದಳೆಗಳ ಅಬ್ಬರದ ಬಡಿತಕ್ಕೆ ಲಾಸ್ಯವಾಡಿಸುತ್ತದೆ.

ಐದನೆಯದಾಗಿ, ಗೊಂಬೆಗಳಂತೆ ಈ ಆಕೃತಿಗಳಿಗೂ ಚರ್ಯೆ, ಮುದ್ರೆ, ಭಾವ ಭಂಗಿಗಳ ಸೂಕ್ಷ್ಮ ಅಭಿನಯಕ್ಕಿಂತ ದೃಢವಾದ ಸ್ಥೂಲವಾದ ಢಾಳವಾದ ಚಲನ ವಲನಗಳ ಆವಿರ್ಭಾವಕ್ಕೇ ಹೆಚ್ಚು ಪ್ರಾಶಸ್ತ್ಯ. ವಿಲಂಬಿತಕ್ಕಿಂತ ದ್ರುತ, ಸುಕುಮಾರಕ್ಕಿಂತ ಆವಿದ್ಧ, ಲಾಸ್ಯಕ್ಕಿಂತ ತಾಂಡವ ಪ್ರಕಾರದ ನರ್ತನ-ವರ್ತನಗಳಿಗೇ ಪ್ರಾಚುರ್ಯ-ಚಕ್ರ, ಮಂಡಿ ಇತ್ಯಾದಿ ಕುಣಿತ.

ಆರನೆಯದಾಗಿ, ಒಟ್ಟಾರೆ ಯಕ್ಷಗಾನ ಬಯಲಾಟ ಪಾತ್ರಗಳು ಪುರುಷ ಪ್ರಧಾನ ಸ್ತ್ರೀವೇಷಗಳು ಗೌಣ-ಅಂಬೆ, ಮೀನಾಕ್ಷಿ, ದ್ರೌಪದಿ (ಪ್ರತಾಪದಲ್ಲಿ), ಸೈರಂಧ್ರಿ, ಮೋಹಿನಿ, ಪ್ರಮೀಳ ಇತ್ಯಾದಿ ಕೆಲವು ಅಪವಾದಗಳನ್ನು ಬಿಟ್ಟು.

ಹಾಗೆಯೇ ಏಳನೆಯದೆಂದರೆ, ಈ ಬಯಲಾಟಗಳ ಆಖ್ಯಾನಗಳು ಹೆಚ್ಚಾಗಿ 'ಕಾಳಗ'ಗಳು ಈಚೆಗೆ ಹೆಸರುಗಳನ್ನು ಸಂಸ್ಕಾರಗೊಳಿಸಿದರೂ ಅವು ಹಿಂದೆಲ್ಲ ಲವ ಕುಶರ ಕಾಳಗ, ಬಭ್ರುವಾಹನ ಕಾಳಗ-ಹೀಗೆಯೇ ಪ್ರಸಿದ್ಧವಾಗಿದ್ದವು. ಗೊಂಬೆಗಳಲ್ಲಿ ಇಂಥ ರಭಸದ ಚಟುವಟಿಕೆಯಲ್ಲದೆ ನಯ

ನಾಜೂಕಿನ ನಾಟ್ಯ ತೀರ ಕಷ್ಟಸಾಧ್ಯ. ಅವುಗಳನ್ನೇ ಅನುಕರಿಸುವ ಈ ಜೀವಂತ ಗೊಂಬೆಗಳಿಗೂ ಅದೇ ಕಾಳಗಗಳ ರಾಪಿನ ರೀತಿ ಮೈಗೂಡಿ ಬಂದರೆ ಅದು ಸ್ವಾಭಾವಿಕವೇ ಸರಿ.

ಈ ಕಾಳಗಗಳೂ ಕೈಗೆ ಕೈ ಹತ್ತಿ ಅಲ್ಲ, ಕತ್ತಿ ವರಸೆಯೂ ಅಲ್ಲ. ದೂರದಿಂದಲೇ ಸಾಂಕೇತಿಕ ಹಾವಭಾವಗಳಿಂದ. ಮಂಡಲಾಕೃತಿಯಾಗಿ ಎಂಟರಂಕೆಯ (೮) ಕಕ್ಷೆಯಲ್ಲಿ ಒಬ್ಬರನ್ನೊಬ್ಬರು ಸುತ್ತು ಹಾಕುತ್ತ ಕುಣಿಯುವದು. ತೆಕ್ಕೆ ಬಿದ್ದು ಕಾದಾಡುವದು ಗೊಂಬೆಗಳಿಗೆ ಅಸಾಧ್ಯ. ಅದೇ ಸಂಪ್ರದಾಯ ಬಯಲಾಟದಲ್ಲಿಯೂ ಪಳಗಿ ಬಂತು.

ಎಂಟನೆಯದಾಗಿ, ಬಯಲಾಟದಲ್ಲಿ ಪಾತ್ರದ ವ್ಯಕ್ತಿತ್ವಕ್ಕಿಂತ ಅದರ ವಿಶಿಷ್ಟ ಮಾದರಿ (Type) ಗೇ ಹೆಚ್ಚಿನ ಮಹತ್ವ. ಎರಡನೆಯ ವೇಷಧಾರಿ, ಬಣ್ಣದ ವೇಷ, ಕಿರಾತ ಇತ್ಯಾದಿ, ಅಲ್ಲದೇ ಅವರವರ ವೇಷದಿಂದಲೇ ಕಿರೀಟ, ಪೊಗಡೆ, ಅಡ್ಡಪೊಗಡೆ ಮುಂತಾಗಿ ಆಯಾ ವೇಷದ ಸ್ವರೂಪ ನಿರ್ಣಯ, ಗೊಂಬೆಗಳ ಗುರುತಿಸುವ ಬಗೆಯ ಪಳೆಯುಳಿಕೆ. ಮಾತು ಪ್ರಧಾನವಾದ ರೂಪಕದಲ್ಲಿ ಈ ಬಗೆಯ Typeಗಳನ್ನು ಹಾಕಿ ಕೊಡಬೇಕಾಗಿಲ್ಲ. ಅದೇ ರೀತಿ ಪ್ರತಿ ಪಾತ್ರ ಮೊದಲು ಪ್ರವೇಶಿಸಿದೊಡನೆ ತನ್ನ ಪರಿಚಯ ಪೀಠಿಕೆಯಲ್ಲಿ? ಮಾಡಿಕೊಡುವ ಪರಿಪಾಟ. ಗೊಂಬೆ ರಂಗದಲ್ಲಿ ನಿಂತೊಡನೆ ಅದಕ್ಕೆ ಸೂತ್ರಧಾರನಿಂದ ಪರಿಚಯ ಅಗತ್ಯ. ಆದರೆ ನಾಟ್ಯ ರೂಪದಲ್ಲಿ ಸಂಭಾಷಣದಿಂದ ಅದು ತಾನಾಗಿಯೇ ಆಗುತ್ತದೆ. ಆದರೆ ಬಯಲಾಟದ ಮೇಲೆ ಗೊಂಬೆಯಾಟದ ಕಟ್ಟುಪಾಡಿನ ನೆಳಲು ದಟ್ಟವಾಗಿ ಉಳಿದುಬಿಟ್ಟಿದೆ!

ಒಂಬತ್ತನೆಯದು, ಅರ್ಥಪೂರ್ಣವೆನಿಸುವ ಅಂಗವಿಕ್ಷೇಪಗಳಲ್ಲಿ ಅತಿಶಯತೆ (Exaggeration). ಗೊಂಬೆಗಳಿಗೆ ಇದು ಅಗತ್ಯ. ಹೀಗೆ ಎತ್ತಿ ಒತ್ತಿ ಚಟುವಟಿಕೆ ಗೈಯದಿದ್ದರೆ ಅವುಗಳ ಪರಿಣಾಮ ಆಗುವದಿಲ್ಲ. ಆದರೆ ಬಯಲಾಟದಲ್ಲಿಯೂ ಪ್ರತಿಮಾತಿಗೂ ಈ 'ಅತಿಕರಣ' ಎದ್ದು ಕಾಣುತ್ತದೆ. ಆದ್ದರಿಂದ ವೇಷಧಾರಿಗಳ ನಡೆ ನುಡಿ ನಿಲುಮೆ ನೋಟ ಎಲ್ಲವುಗಳಲ್ಲಿಯೂ ನೈಜತೆ ಸಹಜತೆಗಿಂತ ಕೃತಕ (Stilted) ರೀವಿ, ನಾಟ್ಯಮಯತೆಗಿಂತ ನಾಟಕೀಯತೆ, ಸ್ಥಿರನಾಟ್ಯದ ಆವಿರ್ಭಾವ (tableau), ಇವುಗಳೇ ವಿಶೇಷ. ಮೂವತ್ತು-ನಾಲ್ವತ್ತು ವರ್ಷಗಳ ಆಚೆಗೆ ನಾನು ತೆಂಕಲಾಗಿನ ಒದು ಮೇಳದ 'ಸುಭದ್ರಾಹರಣ' ನೋಡಿದೆ. ಅದರಲ್ಲಿಯ ಧರ್ಮ, ಅರ್ಜುನ, ಕೃಷ್ಣ, ಬಲರಾಮ ಪ್ರಭೃತಿಗಳು ನಿಲ್ಲುವ ಭಂಗಿ ಇಂದಿಗೂ ನನ್ನ ಕಣ್ಣಿನಲ್ಲಿ ಕಟ್ಟಿ ನಿಂತಿದೆ. ಒಂದೊಂದು ವೇಷವೂ ಒಂದೊಂದು ಕಂಚಿನ ಪ್ರತಿಮೆಯಂತೆ ತನ್ನದೇ ನಿಲುಮೆಯ ಭಂಗಿಯಲ್ಲಿ ನಿಲ್ಲುತ್ತಿತ್ತು. ಇನ್ನೊಬ್ಬ ವೇಷಧಾರಿ ಕುಣಿದು ಮಾತನಾಡುವ ತನಕ. ಒಂದು ದಶಕದ ಹಿಂದೆ ಸುಭದ್ರಾಹರಣದ ಗೊಂಬೆ ಅಟವನ್ನು ಕಂಡಾಗ ಆ ಪಳೆಯ ಆಟದ ಪ್ರಥಮ ದರ್ಶನದ ಬೆಡಗು ಮರುಕಳಿಸಿದಂತಾಯಿತು.

ಹತ್ತನೆಯದಾಗಿ, ಬಯಲಾಟದ ರಂಗದಲ್ಲಿಯ ಚಕ್ರಕುಣಿತ, ಮಂಡಿಗುಣಿತ ಮುಂತಾದ ನೃತ್ಯಪ್ರಕಾರಗಳ ಮೂಲ ಗೊಂಬೆಗಳ ಕುಣಿತದಲ್ಲಿ ಇದ್ದಂತೆ ಕಾಣುತ್ತದೆ. ಬಯಲಾಟದ ಈ ನರ್ತನ ವಿಧಾನಕ್ಕೆ ಹೆಚ್ಚಿನ ಬೇರೆ ಯಾವ ಶಾಸ್ತ್ರೀಯ ಆಧಾರ-ಆಕಾರವೂ ಇದ್ದಂತಿಲ್ಲ.

ವೇಷಧಾರಿಗಳು ರಂಗವನ್ನು ಪ್ರವೇಶಿಸುವ ಮತ್ತು ಬಿಟ್ಟು ನಡೆಯುವ 'ಬಿಡ್ತಗಿ' ಕುಣಿತ ಗೊಂಬೆಗಳು ಸರಿದ ಭಾಸವನ್ನುಂಟುಮಾಡುತ್ತವೆ. ಅದೇ ರೀತಿ ಇವೆಲ್ಲ ವೇಷಗಳು ರಂಗದಿಂದ ಒಳಗೆ ಹೋಗುವಾಗ ಒಮ್ಮೆಲ್ಲೇ ತಮ್ಮ ಠೀವಿ (bearing) ಮರೆತು ಸಾದಾ ಮಂದಿಯಂತೆ ಹೊರಟು ಹೋಗುವ ತೆಪ್ಪಗಿನ ಈ ರೀತಿ ಸೂತ್ರಧಾರ ಗೊಂಬೆಗಳನ್ನು ಒಮ್ಮೆಲೆ ಸಡಿಲು ಬಿಟ್ಟಂತೆ ಅನಿಸುತ್ತದೆ. (ಹಿಂದೊಮ್ಮೆ ನಮ್ಮ ಅಪ್ರತಿಮ ವೇಷಧಾರಿ ನಟವರ್ಯ ಚಿಟ್ಟಾಣಿ ರಾಮಚಂದ್ರರು ಭಸ್ಮಾಸುರನ ಕೊನೆಯ ಅಗ್ನಿಹಸ್ತ ತಲೆಗಿಟ್ಟುಕೊಂಡ ಸನ್ನಿವೇಶದಲ್ಲಿ ಮೈತುಂಬ ಜ್ವಾಲೆಗಳೇರಿ ಬಂದು ಸಾಯುವಾಗ ರಂಗದಿಂದ ನಿಷ್ಕ್ರಮಣ ಒಮ್ಮೆಲೆ ಸಪ್ಪಗಿನ ಅವಸರದ ಖಾಸಗಿ ನಡೆಯದಾಗುತ್ತಿತ್ತು. ಆಗ ನಾನು ಅವರಿಗೆ "ಅದು ಸಲ್ಲದು. ಆ ಮರಣ ಯಾತನೆಯ ರೌದ್ರ ರಭಸದ ಅಭಿನಯದ ಭಂಗಿಯಲ್ಲಿಯೇ ಭಸ್ಮಾಸುರ ನಿಷ್ಕ್ರಮಿಸಬೇಕು-ವೇಷ ಮರೆತ ಚಿಟ್ಟಾಣಿಯವರಲ್ಲ" ಎಂದು ಸೂಚಿಸಿದ್ದನ್ನು ಆ ಕಲಾಪ್ರಜ್ಞ ಒಪ್ಪಿಕೊಂಡು ಅದೇ ರೀತಿ ನಿಷ್ಕ್ರಮಣದ ರೀತಿಯನ್ನು ಮಾರ್ಪಡಿಸಿಕೊಂಡರು.) ಹೀಗೆ ತೆರೆಮರೆ ಆಗುವಲ್ಲಿ ಈ ನರಗೊಂಬೆಗಳು ಮರಗೊಂಬೆಗಳಂತೆ ವರ್ತಿಸುತ್ತವೆ.

'ತೆರೆಮರೆ' ಅಂದಾಗ ಇನ್ನೊಂದು ಅರ್ಥಪೂರ್ಣ ಅಂಶ ಗಮನಕ್ಕೆ ಬರುತ್ತದೆ. ಯಕ್ಷಗಾನ ನಾಟಕ (?)ದ ಪ್ರಾಚೀನತೆಯನ್ನು ಹೇಳುವಾಗ ಡಾ। ಕಾರಂತ ಪ್ರಭೃತಿ ಹಲವಾರು ವಿದ್ವಾಂಸರು ರತ್ನಾಕರ ವರ್ಣಿಯ "ಭರತೇಶ ವೈಭವ"ದಿಂದ ಗಾನನರ್ತಕಿಯರು ಭರತ ಚಕ್ರೇಶನ ಓಲಗದಲ್ಲಿ ಕುಣಿಯಲು ಮುಂದೆ ಬಂದ ಒಂದು ಸಂಭ್ರಮದ ಸನ್ನಿವೇಶವನ್ನು ಬಣ್ಣಿಸುವ ಪದ್ಯವನ್ನು ಉದಾಹರಿಸುವದುಂಟು. ಆದರೆ ಆ ಪದ್ಯದಿಂದ ಒಂದು ಸಂಗತಿ ಖಚಿತವಾಗುತ್ತದೆ. ಅಲ್ಲಿಯ ತೆರೆಯ ಮರೆಯ ಕುಣಿತದಿಂದ ಆರಂಭ ಮಾಡಿ ಆ ಮತ್ತಕಾಶಿನಿಯರು ತೆರೆಯನ್ನು ತಗ್ಗಿಸಿ ಕನ್ನಡಿಯ ಬಿಂಬಗಳಂತೆ ತಮ್ಮ ಮೋರೆಗಳನ್ನು ಸಾಲಾಗಿ ಬೆಳಗಿ ಮುಂದೆ ಕ್ರಮೇಣ ತೆರೆ ಇಳಿ ಬಿಟ್ಟು ರಂಗದಲ್ಲಿ ಕುಣಿಯುತ್ತ ಕಾಣಿಸಿಕೊಳ್ಳುತ್ತಾರೆ. ಅಂದಾಗ ಈ ತೆರೆಮರೆಯ ಕುಣಿತ ಹಾಗೂ ಪರ್ಯಾಯವಾಗಿ ರಂಗಪ್ರವೇಶ ಯಕ್ಷಗಾನ ರಂಗ ಪ್ರದರ್ಶನದ್ದೇ ಒಂದು ವಿಶಿಷ್ಟ ಲಕ್ಷಣವಿದ್ದಿಲ್ಲ. ಅಂದು ಇಂಥ ಎಲ್ಲ ನಟ ನರ್ತಕರೂ ತೆರೆಯ ಮರೆಯಿಂದಲೇ ಕುಣಿಯುತ್ತ ಹೊರಬಂದು ಕಾಣಿಸಿಕೊಳ್ಳುತ್ತಿರಬೇಕು. ಸಂಸ್ಕೃತ ನಾಟಕಗಳಲ್ಲಿಯೂ ಆರ್ಭಟದಿಂದ ರಂಗಕ್ಕೆ ನುಗ್ಗುವ ಪಾತ್ರಗಳೂ ಪಟಾಟೋಪದೊಂದಿಗೆ ತೆರೆಯನ್ನು ಜಗ್ಗಿ ಅಲುಗಾಡಿಸಿಯೇ ಮುಂದೆ ಬರುವಂತೆ ರಂಗ ಸೂಚನೆಗಳು ಇರುತ್ತವೆ. ಅಂದಾಗ ಈ ತೆರೆಮರೆಯಿಂದ ಕುಣಿಯುತ್ತ ರಂಗಪ್ರವೇಶ ಬಯಲಾಟದ್ದೇ ಒಂದು ವ್ಯವಚ್ಛೇದಕ ಲಕ್ಷಣವೆನ್ನಲು ಬರುವಂತಿಲ್ಲ. ಇದೂ ಅಲ್ಲದೆ ಭರತ ಚಕ್ರೇಶನ ಇದಿರು ಬಂದವರು ನಟಿಯರು, ನರ್ತಕಿಯರು. ಯಕ್ಷಗಾನ ಬಯಲಾಟದಲ್ಲಿ ಗಂಡಿನೊಂದಿಗೆ ಹೆಣ್ಣು ವೇಷಧಾರಿಗಳೂ ಸೇರಿ ಆಟ ಆಡುವ ಸಂಪ್ರದಾಯವಾಗಲಿ ಪರಂಪರೆಯಾಗಲಿ ಇಲ್ಲ. ಇಂದಿನ ಸುಧಾರಿಸಿದ ಯಕ್ಷಗಾನ "ನಾಟಕ ಸಭೆ"ಗಳಲ್ಲಿಯೂ ಕಂಡು ಬರುವದಿಲ್ಲ. ಇದು ಕೇವಲ ಗಂಡುಗಾಡಿಯ ರಂಗ ಪ್ರದರ್ಶನ. ಸಾಮಾನ್ಯವಾಗಿ ಹೆಣ್ಣು ವೇಷಧಾರಿಗಳದೇ ಕೊರತೆ ಧಾರಾಳವಾಗಿ ಕಂಡು ಬರುತ್ತಿದ್ದರೂ ಮೇಳಗಳಲ್ಲಿ-ನಾಟಕ ಕಂಪೆನಿಗಳಲ್ಲಿಯಂತೆ ಆಧುನಿಕ ಕಾಲದಲ್ಲಿಯೂ ಸ್ತ್ರೀಯರೇ ಸ್ತ್ರೀವೇಷ ಕಟ್ಟುವ ಪ್ರಸಕ್ತಿ ಇಲ್ಲ. ಅಂದಾಗ ರತ್ನಾಕರವರ್ಣಿಯ ಕಾಲದಲ್ಲಿ

ಅದು ಇತ್ತೆಂದು ಊಹಿಸುವದಾಗಲಿ ನಂಬುವದಾಗಲಿ ಸ್ವಲ್ಪ ಕಠಿಣವೇ ಆಗಿದೆ.

ಅದೇನೇ ಇರಲಿ, ಈ ತೆರೆಮರೆಯಿಂದ ವೇಷಧಾರಿಗಳ ಪ್ರವೇಶ ನಿಷ್ಕ್ರಮಣಗಳು ಗೊಂಬೆಯಾಟದಿಂದ ಬಂದ ಪದ್ಧತಿ. ಗೊಂಬೆಗಳನ್ನು ರಂಗದಲ್ಲಿ ಆಡಿಸುವಾಗ ಸೂತ್ರಧಾರ ಹಿಂದಿಟ್ಟ ತೆರೆಯ ಮರೆಗೇ ನಿಲ್ಲಬೇಕಾಗುತ್ತದೆ. ಮುಂದೆ ಜೀವಂತ ಗೊಂಬೆಗಳನ್ನು ಆಡಿಸುವಾಗ ಅದೇ ಸೂತ್ರಧಾರ ಭಾಗವತನಾಗಿ ("ಮೊದಲನೇ ವೇಷಧಾರಿ"ಯಾಗಿ) ಮುಂದೆ ಬಂದು ಕುಳಿತನು. ಅವನ ಇದಿರು ಇತರ ವೇಷಗಳ ರಂಗ ಪ್ರವೇಶಕ್ಕೆ ತೆರೆಯನ್ನು ಹಿಡಿದಿಡುವ ಪದ್ಧತಿ ಹಾಗೆಯೇ ನಡೆದು ಬಂದಿರಬೇಕು.

ಪ್ರಪಂಚದ ರಂಗಭೂಮಿಯಲ್ಲಿಯೇ ಎಲ್ಲ ರೂಪಕವಿಕಾಸ ಮೂಲತಃ ಗೊಂಬೆಯಾಟ ದಿಂದಲೇ ಸುರುವಾಯಿತೆಂಬ ಒಂದು ಸಿದ್ಧಾಂತ ಆಧುನಿಕ ನಾಟ್ಯ ಶಾಸ್ತ್ರಜ್ಞರು ಒಪ್ಪಿಕೊಂಡಂತಿದೆ. ಸಂಸ್ಕೃತ ನಾಟಕಗಳ 'ಸೂತ್ರಧಾರ'ನಂತೂ ಈ ಮೂಲದ ಸೂತ್ರವನ್ನು ಬಲಪಡಿಸುತ್ತಾನೆ. ಆದರೆ ನೇರವಾಗಿ ಆದಷ್ಟು ಗೊಂಬೆಯಾಟವನ್ನೇ ಗೊಂಬೆಗಳ ವೇಷಭೂಷೆ ಚಲನವಲನಗಳನ್ನೇ ಅನುಕರಿಸಿ ಅನುಸರಿಸಿ ಬೆಳೆದು ಬಂದು ಇಂದಿಗೂ ಅತ್ಯಂತ ಜನಪ್ರಿಯವಾಗಿ ಉಳಿದ ನಾಟ್ಯಪ್ರಕಾರವು ಯಕ್ಷಗಾನ ಬಯಲಾಟ ಒಂದೇ-ಎಂದು ಭಾವಿಸುತ್ತೇನೆ.

ಬಯಲಾಟದ ರಂಗಪ್ರದರ್ಶನವನ್ನು ಆರಂಭದಿಂದಲೂ ನೋಡುವಾಗ ಅದರಲ್ಲಿ ಸ್ಪಷ್ಟವಾಗಿ ಎರಡು ಭಾಗಗಳು ಗೋಚರಿಸುತ್ತವೆ. ಒಂದು ಸಭಾಲಕ್ಷಣ, ಸ್ತ್ರೀವೇಷಗಳ ಕುಣಿತ. ಬಾಲಗೋಪಾಲರು, ಹನುಮನಾಯಕ (ಕೋಡಂಗಿ ?) ಮುಂತಾದವರ ಪ್ರಾಸ್ತಾವಿಕ ರಂಗಲೀಲೆ. ಅನಂತರ ಮುಖ್ಯ ಆಖ್ಯಾನದ-ಸುಧನ್ವಕಾಳಗ, ವಾಲಿ-ಸುಗ್ರೀವರ ಕಾಳಗ ಮುಂತಾದವುಗಳ-ಒಡ್ಡೋಲಗದಿಂದ ಆರಂಭ. ಈ ಒಡ್ಡೋಲಗವೆಂಬುದು ಅವರೊಳಗಿನ ಎಲ್ಲ ಗೊಂಬೆಗಳ ಒಂದು ಪ್ರಾಸ್ತಾವಿಕ ಸಾಮೂಹಿಕ ಪ್ರದರ್ಶನ-ಅಲ್ಲಿ ಅದರ ಎಲ್ಲ ಕುಣಿತಗಳ ಮಾದರಿಗಳನ್ನು ಒಟ್ಟಾಗಿ ಬಿಡಿಯಾಗಿ ಕಾಣಬಹುದು. ಇದುವೆ ನಿಜವಾದ ದಶಾವತಾರ ಇಲ್ಲವೇ ಭಾಗವತರ ಆಟ. (ಆಂಧ್ರದಲ್ಲಿ "ಭಾಗವತರ ಆಟ"ವೆಂಬ ಒಂದು ನಿರ್ದಿಷ್ಟ ಪ್ರಕಾರವೇ ಇದೆಯಂತೆ.) ಸಾಮಾನ್ಯವಾಗಿ ಈ ಒಡ್ಡೋಲಗದಿಂದ ಆಟದ ಮುಖ್ಯ ಭಾಗವತ 'ರಥಾ'ರೂಢ ನಾಗುತ್ತಾನೆ. ಆ ತನಕ ಇನ್ನೊಬ್ಬ ಸಂಗೀತಗಾರ ಪ್ರಾಸ್ತಾವಿಕವನ್ನು ಸಾಗಿಸುತ್ತಾನೆ. ಹೀಗೆ ಪ್ರಾಸ್ತಾವಿಕ ಕುಣಿತಗಳೆಲ್ಲ ನಿಜವಾದ ಜಾನಪದವಾಗಿದ್ದು ಗೊಂಬೆಯಾಟದ ಜೀವಂತ ಅನುಕರಣದ ಅಖ್ಯಾನ ಭಾಗವು ಒಂದು ರೀತಿ ಮಾರ್ಗೀಯ (Classical) ಅಂಗವೆನ್ನಬಹುದು. ಯಾವದೇ ಜಾನಪದ (Folk) ನೃತ್ಯಪ್ರಕಾರವು ಒಂದು ಕಥಾವಸ್ತುವನ್ನು ಅಳವಡಿಸಿಕೊಂಡು ವ್ಯವಸ್ಥಿತ ರೂಪಕವಾಗಿ ಬೆಳೆದರೆ ಅದಕ್ಕೆ ಮಾರ್ಗೀಯ ಇಲ್ಲವೆ ಸಾಂಪ್ರದಾಯಿಕ ಅಚ್ಚು-ಕಟ್ಟಿನ ರೂಪ-ರೂಪಕತ್ವಗಳು ಬಂದು ಅದು ಮಾರ್ಗೀಯ (Classical)ಪ್ರಕಾರವೆನಿಸಿಕೊಳ್ಳುತ್ತದೆ. ಈ ಪ್ರಕಾರದ ರೂಪಾಂತರದಲ್ಲಿ ಬಯಲಾಟವು ಗೊಂಬೆಯಾಟದಿಂದ ಪ್ರೇರಣೆಯನ್ನು ಮಾತ್ರವಲ್ಲ, ಪ್ರಬಂಧವನ್ನು ನಿಶ್ಚಯವಾಗಿ ನಿಚ್ಚಳವಾಗಿ ಪಡೆದಿರಬೇಕು.

"ಯಕ್ಷಗಾನ"ವೆಂಬುದು ಒಂದು ವಿಶಿಷ್ಟ ಸಂಗೀತ ಪದ್ಧತಿ-ಗಾನದ ಜಾತಿ. ನೃತ್ಯ ನಾಟ್ಯ ವಿಧಾನಕ್ಕೆ ಕೇವಲ 'ಗಾನ' ಪದ್ಧತಿಯ ಹೆಸರು ಇಟ್ಟದ್ದು ಒಂದು ಸೋಜಿಗವೇ ಆಗಿದೆ. ಇಲ್ಲಿಯೂ 'ಯಕ್ಷಗಾನ'ವೆಂಬುದು ಹಾಡುಗಾರಿಕೆಯ ರೀತಿ ಭೇದವೇ ಹೊರತು, ಸ್ವರ ಸಂಚಾರಕ್ರಮವೇ ಹೊರತು ಅದರ ರಾಗ-ತಾಲ ಪ್ರಕ್ರಿಯೆಗಳೆಲ್ಲ ನಮ್ಮ ದಕ್ಷಿಣಾದಿ ಸಂಗೀತದವೇ ಆಗಿವೆ! ಆಟದ ಪ್ರಯೋಗದಲ್ಲಿ ಈ ರಾಗ ರೀತಿಗಿಂತ ಚಂಡೆ ಮದ್ದಳೆಗಳು ನುಡಿಸುವ ತಾಲ-ಲಯಗಳ ಗತ್ತುಗಳೇ ಕುಣಿತಕ್ಕೆ ಮುಖ್ಯ. ಇಲ್ಲಿ ಈ ತಾಲವೈವಿಧ್ಯಕ್ಕೆ ರಾಗವೈಖರಿಯಾಗಲಿ ವೈಚಿತ್ರ್ಯವಾಗಲಿ ಗೌಣ. ಕಥಕ್ಕಲಿಯಲ್ಲಿ ಇಷ್ಟು ರಾಗವೈವಿಧ್ಯ ವೈಭವವೇ ಇಲ್ಲ. ಆದಾಗ್ಯೂ ಈ ನೃತ್ಯ ಪ್ರಧಾನವಾದ ರಂಗ ಪ್ರದರ್ಶನಕ್ಕೆ ಗಾನಪ್ರಕಾರದ ಹೆಸರು ಹೇಗೆ ಬಂದಿರಬೇಕು? ಇದಕ್ಕೆ ಒಂದೇ ಖುಲಾಸೆ-ಈ ಕುಣಿತ ಒಂದು ಸಂಪ್ರದಾಯವಾಗಿ ಬಂದ ಮಾರ್ಗೀಯ ಮಾದರಿ ಅಲ್ಲ. ಅದಕ್ಕೆ ಅದರದೇ ಆದ ಹೆಸರು ಇರುವದು ಸಾಧ್ಯವಿಲ್ಲ. ಆಗ ಈ ಕುಣಿತಕ್ಕೆ ಹಿನ್ನೆಲೆಯಾಗಿ ಸೇರಿಸಿದ ಸಂಗೀತ ಪದ್ಧತಿಯ ಹೆಸರಿನಿಂದಲೇ ಈ ಪ್ರಕಾರವನ್ನು ಗುರುತಿಸುವ ವಾಡಿಕೆ ನಡೆದು ಬಂತು.

ಗೊಂಬೆಯಾಟದ ಅನುಕೃತಿ ಮಾದರಿಯಿಂದಲೇ ಇದೊಂದು ಪಾರಂಪರಿಕ ನೃತ್ಯ ಪ್ರಕಾರವೆನಿಸಿಕೊಳ್ಳಲಿಲ್ಲ-ಕಥಕ್ಕಲಿ, ಕಥಕ, ಕುಚ್ಚಿಪುಡಿ, ಮುಂತಾದವುಗಳಂತೆ.

ಇಲ್ಲಿ ಇನ್ನೂ ಒಂದು ಶಂಕೆ. 'ಯಕ್ಷಗಾನ' ಇದು 'ಎಕ್ಕಲಗಾಣ'ದ ಸಂಸ್ಕೃತೀ ಕರಣವೇ (ಕನ್ನಡ-ಕರ್ನಾಟಕ, ಮರಹಟ್ಟ-ಮಹಾರಾಷ್ಟ್ರವಾದಂತೆ.) 'ಎಕ್ಕಲ'ವೆಂದರೆ ಎಕ್ಕಟ-ಏಕಲ-ಒಂಟಿ. ಒಬ್ಬನೇ ಹಾಡಿ ಇತರರು 'ಆಡು'ವ ಒಂದು ರಂಗರೂಪಕವೇ, ಈ 'ಯಕ್ಷಗಾನ', 'ಗಮಕ'ದಿಂದ ಬೇರೆಯಾಗಿ ವಿವಿಧ ತಾಲಗಳಲ್ಲಿ ಸರಾಗವಾಗಿ ಹಾಡುವಂತೆ ಪ್ರಸಂಗಗಳ ಪದ್ಯರಚನೆ. ಇದರಿಂದ ಇವು ಕೇವಲ ಹೊಸ ನೃತ್ಯ ಪ್ರಕಾರಕ್ಕೇ ನೆಲೆಯಾಗಿ, ಹಿನ್ನೆಲೆಯಾಗಿ ರಚಿಸಲಾದವು. ಮುಂಚೆ ಕುಣಿದು ನಡುವೆ ಬಿಡುವು ಸಿಗುವಂತೆ ಈ ಜೀವಂತ ಗೊಂಬೆಗಳೇ ಆಯಾ ಪದ್ಯಗಳ ಭಾವಾರ್ಥವನ್ನು ಆಡುವ 'ವಾಚಿಕ' ಅಂಗವೂ ಸೇರಿತು. ಈ ಗೊಂಬೆ ಆಟದಲ್ಲಿಯೆ ಪದ್ಯ ವಿನ್ಯಾಸ, ಅದಕ್ಕೆ ತಕ್ಕ ಹಿನ್ನೆಲೆಯ ಹಾಡಿನ ಗತ್ತುಗಳ ಬಗೆಗೆ ತಜ್ಞರು ವಿವೇಚಿಸಲಿ.

ಹೀಗೆ ಎಲ್ಲ ಬಗೆಯಿಂದ ಆಲೋಚಿಸಿದರೂ ನಮ್ಮಲ್ಲಿಯ ಬಯಲಾಟದ ಮೂಲ ಗೊಂಬೆಯಾಟವೇ ಆಗಿರಬೇಕೆಂದು ನನ್ನ ಅನುಮಾನಿತ (hypothesis). ಇದು ಸರಿಯಲ್ಲವೆಂದು ಸಾಧಾರ ಸಿದ್ಧವಾದಲ್ಲಿ ನನಗೆ ಬೇಸರವೇನೂ ಇಲ್ಲ.

# ಯಕ್ಷಗಾನ ರಂಗ ಮತ್ತು ಸಮಕಾಲೀನ ನಾಟಕ

ನಾನು ಇಲ್ಲಿ ಪ್ರಸ್ತುತ ಪಡಿಸಬೇಕಾದದ್ದು ಒಂದು ದ್ವಂದ್ವ ವಿಷಯ: ಯಕ್ಷಗಾನ ರಂಗ ಮತ್ತು ಸಮಕಾಲೀನ ನಾಟಕ. ಆದರೆ ಇವೆರಡನ್ನೂ ನಾನು ಬೇರೆ ಬೇರೆ ಪ್ರಸ್ತಾಪಿಸಬೇಕಾಗಿಲ್ಲ. ಇವೆರಡೂ ವಿಷಯಗಳು ಒಂದನ್ನೊಂದು ಛೇದಿಸುವ ಬಿಂದು. ನನ್ನ ಗಮನದ ಕೇಂದ್ರ-ಪ್ರಸ್ಥಾನದ ಬಿಂದು. ಯಕ್ಷಗಾನ ರಂಗ ಮತ್ತು ಸಮಕಾಲೀನ ನಾಟಕ ಇವೆರಡರ ಪ್ರಭಾವ ಸಂಸ್ಕಾರ ಪರಸ್ಪರವಾಗಿ ಹೇಗೆ ಆಗಿವೆ ಎಂಬುದನ್ನೇ ನಾನು ವಿವೇಚನೆಗೆ ಒಳಪಡಿಸುತ್ತಿದ್ದೇನೆ.

ಯಕ್ಷಗಾನವೇನು? ಆಧುನಿಕ ನಾಟಕವೇನು? - ನನ್ನ ವಿವೇಚನೆ ಅವುಗಳ ರಂಗ ಹಾಗೂ ರಂಗ ಪ್ರಕ್ರಿಯೆಯ ಮಟ್ಟಿಗೆ ಪರಿಮಿತ. ಆ ದೃಷ್ಟಿಯಿಂದಾದರೂ ಇವೆರಡನ್ನೂ ಕೆಲಮಟ್ಟಿಗೆ ಒಟ್ಟಿನಲ್ಲಿ ಅನುಪೂರ್ವಿಕವಾಗಿ ಅವುಗಳ ಐತಿಹಾಸಿಕ ದೃಷ್ಟಿಯ ಅನುಪಾತ (perspective) ದಲ್ಲಿ ಇಟ್ಟು ದಿಟ್ಟಿಸುವದು ಅಗತ್ಯ. ಹಾಗೆ ನೋಡುವದಾದರೆ ಯಕ್ಷಗಾನ ರಂಗ ಅನಾದಿ ಪರಂಪರೆಯಿಂದ ನಡೆದು ಬಂದ ನಮ್ಮ ಜಾನಪದ ರಂಗದ ಒಂದು ಅವಿಭಾಜ್ಯ ಅಂಗ; ಮತ್ತು ಆ ಮಟ್ಟಿಗೆ ನಾಟಕರಂಗಕ್ಕೆ ಪೂರ್ವ ಭಾವಿ.

ನಮ್ಮ ಅರ್ವಾಚೀನ ನಾಟಕಗಳಿಗೆ ಪ್ರಾಚೀನ ಸಂಸ್ಕೃತ ನಾಟಕಗಳೇ ಉಗಮ. ಅವು ಭರತಮುನಿಯ ನಾಟ್ಯಶಾಸ್ತ್ರದ ಆಧಾರವುಳ್ಳವೆಂದು ಎನ್ನಲಾಗುತ್ತದೆ. ಆಧುನಿಕ ಪಾಶ್ಚಾತ್ಯ ರಂಗಭೂಮಿಗೆ ಶೇಕ್ಸಪಿಯರನ ಕಾಲದ ಎಲಿಝಬೆಥನ್ ರಂಗ ಭೂಮಿಯೂ, ಅದಕ್ಕೆ ಗ್ರೀಕ ನಾಟಕ ರಂಗವೂ ಮೂಲವೆಂಬಂತೆ.

ಆದರೆ ಗ್ರೀಕನಾಟಕಗಳೂ ಬಯಲಾಟಗಳೇ ಆಗಿದ್ದವು. ಅವುಗಳ ರಂಗಸ್ಥಳ ಬಯಲಲ್ಲಿ

ಕಿಕ್ಕಿರಿದ ಪ್ರೇಕ್ಷಕರ ನಡುವೆಯೇ ಮೂರೂ ಮಗ್ಗಲಿಗೆ ಮಂದಿಯ ಕಣ್ಣಿಗೆ ತೆರೆದೇ ಇರುತ್ತಿತ್ತು-ನಮ್ಮ ಬಯಲಾಟಗಳಂತೆಯೇ. (ಪ್ರೇಕ್ಷಕರೆಲ್ಲ ಸಮತಟ್ಟಲ್ಲದ, ಇಳುಕಲಿನ ಬಯಲಲ್ಲಿ ಕೂತು ತುಸು ಕೆಳಗಿನ ದೂರದ ರಂಗಮಂಚದಲ್ಲಿ ನಾಟಕವಾಡುವದನ್ನು ಸುತ್ತಲಿಂದ ನೋಡುತ್ತಿದ್ದರು.) ರಂಗಮಂದಿರ (Theatre) ಅನಂತರದ ಏರ್ಪಾಡು:- ಜನಸಾಮಾನ್ಯರಿಂದ ಸರಿದು ಶ್ರೇಷ್ಠವರ್ಗದ, ಸಿರಿವಂತರ ಅಥವಾ ಆಸ್ಥಾನದ ಆಶ್ರಯಕ್ಕೆ ನಾಟಕಪ್ರಯೋಗಗಳು ಒಳಪಡಲು ಹತ್ತಿದಾಗ.

ನಮ್ಮಲ್ಲಿಯೂ ಅದೇ ರೀತಿಯ ಮಾರ್ಪಾಟನ್ನು ಗುರುತಿಸಬಹುದು. ಸಂಸ್ಕೃತ ನಾಟಕಗಳಲ್ಲಿ ಪ್ರೇಕ್ಷಕರನ್ನು 'ಸಾಮಾಜಿಕ'ರೆಂದು ಕರೆಯುತ್ತಾರೆ. ಒಂದು ವಿಶಿಷ್ಟ ಉದ್ದೇಶಕ್ಕಾಗಿ ನೆರೆದ ಜನಸಮುದಾಯವೇ 'ಸಮಾಜ'. (ಆಜಿ=ಯಜ್ಞ, ಆಜಿಕ=ಯಾಜ್ಞಿಕ?) ಹಾಗೆಯೇ ನಾಟಕ ಪ್ರಯೋಗವು ವಿದ್ವಜ್ಜನರ ಸಭೆಯ ಮೆಚ್ಚಿಗೆಗಾಗಿಯೇ ನಡೆಯುವದು ವಾಡಿಕೆ ಆಯಿತು. 'ಆಪರಿತೋಷಾತ್ ವಿದುಷಾಂ ನ ಸಾಧುಮನ್ಯೇ ಪ್ರಯೋಗವಿಜ್ಞಾನಂ' ಎಂದಿದ್ದಾನೆ ಕಾಲಿದಾಸ. ಅಂದು ನಾಟಕ ಕಾವ್ಯವಾದರೂ ದೃಶ್ಯ - "ಪ್ರಯೋಗ ಪ್ರಧಾನಂ ನಾಟ್ಯಂ". ಅದರ ಉತ್ತಮತೆಯ ನಿಕಷ ವಿದ್ವಜ್ಜನರ ಪರಿತೋಷ. ಆದರೆ ಇದೇ ಕವಿಕುಲಗುರುವು ನಾಟ್ಯದ ಬಗೆಗೆ ಹೇಳಿದ ಇನ್ನೊಂದು ಮಾತೂ ಪ್ರಸಿದ್ಧವಿದೆ:- "ನಾಟ್ಯಂ ಭಿನ್ನರುಚೇಃ ಜನಸ್ಯ ಬಹುಧಾಪಿ ಏಕಂ ಸಮಾರಾಧನಂ". ಇಲ್ಲಿ ಭಿನ್ನರುಚಿಯ ಜನರೆಂದಾಗ ವಿದ್ವಜ್ಜನರೇ ಎಂಬ ಅರ್ಥ ಸಲ್ಲದು. ಅಲ್ಲದೆ "ಸಮಾರಾಧನಂ" ಎಂಬ ಮಾತಿಗೂ ಒಂದು ವಿಶೇಷ ಪಾರಿಭಾಷಿಕ ಅರ್ಥವಿದೆ.

"ಸಮಾರಾಧನಾ"-ಒಟ್ಟೂ ಪ್ರೇಕ್ಷಕ ಸಮಾಜದ್ದು. Mass entertainment. ಅದು ರಾಜಸ ಪಾತಳಿಯದು. ಪದಗತ, ತಾಟಸ್ಥ್ಯಭಾವದ ಒಂದು ಆನಂದಾನುಭವ, ಆದರೆ ಆಸ್ವಾದನೆಯ ಇನ್ನೂ ಒಂದು ರೂಪವಿದೆ. ಅದು ಸತ್ವೋದ್ರೇಕ. ಇಲ್ಲಿ ಪ್ರೇಕ್ಷಕನಿಗೆ ನಾಟ್ಯವಸ್ತು ವೈಯುಕ್ತಿಕವಾಗಿ ಸಾತ್ವಿಕಪಾತಳಿಯಲ್ಲಿ ತಟ್ಟುತ್ತದೆ. ಇಲ್ಲಿ ಸಾಮೀಪ್ಯ. ಅದರಿಂದ ತನ್ಮಯತೆ ಹೆಚ್ಚು. ಇದರಿಂದ ರಸಿಕ ಅಂತರ್ಮುಖಿನಾಗುತ್ತಾನೆ.

ಜಾನಪದ ಬಯಲಾಟಗಳಿಂದ ನಾಟಕದತ್ತ ಸಾಗುವವೆಂದರೆ "ಜನಸ್ಯಬಹು ಭಾಷ್ಯೈಕಂ ಸಮಾರಾಧನಂ"ದಿಂದ ಸಹೃದಯನ ರಸಾನುಭೂತಿಯತ್ತ ಸರಿಯುವದು. ಒಂದಲ್ಲ ಒಂದು ಬಗೆಯ ಬಯಲಾಟದಿಂದ ಕ್ರಮೇಣ 'ನಾಟಕವೆಂಬ ದೃಶ್ಯಕಾವ್ಯ ಅಥವಾ 'ರೂಪಕ' ಪ್ರಕಾರ ಉಂಟಾಯಿತು - ಎಂಬುದಕ್ಕೆ ಭರತನ ನಾಟ್ಯ ಶಾಸ್ತ್ರವೆ ಪರ್ಯಾಯವಾಗಿ ದಾಖಲೆ ಒದಗಿಸುತ್ತದೆ.

* * *

ಭರತಮುನಿಯು ನಾಟಕದ ಹುಟ್ಟನ್ನು ಹೀಗೆ ವರ್ಣಿಸುತ್ತಾನೆ. "ಕ್ರೀಡ ನೀಯಕಂ" ಇಚ್ಛಾ ದೃಶ್ಯಂ ಶ್ರಾವ್ಯಂಚಯತ್ ಭವೇತ್"-ಎಂದು ಇಂದ್ರಾದಿ ದೇವತೆಗಳು ಬ್ರಹ್ಮನಲ್ಲಿ ಬೇಡಿಕೊಂಡರಂತೆ. ಇಲ್ಲಿ ಆ ದೇವತೆಗಳು ಬೇಡಿದ್ದು 'ರೂಪಕ'ವನ್ನಲ್ಲ, 'ನಾಟಕ'ವನ್ನಲ್ಲ. ಅದು 'ಕ್ರೀಡನೀಯಕಂ'

ಅಂದರೆ ಆಡಲು ಯೋಗ್ಯವಾದದ್ದು-ಅದೊಂದು "ಆಟ", ಇದು ತುಂಬ ಅರ್ಥಪೂರ್ಣ. ದೇಸೀ ಮೂಲ ಮಾರ್ಗಫಲ (ಬಿ. ಎಂ. ಶ್ರೀ. ಅಂದಂತೆ "ಜನವಾಣಿ ಬೇರು ಕವಿವಾಣಿ ಹೂವು") ಇದು ನಿಜವಿದ್ದರೆ ಸಂಸ್ಕೃತ ನಾಟಕದ ಶಿಷ್ಟ ವಿಶಿಷ್ಟ ರೂಪಕ ಪ್ರಪಂಚಕ್ಕೆ ಅದಕ್ಕೂ ಪೂರ್ವದ ಜಾನಪದ ರಂಗಭೂಮಿಯೇ ಮೂಲ. 'ಕ್ರೀಡನೀಯಕ' (ಆಟ)ದಿಂದಲೇ ನಾಟ್ಯ-ನಾಟಕದ ವಿಕಾಸ.

ಇದಕ್ಕೂ ಮುಂದೆ ಹೋಗಿ ಆ ದೇವೇಂದ್ರಾದಿಗಳು ಹೇಳುತ್ತಾರೆ. "ನವೇದ ವ್ಯವಹಾರೋಯಂ ಸುಶ್ರಾವ್ಯಃ ಶೂದ್ರಜಾತಿಷಂ॥" ವೈದಿಕ ವ್ಯವಹಾರಕ್ಕೆ ಒಪ್ಪಿದ್ದಲ್ಲ ಶೂದ್ರರು ಕೇಳತಕ್ಕದ್ದು, ಅಂದರೆ ಅವರು ಬಯಸುವ 'ಆಟ' ಶೂದ್ರಾದಿಗಳು-ಅಂದರೆ ಜನಸಾಮಾನ್ಯರು ಕೇಳಲು ಯೋಗ್ಯವಾಗುವಂತಹದು. ಅದು "ಸಾರ್ವವರ್ಣಿಕ" ಎಲ್ಲ ವರ್ಣದವರಿಗೆ ಮಾನ್ಯ. "ಪಂಚಮ (ಪಂಚಮರ?) ವೇದ". ಇದರಿಂದ ಸ್ಪಷ್ಟವಾಗುವದೇನು? ಜಾನಪದ ಕಲಾ ವಿನೋದವಾದ ಈ "ಆಟ" ಭರತನಿಂದ ಪ್ರಮಾಣೀಕೃತ (Standardise) ವಾಯಿತು.

ಇನ್ನೊಂದು ಸತ್ಯಾಂಶವೂ ಇಲ್ಲಿ ಸೂಚಿತ. ಬ್ರಹ್ಮದೇವ ಅನುಗ್ರಹಿಸಿದ ಈ 'ಕ್ರೀಡನೀಯಕ' ಮೊದಲು ಬಯಲಲ್ಲಿ ಆಡಲಾಯಿತು. ಅದರ ವಸ್ತು ದೇವದಾನವರ ಸಂಘರ್ಷ. ದಾನವರ ಸೋಲು. ಅದನ್ನು ಅಸುರ ಪ್ರೇಕ್ಷಕರೆಲ್ಲ ಗೊಂದಲವೆಬ್ಬಿಸಿ ಆಡಲು ಕೊಡಲಿಲ್ಲ. ಆಗ ಬ್ರಹ್ಮ ವಿಶ್ವಕರ್ಮನಿಂದ ಮೂರು ಮಾದರಿಯ ರಂಗ ಮಂದಿರಗಳನ್ನು ಕಟ್ಟಿಸಿದನು. ಅವುಗಳಲ್ಲಿ ಮಧ್ಯಮ ಮಾದರಿ 64x34 ಮೊಳ (ಹಸ್ತ) (ಕೌಟಿಲ್ಯನೂ "ಅರ್ಥಶಾಸ್ತ್ರ"ದಲ್ಲಿ ಇದನ್ನೇ ಹೇಳಿದ್ದಾನೆ) ಬಯಲು ರಂಗದಲ್ಲಿ ಬ್ರಹ್ಮದೇವ ಆಡಿಸಿದ್ದು 'ಸಮುದ್ರಮಂಥನ'ವೆಂಬ "ಸಮವಕಾರ".ಈ ನಾಟ್ಯಗೃಹದಲ್ಲಿ "ತ್ರಿಪುರದಹನ"ವೆಂಬ "ಡಿಮ". ಈ 'ಡಿಮ'ಕ್ಕೆ ಅಸುರರು ಸಂತುಷ್ಟರಾದರು. ಏಕೆಂದರೆ ಅವರ ನಾಯಕ* ಅವರ ದೊಂಬಿಯ ಧುರೀಣ 'ವಿರೂಪಾಕ್ಷ' ಶಿವನೇ! ಅಂದರೆ ಆರ್ಯೇತರ ದೈವಭಕ್ತರ ಪ್ರಪಂಚವಿದು!

---

* ಮಾಯೇಂದ್ರ ಜಾಲ ಸಂಗ್ರಾಮಕ್ರೋಧೋದ್ಭ್ರಾಂತಾದಿಚೇಷ್ಟಿತೈಃ।
ಚಂದ್ರ ಸೂರ್ಯೋಪರಾಗೈಶ್ಚ ನ್ಯಾಯ್ಯೇ ರೌದ್ರರಸೇಂಗಿನಿ॥

ಭರತ ನಾಟ್ಯಶಾಸ್ತ್ರವು ಉಲ್ಲೇಖಿಸಿದ ಈ 'ಸಮವಕಾರ' ಮತ್ತು 'ಡಿಮ'ಗಳ ಸ್ವರೂಪ ಲಕ್ಷಣಗಳು ನಮ್ಮ ಬಯಲಾಟಗಳನ್ನೇ ಸ್ಥೂಲವಾಗಿ ಹೋಲುತ್ತವೆ. ಇವುಗಳ ವಸ್ತು, ದೇವಾಸುರ ಸಂಘರ್ಷ. ನಾಯಕ. ದೇವದಾನವರು, ವೃತ್ತಿ, ಆರ್ಭಟೀ ಸಾತ್ವತೆ. ಪಾತ್ರಗಳು ಉದ್ದತ, ನಡುವೆ ಪ್ರಹಸನಕ್ಕೆ ಅವಕಾಶ.

ಇವನ್ನು ಒಳಗೊಂಡ 'ದಶರೂಪಕ'ಗಳಲ್ಲಿ 'ಸಾಹಿತ್ಯ ದರ್ಪಣ'ವು ಹೇಳಿದ "ನಾಟ್ಯರಾಸಕಾಂಕ"ವೂ ಒಂದು. ಇದು ಬಹುತಾಲಲಯ ಸ್ಥಿತಿ! ಹಾಸ್ಯಾಂಗ, ಸಶೃಂಗಾರ, ಇದಕ್ಕೆ ಉದಾತ್ತನಾಯಕ (ಮನುಷ್ಯೇತರ) ಅವನ ಇದುರಿಗೆ ಪೀಠಮರ್ದನ ಉಪನಾಯಕ-ಶ್ರೀರಾಮನಿಗೆ ಸುಗ್ರೀವನಂತೆ! ಇಲ್ಲಿ "ಪೀಠಮರ್ದನ" ಎಂಬ ಮಾತಿನಿಂದ ಅವನ ಕುಣಿತದ ರಭಸದ ಕಲ್ಪನೆ ಬರುತ್ತದೆ!

* * *

ದಿ. ಪಾಂಡೇಶ್ವರ ಗಣಪತರಾಯರು ತಮ್ಮ ಯಕ್ಷಗಾನದ ಕುರಿತ ಅಧ್ಯಕ್ಷೀಯ ಭಾಷಣಗಳಲ್ಲಿ ನಮ್ಮ ಈ ಬಯಲಾಟದ ನಟರು ಪರಂಪರೆಯಿಂದ ಭರತನಾಟ್ಯಶಾಸ್ತ್ರ ಪ್ರಣೀತವಾದ ವೇಷಭೂಷೆ ರಂಗವಿಧಾನ ನಾಟ್ಯಾಭಿನಯಗಳನ್ನೇ ಚಾಚೂ ತಪ್ಪದೆ ಅನುಸರಿಸಿ ಬಂದಿರುವದಾಗಿ ಶ್ಲಾಘಿಸಿದ್ದಾರೆ. ಡಾ. ಶಿವರಾಮ ಕಾರಂತರೂ ಯಕ್ಷಗಾನ ಬಯಲಾಟವನ್ನು ಮೂಲತಃ ಕಲ್ಪಿಸಿ ಶಿಲ್ಪಿಸಿದವರು, ಭರತನಾಟ್ಯಶಾಸ್ತ್ರದ ಅನುಕರಣ ಮಾಡಿರಬಹುದಾಗಿ ಅಭಿಪ್ರಾಯ ಪಟ್ಟಿರುವರು. ಆದರೆ ನನ್ನ ಮನವರಿಕೆಯ ಮಟ್ಟಿಗೆ ಪೂರ್ವದ ಮೂಲದ ಜಾನಪದ ಲೋಕನಾಟ್ಯದ ಕ್ರೋಡೀಕರಣ ದೃಢೀಕರಣಗಳನ್ನು ಭರತಮುನಿಯು ತನ್ನ ಗ್ರಂಥದಲ್ಲಿ ಮಾಡಿದ್ದಾನೆ. ನಮ್ಮ ಬಯಲಾಟಗಳು ಆ ಮೂಲ ಗೋತ್ರದ್ದೇ ಪ್ರವರಗಳು.

ಶೈಲೀಕೃತ ಚಲನವಲನ "ಗತಿಪ್ರಚಾರ"ದ ವಿವಿಧ ಪ್ರಕಾರಗಳು ಭರತನಾಟ್ಯ ಶಾಸ್ತ್ರದಲ್ಲಿ ವಿವರವಾಗಿ ಬಂದಿವೆ. ರಥಾರೋಹಣ, ಸೋಪಾನಾವರೋಹಣ, ನಾವೆಯಲ್ಲಿ ನದೀ ತರಣ, ಜಲಕ್ರೀಡೆ, ಪುಷ್ಪಚಯನ, ದ್ವಂದ್ವ ಸಂಕುಲ ಯುದ್ಧ ಮುಂತಾದ ನಾಟ್ಯ ಕ್ರಿಯೆಗಳು ಯಕ್ಷಗಾನದಲ್ಲಿ ಇಂದಿಗೂ ನಟಿಸಲ್ಪಡುವ ರೀತಿ ಭರತಮುನಿ ವರ್ಣಿಸಿದ ಆ ಗತಿಪ್ರಚಾರಗಳನ್ನೆ ಅನುಸರಿಸುತ್ತವೆ. ಅಲ್ಲಿಯ ಕಿರೀಟ ಭುಜಕೀರ್ತಿ ಪಾರ್ಶ್ವಮೌಲಿ (ಕೋರ ಮುಂಡಾಸ) ಮುಖವರ್ಣಿಕೆ ಇತ್ಯಾದಿ ಯಕ್ಷಗಾನದ ವೇಷಗಾರಿಕೆಯನ್ನೇ ಪುಷ್ಟೀಕರಿಸುತ್ತವೆ. ಇದೆಲ್ಲ ನನ್ನ ಆ ವಿಧಾನವನ್ನೇ ದೃಢಿಕರಿಸುತ್ತದೆ.

ಅಂದರೇನು? ನಾಟ್ಯಶಾಸ್ತ್ರದ ಆರಂಭದಲ್ಲಿಯೇ ಈ ಯಕ್ಷಗಾನ ರಂಗದಂಥ ಜಾನಪದ ದೇಶೀನಾಟ್ಯರಂಗ ಪ್ರಚಲಿತವಿತ್ತು. ಭಾಷೆ ಮೊದಲು ವ್ಯಾಕರಣ ಅನಂತರ. ಹಾಗೆಯೇ ದೇಶೀ ಕಲಾರೂಪಗಳು ಮೊದಲು ಅವುಗಳ ಪರಿಷ್ಕೃತ ಸಂಸ್ಕೃತ ನೃತ್ಯ ನಾಟ್ಯ ರೂಪಕಾದಿ ಪ್ರಕಾರಗಳು ಅನಂತರ. ಶಾಸ್ತ್ರವನ್ನೇ ಮುಂದಿಟ್ಟುಕೊಂಡು ಒಂದು ಸಾರ್ವತ್ರಿಕ ಜನಪ್ರಿಯ ಕಲಾಕೃತಿ

ರೂಪಗೊಳ್ಳುವದಿಲ್ಲ. ಅದೇನು ಒಂದು ಯಂತ್ರವೋ ಔಷಧವೋ ಅಲ್ಲ-ಪ್ರಾಯೋಗಿಕವಾಗಿ ತಯಾರಿಸಿ ಆ ಮಾದರಿಯಂತೆಯೇ ಬಹುಜನ ಸಮುದಾಯದ ಬಳಕೆಗಾಗಿ ದೊಡ್ಡ ಪ್ರಮಾಣದಲ್ಲಿ ಪೂರೈಸಲಿಕ್ಕೆ.

ಮುಂದಿನ ಸಂಸ್ಕೃತ ನಾಟಕಗಳಲ್ಲಿ ಬರುವ ರಂಗಸೂಚನೆಗಳಿಂದಲೂ ಇದೇ ಸಂಗತಿ ಸ್ಫುಟವಾಗುತ್ತದೆ. ಕೆಲವು ವರ್ಷಗಳಾಚೆಗೆ ಧುಳೆಯ ಕಾಲೇಜಿನ ನಿವೃತ್ತ ಸಂಸ್ಕೃತ ಪ್ರಾಧ್ಯಾಪಕ ಡಾ. ತಾರಳೇಕರ ನಮ್ಮಲ್ಲಿಗೆ ಬಂದಾಗ ನನ್ನ ಈ ಅನುಮಾನ ದೃಢವಾಯಿತು. ಅವರು ಸಂಸ್ಕೃತ ನಾಟಕಗಳಲ್ಲಿಯ ರಂಗಸೂಚನೆಗಳ ಅಭ್ಯಾಸ ಪ್ರಬಂಧಕ್ಕಾಗಿ ಡಾಕ್ಟರೇಟು ಪದವಿ ಗಳಿಸಿದವರು. ಈ ರಂಗಸೂಚನೆಗಳು ಬಯಲಾಟದ (ಯಕ್ಷಗಾನದ) ರಂಗ ಚಲನೆಯನ್ನೇ (ಅಲ್ಲಿಯ ನೃತ್ಯಭಾಗವನ್ನು ಬಿಟ್ಟು) ನೆನಪಿಗೆ ತಂದು ಕೊಡುವದು ಕಂಡುಬರುತ್ತದೆ. ರಥಾರೋಹಣ, ಮೃಗಾಭಿಸರಣ, ಪರಿಕ್ರಮಣ, ಮುಂತಾದ ಕ್ರಿಯೆಗಳ 'ಕೃತಕ' (Stilted) ಮತ್ತು ಶೈಲೀಕೃತ (Stylised) ಚಲನವಲನಗಳು ಇದಕ್ಕೆ ಸಾಕ್ಷಿ. 'ಪಟಾಟೋಪ' 'ಪಟಕ್ಷೇಪ' ಬಯಲಾಟದ ತೆರೆಮರೆ ಕುಣಿತದ ಆರ್ಭಟವನ್ನು ಸೂಚಿಸುತ್ತವೆ-ಉಗ್ರ ಪಾತ್ರಗಳ ಪ್ರವೇಶದಲ್ಲಿ, ತೆರೆಯನ್ನು ತೂರಾಡಿ ಹೊರಬರುವಂತೆ.

ಯಕ್ಷಗಾನ ಸಭಾಪೂಜೆಯು ಪೂರ್ವರಂಗ ಸಂಸ್ಕೃತನಾಟಕಗಳ ಪೂರ್ವರಂಗದ 'ನಾಂದಿ'ಯನ್ನೆ ಹೋಲುತ್ತದೆ. ಯಕ್ಷಗಾನದಲ್ಲಿ ಆಖ್ಯಾನವನ್ನು 'ಪ್ರಸಂಗದ' ಪದ್ಯಗಳನ್ನು ಹಾಡಿ 'ಬೆಳವರೆಗೆ' ಪಾತ್ರಗಳನ್ನು ಕುಣಿಸಿ ಆಡಿಸುವವ ಭಾಗವತ. ಅದೇ ಸಂಸ್ಕೃತ ನಾಟಕದಲ್ಲಿ ಸೂತ್ರಧಾರ. ಇವನಿಗೆ ಪಾರಿಪಾರ್ಶ್ವಕರು. ಮೂಡಲ ಪಾಯದ ದೊಡ್ಡಾಟ ಸಣ್ಣಾಟಗಳಲ್ಲಿ ಇದೇ ಸೂತ್ರಧಾರ ಹಿಮ್ಮೇಳದೊಂದಿಗೆ ನಮ್ಮ ಭಾಗವತನಿಗಿಂತ ಹೆಚ್ಚು ಸಕ್ರಿಯವಾಗಿ ರಂಗಕ್ರಿಯೆಯಲ್ಲಿ ಭಾಗವಹಿಸುತ್ತಾನೆ. ಸಂಸ್ಕೃತ ನಾಟಕಗಳಲ್ಲಿ ಸೂತ್ರಧಾರನು ತನ್ನ ನೆರವಿಗೆ 'ನಟಿ'ಯನ್ನು ಕರೆಯುತ್ತಾನೆ. ದೊಡ್ಡಾಟ ಸಣ್ಣಾಟಗಳಲ್ಲಿ ಆತ 'ದೂತಿ"ಯನ್ನು ರಂಗಕ್ಕೆ ತರುತ್ತಾನೆ. ಅಲ್ಲಿ ಸೂತ್ರಧಾರನಿಗೆ 'ಸಾರಥಿ' ಎಂದು ಪಾತ್ರಧಾರಿಗಳು ಕರೆಯುತ್ತಾರೆ. ಏಕೆ?

ವೇದವ್ಯಾಸನ ಶಿನೆಯ ಶಿಷ್ಯ ಸೌತಿ-ಸೂತ್ರಪುತ್ರ. ಈತನೇ ಆದಿಪೌರಾಣಿಕ, ಸೂತರು ರಥಕಾರರು, ಸಾರಥಿಗಳು. ಯಕ್ಷಗಾನ ರಂಗದಲ್ಲಿಯೂ ಭಾಗವತ ಕೂಡ್ರುವ ಪೀಠಕ್ಕೆ "ರಥ"ವೆಂತಲೇ ಹಳಬರು ಕರೆಯುವ ರೂಢಿಯಿತ್ತು.

ಯಕ್ಷಗಾನ ರಂಗಕ್ರಿಯೆ ನೃತ್ಯಾಭಿನಯ ಮಾತುಗಾರಿಕೆಯ ಒಂದು ಸಮನ್ವಿತ ಕಲೆ. ನೃತ್ಯ ನಾಟಕದ ಪೂರ್ವರೂಪ. (ಆದರೆ 'ನಟ್' ಧಾತು ನೃತ್ ಧಾತುವಿನ ಪ್ರಾಕೃತ ರೂಪವೆಂದು ಡಾ. ಮ್ಯಾಕ್‌ಡೊನಾಲ್ಡ ಅಭಿಪ್ರಾಯ ಪಡುತ್ತಾರೆ. ಆದರೂ ಇದನ್ನು ಇತರ ವಿದ್ವಾಂಸರು ಒಪ್ಪುವದಿಲ್ಲ.) ಕ್ರೀ. ಪೂ. ೪೦೦ ವರ್ಷಗಳ ಹಿಂದಿನ ಪಾಣಿನಿ 'ನಾಟಕ' ಶಬ್ದವನ್ನು ಉಲ್ಲೇಖಿಸುವದಿಲ್ಲ. ಆದರೆ, 'ನಟಸೂತ್ರ'ವೆಂಬ ಪ್ರಯೋಗವನ್ನು ಮಾಡಿದ್ದುಂಟು. ಅವನ ಭಾಷ್ಯಾಕಾರ ಪತಂಜಲಿ ನಟವರ್ಗವನ್ನು

ಶೌಭನಿಕಾ! (ಸೌಭಿಕಾಃ) ಎಂದು ಕರೆಯುತ್ತಾನೆ. ಮಾತ್ರವಲ್ಲ ಆ ನಟರು "ಚೀರೆ ಹತೇ ಕಂಸೇ, ಚಿರೇ ಬದ್ಧೇ ಬಲೌ, ಕಂಸಂ ಪ್ರತ್ಯಕ್ಷಂ ಘಾತಯಂತಿ, ಬಲಿಂ ಪ್ರತ್ಯಕ್ಷಂ ಬಂಧಯಂತಿ' ಎಂದಿದ್ದಾನೆ. ಅಂದರೆ ಈ ನಟರು ಎಂದೋ ಹತನಾದ ಕಂಸನನ್ನು ಎಂದೋ ಬದ್ಧನಾದ ಬಲಿಯನ್ನು ಮತ್ತೆ ಪ್ರತ್ಯಕ್ಷ ಕೊಲ್ಲುತ್ತಾರೆ. ಕಟ್ಟುತ್ತಾರೆ. ಅಂದಾಗ ಮಾತಿಲ್ಲದ ದೃಶ್ಯಾಭಿನಯ ಕ್ರಿಯೆ ಪತಂಜಲಿಯ ಕಾಲದಲ್ಲಿ ಪ್ರಚಲಿತವಿತ್ತು ಎಂದೆನ್ನಬೇಕಾಗುತ್ತದೆ.

ಪಾಣಿನಿಯು ಒಂದು ಸೂತ್ರದಲ್ಲಿ 'ನೃತ್ತಾಯ ಸೂತಂ ಗೀತಾಯಂ ಶೈಲೂಷಂ' ಎಂದಿದ್ದಾನೆ. ಇಲ್ಲಿ ನೃತ್ಯವಾಡಿಸುವಾತ ಸೂತ. ('ತಾಲಲಯ ಹಸ್ತಪಾದ ಸಂಚಲನಂ-ನೃತ್ತಂ') ಹಾಡುಗಾರ "ಶೈಲೂಷ". ನಮ್ಮ ಯಕ್ಷಗಾನ ರಂಗದ ಪೂರ್ವರಂಗದ ವೇಷಗಳನ್ನು ಕುಣಿಸುವವನು ಸಂಗೀತಗಾರ. ಕಥಾಭಾಗಕ್ಕೆ ಭಾಗವತ. ಮೂಲದ ಜಾನಪದ ನಾಟ್ಯ ಈ ಪೂರ್ವರಂಗವೇ ಆಗಿತ್ತು. ಅದಕ್ಕೆ ಕಥಾಭಾಗ (ಆಖ್ಯಾನ-ಪ್ರಸಂಗ) ಸೇರಿ ಭಾಗವತನಿಂದ ಆಡಿಸುವ ದೇಸೀ+ಮಾರ್ಗ ಮಿಶ್ರಿತ "ಆಟ" ರೂಪಗೊಂಡಿರಬೇಕು. ಭಗವಂತನ ದಶಾವತಾರ ಲೀಲೆಗಳ ಆಖ್ಯಾನಗಳನ್ನು ಹಾಡಿ ಆಡುಸುವ ಸೂತನೇ ಹಾಡಿಕೆಯಿಂದಾಗಿ "ಶೈಲೂಷ"ನೂ ಅಹುದು. (ಶೈಲಾಲಿ=ನಟನರ್ತಕ.)

* * *

ದಿ. ಡಾ. ಗದ್ದಿಗಿಮಠರು ಪ್ರಕಟಿಸಿದ ಒಂದು 'ಹಂತಿಯ ಹಾಡು' 'ಬಹುರೂಪಿ' ಶಿವಶರಣ ಚೌಡಯ್ಯ ಮತ್ತು ದೇವದಾಸ (ವೈಷ್ಣವ) ಅಚ್ಯುತ ಇವರಿಬ್ಬರ ನಡುವಿನ ಅಟ್ಟದಾಟದ ಸ್ಪರ್ಧೆಯನ್ನು ವರ್ಣಿಸುತ್ತದೆ. ಅದರಲ್ಲಿ ಅಚ್ಯುತ "ಆಡಿತೋರಿಸಿದ ದಶರೂಪಂ" ಎಂಬ ಮಾತು ಮುಂದೆ "ದಶಾವತಾರ" ಬಯಲಾಟದ ಉಗಮದ ಕುರಿತು ಬೆಳಕು ಚೆಲ್ಲುವಂತಿದೆ. ಮುಂದೆ ಸಂಸ್ಕೃತ ನಾಟಕಗಳನ್ನು 'ದಶರೂಪಕ'ಗಳೆಂದು ವಿಂಗಡಿಸಿದ್ದೇಕೆ? ನನ್ನ ಊಹೆಯಂತೆ ಬೇರೆ ಬೇರೆ ವೇಷಕಟ್ಟುವ ಆ ಬಹುರೂಪಿಗಳ ಕೇವಲ ಪಾತ್ರ ಪ್ರದರ್ಶನವೇ ಮುಖ್ಯವಿದ್ದ ದೃಶ್ಯ "ರೂಪಕ," ಮುಂದೆ ಕ್ರಮೇಣ ಸಂಭಾಷಣೆ ಸಂವಿಧಾನಕಗಳಿಂದ ಕೂಡಿ ಬೆಳೆದು ಅದು ನಟನಾಭಿನಯಕ್ಕೆ ಪ್ರೇರಣೆಯಾಗುವ 'ನಾಟಕ'ವೆನಿಸಿಕೊಂಡಿತು. ಅದರ ಕ್ರಮಪಾಕ ಹೀಗೆ! ತಾಲಲಯ ಹಸ್ತಪಾದ ಸಂಚಲಾನಂ ನೃತ್ತಂ, ಶಬ್ದಾರ್ಥಾಭಿನಯ ಭಾವಂ-ನೃತ್ಯಂ ಮತ್ತು ವಾಕ್ಯಾರ್ಥಾಭಿನಯಂ ರಸಾಶ್ರಯಂ ನಾಟ್ಯಂ, ಈ ನಾಟ್ಯವು "ಅವಸ್ಥಾನುಕೃತಿ."

ಆರಂಭದಲ್ಲಿ "ಬಹುರೂಪಿ"ಗಳಿಂದ ರೂಪಗೊಂಡ ದೃಶ್ಯ ನೃತ್ಯ ಪ್ರಕಾರವಾಗಿಯೇ ಪ್ರಚಾರದಲ್ಲಿತ್ತು. ಭರತಮುನಿಯೇ ಹೇಳಿದ್ದಾನೆ : "ಪ್ರಾಯೇಣ ಸರ್ವತೋ ಕಷ್ಟ ನೃತ್ತಂ ಇಷ್ಟಂ ಸ್ವಭಾವತಃ" ಹಾಗೆಯೇ ಆನಂದ ಸೀಮಾಖಿಲು ನೃತ್ಯ ಸೇವಾ". ನಮ್ಮ ಯಕ್ಷಗಾನದ ಹರಕೆಯಾಟ ಸೇವೆಯಾಟಗಳು ಇದೇ ನೃತ್ಯ ಮಾಧ್ಯಮದ ಆನಂದಾಭಿವ್ಯಕ್ತಿ.

"ಯಕ್ಷಗಾನ"ವೆಂಬ ಸಂಗೀತ ಸೂಚಕವಾದ ಪದವನ್ನು ಬದಗಿರಿಸಿ ಆಲೋಚಿಸಿದರೆ ಆ

ಕ್ಷೇತ್ರ ಅಥವಾ "ರಂಗ" ಬಯಲಾಟ ದೊಡ್ಡಾಟ, ಸಣ್ಣಾಟಗಳಿಂದ ಒಡಗೂಡಿದ್ದು. (ಮಹಾರಾಷ್ಟ್ರದ 'ಗೊಂದಳ' 'ತಮಾಷಾ' ಕೂಡ ಇದರಲ್ಲಿ ಸೇರಿದ್ದು.) ಇದು "ದೇಶೀ" ರಂಗ. "ತದೇವ ರುಚಿ ವೈಚಿತ್ರ್ಯಾತ್। ಚಿತ್ತರಂಜನ ಕೃತ್ ಜನ್ಯೆಃ।। ಪ್ರಯುಕ್ತಂ ಸ್ವಸ್ವದೇಶೇ ಯತ್। ತತೋ ದೇಶೀತಿ ಕೀರ್ತಿತಂ" ('ಸಂಗೀತ ಮುಕ್ತಾವಳಿ'-ಕುಂಭಕರ್ಮರಾಜ, ೧೫ನೆ ಶತಮಾನ.)

ಈ 'ದೇಶೀ' 'ಅಬಲಾ ಬಾಲಗೋಪಾಲೈಃ ಗೀಯತೇ'-ಎಂಬ ಉಕ್ತಿಯೂ ಇದೆ. ಮಾತಂಗವೆಂಬವನದು ಯಕ್ಷಗಾನ ರಂಗದಲ್ಲಿ ಆರಂಭಕ್ಕೆ ಆ ಅಬಲಾ ಬಾಲ ಗೋಪಾಲರೇ ಬಂದು ಪೂಜಾ ನೃತ್ಯವನ್ನು ಮಾಡುತ್ತಾರೆ! (ತಮಾಶಾ ದೊಡ್ಡಾಟಗಳಲ್ಲಿಯೂ ಹಾಗೆಯೇ.) ಈ ಬಯಲಾಟದ ಬೇರುಗಳು ಹೀಗೆ 'ಬಹುರೂಪಿ' ಮತ್ತು 'ಹಗರಣ'ಗಳಿಂದ ಅರಳಿ ಬೆಳೆದವು. ಈ ಬೆಳವಣಿಗೆಯಲ್ಲಿ ಆಯಾ ಪ್ರದೇಶದ ವಾದ್ಯ ಪ್ರೇಭೇದದಿಂದ ಈ ಆಟಗಳ ಪ್ರಕಾರ ಭೇದವೇರ್ಪಟ್ಟಿರಬೇಕು.

| | | | |
|---|---|---|---|
| ೧. | ತಾಳದಾಟ | ವೈಷ್ಣವ | ದಶಾವತಾರ (ಬಡಗು ತಿಟ್ಟು) |
| ೨. | ಜಾಗಟೆಯಾಟ | ಶೈವ | ದಶಾವತಾರ (ತೆಂಕು ತಿಟ್ಟು) |
| ೩. | ದಪ್ಪಿನಾಟ | ಲಘು | ಸಣ್ಣಾಟ |
| ೪. | ದಿಮ್ಮುದಾಟ | ಗಂಭೀರ | ದೊಡ್ಡಾಟ |

ದೊಡ್ಡಾಟದ ರಂಗಸಜ್ಜಿಕೆ ವೇಷಭೂಷೆ ಶ್ರೀಮಂತ ಕಥೆ ಭಾಷೆ ಗಂಭೀರ ವಿಶೇಷತಃ ಪೌರಾಣಿಕ. ಸಣ್ಣಾಟದ ರಂಗಸಜ್ಜಿಕೆ ವೇಷ ಇತ್ಯಾದಿ ಸಾಮಾನ್ಯ. ಭಾಷೆ ಕಥಾನಕ ಲಘು, ಕೆಲಸಲ ಸಾಮಾಜಿಕ, ಲೌಕಿಕ (ಉದಾಃ ಕೃಷ್ಣ ಪಾರಿಜಾತ, ಸಂಗ್ಯಾ-ಬಾಳ್ಯಾ, ಕಡ್ಲಿಮಟ್ಟಿ ಸ್ಟೇಶನ್ ಮಾಸ್ತರ.)

'ಧರ್ಮಾಮೃತ' 'ವಡ್ಡಾರಾಧನೆ'ಗಳಿಂದ ತಿಳಿದು ಬರುವ 'ಹಗರಣ'ದ ಲಕ್ಷಣಗಳನ್ನು ನೋಡಿ-

೧. ಅದು ಮೂರು ದಿನದ ಪಗರಣಿಗರ ಆಟ.

೨. ವಿಪರೀತ (ವಿಚಿತ್ರ) ವೇಷ.

೩. ನಗಿಸುವದೇ ಮುಖ್ಯ ಉದ್ದೇಶ.

೪. ಹೊಲೆಯರು ಬಡಿಯುವ ಹರೆಯ ಓಜೆಗೆ ಆಟ

೫. ಕೆಲಸಲ 'ಮರಮೊಗ'ಗಳ ಬಳಿಕೆ

೬. 'ಎನಿತಾನುಂ ತೆರೆದ ರೂಪಗಳು' (ಬಹುರೂಪಿ)

೭. ಜವನಿಕೆ-ಸಿಂಹಾಸನ-ಹೊದಿಕೆ-(ಅಂಬಿಗರ ಚೌಡಯ್ಯನ ಕಾಲದಲ್ಲಿ.)

ಈ ದೊಡ್ಡಾಟಗಳ ರಂಗ "ಅಟ್ಟ"-೧ಲ ಅಡಿ ಎತ್ತರದ ರಂಗಮಂಚ. ಸಣ್ಣಾಟಕ್ಕೆ ೩ ಚಕ್ಕಡಿ ಗಾಲಿಗಳನ್ನು ಅರ್ಧ ಹೂಳಿ ಅವುಗಳ ಹಲ್ಲುಗಳ ಮೇಲೆ ತೊಲೆಗಳನ್ನು ಸಿಕ್ಕಿಸಿ ಮೇಲೆ 'ಫಳಿ'ಗಳನ್ನು ಬಿಗಿದು ತಯಾರಿಸಿದ ರಂಗ. ಪಾತ್ರ ಪ್ರವೇಶಕ್ಕೆ ಅಡ್ಡ ಶಾಲು ಹಿಡಿಯುತ್ತಾರೆ. ನಮ್ಮಲ್ಲಿ 'ತೆರೆಮರೆ' ಕುಣಿತ ಇರುವಂತೆ. ದೊಡ್ಡಾಟದಲ್ಲಿಯೂ ಸ್ತ್ರೀ ವೇಷ ರಂಗ ಪ್ರವೇಶದಲ್ಲಿ "ಕರವಸ್ತ್ರ"ವನ್ನೆ ಎರಡೂ ಕೈಗಳಿಂದ ಮೋರೆಗೆ ಅಡ್ಡ ಹಿಡಿದು ಕುಣಿಯುತ್ತದೆ. ಪ್ರೇಕ್ಷಕರ ಕುತೂಹಲ ಕೆರಳಿಸುವ ತಂತ್ರವಿದು.

ಜಾನಪದ ರಂಗದ ಇನ್ನೊಂದು ರಚನೆ ನಾನು ಈಚೆಗೆ ಕಂಡಿದ್ದು ರಂಗಸ್ಥಲವನ್ನು ಅದರ ಎಡದಿಂದ ಬಲಕ್ಕೆ ಅಡ್ಡ ಕರ್ಣರೇಖೆಯಿಂದ ವಿಭಾಗಿಸಿ ಪ್ರೇಕ್ಷಕರ ಎಡಗಡೆಯ ಅಂಕಣದಲ್ಲಿ ಪಾತ್ರಗಳು ಬಲಗಡೆಯ ಅಂಕಣದಲ್ಲಿ ಸೂತ್ರಧಾರ ಮತ್ತು ಹಿಮ್ಮೇಳ ಚಲನವಲನ ಸಾಗಿಸುವದು. ಇವರ ಪ್ರವೇಶ ನಿಷ್ಕ್ರಮಣವೆರಡೂ ಹಿಂಬದಿಯಿಂದಲೇ.

ಯಕ್ಷಗಾನ ರಂಗದಲ್ಲಿಯೂ ಪಾತ್ರಗಳ ಪ್ರವೇಶ ನಿಷ್ಕ್ರಮಣ ಹಿಂಬದಿಯಿಂದ, ಭಾಗವತನ ಎಡಬದಿಯಿಂದ ಬಂದು ಬಲಬದಿಯಿಂದ ಹೋಗುವದು. ರಂಗದ ಆಯ ನಮ್ಮ ಮೇಳಗಳಲ್ಲಿ ಸಾಮಾನ್ಯವಾಗಿ ೧೨x೧೫ ಮೊಳ. (೧. ಮೊಳ=೧॥ ಫೂಟು?) ೧೫ ಮೊಳದ ಆಯ ಭಾಗವತ ಚಂಡೆಮದ್ದಳೆಗಾರರ ವ್ಯವಸ್ಥೆಗೆ ಅನುಕೂಲ ಪ್ರಶಸ್ತ. ಭಾಗವತನ ಹತ್ತಿರವೇ ಇದುರಿಗೆ ಮೃದಂಗ (ಮದ್ದಳೆ. ಭರತಮುನಿ-"ಮರ್ದಳಂ"!) ಹಾಗೆಯೇ ಆಚೆಯ ಮೂಲೆಗೆ ತುಸು ದೂರ ಚಂಡೆ. ಆ ಮೃದಂಗ ಅದರ ಹೆಸರೇ ಸೂಚಿಸುವಂತೆ (ಮೃತ್ + ಅಂಗ) ಮೂಲತಃ ಮಣ್ಣಿನದಾಗಿತ್ತು. ಇಂದಿಗೂ ಹಾಲಕ್ಕಿ ಒಕ್ಕಲ "ಗುಮಟೆಯ ಪಾಗಿನ" ಗುಮಟೆ ಉದ್ದ ಗಾತ್ರದ ಮಣ್ಣಿನ ಕುಂಭಗಳೇ. ಅವರು ೫-೬ ಮಂದಿ ಹಿಮ್ಮೇಳ ಸಾಲಾಗಿ ನಿಂತು ಒಬ್ಬ ಎತ್ತಿದ ಹಾಡು ಎಲ್ಲರೂ ಹಾಡುತ್ತ ಎಲ್ಲರೂ ಸೊಂಟಕ್ಕೆ ಕಟ್ಟಿಕೊಂಡ ಗುಮಟೆಗಳನ್ನು ಬಾರಿಸುತ್ತಾರೆ. ಮುಂದೆ ಒಬ್ಬ "ಕೂಚ" ಕೈಯಲ್ಲಿಯ ಬಣ್ಣದ ಬಟ್ಟೆ ಬೀಸುತ್ತ "ಚಾಬಾಚ್!" ಎಂದು ಹುರುಪುಕೊಟ್ಟು ಕೂಗುತ್ತ ಕುಣಿಯುತ್ತಾನೆ.-ಪ್ರತಿ ಸೊಲ್ಲಿನ ಮುಗಿತಾಯಕ್ಕೆ, ಮೃದಂಗದ ಲಯ ಒಮ್ಮೆಲೆ ಹೆಚ್ಚಾದಂತೆ. ಆ ಮೂಲದ Chorus ದಿಂದಲೇ ಮುಂದೆ ಬಯಲಾಟಗಳ ಹಿಮ್ಮೇಳ, ಗೀಗಿ ಲಾವಣೀ ಪದ್ಯಗಳ ಮೇಳಗಳು ವಿಕಾಸಗೊಂಡಿರಬಹುದು.

'ಯಕ್ಷಗಾನ' 'ಸಭಾ ಲಕ್ಷಣ' (ಯಕ್ಷಗಾನ ಪಿತಾಮಹನೆನ್ನಲಾಗುವ ಕುಂಬಳೆ ಪಾರ್ತಿಸುಬ್ಬನ ಕೃತಿ.) ರಂಗದ ವ್ಯಾಖ್ಯೆ ಹೀಗೆ ನೀಡಿದೆ: 'ಪಂಚ ಹಸ್ತೇನ ವಿಸ್ತೀರ್ಣಂ ದಶ ಹಸ್ತೇನ ಉನ್ನತಂ। ಅರ್ಧಚಂದ್ರ ಪ್ರಕಾರೇಣ ರಾಜತೇ ರಂಗಮಂಟಪ॥ ಆದರೆ ಇಲ್ಲಿ ೫ ಹಸ್ತ ವಿಸ್ತೀರ್ಣವೆಂದರೆ ಏನು? ಅಷ್ಟು ಅಗಲವೋ? ಆಳವೋ? ಹಾಗೆಯೇ ರಂಗದ ಎತ್ತರ ೧೦ ಹಸ್ತವೋ ಮಂಟಪದ ಎತ್ತರವೋ? ("ಕೆಲವೆಡೆ ದಶ ಹಸ್ತೇನ ಆಯುತಂ" ಎಂದೂ ಹೇಳುತ್ತಾರೆ.) ಅಥವಾ ಅರ್ಧಚಂದ್ರಾಕೃತಿ ಆದ್ದರಿಂದ ೫ ಹಸ್ತವು ಆ ವಿಸ್ತೀರ್ಣದ ತ್ರಿಜ್ಯವೋ? ಏನೂ ಖಚಿತವಿಲ್ಲ.

ಯಕ್ಷಗಾನ ರಂಗದಲ್ಲಿ ಪ್ರತಿಪಾತ್ರ ಭಾಗವತನನ್ನು ಹಿಂದಿನಿಂದಲೇ ಪಾದ ಮುಟ್ಟಿ ನಮಸ್ಕರಿಸಿ ಆತನ ಎಡಬದಿಯಿಂದ ರಂಗಪ್ರವೇಶ ಮಾಡುತ್ತಾನೆ. ಭಾಗವತ ಎತ್ತಿದ ಹಾಡಿನೊಂದಿಗೆ ಹೆಜ್ಜೆ ಹಾಕುವಾಗ ಅವನ ಬಲಗಡೆಗೇ ಹೋಗಿ ನಿಂತು ಕುಣಿಯುತ್ತಾನೆ. ಆಗ ಅವನ ಇದಿರಾಳಿ ಪಾತ್ರ ಎಡಕ್ಕೆ ಸರಿದು ನಿಲ್ಲುತ್ತಾನೆ.

ಶೇಕ್ಸಪೀಯರನ ಕಾಲದ ರಂಗದಲ್ಲಿಯೂ ಪಾತ್ರಗಳು ಬರಹೋಗುವದು ಹಿಂದಿನಿಂದಲೇ ಇತ್ತು. ಅಂದಿನಂತೆ ನಮ್ಮ ಯಕ್ಷಗಾನ ರಂಗವೂ ಪ್ರೇಕ್ಷಕರ ನಡುವೆಯೇ ಮೂರೂ ಬದಿಗೆ ತೆರೆದೇ ಇರುತ್ತದೆ. ಆದ್ದರಿಂದ ವೇಷಧಾರಿ ಮೂರೂ ಮುಖವಾಗಿ ನರ್ತಿಸುತ್ತಾನೆ. ನಟಿಸುತ್ತಾನೆ. ಇನ್ನೂ ಈ ರಂಗಕ್ಕೆ ಮುಖಮಂಟಪ (Proscinium) ಇರುವದಿಲ್ಲ. ರಂಗವನ್ನು ಸಭಿಕರಿಂದ ವಿಂಗಡಿಸುವ ಲಕ್ಷ್ಮಣ ರೇಖೆ ಇರುವದಿಲ್ಲ. ಭಾವಾತ್ಮಕವಾಗಿ ಇಲ್ಲಿ ನಟರ ಹಾಗೂ ನೋಟಕರ ತಾದಾತ್ಮ್ಯ ನೇರವೆನ್ನಬಹುದು. ಕೆಲವು ಚಂಡಿ, ವೀರಭದ್ರ, ಮಹಿಷಾಸುರ, ಪರಶುರಾಮನಂಥ ಉಗ್ರ ರುದ್ರಪಾತ್ರಗಳು ಪ್ರೇಕ್ಷಕರ ನಡುವಿನಿಂದಲೇ ಬರುವದುಂಟು. ಇಂಥ ಅತಿಮಾನುಷ ವೇಷಗಳು ಹಿಲಾಲುಗಳ ಬೆಳಕಿನಲ್ಲಿ ಹಿಂದೆ ಮುಂದೆ ಸರಿಯುತ್ತ ದಟ್ಟ ದಾಪಿನ ಹೆಜ್ಜೆಹಾಕಿ ಕುಣಿಯುತ್ತ ರಂಗದತ್ತ ಸಾಗುತ್ತವೆ. ಇದಕ್ಕೆ "ಲಾಲಿ ಕುಣಿತ"ವೆನ್ನುತ್ತಾರೆ. (ಲಾಲಿ ಅಂದರೆ ಮಗ್ಗದಲ್ಲಿ ಹಾಸಿವಲ್ಲಿ ಹೊಕ್ಕು ಸರಿದಾಡುವ ನೂಲಿನ ಕೊರಡು) ಗುಪ್ತಚಾರರಂಥ ಪಾತ್ರಗಳೂ ಪ್ರೇಕ್ಷಕರ ನಡುವಿನಿಂದ ಎದ್ದು ಬರುವದುಂಟು. ಚಂದ್ರಹಾಸ, ಬ್ರಹ್ಮಕಪಾಲದ ಶಿವ ಮುಂತಾದ ವೇಷ ರಂಗದಿಂದ ಇಳಿದು ಪ್ರೇಕ್ಷಕರ ನಡುವೆ ಸುತ್ತಾಡಿ ಭಿಕ್ಷೆ ಬೇಡುವದೂ ಉಂಟು.

ಇದೆಲ್ಲ ಪಾತ್ರ-ಪ್ರೇಕ್ಷಕ ಸಂಪರ್ಕ. ಅಂಥ ಜೀವಾಳದ್ದೇನೂ ಅಲ್ಲ. ಪಾತ್ರಗಳು ಪ್ರೇಕ್ಷಕರ ನಡುವಿನಿಂದ ನಿರಾಳವಾಗಿಯೇ ಎದ್ದು ಹಾಯ್ದು ಬರುವವು. ಆದಾಗ್ಯೂ ಇಲ್ಲಿ ಪರಿಸರದ ಬದುಕಿನಲ್ಲಿ ಪ್ರಾದೇಶಿಕ ಸಂಸ್ಕೃತಿಯ ಅಂಗವಾಗಿ ಬೆರತು ಯಕ್ಷಗಾನರಂಗ ಸಾಮುದಾಯಿಕ ಅನುಭವದ "ಸಂವಹನ"ದ ಒಂದು ಜೀವಂತ ಆಯಾಮವಾಗಿ ಉಳಿದಿದೆ. ವಿವಿಧ ರಂಗ ಪ್ರಯೋಗಗಳಲ್ಲಿ ಅಪೂರ್ವ ಆಸಕ್ತಿ ಮತ್ತು ಯಶಸ್ಸುಗಳಿಸುವ ಸನ್ಮಿತ್ರ ಶ್ರೀ ಕೆ.ವಿ. ಸುಬ್ಬಣ್ಣರು ಅನ್ನುವಂತೆ, ಈ ಸುಪ್ತ ರಂಗಕಲ್ಪನೆ ಯಕ್ಷಗಾನದಲ್ಲಿ ಸಮಗ್ರವಾಗಿದೆ, ಊರ್ಜಿತವಾಗಿದೆ. ಆಶು ಭಾಷಣ, ನೃತ್ಯ ಖಂಡಗಳನ್ನು ಬಳಸಿ ಭಾಗವತ ನಟವರ್ಗ ಕೂಡಿ ಸಕ್ರಿಯ ಸಹಕರಿಸಿ ಪ್ರೇಕ್ಷಕರೊಂದಿಗೆ ಒಡಗೂಡಿ ಒಂದು ಕೃತಿ ರೂಪಕದ ನಿರ್ಮಾಣಕ್ಕೆ ಈ ರಂಗತಂತ್ರ ಅಸಾಧಾರಣವಾಗಿ ಪ್ರಯೋಜಕ. ಇಲ್ಲಿ ರಂಗ ಪರಿಕರ ಸಜ್ಜಿಕೆ ಅತಿ ಕಡಿಮೆ. ಅತ್ಯಗತ್ಯಕ್ಕೆ ಮಾತ್ರ, ಅವುಗಳ ಮಟ್ಟಿಗೆ ಗರಿಷ್ಠ ಸರಳತೆ. ಇಲ್ಲಿಯ ಹಾಡು, ವಾದ್ಯ, ಕುಣಿತ, ಶೈಲೀಕೃತ, ನಡೆನುಡಿ ಎಲ್ಲ ಬಿಡಿಬಿಡಿಯಾಗಿ ಸಡ್ಡೆ ಹೊಡೆದು ನಿಂತು ಗಮನ ಸೆಳೆಯದೆ ಒಟ್ಟಾಗಿ ರಂಗ ಪರಿಭಾಷೆಯಾಗಿ ದುಡಿದು ರೂಪಕವನ್ನು ರೂಪಿಸುತ್ತವೆ.

'ಅತ್ಯಂತ ಶೈಲೀಕೃತ ವೇಷ ಭೂಷಣಗಳಿಂದ ಅತ್ಯಂತ ಸರಳ ವಾಸ್ತವಿಕತೆಯ ತನಕ, ಅತ್ಯಂತ ಕಾಲ್ಪನಿಕ ಬೌದ್ಧಿಕ ವಾಗ್ಧೋರಣೆಯಿಂದ ಸಾಮಾನ್ಯ ಬಿಡಿಮಾತುಗಳ ತನಕ ಇಲ್ಲಿಯ ಅಭಿವ್ಯಕ್ತಿಯ ವಿಶಾಲವ್ಯಾಪ್ತಿ.

ಈ ರಂಗದಲ್ಲಿ ವೇಷಧಾರಿಯ 'ವಾಚಿಕ' ಅಭಿನಯ ಮೂರು ಪಾತ್ರಗಳಲ್ಲಿ ಕೆಲಸ ಮಾಡುತ್ತದೆ-ಅದೂ ನಿರಾತಂಕವಾಗಿ. ಶಿಷ್ಟಾಚಾರದ ಸಂಕೋಚವಿಲ್ಲದೆ. ೧) ಪಾತ್ರವಾಗಿ ೨) ನಟನಾಗಿ ಮತ್ತು ೩) ಪ್ರೇಕ್ಷಕನ ಅಂತಃಪ್ರಜ್ಞೆಯಾಗಿ, ವೇಷಧಾರಿ ಮಾತಾಡುತ್ತಿರುತ್ತಾನೆ. ಪಾತ್ರವಾಗಿ ಸಂದರ್ಭೋಚಿತ ಸಂಭಾಷಣೆಯಲ್ಲಿ ತೊಡಗಿರುವಾಗಲೆ ನಟನಾಗಿ ಪ್ರತಿಸ್ಪರ್ಧಿ ನಟನೊಂದಿಗೆ ತೇಜಸ್ವಿಯಾದ ಮುಖಾಮುಖಿಯಲ್ಲಿ ಕಾಣಿಸಿಕೊಳ್ಳುತ್ತಾನೆ. ಜತೆಗೆ ಭಾಗವತನೊಂದಿಗೆ ಸ್ವಗತವಾಗಿಯೋ ಜನಾಂತಿಕವಾಗಿಯೋ ಮಾತನಾಡುತ್ತಾ ಪ್ರೇಕ್ಷಕನ ಅಂತಃಪ್ರಜ್ಞೆಗೂ ಸಂವಾದಿಯಾಗಿ ಸ್ಪಂದಿಸುತ್ತಾನೆ.

ಇಷ್ಟೆಲ್ಲ ಮಾಡುತ್ತಿರುವಾಗಲೂ ವೇಷಧಾರಿ ಪಾತ್ರಸೃಷ್ಟಿಗೆ ಒಂದು ನಿಮಿತ್ತ, ಆತ ಆಡುವ ಮಾತುಗಳಿಂದ ಪ್ರೇಕ್ಷಕ ತನ್ನಲ್ಲಿ ತಾನೇ ಆಯಾ ಪಾತ್ರವನ್ನು ಪುನಃ ಸೃಷ್ಟಿಸಿಕೊಳ್ಳುತ್ತಾನೆ. ಹೀಗೆ ದಿ. ಟಿ. ರಾಘವಾಚಾರ್ಯರು ಒಮ್ಮೆ ಅಂದಂತೆ "The unity of the actor and the spectator creates the theatre" ಎಂಬ ತತ್ವ ಸತ್ಯವಾಗುತ್ತದೆ. ಆದರೆ ಇಂದಿಗೆ ವ್ಯಾವಸಾಯಿಕ ಯಕ್ಷಗಾನ ಬಯಲಾಟದ ಮೇಳಗಳ ಅವೇ ಅವೇ ಪ್ರಯೋಗಗಳಿಂದ ಈ ಮಾಧ್ಯಮದ ಸಾಧ್ಯತೆಗಳಿಗೆ ಒಂದು ಇತಿ ಒಂದು ಮಿತಿ ವಿಧಿಸಿದಂತಾಗಿದೆ.

ಈ ಇತಿಮಿತಿಗಳನ್ನು ಮೀರಲು ಎರಡೂ ನಿಟ್ಟಿನಿಂದ ಪ್ರಯತ್ನಗಳಾಗಿವೆ-ನಾಟಕರಂಗದಿಂದ ಯಕ್ಷಗಾನ ರಂಗದಿಂದ ಆಧುನಿಕ ನಾಟಕಗಳಿಗೆ, ಯಕ್ಷಗಾನದ ಮೇಲೆ ನಾಟಕಗಳ ಪ್ರಭಾವ ಅಸಂಬದ್ಧ ಹಾಗೂ ಬಾಲಿಶವೆನಿಸಿವೆ, ಅಸಹ್ಯವೂ ಅನಿಸಿವೆ.

೧) ನಾಟಕದ ಅಂಕದ ರಸ್ತೆಯ ಪರದೆಗಳನ್ನು ಮೇಲೆ ಕೆಳಗೆ ಉರುಳಿಸುವದು.
೨) ವೇಷಭೂಷಣಗಳಲ್ಲಿ ನಾಟಕೀಯ (ಸಿನಿಮೀಯ) ರೀತಿಗಳನ್ನು ಬಳಸುವದು.
೩) ಪಾತ್ರ ಪ್ರವೇಶ ನಾಟಕಗಳಂತೆ ಮೇಳ, ಪೀಠಿಕೆಯಿಲ್ಲದೆ ಮಾಡಿಸುವದು. ಅಸಂಗತ ಸಂದರ್ಭ ನಿರ್ಮಿಸುವದು.
೪) ಭಾಗವತನೊಂದಿಗೆ ಸಂವಾದ ವರ್ಜ್ಯಗೊಳಿಸುವದು.
೫) ಕುಣಿತ ಕಡಿಮೆಮಾಡಿ ಭೀಷಣ ಭಾಷಣ ಬಿಗಿಯುವದು.
೬) ನಾಟ್ಯರಂಗದ ಪುಸ್ತ (Stage Properties) ಉಪಯೋಗಿಸುವದು. ಸಾಂಕೇತಿಕತೆ ಬಿಟ್ಟು ವಾಸ್ತವತೆಯ ಅಂಶಗಳನ್ನು ಹೆಚ್ಚು ಹೆಚ್ಚು ಅಳವಡಿಸುವದು.
೭) ಬಣ್ಣದ ವೇಷಗಳ ಸೂಕ್ಷ್ಮ ಮುಖವರ್ಣಿಕೆಯ ಕಲೆಗಾರಿಕೆ ಲೋಪಗೊಳಿಸಿ ಕೃತಕ (Ready-made) ಮುಖವಾಡಗಳನ್ನು ಬಳಸುವದು.
೮) ರಾಮ ಕೃಷ್ಣಾದಿ ಪಾತ್ರಗಳನ್ನು ಕಂಪನಿ ನಾಟಕಗಳಲ್ಲಿಯಂತೆ ಸಜ್ಜುಗೊಳಿಸುವದು.
೯) ಬಣ್ಣಗಾರಿಕೆ ಗ್ರೀಜ ಪೇಂಟ ಗಡ್ಡಮೀಸೆಗಳಿಗಾಗಿ ಸ್ಪಿರಿಟ್ ಗಂ ಉಪಯೋಗಿಸುವದು, ಇತ್ಯಾದಿ.

ಇನ್ನು ಸಮಕಾಲೀನ ನಾಟಕಗಳ ಮಾತೆತ್ತುವ ಮುಂಚೆ ನಮ್ಮ ನಾಟಕಗಳ ಇತಿಹಾಸವನ್ನು ತುಸು ಗಮನಿಸಬೇಕು. ಆರಂಭದಲ್ಲಿ ನಮ್ಮ ವೃತ್ತಿ ನಾಟಕಗಳ ಮೇಲೆ ಹಳೆಯ ಸಂಸ್ಕೃತ ನಾಟಕಗಳ ಪ್ರಭಾವ ಬಿದ್ದಿತು-ದಿ. ವರದಾಚಾರ್ಯರ ಯುಗದಲ್ಲಿ (ಆಗ ಊರ್ದೂ, ಫಾರಸಿ ಕಂಪನಿಗಳ ಟ್ರಿಕ್ ಟ್ರಾನ್ಸಫರ ಸೀನ್ಸಗಳ ಪ್ರಭಾವವೂ ಬಿದ್ದಿತ್ತು.) ಅದೇ ರೀತಿ ಉತ್ತರ ಕರ್ನಾಟಕದ ಗರುಡ ಸದಾಶಿವರಾಯರ, ಶಿರಹಟ್ಟಿ ವೆಂಕೋಬರಾವ್, ವಾಮನ ಮಾಸ್ತರರ ಕಂಪನಿಗಳ ನಾಟಕಗಳ ಮೇಲೆ ಅಂದಿನ ಮರಾಠೀ ನಾಟಕಗಳ ಪ್ರಭಾವ ದಟ್ಟವಾಗಿ ಬಿದ್ದಿತ್ತು. ಆದರೆ ಈ ಮರಾಠೀ ನಾಟಕಗಳ ಉಗುಮವೇ ನಮ್ಮ ಯಕ್ಷಗಾನ ಬಯಲಾಟಗಳಿಂದ ಆಗಿತ್ತು! ಸಾಂಗಲಿ ಬಡೋದಾ ಸಂಸ್ಥಾನಗಳಲ್ಲಿ ನಮ್ಮ ಕರ್ಕಿಯ ಮೇಳ ೧೮೪೦ರಲ್ಲಿ ಹೋಗಿ ಆಡಿದ ದಶಾವತಾರದಾಟಗಳಿಂದ ಪ್ರೇರಣೆ ಪಡೆದು ಶ್ರೀ ವಿಷ್ಣುದಾಸ ಭಾವೆ ಪದ್ಯಪ್ರಚುರ ಮರಾಠೀ ನಾಟಕ ಸೃಷ್ಟಿಸಿದರು. ಆದರೆ ಭಾಗವತನ ಬದಲು ಪಾತ್ರಗಳೇ ಪದ್ಯಗಳನ್ನು ಹಾಡಿ ಅರ್ಥ ಹೇಳುತ್ತಿದ್ದರು. ಅವರ ವೇಷ ಭಾಷೆ ಯಕ್ಷಗಾನ ವೇಷಧಾರಿಗಳಂತೆಯೇ ಇರುತ್ತಿತ್ತು. ಆರಂಭದ ಅಣ್ಣಾ ಸಾಹೇಬ ಕಿರ್ಲೋಸ್ಕರರಂಥವರ ನಾಟಕಗಳಲ್ಲಿ ಬಹಳಷ್ಟು ಹಾಡುಗಳ ಧಾಟಿಗಳು ಕನ್ನಡ ಮಟ್ಟುಗಳೇ ಆಗಿದ್ದವು! ಇಲ್ಲಿ ಸೂತ್ರಧಾರ-ನಟಿ-ಪಾರಿಪಾರ್ಶ್ವಕರ ಪ್ರಸ್ತಾವನೆ ಸಂಸ್ಕೃತ ನಾಟಕಗಳಿಂದ ಸ್ವೀಕರಿಸಿದ್ದುದು.

ಹೀಗೆ ಆರಂಭದಲ್ಲಿಯೇ ನಮ್ಮ ವೃತ್ತಿರಂಗಭೂಮಿಯ ನಾಟಕಗಳ ಮೇಲೆ ಮರಾಠಿಯ ಮುಖಾಂತರ ಯಕ್ಷಗಾನ ಬಯಲಾಟಗಳ ನೆಳಲು ಪರೋಕ್ಷವಾಗಿ ಬಿದ್ದಿತ್ತು. ಇನ್ನು ಸಮಕಾಲೀನ ವೃತ್ತಿರಂಗದಲ್ಲಿ ಯಕ್ಷಗಾನ ವೇಷಗಳ ಬಳಕೆ ಅಪರೂಪಕ್ಕೆ ಅದೂ ಅಪಹಾಸ್ಯಕ್ಕೆ ಆದರೆ ಈಚಿನ ನಮ್ಮ ನವ್ಯ ತಂತ್ರ ಪ್ರಯೋಗದ ನಾಟಕಗಳು ಅತ್ಯಾಧುನಿಕ ಪಾಶ್ಚಾತ್ಯ ನಾಟ್ಯ ಸಿದ್ಧಾಂತಗಳನ್ನು ಅರಗಿಸಿಕೊಂಡಂದಿನಿಂದ ಈ ಜಾನಪದ ರಂಗದ ತೀರ ಸರಳ ನೇರ ಸಂವಹನದ ನಾಟ್ಯವೈಖರಿಯು ಹೆಚ್ಚು ಹೆಚ್ಚು ನಮ್ಮ ವಿಲಾಸೀ ಹವ್ಯಾಸಿ ರಂಗಭೂಮಿಯಲ್ಲಿ ಕಾಣಿಸಿಕೊಳ್ಳಹತ್ತಿದೆ. ಅದನ್ನು ವಿವರ ವಿಸ್ತಾರಗೊಂದಿಗೆ ವಿವೇಚಿಸುವದು ಇಲ್ಲಿ ಸಾಧ್ಯವಿಲ್ಲ. ಈ ಪ್ರಯೋಗ ಆದ್ಯರಂಗಾಚಾರ್ಯ (ಶ್ರೀರಂಗ) ರಿಂದ ಆರಂಭವಾಗಿ ಈಚೆಗೆ ಸರ್ವಶ್ರೀ ಗಿರೀಶ ಕಾರ್ನಾಡ, ಚಂದ್ರಶೇಖರ ಪಾಟೀಲ, ಚಂದ್ರಶೇಖರ ಕಂಬಾರ ಪ್ರಭೃತಿಗಳ ನಾಟಕಗಳಲ್ಲಿ ಹಲವು ಬಗೆಯಾಗಿ ಕಾಣಿಸಿದೊಂಡಿದೆ.

ಶ್ರೀರಂಗರು ಸೂತ್ರಧಾರ ಅಂತರ್ಧಾರಿ, ನಾಟಕಕಾರ, ಕೀರ್ತನಕಾರ, ಮುಂದಾಳು, ಪತ್ರಕಾರ ಇತ್ಯಾದಿಯಾಗಿ ತಮ್ಮ ಸಾವಿತ್ರಿ, ಸಂಜೀವಿನಿ, ಯಾರಿಗೆ ಹೇಳ್ತಿ ಮ್ಯಾಂವ್, ಕೇಳು ಜನಮೇಜಯ, ತೇಲಿಸೋ ರಂಗಾ ಮುಳಗಿಸೋ, ನೀ ಕೊಡೆ ನಾ ಬಿಡೆ, ಸಮಗ್ರ ಮಂಥನ-ಇತ್ಯಾದಿ ನಾಟಕಗಳಲ್ಲಿ ಯಶಸ್ವಿಯಾಗಿ ಉಪಯೋಗಿಸಿದ್ದಾರೆ. ಇವರು ನಾಟಕ ನಿರ್ವಹಣೆಗೆ ಅನುಕೂಲವಾಗುವಂತೆ ಪಾತ್ರ ಪ್ರಸಂಗಗಳ ಸಮಾಲೋಚನೆ ನಡೆಯಿಸುತ್ತಾರೆ.

ಅದೇ ರೀತಿ ಚಂದ್ರಶೇಖರ ಪಾಟೀಲ, ಚಂದ್ರಶೇಖರ ಕಂಬಾರ ಮತ್ತು ಗಿರೀಶ ಕಾರ್ನಾಡರು ತಮ್ಮ 'ಟೆಂಗರ ಬುಡ್ಡಣ್ಣ', ''ಜೋಕುಮಾರ ಸ್ವಾಮಿ' ಮತ್ತು 'ಹಯವದನ'ದಲ್ಲಿ ಸೂತ್ರಧಾರ

ಹಿಮ್ಮೇಳಗಳನ್ನು ಯಥೋಚಿತವಾಗಿ ದುಡಿಸಿಕೊಂಡಿದ್ದಾರೆ. ಅದರ ವಿವರಣೆಗೆ ಇಲ್ಲಿ ಅವಕಾಶವಿಲ್ಲ. ಆದರೆ ಒಂದು ಮಾತು ಹೇಳಲೇಬೇಕು : ಈ ಸಮಕಾಲೀನ ನಾಟಕಗಳಲ್ಲಿ ಬರುವ ಸೂತ್ರಧಾರ-ಹಿಮ್ಮೇಳ-ಭಾಗವತರೆಂಬ ರಂಗ ನಿರ್ದೇಶಕರು ಒಟ್ಟಿನಲ್ಲಿ ಮೂಡಲ ಪಾಯದ ಬಯಲಾಟದಿಂದ ಆಯ್ಕೆ ಆದವರು. ನಮ್ಮ ಯಕ್ಷಗಾನ ಭಾಗವತನಿಗಿಂತ ಹೆಚ್ಚು ಕ್ರಿಯಾಶೀಲರು. ರಂಗದ ಆಗು ಹೋಗುಗಳ ಕುರಿತು ಮುಂದೆ ಬಂದು ಮಿಮಾಂಸೆ ಮಾಡುವವರು-ಸಮಾಂತರ ಟೀಕಾಕಾರರು. ಯಕ್ಷಗಾನ ರಂಗದ ಭಾಗವತ ಪ್ರಸಂಗದ ಪದ್ಯಗಳನ್ನು ಹಾಡಿ ಅದಕ್ಕೆ ತಕ್ಕಂತೆ ವೇಷಗಳನ್ನು ಕುಣಿಸುವನು ಕೇದಗಿ ಮುಂಡಾಸ, ಕಿರೀಟ, ಕೋರೆ ಮುಂಡಾಸ, ಹೆಣ್ಣುವೇಷ, ರಾಕ್ಷಸವೇಷ, ಅವರವರ ಸಂದರ್ಭ. ಸಾಮರ್ಥ್ಯಗಳ ಆಯ, ಕಟ್ಟು ಅರಿತು ಅವರಿಗೆ "ಆತು" ಕೊಂಡು ಕುಣಿದಾಡಿಸಿ ರಾತ್ರಿ ಬೆಳಗು ಮಾಡಿಸುವವನು, ಅವನ ಅಗತ್ಯ ಮಹತ್ವ ಪ್ರಶ್ನಾತೀತ. ಹಿಂದೆಲ್ಲ ಆತ ಆಯಾ ವೇಷಧಾರಿಗಳ ಹಿಂದೆ ರಾತ್ರಿಯಿಡಿ ನಿಂತೇ ಕಂಠಪಾಠದಿಂದ ಹಾಡಿ ಆಖ್ಯಾನ ನಡೆಯಿಸಿಕೊಡುತ್ತಿದ್ದ "ಪ್ರಥಮ ವೇಷಧಾರಿ". ಆದರೂ ಆತ ರಂಗದಲ್ಲಿ ನಿಷ್ಕ್ರಿಯ, ತಟಸ್ಥ.

ಆದರೆ ಸಮಕಾಲೀನ ನಾಟಕಗಳಲ್ಲಿ ಬರುವ ಸೂತ್ರಧಾರನೋ ಭಾಗವತನೋ ತುಂಬ ಚುರುಕು. ಆತ ಪ್ರೇಕ್ಷಕನಿಗಿಂತ ನಾಟಕಕಾರನ ಪ್ರತಿನಿಧಿ. ಮುಖ ಪಾತ್ರ (Mouth Piece) ಅದೂ ಹೆಚ್ಚಾಗಿ ಗದ್ಯದಲ್ಲಿ.

ಇನ್ನು ರಂಗದ ಮಟ್ಟಿಗೆ ಅಟ್ಟದಾಟಗಳಿಗಿಂತ ಯಕ್ಷಗಾನ ಬಯಲಾಟದ ರಂಗಸ್ಥಳವನ್ನು ಈ "ಹೊಸ ಅಲೆ"ಯ ನಾಟಕಗಳಲ್ಲಿ ಸ್ವೀಕರಿಸುತ್ತಾರೆ. ಅಲ್ಲಿಯ ನೇಪಥ್ಯ ಪರಿಕರವೆಲ್ಲ ತೀರ ಅಲ್ಪ, ಸರಳ, ಸಾಂಕೇತಿಕ. ಆಧುನಿಕ ನಾಟಕ ರಂಗದ ಆರಂಭ ರಸ್ತೆ, ಜಂಗಲ, ಮಹಲ-ಸೀನುಗಳನ್ನು ಬಣ್ಣಗಳಲ್ಲಿ ಬರೆದ ಉರುಳುವ ಪರದೆಗಳೊಂದಿಗೆ ಅವುಗಳ ಸೈಡ್ ವಿಂಗ್ಸ್‌ಗಳೊಂದಿಗೆ ಆರಂಭವಾಯಿತು. ಎಷ್ಟೋ ಸಲ ನಾಟಕಕ್ಕಿಂತ ನಟರಿಗಿಂತ ಈ ದೃಶ್ಯಗಳಿಗೆ ಪ್ರೇಕ್ಷಕರ ಚಪ್ಪಾಳೆ ಸಿಗುತ್ತಿತ್ತು. ಅನಂತರ ಇಂಗ್ಲೀಷ ನಾಟಕಕಾರ ಇಬ್ಸೆನ್‌ನ ಪ್ರಭಾವದಿಂದ ವಾಸ್ತವತೆಯನ್ನು ತರುವ ನಿಜವಾದ ಮನೆ ಕೊಠಡಿ, ಮಹಡಿಗಳ Box scenes ರೂಢಿಯಲ್ಲಿ ಬಂದವು. ಆದರೆ ಈಗ ನಮ್ಮ ಪ್ರಾಯೋಗಿಕ ನಾಟಕಗಳು-ಸಾಮಾನ್ಯವಾಗಿ ಶ್ರೀರಂಗರ "ಕತ್ತಲೆ-ಬೆಳಕು" ನಾಟಕದಿಂದ ಮುಂದೆ ಈ ತೀರಾ ಸಾದಾ ಸರಳ ಅನಲಂಕೃತ ರಂಗವನ್ನೆ ಪುರಸ್ಕರಿಸತೊಡಗಿವೆ. ಇಲ್ಲಿ ನಾಟಕೀಯ ಪರಿಣಾಮಕ್ಕೆ Spot light ಗಳನ್ನು ಉಪಯೋಗಿಸುತ್ತಾರೆ. ಈ ಮಟ್ಟಿಗೆ ಇದು ಬಯಲಾಟದ ರಂಗದಿಂದ ಒಂದಿಷ್ಟು ದೂರ.

ಇದರ ಇನ್ನೂ ಸರಳ ಹಾಗೂ ಶೀಘ್ರ ರೂಪ ನಮ್ಮ ಬೀದಿ ನಾಟಕಗಳು. 'ಚಂಪಾ' ಅವರ 'ಟಿಂಗರ ಬುಡ್ಡಣ್ಣ', 'ಜಗದಂಬೆಯ ಬೀದಿ ನಾಟಕ', 'ಬಿರಡಿ ಬಾಬಾ' ಇತ್ಯಾದಿಯಿಂದ "ತಿಮ್ಮ"ನ ವರೆಗೆ. ಸಂಸ್ಕೃತ ದಶಕರೂಪಗಳಲ್ಲಿ 'ವೀಥಿ' ಎಂಬ ಒಂದು ಪ್ರಕಾರವಿದೆ. ಆದರೆ,

ಅದೊಂದು ವಿವಿಧ ದೃಶ್ಯಮಾಲೆ. ಅದಕ್ಕೆ ೧೩ ಅಂಕಗಳು. "ಪರ್ಯವೀಥಿಕಾ ಇವ ಪೇಟೆಯ ಬೀದಿಯಂತೆ" ಈ Miscellaneous ದೃಶ್ಯಗಳ ಮಾಲೆ. ಸಮಕಾಲೀನ ಬೀದಿ ನಾಟಕ ಹಾಗಲ್ಲ. ನೇರ ಬೀದಿಯ ಚೌಕದಲ್ಲಿ ಯಾವ ರಂಗ ನೇಪಥ್ಯ ಸಜ್ಜಿಕೆ ಇರದೇ ಲಘುವಾಗಿ ಆಡಿತೋರಿಸುವ ದಿಡೀರ ನಾಟ್ಯ ಪ್ರಯೋಗವಿದು. ಇದರ ಲಘುತ್ವವೆ ಇದರ ಸ್ವರೂಪವನ್ನು ನಿರ್ದಿಷ್ಟಗೊಳಿಸುತ್ತದೆ. ಆದರೆ ಕೆಲ ಸಲ-'ತಿಮ್ಮ' ನಾಟಕದಲ್ಲಿ ತೆಪ್ಪದ ದೃಶ್ಯದಂತೆ-ಇದರಲ್ಲಿ ತುಸು Contrived ಕೃತಕ ಸನ್ನಿವೇಶಗಳು ಸೇರಿ ಅದೊಂದು ಸರ್ಕಸ್ ಪ್ರಯೋಗದಂತೆ ಕಾಣಬಹುದು. ನಾಟ್ಯಕ್ರಿಯೆಯ ಪ್ರವಾಹಕ್ಕೆ ತಡೆಯೊಡ್ಡಬಹುದು. ಅಲ್ಲದೆ ವಿಶೇಷ ಕಥಾವಸ್ತುವಿಗೆ ಎಡೆ ಇಲ್ಲದೆ ಹಾದಿಹೋಕರಿಗೆ ನಿಂತಮಟ್ಟಿಗೆ ಗಮನ ಸೆಳೆಯುವಂತೆ ಇಲ್ಲಿಯ ನಡೆನುಡಿ ಎಲ್ಲ ತುಸು ಅತಿ ರಂಜಿತ, ಉತ್ಕಟ. ಢಾಳವಾಗಿಯೇ ಸಾಗಬೇಕು-ಯಕ್ಷಗಾನರಂಗದ ಹಾಸ್ಯಪ್ರಸಂಗಗಳಂತೆ, ಇರಲಿ.

ಯಕ್ಷಗಾನ ರಂಗದ ನಾಟ್ಯಾಭಿನಯದಲ್ಲಿ ಕೃತಕತೆ, ಶೈಲೀಕರಣ, ನಡೆ ನುಡಿಯಲ್ಲಿ ಲಯಗಾರಿಕೆ ಹೆಚ್ಚು. ಅಭಿನಯ ಎರಡು ವಿಧ: ಲೋಕಧರ್ಮಿ ಮತ್ತು ನಾಟ್ಯ ಧರ್ಮಿ. ಲೋಕಧರ್ಮಿಯು Naturalistic ಸಾಂಪ್ರದಾಯಿಕ, ವ್ಯಕ್ತಿನಿಷ್ಠ. ಇಲ್ಲಿ ಅನುಭವ ಪ್ರತಿಭಾಸ. ಪುನಃಪ್ರತ್ಯಯ. ನಾಟ್ಯಧರ್ಮಿಯು Symbolic, ಸಾಂಕೇತಿಕ ಶೈಲೀಕೃತ, ವೈಚಿತ್ರಮಯ. ಅಂದ ಚಂದದ ಮಾಟ. ಯಕ್ಷಗಾನ ರಂಗ ನಾಟ್ಯಧರ್ಮಿ ಆದರೂ ಅಂಶತಃ ಲೋಕಧರ್ಮಿ. ದೊಡ್ಡಾಟ ಸಣ್ಣಾಟಗಳೂ ಇದೇ ರೀತಿ. ನಮ್ಮ ನವ್ಯ ನಾಟಕಗಳು ಜರ್ಮನ್ ನಾಟಕಕಾರ ಬ್ರೆಕ್ಟನ Epic ಅಥವಾ ಸಮಗ್ರ (Total) ಥಿಯೇಟರಿನ ಸಿದ್ಧಾಂತ ಒಪ್ಪಿಕೊಂಡಂತಿದೆ. ಅಲ್ಲಿ ಹಾಡು, ಕುಣಿತ, ಮೇಳದ ಎಲ್ಲ ದೃಶ್ಯತಂತ್ರಗಳನ್ನೂ ಅಳವಡಿಸಿ ಒಂದು ಸಾವಯುವ ರಂಗಪ್ರದರ್ಶನ ರೂಪಿಸಲಾಗುತ್ತದೆ. ಇದಕ್ಕೆ ಗಿರೀಶ ಕಾರ್ನಾಡರ 'ಹಯವದನ', ಡಾ। ಕಂಬಾರರ 'ಜೋಕುಮಾರ ಸ್ವಾಮಿ' ಯೋಗ್ಯ ನಿದರ್ಶನ. ಆದರೆ ಇಲ್ಲಿ ನಮ್ಮ ಯಕ್ಷಗಾನ ರಂಗದ ತಂತ್ರಗಳ ಪ್ರಯೋಗಕ್ಕಿಂತ ದೊಡ್ಡಾಟ ಸಣ್ಣಾಟದ ರಂಗತಂತ್ರ ಹೆಚ್ಚು ಅಳವಟ್ಟಿದೆ. (ಮರಾಠಿಯಲ್ಲಿ ತಮಾಶಾ ತಂತ್ರದಲ್ಲಿ ಸು(ಕು?) ಪ್ರಸಿದ್ಧ 'ಘಾಶೀರಾಮ ಕೊತವಾಲ' ನಾಟಕವನ್ನು ಶ್ರೀ ವಿಜಯ ತೆಂಡೂಲಕರರು ರೂಪಿಸಿದಂತೆ!)

ಆದರೆ ಈಚೆಗೆ ಶ್ರೀ ಕೆ. ವಿ. ಸುಬ್ಬಣ್ಣರು, ಶ್ರೀ ಬಿ. ವಿ. ಕಾರಂತರು ಯಕ್ಷಗಾನ ರಂಗ ಪ್ರಕ್ರಿಯೆಯನ್ನು ಅವಲಂಬಿಸಿ ನಾಟಕ ಪ್ರಯೋಗ ಯಶಸ್ವಿಯಾಗಿ ಮಾಡಿದ್ದಾರೆ. ಬಿ.ವಿ. ಕಾರಂತರು ಶೇಕ್ಸಪಿಯರನ 'ಮ್ಯಾಕ್‌ಬೇಥ್ ನಾಟಕವನ್ನು "ಬರ್ನಮ್‌ವನ"ವಾಗಿ ಯಕ್ಷಗಾನ ರೂಪಕಕ್ಕೆ ಇಳಿಸಿದ್ದಾರೆ. ಅದಕ್ಕೂ ಪರಿಣಾಮಕಾರಿಯಾಗಿ ಶ್ರೀ ಕೆ. ವಿ. ಸುಬ್ಬಣ್ಣ 'ಕಾಲಿದಾಸನ ಶಾಕುಂತಲ'ವನ್ನು 'ಲೋಕ ಶಾಕುಂತಲ'ವಾಗಿಸಿದ್ದಾರೆ. ಇವರಲ್ಲಿ ದುಷ್ಯಂತ-ಶಕುಂತಲೆಯ ಪ್ರಣಯ ಪ್ರಸಂಗಗಳನ್ನು ಮೊಟಕುಮಾಡಿ, ಕಣ್ವನ ಪ್ರವೇಶ ಸಂಕ್ಷೇಪಿಸಿ, ಮೀನುಗಾರರು, ವಟುಗಳು, ನಗರ ರಕ್ಷಕರು, ಬೇಡರು, ಮಾತಲಿ, ಚಿಗರೆ ಇತ್ಯಾದಿ ಪಾತ್ರಗಳನ್ನು ಹೆಚ್ಚಾಗಿ ಮುಂದೆ ತಂದು ಈ ಲೋಕ (Folk) ನಾಟ್ಯವನ್ನು ರಂಗದಲ್ಲಿ ಆಡಿಸಿದ್ದಾರೆ.

ಹೀಗೆ ನೃತ್ಯ, ನಾಟ್ಯ, ವೃಂದಚಲನೆ, ಮುಖವಾಡ, ಮೂಕಾಭಿನಯ, ಗೊಂಬೆಯಾಟ, ಇವೆಲ್ಲ ಅಂಗಗಳಲ್ಲಿ ಯಥೋಚಿತ ಸ್ಥಾನವಿಟ್ಟು ರಂಗರೂಪಕವನ್ನು ರಚಿಸುವ Epic Theatre ತಂತ್ರದಲ್ಲಿ ಯಕ್ಷಗಾನರಂಗಕ್ಕೆ ಸ್ವಯಮೇವ ಸ್ಥಾನವಿದೆ. ಇವೆಲ್ಲ ಅಂಗಗಳು ಕೇವಲ ಜನರಂಜನೆಗಾಗಿ ಅಲ್ಲ, ಯೋಗ್ಯ ಭಾವಾಭಿವ್ಯಕ್ತಿಯ ನಾಟ್ಯ ವ್ಯಂಜನೆಗಾಗಿಯೇ ಒಳಹೊಂದಾಣಿಕೆಯಿಂದ ಕೂಡಿ ಮೂಡಿ ಬರಬೇಕು. ಇದು ನಿರ್ದೇಶಕನ ರಂಗ. ಇಲ್ಲಿ ಸಿದ್ಧಿಗೆ ಅಪಾರ ಸಾಧ್ಯತೆ ಇದೆ.

**ಋಷಿ ಋಣ**


| | |
|---|---|
| ನಾಟ್ಯಶಾಸ್ತ್ರ | ಭರತಮುನಿ |
| ದಶರೂಪಕ | ಧನಂಜಯ |
| ಸಾಹಿತ್ಯ ದರ್ಪಣ | ವಿಶ್ವನಾಥ |
| ಸಭಾಲಕ್ಷಣ | ಪಾರ್ತಿಸುಬ್ಬ |
| ಯಕ್ಷಗಾನ ಸಮ್ಮೇಲನದ ಅಧ್ಯಕ್ಷೀಯ ಭಾಷಣಗಳು | ದಿ। ಜಿ. ಆರ್. ಪಾಂಡೇಶ್ವರ |
| ಯಕ್ಷಗಾನ ಬಯಲಾಟ | ಡಾ॥ ಶಿವರಾಮ ಕಾರಂತ |
| ಯಕ್ಷಗಾನ ಪ್ರಭೆ | ತಾಳ್ತಜೆ ಕೃಷ್ಣ ಭಟ್ಟ |
| ಯಕ್ಷಗಾನ ಕೈಪಿಡಿ | ಕೃಷ್ಣ ಭಂಡಾರಿ |
| ಸ್ಫುಟ ಅಭಿಪ್ರಾಯಗಳು : | ಡಾ. ಗಿರಡ್ಡಿ ಗೋವಿಂದರಾಜ |
| ಶ್ರೀ ಪಿ. ವಿ. ಹಾಸ್ಯಗರ | ಡಾ॥ ಎಂ. ಎಂ. ಕಲಬುರ್ಗಿ |
| ಶ್ರೀ ಜಿ. ಎಂ. ಚಿತ್ರಿಗಿಮಠ | ಡಾ॥ ಎಂ. ಜಿ. ಬಿರಾದಾರ |
| ಶ್ರೀ ವಿ.ಜೆ. ನಾಯ್ಕ | ಡಾ॥ ಎನ್. ಆರ್. ನಾಯಕ |
| ಶ್ರೀ ಮಹಾಬಲಿಬಟ್ಟ ಬರವಣೆ, ಪ್ರಸಂಗ ಕರ್ತ | |
| ಶ್ರೀ ಎ. ಜಿ. ಹಾವಗೋಡಿ, ನಟ | ಶ್ರೀ ಎಸ್.ಬಿ. ನಾಯ್ಕ, ನಟ |


(ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ದೇರೂರ ಶಿಬಿರದಲ್ಲಿ ಓದಿದ ಪ್ರಬಂಧ.)

# ಅನುಬಂಧ

# ಗೌರೀಶ ಕಾಯ್ಕಿಣಿ ಬದುಕು-ಬರಹ

## ಬದುಕು

ಜನನ : ೧೨-೯-೧೯೧೨

ಶಿಕ್ಷಣ : ಪ್ರಾಥಮಿಕ (ಗೋಕರ್ಣ), ಮೆಟ್ರಿಕುಲೇಶನ್ (ಗಿಬ್ ಹೈಸ್ಕೂಲ್ ಕುಮಟಾ), ಆರ್ಟ್ಸ್ ಪ್ರಥಮ ವರ್ಷ (ಕರ್ನಾಟಕ ಕಾಲೇಜ್, ಧಾರವಾಡ) ಎಸ್.ಟಿ.ಸಿ. (ಮುಂಬೈ ಪ್ರಾಂಥಕ್ಕೆ ಸರ್ವಪ್ರಥಮ) ಹಿಂದಿ ರಾಷ್ಟ್ರಭಾಷಾ ವಿಶಾರದ.

ವೃತ್ತಿ : ೧೯೩೭ ರಿಂದ ೧೯೭೬ರವರೆಗೆ ಮಾಧ್ಯಮಿಕ ಶಾಲಾ ಅಧ್ಯಾಪಕ.

ವಿವಾಹ : ೧೯೫೩ರಲ್ಲಿ ಅಂತರ್ಜಾತಿಯ ವಿವಾಹ. ಪತ್ನಿ : ಶ್ರೀಮತಿ ಶಾಂತಾ ಕಾಯ್ಕಿಣಿ, (೧೯೫೫ರಲ್ಲಿ ಪುತ್ರ ಪ್ರಾಪ್ತಿ- ಜಯಂತ ಕಾಯ್ಕಿಣಿ).

ವಿವಿಧ ಸಂಘಟನೆಗಳೊಂದಿಗೆ ಹೊಂದಿದ್ದ ಸಂಪರ್ಕ :

೧. 'Progress of Mysore' ಸಂಪಾದಕ ಮಂಡಳಿ ಸದಸ್ಯ.
೨. ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗದ ಸಲಹಾ ಸಮಿತಿ ಸದಸ್ಯ.
೩. 'ಆಕಾಶವಾಣಿ' ಧಾರಾವಾಡ ನಿಲಯದ ಸಲಹಾಸಮಿತಿ ಸದಸ್ಯ.
೪. ಉ.ಕ. ಜಿಲ್ಲಾ ಲೇಖಕ, ಪ್ರಕಾಶಕ ಹಾಗೂ ಪತ್ರಕರ್ತರ ಸಂಘದ ಅಧ್ಯಕ್ಷ.

ಸಂದ ಗೌರವಗಳು : ಆದರ್ಶ ಶಿಕ್ಷಕ ರಾಜ್ಯ ಪ್ರಶಸ್ತಿ (೧೯೭೩).

ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಗೌರವ ಪ್ರಶಸ್ತಿ (೧೯೭೭).

ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ (೧೯೮೦).

ವರ್ಧಮಾನ ಪ್ರಶಸ್ತಿ (೧೯೯೨)

ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ (೧೯೯೩).

ಕರ್ನಾಟಕ ಸರಕಾರದ 'ರಾಜ್ಯೋತ್ಸವ ಪ್ರಶಸ್ತಿ' (೧೯೯೩).

'ನವಮಾನವತಾ ವಾದ' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೯೫)

ಮಂಗಳೂರಿನ 'ಸಂದೇಶ ಪ್ರಶಸ್ತಿ' (೧೯೯೬)

'ಮೀನಾಕ್ಷಿ' ಕೊಂಕಣಿ ಕವನ ಸಂಕಲನಕ್ಕೆ ಕೊಂಕಣಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೯೬)

ಬೆಂಗಳೂರಿನ ಡಾ: ಶಂಭಾ ವಿಚಾರ ವೇದಿಕೆಯ ಸಂಶೋಧನ ಪ್ರಶಸ್ತಿ (೧೯೯೭)

ಬರಹ : ೧೯೩೦ ರಿಂದ ಲೇಖನ ವ್ಯವಸಾಯ ಪ್ರಾರಂಭ. ಮೊದಲ [illegible] 'ಶಾಂಡಿಲ್ಯ ಪ್ರೇಮ ಸುಧಾ' (ಕನ್ನಡ ಮತ್ತು ಮರಾಠಿ ಭಕ್ತಿಗೀತೆಗಳ ಸಂಕಲನ).

ಪ್ರಕಟಿತ ಗ್ರಂಥಗಳು :

೧. ಶಾಂಡಿಲ್ಯ ಪ್ರೇಮಸುಧಾ (ಭಕ್ತಿಗೀತೆಗಳ ಸಂಕಲನ)

೨. ಗಂಡು-ಹೆಣ್ಣು

೩. ಪ್ರೀತಿ

೪. ಮನೋವಿಜ್ಞಾನದ ರೂಪರೇಖೆಗಳು

೫. ಮಾರ್ಕ್ಸವಾದ

೬. ಪಶ್ಚಿಮದ ಪ್ರತಿಭೆ ಭಾಗ - ೧ (ವ್ಯಕ್ತಿ ಚಿತ್ರಣ)

೭. ಪಶ್ಚಿಮದ ಪ್ರತಿಭೆ ಭಾಗ - ೨ (ವ್ಯಕ್ತಿ ಚಿತ್ರಣ)

೮. ಸತ್ಯಾರ್ಥಿ (ವ್ಯಕ್ತಿ ಚಿತ್ರಣ)

೯. ದೇವತಾತ್ಮ (ಹಿಮಾಲಯ ಪ್ರವಾಸವರ್ಣನೆ)

೧೦. ಭಾರತೀಯ ವಿಜ್ಞಾನಿಗಳು ಭಾಗ - ೧

೧೧. ಭಾರತೀಯ ವಿಜ್ಞಾನಿಗಳು ಭಾಗ - ೨

೧೨. ಬಾಳಿನ ಗುಟ್ಟು

೧೩. ವಿಚಾರವಾದ

೧೪. ಕೇಶವಸುತ (ವ್ಯಕ್ತಿ ಪರಿಚಯ)

೧೫. ನಾನಾಲಾಲ (ವ್ಯಕ್ತಿ ಪರಿಚಯ)

೧೬. ಭಾರತೀಯ ತತ್ವಜ್ಞಾನದ ಇತಿಹಾಸ (ಮೂಲ ಮರಾಠಿಯಿಂದ ಅನುವಾದ)

೧೭. ಪಂಜಾಬಿ ಕತೆಗಳು (ಅನುವಾದಿತ ಕಥಾ ಸಂಕಲನ)

೧೮. ಬಿಳಿಯ ಕೊಕ್ಕರೆ (ಅನುವಾದಿತ ಕಥಾ ಸಂಕಲನ)

೧೯. ಮಣ್ಣಿನ ಮನುಷ್ಯ (ಅನುವಾದಿತ ಕಾದಂಬರಿ)

೨೦. ಮಲೆನಾಡಿಗರು (ಅನುವಾದಿತ ಕಾದಂಬರಿ)

೨೧. ವಿಶ್ವದ ಅಖ್ಯಾಯಿಕೆಗಳು (ಕಥಾ ಸಂಕಲನ)

೨೨. ಶ್ಯಾಮರಾವ್ ವಿಠ್ಠಲ ಕಾಯ್ಕಿಣಿ (ಜೀವನ ಪರಿಚಯ)

೨೩. ಥಾಮಸ್ ಎಡಿಸನ್ (ಜೀವನ ಚರಿತ್ರೆ)

೨೪. ಒಲವಿನ ಒಗಟು (ನಾಟಕ)

೨೫. ಕ್ರೌಂಚಧ್ವನಿ (ಗೀತ ರೂಪಕಗಳು)

೨೬. ಬರ್ಲಿನ್ ಬಂದಿತು ಗಂಗೆಯ ತಡಿಗ (ಅನುವಾದಿತ ಕಾದಂಬರಿ)

೨೭. ಗೋಕರ್ಣದ ಕಥೆ (ಪರಿಚಯ)

೨೮. ಪಾಂಡೇಶ್ವರ ಗಣಪತಿರಾವ್ (ಪರಿಚಯ)

೨೯. ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ

೩೦. ಪ್ರಜ್ಞಾನೇತ್ರದ ಬೆಳಕಿನಲ್ಲಿ (ಶಂಬಾ ಕೃತಿಗಳ ಸಮೀಕ್ಷೆ)

೩೧. ಕಣವಿ ಕಾವ್ಯದೃಷ್ಟಿ (ಸಮೀಕ್ಷೆ)

೩೨. ಕಂಪಿನ ಕರೆ (ಬೇಂದ್ರೆ ಕಾವ್ಯಸಮೀಕ್ಷೆ)

೩೩. ಸಂಪ್ರದಾಯ ಮತ್ತು ಸಣ್ಣ ಕುಟುಂಬ

೩೪. ಕರ್ನಾಟಕದ ಸಿಂಡ್ರೆಲ್ಲಾ (ಉತ್ತರ ಕನ್ನಡದ ಜನ-ಜಾತಿ ಪರಿಚಯ)

೩೫. ವಾಲ್ಮೀಕಿ ತೂಕಡಿಸಿದಾಗ (ವಿಚಾರ ವಿಮರ್ಶೆ)

೩೬. ವ್ಯಾಸ ಪರ್ವ (ದುರ್ಗಾಭಾಗವತರ ಮರಾಠಿಕೃತಿಯ ಅನುವಾದ)

೩೭. ಕಟಾಕ್ಷ (ವೈಚಾರಿಕ ಲೇಖನಗಳ ಸಂಕಲನ)

೩೮. ಕರ್ಣಾಮೃತ (ರೇಡಿಯೊ ನಾಟಕಗಳು)

೩೯. ಆಕಾಶ ನಾಟಕಗಳು (ರೇಡಿಯೊ ನಾಟಕಗಳು)

೪೦. ನವ ಮಾನವತಾವಾದ

೪೧. ನಾಸ್ತಿಕನು ಮತ್ತು ದೇವರು

೪೨. ದಿನಕರ ದೇಸಾಯರ ಕಾವ್ಯ (ಸಮೀಕ್ಷೆ)

೪೩. ಗ್ರೀಕ್ ದಾರ್ಶನಿಕರು

೪೪. ಆರ್ಕೆಷ್ಟ್ರಾ ಮತ್ತು ತಂಬೂರಿ

೪೫. ನವ್ಯದ ನಾಲ್ಕು ನಾಯಕರು (ಕವಿ-ಕಾವ್ಯ ಪರಿಚಯ)

೪೬. ಲೋಕಾಯತ (ಚಾರ್ವಾಕ ದರ್ಶನ)

೪೭. ಮಾನವ್ಯ ಕವಿ (ಸನದಿ ಕಾವ್ಯ ಸಮೀಕ್ಷೆ)

೪೮. ಉತ್ತರಣ (ವಿಷ್ಣು ನಾಯ್ಕರ ಕಾವ್ಯ ಸಮೀಕ್ಷೆ)

೪೯. ಸಮಗ್ರ ಸಂಪುಟ ಭಾಗ - ೧

೫೦. ಸಮಗ್ರ ಸಂಪುಟ ಭಾಗ - ೨

೫೧. ಸಮಗ್ರ ಸಂಪುಟ ಭಾಗ - ೩

೫೨. ಸಮಗ್ರ ಸಂಪುಟ ಭಾಗ - ೪

೫೩. ಸಮಗ್ರ ಸಂಪುಟ ಭಾಗ - ೫

೫೪. ಸಮಗ್ರ ಸಂಪುಟ ಭಾಗ - ೬

೫೫. ಸಮಗ್ರ ಸಂಪುಟ ಭಾಗ - ೭

೫೬. ಸಮಗ್ರ ಸಂಪುಟ ಭಾಗ - ೮

ಇಂಗ್ಲಿಷಿನಲ್ಲಿ

೫೭. ಶ್ಯಾಮರಾವ್ ವಿಠ್ಠಲ ಕೈಕಿಣಿ

ಕೊಂಕಣಿಯಲ್ಲಿ

೫೮. ಮೀನಾಕ್ಷಿ (ಕವನ ಸಂಕಲನ)

ಮರಾಠಿಯಲ್ಲಿ

೫೯. ಕನ್ನಡ ಸಾಹಿತ್ಯಾಚಾ ಇತಿಹಾಸ (ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆಯ ಮರಾಠಿ ಅನುವಾದ).

೬೦. ಭಗವಾನ್ ನಿತ್ಯಾನಂದ (ರಮೇಶ ನಾಡಕರ್ಣಿಯವರ ಕನ್ನಡ ಕೃತಿಯ ಮರಾಠಿ ಅನುವಾದ).

೬೧. ಮಾಝೀ ರಸಯಾತ್ರಾ (ಕನ್ನಡದಿಂದ ಮರಾಠಿಗೆ) ಮಲ್ಲಿಕಾರ್ಜುನ ಮನಸೂರರ ಆತ್ಮಚರಿತ್ರೆ)

೬೨. ಅಗ್ನಿವರ್ಣ (ಮುಗಳಿಯವರ ಕಾದಂಬರಿಯ ಮರಾಠಿ ಅನುವಾದ).

ಇವುಗಳ ಹೊರತಾಗಿ ನಾಡಿನ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾದ ಸಾವಿರಾರು ಅಂಕಣ ಬರಹಗಳೂ, ಬಿಡಿ ಲೇಖನಗಳೂ ಇವೆ.



ಮನುಷ್ಯನ ಆಸ್ಥೆಗೆ ಯೋಗ್ಯವಾದುದೆಲ್ಲವೂ, ಮನುಷ್ಯರಾಗಿ ಬಿಚ್ಚಿಕೊಳ್ಳಲು ನಮಗೆ ನೆರವಾಗಬಲ್ಲುದೆಲ್ಲವೂ ಗೌರೀಶ ಸಾಹಿತ್ಯಕ್ಕೆ ಮೂಲವಸ್ತುವಾಗಿವೆ. ಇಲ್ಲಿ ಕೆಲಸ ಮಾಡಿರುವುದು ಅಸಾಧಾರಣ ಧೀಶಕ್ತಿಯ ಸೃಜನಶೀಲ ಮನಸ್ಸೊಂದು ಬದುಕಿನ ಬಗೆಗೆ ತಳೆದ ಬೆರಗುತುಂಬಿದ ಕುತೂಹಲವೇ ಹೊರತು ಶುಷ್ಕ ಪಾಂಡಿತ್ಯಪ್ರಿಯತೆಯಲ್ಲ.

ಕೇವಲ ಬುದ್ಧಿ ಆಗಿದ್ದದ್ದು ಮನಸ್ಸಾಗಿ, ಮನಸ್ಸು ಕೊನೆಯಲ್ಲಿ ಪ್ರಜ್ಞೆಯಾಗಿ ವಿಕಾಸಗೊಳ್ಳಬೇಕು ಎನ್ನುವದರ ಕಡೆಗೆ ಗೌರೀಶ ಸಾಹಿತ್ಯದ ತುಡಿತವಿದೆ ಎನ್ನುವುದೇ ಅದರ ಹೆಚ್ಚುಗಾರಿಕೆ ಆಗಿದೆ. ಮಾನವ ವಿಕಾಸದ ಪರಮೋಚ್ಚ ಮೌಲ್ಯಗಳಾದ 'ಸ್ವಾತಂತ್ರ್ಯ' ಮತ್ತು 'ನೈತಿಕತೆ' ಪ್ರಜ್ಞಾವಂತ ಸ್ಥಿತಿಯಲ್ಲಷ್ಟೇ ಸಾಧ್ಯವೆಂಬುದೇ ಅದರ ಮುಖ್ಯ ನಂಬಿಕೆಯಾಗಿದೆ.

'ಪ್ರಶ್ನೆ' ಸ್ವತಃ ತಾನೇ ಪ್ರಜ್ಞೆಯಲ್ಲ, ಆದರೆ ಪ್ರಜ್ಞೆಯ ಸ್ಥಿತಿ ಮುಟ್ಟಿ ಬೆಳಕು ಕಾಣುವ, ತಾನೇ ಬೆಳಕಾಗುವ ಅಭೀಷ್ಟವುಳ್ಳದ್ದು. ಗೌರೀಶ ಸಾಹಿತ್ಯದ ಅಭೀಷ್ಟ ಚಿಂತನವೂ ಅದೇ. ಪ್ರಶ್ನೆಯಿಂದ ಆರಂಭವಾಗುವ ಅದರ ಗುಪ್ತ ಭೂಗತ ತಡಕಾಟ ಪ್ರಜ್ಞೆಯ ಹಂಬಲವಾಗುತ್ತ, ಬೆಳಕಿನ ಹಂಬಲವಾಗುತ್ತ ಉತ್ತರೋತ್ತರವಾಗಿದೆ. ವಿಚಾರವಾದಿಯೊಬ್ಬ ಶ್ರೇಷ್ಠ ಮಾನವತಾವಾದಿಯಾಗುವ ಈ ಇಂಥ ಬಗೆ ಕನ್ನಡದಲ್ಲಿ ಇನ್ನೊಂದಿಲ್ಲವೆಂದರೆ ಅತಿಶಯೋಕ್ತಿ ಆಗಲಾರದು.

ನಮ್ಮನ್ನು ಕತ್ತಲೆಯಿಂದ ಬೆಳಕಿನೆಡೆ ಒಯ್ಯುವ ಹಂಬಲಹೊತ್ತು ಹುಟ್ಟಿ ಬಂದ ಸಂಗತಿಯೊಂದು ತಾನೇ ಕತ್ತಲಲ್ಲಿ ಅಡಗಿರಬೇಕಾಗಿ ಬಂದಂಥ ದುರಂತ ಇನ್ನೊಂದಿರಲಾರದು ಎನ್ನುವುದನ್ನು ಒಪ್ಪಿಕೊಂಡರೆ, ಈ 'ಪ್ರಕಾಶನ' ದ ಪ್ರಚಂಡ ಜವಾಬ್ದಾರಿಯ ನಿಜವಾದ ಮಹತ್ವ ನಮಗೆ ಹೊಳೆಯಬಹುದು.

- ಯಶವಂತ ಚಿತ್ತಾಲ